ಶಿವಮೊಗ್ಗಾ ಡಿಸ್ಟ್ರಿಕ್ಟ ಕೋರ್ಟು ಪ್ಲೀಡರ್

ಕೆರೋಡಿ, ರಾಮರಾಯರಿಂದ

ಭಾಷಾಂತರಿಸಲ್ಪಟ್ಟದೆ.

ಇದರ ವಿಶಿಷ್ಟ ಬಾಧ್ಯತೆಯನ್ನು ಗ್ರಂಥಕರ್ತರೇ ವಹಿಸಿರುವರು.

ಶಿವಮೊಗ್ಗಾ.


BANGALORE:
PRINTED AT THE CAXTON PRESS.

1903.

(*Registered.*)

— ಲಕ್ಷ್ಮಣ್ ತೆಲಗಾವಿ,
ಎಂ.ಎ. ಪದವಿ - ಅಂತಿಮ ವರ
ಇತಿಹಾಸ ವಿಭಾಗ,
ಮಾನಸ - ಗಂಗೋತ್ರಿ,
ಮೈಸೂರು-೬.

(ದಿನಾಂಕ: ೨೬-೪-೧೯೭೨)

ಶ್ರೀ

ಗೋಪಾಲಕೃಷ್ಣಾಯನಮಃ



ಝಾಂಸಿ ಸಂಸ್ಥಾನದ

# ಮಹಾರಾಣೀ ಲಕ್ಷ್ಮೀಬಾಯಿ ಸಾಹೇಬಳ ಚರಿತ್ರೆ.

ಮಹಾರಾಜಶ್ರೀ ದತ್ತಾತ್ರೇಯ ಬಲವಂತ್ ಪಾರ್ಸನೆಸ್ ಎಂಬುವವರಿಂದ
ಮಹಾರಾಷ್ಟ್ರ ಭಾಷೆಯಲ್ಲಿ ರಚಿತವಾದ ಈ ಚರಿತ್ರೆಯು
ಕನ್ನಡಕ್ಕೆ

ಶಿವಮೊಗ್ಗಾ ಡಿಸ್ಟ್ರಿಕ್ಟ ಕೋರ್ಟು ಪ್ಲೀಡರ್
ಕೆರೋಡಿ, ರಾಮರಾಯರಿಂದ
ಭಾಷಾಂತರಿಸಲ್ಪಟ್ಟಿದೆ.



ಶಿವಮೊಗ್ಗಾ.

BANGALORE:
PRINTED AT THE CAXTON PRESS.

1903.
*(Registered.)*

"And she whom the Semblance of a Scar
Appalled, an owlet's larum, chilled with dread,
Now views the column-scattering bayonet-jar
The falchion flash and over the yet warm dead
Stalks with Minerva's step where Mars Might
quail to tread."

## Lutchmee Baee.

## ಮಹಾರಾಣಿ ಲಕ್ಷ್ಮೀಬಾಯಿ ಸಾಹೇಬ್.



" ಗುಣಾಃ ಪೂಜಾಸ್ಥಾನಂ ಗುಣಿಷು ನಚ ಲಿಂಗಂ ನ ಚ ವಯಃ "

ಭವ ಭೂತಿ.

ಶ್ರೀ ಗೋಪಾಲಕೃಷ್ಣಾಯನಮಃ.

# ಪ್ರಸ್ತಾವನೆ.



ನಮ್ಮ ಚರಿತ್ರನಾಯಕಿಯಾದ ಝಾಸಿ ಮಹಾರಾಣಿ, ಲಕ್ಷ್ಮೀಬಾಯಿಸಾಹೇಬಳ ಚರಿತ್ರೆಯು ಎಷ್ಟು ಮಹತ್ವವುಳ್ಳದ್ದಾಗಿದೆಯೆಂಬುವದು, ಈ ಪುಸ್ತಕವನ್ನು ಆಮೂಲಾಗ್ರವಾಗಿ ಓದುವವರಿಂದ ಪ್ರತಿ ಒಬ್ಬನಿಗೂ ಗೋಚರವಾಗಬಹುದು. ಕಾಲಾನುಸಾರವಾಗಿ ಶುದ್ಧಕ್ಷಾತ್ರಧರ್ಮವನ್ನನುಸರಿಸಿದ ಈ ವ್ಯಕ್ತಿಯಲ್ಲಿ, ಅತುಳ ಪರಾಕ್ರಮ, ಶೌರ್ಯ, ಮತ್ತು ಜ್ಞಾನ ಮುಂತಾದ ಅನೇಕ ವಿಶೇಷ ಗುಣಗಳು ತುಂಬಿ ಇದ್ದದ್ದರಿಂದ, ಈ ಅದ್ವಿತೀಯ ಸ್ತ್ರೀರತ್ನಕ್ಕೆ ಹಿಂದೂದೇಶದ ಚರಿತ್ರೆಯಲ್ಲಿ ಒಂದು ಉಚ್ಚಸ್ಥಾನವನ್ನು ಕೊಟ್ಟು ಆಕೆಯನ್ನ ಪೂಜ್ಯಳಾಗಿ ಭಾವಿಸತಕ್ಕದ್ದು, ಕೇವಲ ನಮ್ಮ ಕರ್ತವ್ಯವಾಗಿದೆ.

ಸನ್ 1894ನೇ ಇಸವಿಯಲ್ಲಿ, ಈ ಇತಿಹಾಸವು ಮಹರಾಷ್ಟ್ರ ಭಾಷೆಯಲ್ಲಿ ಪ್ರಸಿದ್ಧಿಯಾಗುವದಕ್ಕಿಂತ ಮುಂಚೆ, ಪ್ರಾಯಶಃ ನಮ್ಮ ದೇಶದವರಿಗೆ, ಈ ಶ್ರೇಷ್ಠ ಸ್ತ್ರೀಯಳ ಮಹಿಮೆಯು ಸರಿಯಾಗಿ ತಿಳಿದಿರಲಿಲ್ಲವೆಂತಲೇ ಭಾವಿಸಬೇಕು. ಅದರ ಈಚೆಗೆ, ಮಹರಾಷ್ಟ್ರದಲ್ಲಿ ಪ್ರಸಿದ್ಧಪಡಿಸಿದ ಈ ಮೂಲ ಗ್ರಂಥವನ್ನು ಓದುವದರಿಂದ, ತದ್ದೇಶೀಯ ಜನಗಳಿಗೆ ಈ ಕಥಾಮೃತಪಾನವು ಲಭಿಸಿತು. ಈಚೆಗೆ ಕೆಲವು ಕಾಲಗಳಿಂದ ನಾನು ಸ್ವಲ್ಪಮಟ್ಟಿಗೆ ಮಹರಾಷ್ಟ್ರ ಭಾಷೆಯನ್ನ ತಿಳುವಳಿಕೆ ಮಾಡಿಕೊಂಡು, ಕೆಲವು ಪುಸ್ತಕಗಳನ್ನ ನೋಡುತ್ತಾ ಬಂದದ್ದರಲ್ಲಿ, ಸರ್ವೋತ್ಕೃಷ್ಟವಾದ ಈ ಸ್ತ್ರೀ ಚರಿತ್ರೆಯನ್ನ ಓದುವ ಆನಂದವು ನನಗೆ ದೊರಕಿತು. ಈ ಸಂತೋಷವನ್ನ ನಮ್ಮ ಕರ್ಣಾಟಕ ದೇಶ ಬಾಂಧವರಿಗೆ ಒದಗಿಸಿಕೊಡತಕ್ಕದ್ದು, ನನ್ನ ಕರ್ತವ್ಯವೆಂದೆಣಿಸಿ, ಆ ಅಮೌಲ್ಯವಾದ ಪುಸ್ತಕವನ್ನ ಕನ್ನಡದಲ್ಲಿ ಬರೆಯಲು, ಅಪ್ಪಣೆಕೊಡಿಸಬೇಕಾಗಿ, ಮೂಲಗ್ರಂಥ ಕರ್ತರಾದ ವಿದ್ವಾಂಸ ಮ. ಪಾರಸನೀಸರವರಿಗೆ ವಿನಂತಿಮಾಡಿಕೊಂಡೆನು. ಆ ಗೃಹಸ್ಥರು ಬಹಳ ಉದಾರ ಬುದ್ಧಿಯಿಂದ ನನ್ನ ವಿಜ್ಞಾಪನೆಯನ್ನು ಮನ್ನಿಸಿ, ನಿರೂಪಕೊಟ್ಟದ್ದರಮೇಲೆ, ಈ ಕಾರ್ಯಕ್ಕೆ ಪ್ರವರ್ತಿಸಿ, ಪ್ರಾಯಶಃ ಮೂಲಗ್ರಂಥದಲ್ಲಿರತಕ್ಕ ಯಾವ ಸಂಗತಿಯನ್ನೂ ಬಿಡದೆ, ನನ್ನ ಅಲ್ಪ ಯೋಗ್ಯತಾನುಸಾರವಾಗಿ ಕನ್ನಡ ಭಾಷೆಯಲ್ಲಿ ಈ ಚರಿತ್ರೆಯನ್ನು ಬರೆದಿರುತ್ತೇನೆ.

ಮಹಾರಾಣಿ ಲಕ್ಷ್ಮೀಬಾಯಿಯ ಚರಿತ್ರೆಯು ಎಷ್ಟು ಆಶ್ಚರ್ಯಕರವಾಗಿಯೂ ಮತ್ತು ಬೋಧಕರವಾಗಿಯೂ ಇದೆಯೋ, ತದನುಸಾರವಾಗಿ ಈ ಚರಿತ್ರೆಯನ್ನು ಬರೆ

ಯುವದಕ್ಕೋಸ್ಕರ ಈ ಮೂಲ ಗ್ರಂಥಕರ್ತರು ಮತ್ತು ಅವರ ಮಿತ್ರ ಮಂಡಲಿಯವರು ಸಹ ಪಟ್ಟಿರುವಶ್ರಮ ಮತ್ತು ತೋರಿಸಿರುವ ದೇಶಾಭಿಮಾನಕೂಡ, ನಮ್ಮ ದೇಶೀಯರಿಗೆ ಕೇವಲ ಬೋಧಕರವಾಗಿದೆ. ಆಕಾರಣ ಆ ಮಹನೀಯರು ಬರೆದಿರುವ ಪ್ರಸ್ತಾವನವನ್ನ ಯಥಾವತಿ ಭಾಷಾಂತರಮಾಡಿ, ಇದರಲ್ಲಿ ಕೊಟ್ಟಿರುತ್ತೇನೆ. ಆ ಶಕ್ತರಾದ ವಿದ್ವಾಂಸರು ಬರೆದಿರುವ ಸವಿಸ್ತಾರವಾದ ವಿದ್ವತ್ಪೀಠಿಕೆಯಮೇಲೆ ಪುನಃ ನಾನು ಸ್ವಯಂ ಅಭಿಪ್ರಾಯವನ್ನ ಕೊಡುವದಕ್ಕೆ ಪ್ರಯತ್ನಪಡುವದು, ಅಲ್ಪಮತಿಯಾದ ನನ್ನ ಯೋಗ್ಯತೆಗೆ ಮಿಂಚಿದ್ದಾಗಿ ತೋರಿದ್ದರಿಂದ, ಅಂಥಾ ಕಾರ್ಯಕ್ಕೆ ನಾನು ಪ್ರವರ್ತಿಸುವದಿಲ್ಲ,

ಕೇವಲ ದೇಶಾಭಿಮಾನಿಗಳಾದ ಈ ಮೂಲಗ್ರಂಥಕರ್ತರು ತಮ್ಮ ಗ್ರಂಥವನ್ನ ಕನ್ನಡಕ್ಕೆ ಭಾಷಾಂತರಮಾಡಿ, ನಮ್ಮದೇಶ ಬಾಂಧವರಿಗೆ ಅರ್ಪಿಸಲು, ನನಗೆ ಅಪ್ಪಣೆ ಕೊಟ್ಟಿದ್ದು, ದೊಡ್ಡ ಉಪಕಾರವೆಂದು ಭಾವಿಸಿ, ಅವರಿಗೆ ವಂದನೆಮಾಡತಕ್ಕದ್ದು ನಮ್ಮ ಕರ್ತವ್ಯವಾಗಿದೆ. ಈ ಉಪಕಾರಕ್ಕಾಗಿ, ನಮ್ಮ ಚರಿತ್ರನಾಯಕರಾದ ಈ ಸ್ತ್ರೀರತ್ನದ ಮಹಿಮೆಯನ್ನು ಪ್ರಕಾಶಪಡಿಸತಕ್ಕ ಈ ಅಮೌಲ್ಯ ಗ್ರಂಥವನ್ನ ನಮ್ಮ ಕರ್ನಾಟಕ ದೇಶದಲ್ಲಿ ಪ್ರಚುರ ಪ್ರಚಾರಪಡಿಸುವ ಮೂಲಕ, ಈ ಗ್ರಂಥಕರ್ತರಿಗೆ ನಮ್ಮ ಕೃತಜ್ಞತೆಯನ್ನ ತೋರಿಸಿಕೊಡುವದೇ ಕೇವಲ ಯೋಗ್ಯವಾದ ಪ್ರತಿಫಲವಾಗಿದೆ ಎಂಬುವದರಲ್ಲಿ ಸಂಶಯವಿಲ್ಲ. ಆದಕಾರಣ ನಮ್ಮ ದೇಶಬಾಂಧವರು ಈ ಕಥಾನಕ್ಕೆ ಸನ್ಮಾನ ಮಾಡಿ, ಆ ಅಲೌಕಿಕ ಸ್ತ್ರೀ ಚರಿತ್ರೆಯನ್ನ ನಮ್ಮ ಕರ್ನಾಟಕ ದೇಶದಲ್ಲಿ ಪ್ರಸಿದ್ಧಪಡಿಸುವ ನನ್ನ ಉದ್ದೇಶಕ್ಕೆ ಪ್ರೋತ್ಸಾಹ ಕೊಡಬೇಕೆಂದಾಗಿ ವಿನಯದಿಂದ ಪ್ರಾರ್ಥಿಸುತ್ತೇನೆ.

ಇಂಗ್ಲೀಷು ಬಲ್ಲ ಕೆಲವು ವಿದ್ವಾಂಸರಿಗೆ ನಮ್ಮ ದೇಶದ ಚರಿತ್ರೆಗಳನ್ನ ನಮ್ಮ ದೇಶಭಾಷೆಯಲ್ಲಿಯೇ ಪ್ರಕಾಶಗೊಳಿಸಿ, ಭಾಷಾಭಿವೃದ್ಧಿ ಪಡಿಸಬೇಕಾದದ್ದು ಅತ್ಯವಶ್ಯಕವಾಗಿದೆ ಎಂಬುವದನ್ನು ಕುರಿತು, ನಾನು ಹೊಸದಾಗಿ ತಿಳಿಸಬೇಕಾದದ್ದೇನೂ ಇಲ್ಲ. ಪೂರ್ವಜರು ನಮಗೆ ಬಿಟ್ಟಿರುವ ಆಸ್ತಿಗಳಲ್ಲಿ ಮತ, ಭಾಷೆ, ಉಡುಪು, ಆಚಾರ ವ್ಯವಹಾರ, ಮತ್ತು ಚರಿತ್ರೆ, ಇವುಗಳು ಕೇವಲ ಅಮೌಲ್ಯ ಪದಾರ್ಥಗಳಾಗಿವೆ. ಪಾಶ್ಚಿಮಾತ್ಯ ವಿದ್ಯಾಭ್ಯಾಸದ ಮೋಹದಿಂದ, ಈ ಉತ್ತಮವಾದ ಆಸ್ತಿಗಳನ್ನ ಅಸಡ್ಡೆಯಿಂದ ನಷ್ಟಮಾಡಿಕೊಳ್ಳುವ ಪಕ್ಷದಲ್ಲಿ, ನಾವು ಆರ್ಯವಂಶದವರೆಂತ ಎನಿಸಿಕೊಳ್ಳಲು ಆಧಾರವೇ ಉಳಿಯುವದಿಲ್ಲ. ಆದುದರಿಂದ ನಮ್ಮ ದೇಶಭಾಷೆಯಲ್ಲಿ ಅಭಿಮಾನವನ್ನಿಟ್ಟುಕೊಂಡು, ಅದನ್ನು ವೃದ್ಧಿಮಾಡಿ, ಪ್ರಾಚುರ್ಯಕ್ಕೆ ತರುವದು ನಮ್ಮ ಕರ್ತವ್ಯವಾಗಿದೆ. ಪ್ರಾಯಶಃ ಇದೇ ಅಭಿಪ್ರಾಯದಿಂದಲೇ ನಮ್ಮ ಮಹಾರಾಷ್ಟ್ರ ದೇಶಬಾಂಧವರು ಈ ಅಮೌಲ್ಯವಾದ ಚರಿತ್ರೆಯನ್ನೂ ಮತ್ತು ಇನ್ನೂ ಅನೇಕ ಮೂಲಗ್ರಂಥಗಳನ್ನು ಸಹ, ದೇಶಭಾಷೆಯಲ್ಲಿಯೇ ಬರೆದಿರುತ್ತಾರೆಂತ ಹೇಳಿದರೆ ಸರಿಯಾಗಬಹುದಾಗಿದೆ. ಇದನ್ನ ನಮ್ಮ ದೇಶೀಯರೂ ಕೂಡ ತಮ್ಮ ಲಕ್ಷ್ಯದಲ್ಲಿಟ್ಟುಕೊಳ್ಳತಕ್ಕದ್ದಾಗಿದೆ.

ದಯಾಳುಗಳಾದ ನಮ್ಮ ದೇಶಬಾಂಧವರು ಈ ನವೀನ ಚರಿತ್ರೆಯಮೇಲೆ ಕೃಪಾ ದೃಷ್ಟಿ ಯಿಟ್ಟು, ಆ ಮೂಲಾಗ್ರವಾಗಿ ನೋಡಿ,

ಗುಣದೋಷೌ ಬುಧೋಗೃಹ್ಣನ್ ।
ಇಂದುಕ್ಷ್ವೇಳಾ ವಿವೇಶ್ವರಃ ॥
ಶಿರಸಾ ಶ್ಲಾಘತೇ ಪೂರ್ವಂ ।
ಪರಂ ಕಂಠೆ ನಿಯಚ್ಛತಿ ॥ ೧ ॥

ಎಂಬಂತೆ ಇದರಲ್ಲಿ ತೋರಿ ಬರುವ ತಪ್ಪುಗಳನ್ನು ಸೂಚಿಸಿ, ಗುಣಾಂಶವನ್ನು ಮಾತ್ರ ಗ್ರಹಣಮಾಡಿ, ನನ್ನ ಪ್ರಥಮ ಪ್ರಯತ್ನವನ್ನು ಸಫಲಗೊಳಿಸಬೇಕಾಗಿ ಪ್ರಾರ್ಥಿಸುತ್ತೇನೆ.

ಈ ಗ್ರಂಥವನ್ನ ಆ ಮೂಲಾಗ್ರವಾಗಿ ನೋಡಿ, ಭಾಷಾರೀತಿಗೆ ತಕ್ಕಂತೆ ಶೋಧಿಸಿ, ನನಗೆ ಸಹಾಯ ಮಾಡಿದ ವೇದಶ್ರೀ, ಶಿವಮೊಗ್ಗ ಕಾಲೇಜ್ ಸಂಸ್ಕೃತ ಪಂಡಿತರಾದ ಕೆ. ಸುಬ್ರಹ್ಮಣ್ಯ ಶಾಸ್ತ್ರಿಗಳಿಗೆ ಬಹಳವಾಗಿ ವಂದಿಸುತ್ತೇನೆ.

ಈ ಪುಸ್ತಕವನ್ನು ಬರೆಯಲು ಪ್ರೇರಿಸಿದ ಜಗನ್ನಿಯಾಮಕನಾದ ಭಗವಂತ ನನ್ನು ತನ್ನ ಪಾದಾರವಿಂದದಲ್ಲಿ ಸರ್ವದಾ ಭಕ್ತಿಯಿಡುವಂತೆ ನನಗೆ ಅನುಗ್ರಹಿಸಬೇಕಾಗಿ ಪ್ರಾರ್ಥಿಸಿ, ಈ ಗ್ರಂಥವನ್ನು ನಮ್ಮ ಕರ್ಣಾಟಕ ದೇಶಬಾಂಧವರಿಗೆ ಅರ್ಪಿಸಿರುತ್ತೇನೆ.

---

# ಪೀಠಿಕೆ.

---


ಹಿಂದೂಸ್ಥಾನದ ಮಧ್ಯದಲ್ಲಿ, ಇವತ್ತಿನ ಪರ್ಯಂತ ಉತ್ಪನ್ನರಾಗಿ ಲೋಕೋತ್ತರ ಪ್ರಕಾಶಮಾನರಾದ ಸ್ತ್ರೀರತ್ನಗಳಲ್ಲಿ, ಕೇವಲ ಇತ್ತಲಾಗಿನ ಮತ್ತು ಶೌರ್ಯಗುಣದಲ್ಲಿ ಅಗ್ರೇಸರಳಾದ ಸ್ತ್ರೀರತ್ನವು, ಝಾನ್ಸಿ ಸಂಸ್ಥಾನದ ಮಹಾರಾಣಿ ಲಕ್ಷ್ಮೀಬಾಯಿಯೇ ಆಗಿದ್ದಾಳೆ. ಈ ಶೂರಸ್ತ್ರೀಯ ಹೆಸರು 1857ನೇ ಇಸ್ವಿಯಲ್ಲಿ ನಡೆದ ದಂಗೆಯ ಕಾಲ ಪ್ರಾರಂಭಿಸಿಕೊಂಡು, ಎಲ್ಲಾ ಕಡೆಗಳಲ್ಲಿಯೂ ಪ್ರಸಿದ್ಧಿಯಾಗಿದೆ. ಉತ್ತರ ಹಿಂದೂಸ್ಥಾನದಲ್ಲಿಯಂತೂ 'ಝಾನ್ಸಿಯ ರಾಣಿ' ಎಂಬುವದೊಂದು ಅತಿಪ್ರಿಯ ವಿಷಯವಾಗಿ ಇದೆ. ಆ ಸ್ತ್ರೀಯಳ ಅನೇಕಾನೇಕ ಅತುಳ ಪರಾಕ್ರಮದ ಕೆಲಸಗಳನ್ನು ಕುರಿತು, ಅತ್ತಕಡೆ ವೃದ್ಧಜನಗಳ ಬಾಯಿಯಿಂದ ಹೊರಡುವ, ಆವೇಶಯುಕ್ತ ಮತ್ತು ರಸಭರಿತವಾದ, ಮಾತುಗಳನ್ನು ಕೇಳಿದರೆ, ಯಾರ ಚಿತ್ತವೇ ಆಗಲಿ, ಒಂದುಕ್ಷಣ ಪರ್ಯಂತರ, ನೋಯದೆ ಇರುವದಿಲ್ಲ. ಅರ್ಥಾತ್, ಇಂಥಾ ಸ್ತ್ರೀಯ ಗುಣಮಹಿಮೆಗಳು, ನಮ್ಮ ದೇಶದ ಇತಿಹಾಸದಲ್ಲಿ ಬರೆದಿರಬೇಕಾದದ್ದು ಅತ್ಯಂತ ಅವಶ್ಯಕವಾಗಿದೆ. ಪರಂತು ದುರ್ದೈವದಿಂದ ಸ್ವದೇಶದ ಇತಿಹಾಸದ ವಿಷಯದಲ್ಲಿ, ಪರಾಙ್ಮುಖತೆ ಮತ್ತು ಅಭಿಮಾನ ಶೂನ್ಯತೆ, ಈ ಎರಡು ದುಷ್ಟಗ್ರಹಗಳು, ಇಷ್ಟುದಿವಸ ನಮ್ಮ ಶರೀರದಲ್ಲಿ ವಾಸವಾಗಿದ್ದದ್ದರಿಂದ, ಈ ಪರಾಕ್ರಮಶಾಲಿನಿಯ ಸಮಾಚಾರವು ಎಲ್ಲಿಯೂ ಲಭಿಸಲಿಲ್ಲ. ಇಲ್ಲವೆಂತ ಹೇಳದಹಾಗೆ, ಝಾನ್ಸಿಯ ರಾಣಿಯ ನಾಟಕವೆಂಬುವದು, ಒಂದುಮಾತ್ರ ಒಂದು ಶಿಲಾಶಾಸನದಮೇಲೆ ಛಾಪಿಸಿದ ಪುಸ್ತಕ ಮತ್ತು ಯಾವಾಗಲಾದರೂ ಅದನ್ನು ಆಡುತ್ತಿರುವ ನಾಟಕ ಇವುಗಳು ಮಾತ್ರ ಜನಗಳಿಗೆ, ಆ ಅದ್ವಿತೀಯ ಸ್ತ್ರೀಯಳ ಹೆಸರನ್ನು ಪರಿಶ್ರಮ ಮಾಡಿಕೊಡುವದಕ್ಕೆ ಕಾರಣವಾಗಿವೆ. ಇದು ಹಾಗಿರಲಿ. ಈ ರೀತಿಯಾಗಿ ಪುಷ್ಕಳದಿವಸಗಳವರೆಗೂ, ನಿಜವಾದ ಮತ್ತು ಸಾಧಾರಣವಾದ ಪರಿಶ್ರಮವು ಪ್ರಸಿದ್ಧವಾಗದೆ ಇದ್ದ ಕಾರಣ ಈ ಪ್ರಖ್ಯಾತಳಾದವಳ ಚರಿತ್ರಾಮೃತಪಾನದ ವಿಷಯದಲ್ಲಿ, ಆಸಕ್ತಿಯುಳ್ಳ ಜನಗಳ ಇಚ್ಛೆಯು ತೃಪ್ತವಾಗಲಿಲ್ಲ.

ಸ್ತ್ರೀಚರಿತ್ರೆಯೇ ಅಗಾಧವಾದದ್ದು—ಅದರಲ್ಲಿಯೂ ಅಂತಃಪುರವಾಸಿನಿಯಾದ ರಾಜಮನೆತನದ ಒಬ್ಬ ಬ್ರಾಹ್ಮಣ ಸ್ತ್ರೀಯು ಆಕಸ್ಮಿಕವಾಗಿ ತೋರಿಸಿದ, ಪರಾಕ್ರಮದ ಕರ್ಣ ಮಧುರವಾದ ಯಶೋಗಾನವನ್ನ ಅಸ್ಪಷ್ಟರೀತಿಯಿಂದ ಜನಗಳ ಮುಂದೆ ಹೇಗೆ ಹೇಗೆ ಇಡುತ್ತಾ ಬಂದು, ದಿನದಿನಕ್ಕೆ ವಿದ್ಯಾಪ್ರಾಚುರ್ಯದ ದೆಸೆಯಿಂದ,

ಇತಿಹಾಸದ ವಿಷಯದಲ್ಲಿ, ಅಭಿರುಚಿಹುಟ್ಟಿದ್ದರಿಂದ, ಆ ವಿಷಯದ ಅಪೂರ್ವತ್ವವು ಅವರಿಗೆ ಅಧಿಕವಾಗಿ ತೋರಲಾರಂಭಿಸುತ್ತಾ ಬಂದ ಬಂದ ಹಾಗೆ, ಜನಗಳ ಮನಸ್ಸನ್ನು ತೃಪ್ತಿಮಾಡುವದಕ್ಕಾಗಿ, ಉತ್ಪನ್ನವಾದ ಬೇರೆ ಬೇರೆ ತರ್ಕದಿಂದ ಪೂರ್ಣವಾದ ನಾನಾವಿಧವಾದ ಬಾಯಿಕಥೆಗಳು ಮತ್ತು ನಾನಾಪ್ರಕಾರದ, ಆಖ್ಯಾನಗಳೂ ನಿರ್ಮಾಣವಾಗಲು ಪ್ರಾರಂಭಿಸಿದವು. ಅಲ್ಲಲ್ಲಿ—ವಿಶೇಷವಾಗಿ ಉತ್ತರ ಹಿಂದೂಸ್ಥಾನದಲ್ಲಂತೂ—ಈ ಬಾಯಿಕಥೆ ಮತ್ತು ಆಖ್ಯಾಯಿಕಗಳ ವಿಷಯದಲ್ಲಿ, ಎಷ್ಟರಮಟ್ಟಿಗೆ ದಂಗೆಯವಾಗಿದೆ ಯೆಂದರೆ, ಆ ದೆಶೆಯಿಂದ ಆ ಶೂರ ಸ್ತ್ರೀಯಳ ಪ್ರಕಾಶಮಾನವಾದ ಯಶಸ್ಸಿನ ಮೇಲೆ ಅಸತ್ಯ ಮತ್ತು ನಿರಾಧಾರ ತರ್ಕದ, ದೋಷ ಬಂದೀತೋ ಯೇನೋ ಎಂಬ ಹಾಗೆ, ತೋರುತ್ತಾ ಬಂತು. ಈ ಪ್ರಕಾರವಾಗಿ, ಈ ವಿಷಯವು ಸ್ವಲ್ಪಮಟ್ಟಿಗೆ ಲೋಕಪ್ರಿಯವಾದ್ದಾಯಿತು. ಆದರೆ, ಅದರ ನಂಬಿಕೆಗೆ ಅರ್ಹವಾದ ಪರಿಶ್ರಮವನ್ನ ಇತಿಹಾಸಕ ದೃಷ್ಟಿಯಿಂದ, ಪ್ರಸಿದ್ಧಪಡಿಸುವದರಕಡೆಗೆ, ಯಾರೂ ಲಕ್ಷೆ ಕೊಡಲಿಲ್ಲ. ಅದಕ್ಕೆ ಅನೇಕ ಕಾರಣಗಳಿವೆ. ಆದರೆ, ಅದರಲ್ಲಿ ಎರಡು ಕಾರಣಗಳು ವಿಶೇಷವಾದದ್ದಾಗಿವೆ. ಯಾವುವೆಂದರೆ, ಒಂದನೇದು, ನಿಜವಾದ ಸಮಾಚಾರವನ್ನ ಹುಡುಕುವ ವಿಷಯದಲ್ಲಿ, ಆಸ್ತಿ ಇಲ್ಲದೆ ಇರೋಣ; ಎರಡನೇದು ಬಹಳಮಟ್ಟಿಗೆ. ವಿಶೇಷ ಮಹಾತ್ಮ್ಯವುಳ್ಳ—ಕಾರಣ, ಯಾರ ಚರಿತ್ರೆಯನ್ನು ಬರಿಯಬೇಕೋ, ಆ ಚರಿತ್ರಾ ನಾಯಕಿಯು 1857 ನೇ ಇಸವಿಯ, ಭಯಂಕರವಾದ, ದಂಗೆಯಲ್ಲಿ ಸೇರಿದ್ದಳಾದಕಾರಣ, ಆಕೆಯ ಗುಣವರ್ಣನೆಯನ್ನ ಮಾಡುವದೆಂದರೆ, ಕೃಪಾಳುಗಳಾದ ಇಂಗ್ರೇಜಿ ಸರ್ಕಾರದವರಿಗೆ, ವಿರುದ್ಧವಾಗಿ ಲೇಖಣಿ ನಡಸುವದು ಮಹಾ ಪಾತಕವಾಗಿದೆ ಎಂಬ ತಪ್ಪು ತಿಳುವಳಿಕೆಯಿಂದ, ರಾಜನಿಷ್ಠತೆಯನ್ನ ಹೊರಥರಕ್ಕೆ ತೋರಿಸಬೇಕಾಗಿ, ಸ್ವೀಕರಿಸಿದ ಮೌನವ್ರತವಾಗಿದೆ. ಈ ಎರಡು ಕಾರಣಗಳಿಂದ ಪ್ರಸ್ತುತಕಾಲಪರ್ಯಂತರ, ಈ ರಾಣಿಯ ಚರಿತ್ರೆಯ ವಿಷಯವು, ಮಹಾರಾಷ್ಟ್ರ ಅಥವಾ ಈ ದೇಶಕ್ಕೆ ಸಂಬಂಧಪಟ್ಟ, ಇತರ ಭಾಷೆಯಲ್ಲಿ ಪ್ರಸಿದ್ಧವಾಗಲಿಲ್ಲ. ಝಾನ್ಸಿರಾಣಿಯು ಅತಿಶೂರಳಾಗಿ. ಅನೇಕ ಯುದ್ಧಗಳನ್ನು ಮಾಡಿದಳು; ಮತ್ತು ದೊಡ್ಡ ದೊಡ್ಡ ಇಂಗ್ರೇಜಿ ಯುದ್ಧಶಾಲಿಗಳ ಸಂಗಡ ಯುದ್ಧಮಾಡಿ, ಅವರಕಡೆಯಿಂದ ಸ್ತೋತ್ರವನ್ನು ಸಂಪಾದಿಸಿದಳು ಎಂಬ ಮುಂತಾದ ಸಂಗತಿಗಳು ಯಾವವರೆಗೂ ಇತಿಹಾಸದಲ್ಲಿ, ಬರೆಯದೇ ಇರುವದೋ, ಆ ಪರ್ಯಂತರ, ಅದು ಶಾಶ್ವತವಾಯಿತು ಎಂತ ಅಂಗೀಕರಿಸಲು ಆಗುವದಿಲ್ಲ. ದಂಗೆಯಕಾಲದಲ್ಲಿದ್ದ ವೃದ್ಧಜನಗಳು ಅಥವಾ ರಾಣಿಸಾಹೇಬಳ ವಿಷಯದಲ್ಲಿ ಪರಿಶ್ರಮವಿರತಕ್ಕಂಥಾ ಸೇವಕಜನಗಳು ಯಾವಪರ್ಯಂತರ ಜೀವಂತರಾಗಿರುವರೋ ಆ ಪರ್ಯಂತರ ಅವರ ಬಾಯಿಯಿಂದ ಆಖ್ಯಾಯಿಕರೂಪದಿಂದಲಾದರೂ, ಕೆಲವು ಸಂಗತಿಗಳು ಕೇಳುವದಕ್ಕೆ ಸಿಕ್ಕೀತು. ಪರಂತು, ಅವರ ತರುವಾಯ ಅದೂನೂ ಅಭಾವವಾದೀತೆಂಬುವದು ಖಂಡಿತವಾಗಿದೆ. ತಾತ್ಪರ್ಯವೇನೆಂದರೆ, ಯಾವಪರ್ಯಂತರ ಯಾವದಾದರೂ ಒಂದು ಮಹಾತ್ಮ್ಯೆಯುಳ್ಳ ವಿಷಯಕ್ಕೆ, ಆ ರಾಷ್ಟ್ರದ ಇತಿಹಾಸದಲ್ಲಿ ಯೋಗ್ಯವಾದ ಒಂದು ಸ್ಥಳವು ಸಿಕ್ಕುವದಿ

ಲ್ಲವೋ, ಆವರೆಗೂ ಅದರ ಆಸ್ತಿಕತ್ವವೂ ಶಾಶ್ವತವಾದದ್ದಲ್ಲವೆಂಬುವದು, ಕೇವಲ ಸಿದ್ಧವಾದ್ದಾಗಿದೆ. ಯಾವಕಾಲದ ಪರ್ಯಂತರ ಆ ಸಂಗತಿಯುನ್ನು ಹೇಳತಕ್ಕ ಜನಗಳು ಜೀವಿಸಿರುತ್ತಾರೋ, ಆಕಾಲದ ಪರ್ಯಂತರ ಇಂದ್ರನ ಧನುಸ್ಸಿನ ಪ್ರಕಾಶವು ಹೇಗೆ ಕ್ಷಣಿಕವೋ ಅವರಂತೆ ಅಪೂರ್ವಗುಣಶ್ರವಣದಿಂದ, ಅಲ್ಪಕಾಲವೇ ನಮಗೆ ಆನಂದತೋರೀತು. ಪರಂತು, ಅವರ ಸ್ಮರಣೆಯು ಸ್ಥಿರವಾಗಿ ನಿಲ್ಲದೆ, ಕಾಲದ ಚಂಚಲಗತಿಯು ಸಂಗಡ, ನಷ್ಟವಾಗಿ ಹೋದೀತು. ಆದಕಾರಣ ರಾಷ್ಟ್ರದಲ್ಲಿ ನಿರ್ಮಾಣವಾಗುವ ಗುಣಸಂಪನ್ನ ಮನುಷ್ಯರ ಕೃತಿಗೆ, ಆ ದೇಶದ ನಿಜವಾದ ಇತಿಹಾಸದಲ್ಲಿ, ಸ್ಥಳ ಸಿಕ್ಕತಕ್ಕದ್ದು ಅವಶ್ಯಕವಾಗಿದೆ. ಇಲ್ಲದ ಪಕ್ಷಕ್ಕೆ, ಅವರ ಅಸದೃಶವಾದ ಸರ್ವ ಗುಣಗಳೂ ವ್ಯರ್ಥವಾಗುತ್ತವೆ ಎಂಬುವದರಿಂದಲೇನೋ, ಪೋಪ್ ಕವಿಯು ತನ್ನ 'ಟೆಂಪಲ್ಆಫ್ ಫೇಮ್' ಎಂಬ ಕಾವ್ಯದಲ್ಲಿ, ಇತಿಹಾಸಕಾರಕರಿಗೆ ಬಹಳ ಮಹತ್ವದ ಸ್ಥಾನವನ್ನು ಕೊಟ್ಟಿದ್ದಾನೆ. ಅವನು ಹೇಳುವದೇನಂದರೆ:—

> " Full in the passage of each spacious gate,
> The sage historians in wide garments wait,
> Graved over the seats, the form of Time was found,
> His scythe removed and both his pinions bound."

೧. ನಮ್ಮ ದೇಶದಲ್ಲಿನ ಗ್ರಂಥಕಾರರಿಗೂ, ಇದೇ ವಿಧವಾದ ಅಭಿಪ್ರಾಯವಿದೆ. ಬಿಲ್ಹಣಕವಿಯು ಹೀಗೆ ಹೇಳಿರುತ್ತಾನೆ.

> ಲಂಕಾಪತೇಃ ಸಂಕುಚಿತಂ ಯಶೋಯತ್ ಯತ್ಕೀರ್ತಿಪಾತ್ರಂ ರಘುರಾಜಪುತ್ರಃ।
> ಸಸರ್ವಏವಾದ್ಯಕವೇಃ ಪ್ರಭಾವೋನಕೋಪನೀಯಾಃ ಕವಯಃಕ್ಷಿತೀಂದ್ರೈಃ ॥ ೧ ॥

ರಾವಣನ ಕೀರ್ತಿಯು ಸಂಕೋಚವನ್ನು ಹೊಂದುವದಕ್ಕೂ ರಾಮಚಂದ್ರನ ಕೀರ್ತಿಯು ಪ್ರಕಾಶವಾಗುವದಕ್ಕೂ ಕವಿಯ ಪ್ರಭಾವವೇ ಮೂಲಕಾರಣವು ಆದುದರಿಂದ ಅಂಥಾ ಕವಿಗಳನ್ನು ರಾಜರು ಅವಮಾನ ಮಾಡಬಾರದು, ಎಂದು.

ಇದು ಹಾಗಿರಲಿ. ಇವರ ಮೇಲಿನಿಂದ ಪ್ರತಿ ಒಂದು ದೇಶದಲ್ಲೂ ಉತ್ಪನ್ನವಾದ ಅಮೌಲ್ಯಮಾನವ ರತ್ನಗಳ ದಿವ್ಯ ಪ್ರಭಾವವು ಜಲಪ್ರಳಯವಾಗುವ ಪರಿಯಂತವೂ ಪ್ರಕಾಶವಾಗಿರುವದಕ್ಕಾಗಿ, ಆ ದೇಶದ ಇತಿಹಾಸ ಕುಂದಣ ಕಟ್ಟುವಿಕೆ, ಬಹಳ ಅವಶ್ಯಕವಾಗಿದೆ ಎಂಬುವದು, ಸಿದ್ಧವಾಗುತ್ತದೆ. ತಾತ್ಪರ್ಯವೇನೆಂದರೆ, ಪ್ರತಿ ಒಂದು ರಾಷ್ಟ್ರದ ಜನಾಂಗಗಳ ಕೀರ್ತಿಯು ಪ್ರಕಾಶವು, ಅವರ ಇತಿಹಾಸವೇ ಆಗಿದೆ ಎಂತ ಹೇಳುವದು ನಡೆಯತಕ್ಕದ್ದಾಗಿದೆ.

ಪುಷ್ಕಳಕಾಲ ಪರ್ಯಂತರ, ಸ್ವದೇಶದ ಇತಿಹಾಸದ ವಿಷಯದಲ್ಲಿ, ಸರಿಯಾದ ಪರಿಶ್ರಮ ತಿಳಿಯುತ್ತಿರಲಿಲ್ಲ ವಾದಕಾರಣ, ಆವಿಷಯದಲ್ಲಿ ಯಾರೂ ಹೆಚ್ಚಿಗೆ ಆಸಕ್ತಿ ತೆಗೆದುಕೊಳ್ಳಲಿಲ್ಲ. ಸರ್ವ ಹಿಂದುಸ್ಥಾನದ ವಿಷಯವು ಬಂದೇಕಡೆಯಲ್ಲಿಯೇ ಇತ್ತು. ಪರಂತು, ಮಹರಾಷ್ಟ್ರ ಮಧ್ಯದಲ್ಲಿ ಪ್ರಳಯಕಾಲದ ರುದ್ರನಂತೆ, ಶತ್ರುಗಳನ್ನು ಸ್ವಾಹಾಕಾರ ಮಾಡತಕ್ಕಂಥಾ ಒಬ್ಬರಿಗಿಂತ ಒಬ್ಬರು ಹೆಚ್ಚು, ಶಸ್ತ್ರಧಾರಿಗಳು ಉತ್ಪನ್ನರಾದರು. ಕೆಲವರು ಹಿಂದುಸ್ಥಾನದ ಪಾದಶಾಹಿಯ, ನಿಶಾನೆಯನ್ನು ಅಟಕ್ ಮೇಲೆ ಕೂಡಹಾರಿಸಿದರು. ಕೆಲವರು ತಮ್ಮ ರಾಜಕಾರ್ಯ ಸ್ಥಾನ ಪಟುತ್ವ ಮುಂತಾದ ಅನೇಕಗುಣ ಸಮೂಹದಿಂದ, ಇಂಗ್ರೇಜಿ ಪೋರ್ಚುಗೀಸ್, ಪ್ರೆಂಚ್ ಮುಂತಾದ ಪರರಾಷ್ಟ್ರದವರ ಬೇಳೆಯನ್ನು ಬೇಯಿಸಗೊಡಲಿಲ್ಲ. ಕೆಲವರು ತಮ್ಮ ಶಸ್ತ್ರಧಾರೆಯಮೇಲೆ ಮತ್ತು ಕೇವಲ ತಮ್ಮ ಕರ್ತೃತ್ವದ ಶಕ್ತಿಯಮೇಲೆ, ಸ್ವರಾಷ್ಟ್ರದ ಉನ್ನತಿ ಮತ್ತು, ಸ್ವಧರ್ಮದ ಉನ್ನತಿ, ಮಾಡುವದರ ಪ್ರಯತ್ನ ಮಾಡಿ, ತಮ್ಮ ಜನ್ಮವನ್ನು ಸಾರ್ಥಕವಮಾಡಿಕೊಂಡರು. ಇಂಥಾ ಅನೇಕ ಮಹಾರಾಷ್ಟ್ರ ವೀರರ ಮತ್ತು ಉದ್ಯೋಗಸ್ತರ ಚರಿತ್ರೆಯು ಪ್ರಸಿದ್ಧಿಯಾಗುವದಕ್ಕೆ ಎಲ್ಲಿ ಹೊಡೆದಾಟವು ಹತ್ತಿದೆಯೋ (ಸುದೈವದಿಂದ ಈಗ ಈವಿಷಯಕ್ಕೆ ಸ್ವದೇಶಾಭಿಮಾನಿಗಳಾದ ವಿದ್ವತ್‌ಜ್ಜನಗಳ ಲಕ್ಷ್ಯೆ ಹೋಗುತ್ತದೆ ಎಂಬಮಾತು ಸಂತೋಷಕರವಾಗಿದೆ.) ಅಲ್ಲಿ 1857ನೇ ಇಸ್ವಿ ದಂಗೆಯಲ್ಲಿ ಸಾರ್ವಭೌಮ ಪ್ರಭುವಿನ ಸಂಗಡ ಎದುರುನಿಂತು, ತಮ್ಮ ಶೌರ್ಯವನ್ನು ವ್ಯಕ್ತಪಡಿಸಿದ ದಂಗೇಖೋರ ಮಂಡಲಿಯವರ ಪ್ರಸ್ತಾಪವು ಹೇಗೆ ಬಂದೀತು ? ನಿಜವಾಗಿ ನೋಡಿದರೆ, ಇತಿಹಾಸ ದೃಷ್ಟಿಯಿಂದ 1857 ನೇ ಇಸ್ವಿ ದಂಗೆಯು, ಅತ್ಯಂತ ಮಹತ್ವವುಳ್ಳದ್ದಾಗಿದ್ದು, ಅದರ ವೃತ್ತಾಂತವು ಅತಿಶಯ ಬೋಧಕರವಾಗಿಯೂ ಮತ್ತು ವಿಚಾರಮಾಡುವದಕ್ಕೆ ಯೋಗ್ಯವಾದ್ದಾಗಿದೆ ಎಂಬುವದನ್ನ ಯಾರೂನೂ ಅಂಗೀಕರಿಸಬಹುದು. ತಥಾಪಿ, ಮೇಲೆ ಹೇಳಿದಕಾರಣಗಳಿಂದ ಆವೃತ್ತಾಂತವನ್ನ ಬರೆಯುವ ಕಡೆಗೆ ಅಥವಾ ಅದರಲ್ಲಿ ಸುಪ್ರಸಿದ್ಧರಾಗಿ ಇದ್ದ ಸ್ತ್ರೀಪುರುಷರ ಚರಿತ್ರೆಯನ್ನ ಬರೆಯುವ ಕಡೆಗೆ, ನಮ್ಮ ದೇಶದಲ್ಲಿ ನವಿದ್ವನ್ ಮಂಡಲಿಯ ಲಕ್ಷ್ಯೇಯೇ ಹತ್ತಲಿಲ್ಲ. ಕೇಮ್ಯಾಲಿಸಿನ್ ಪ್ರಭೃತಿಗಳು, ಮುಂತಾದ ಅನೇಕ ಇತಿಹಾಸಕಾರರು, 1857 ಇಸ್ವಿಯ ದಂಗೆಯಮೇಲೆ, ಪ್ರಚಂಡವಾದ ಗ್ರಂಥಗಳನ್ನು ಬರೆಯುತ್ತಾ ಇದ್ದಾರೆ; ಮತ್ತು ಅದೇಪ್ರಕಾರವಾಗಿ, ಅವರ ಅನೇಕ ದೇಶ ಬಾಂಧವರು, ಒಬ್ಬ ಸಣ್ಣ ಉದ್ಯೋಗಸ್ಥ ಕರ್ನಲ್ ಮೊದಲ್ಗೊಂಡು, ಗಾರ್ನರ ಜನರಲ್ ಪರ್ಯಂತ, ದಂಗೆ ಕಾಲದಲ್ಲಿ ಪ್ರಸಿದ್ಧರಾದ ಪ್ರತಿಯೊಬ್ಬರೂನೂ ತೋರಿದಷ್ಟು ಚರಿತ್ರೆಯನ್ನು ಪ್ರಸಿದ್ಧ ಮಾಡುತ್ತಿದ್ದಾರೆ: ಮತ್ತು ಅದರಲ್ಲಿ ಸಮಯಾನುಸಾರವಾಗಿ, ಕಥಾ ಪ್ರಸಂಗದಲ್ಲಿ, ಏತದ್ದೇಶೀಯ ಪ್ರಸಿದ್ಧಪುರುಷರ ಮಹಾತ್ಮೆಯನ್ನು ಸ್ತುತಿಮಾಡುವದಕ್ಕೂ ಹಿಂದೆ ಮುಂದೆ ನೋಡುವದಿಲ್ಲ ಆದರೆ ನಮಗೆ ಮೂಲತಃ ಅದರ ನಿಷೇಧವೇ ಇಲ್ಲ. ಇಂಥಾಪ್ರಕಾರದ ವ್ಯಸನಕರವಾದ ಸ್ಥಿತಿಯು ಯಾವಾಗಲೂ ನಿರಂತರವಾಗಿ ನಿಲ್ಲದೆ, ವಿದ್ಯಾಭ್ಯಾಸದಿಂದ ದಿನೇ ದಿನೇ ಅದು ಕಡಮೆಯಾಗುತ್ತಾ ಹೋಗಿ, "ಯಾ ವರ:

ಷ್ಟ್ರದ ಜನಾಂಗಕ್ಕೆ ತಮ್ಮ ಪೂರ್ವಜರ ಭವ್ಯ ಕೃತಿಯನ್ನು ಕುರಿತು ಅನುಭವ
ತೋರುವದಿಲ್ಲವೋ ಅವರ ಕೈಯಿಂದ, ಅವರ ವಂಶಜರಿಗೆ, ಅಭಿಮಾನ ತೋರುವಂಥಾ,
ಸ್ಮರಣೀಯ ಕೆಲಸವನ್ನು ಮಾಡಲು ಎಂದಿಗೂ ಆಗುವದಿಲ್ಲ."* ಮಕಾಲೆ ಬಂಧುವಿನ,
ಈ ಖಂಡಿತವಾದ ಉಕ್ತಿಯು ನಮಗೆ ಚೆನ್ನಾಗಿ ಪರಿಚಯುಹತ್ತಿ, ನಾವು ಸ್ವದೇಶದ ಇತಿ
ಹಾಸದ ವಿಷಯದಲ್ಲಿ, ಜಾಗ್ರತೆಯಾಗಿ, ಅಭಿಮಾನ ಹಚ್ಚಿಕೊಂಡೇವು ಎಂತ ಮನ್ನಿಸುವ
ದಕ್ಕೆ, ಸದ್ಯಃ ಸ್ಥಿತಿಯಮೇಲೆ, ಯಾವವಿಧವಾದ ಅಡ್ಡಿಯೂ ತೋರುವದಿಲ್ಲ. ಕೈ
ವಿಷ್ಣುಶಾಸ್ತ್ರಿ ಚಿಪುಳೂನಕರನು 'ಇತಿಹಾಸ' ಎಂಬ ವಿಷಯದಮೇಲೆ, ಬಹಳ ರಸಿಕ
ವಾದ ಒಂದು ನಿಬಂಧನನ್ನು ಬರೆದು, ಅದನ್ನ ಮಹಾರಾಷ್ಟ್ರ ಓದುವವರಿಗೆ ಸಮ
ರ್ಪಣೆಮಾಡಿದಕಾಲದಾರಭ್ಯ, ಸ್ವದೇಶದ ನಿಜವಾದ ಇತಿಹಾಸದ ಯೋಗ್ಯತೆಯು, ಅವರ
ಲಕ್ಷೆಯಲ್ಲಿ ಸ್ವಲ್ಪ ಬರುತ್ತಾ ಹೋಯಿತು ಆಮೇಲೆ 'ಕಾವ್ಯೇತಿಹಾಸಸಂಗ್ರಹ' ವೆಂಬ
ಹೊಸ ಹೊಸ ಸುಂದರವಾದ ಬರವಣಿಗೆಯನ್ನ, ಕೇಸರಿಯ ಭಕ್ಷ್ಯಸಾರ್ಥನದಿಂದ ಬಿಡುವ
ದಕ್ಕೆ ಪ್ರಯತ್ನ ಮಾಡಿ, ಮಹಾರಾಷ್ಟ್ರದ ನಿಜವಾದ ಇತಿಹಾಸದ, ಪಂಚ ಪಕ್ವಾನ್ನ
ಯುಕ್ತ ಸುರಸ ಭರಿತ ವಾದ ತಟ್ಟೆಗಳನ್ನು ಹಂಚಿಟ್ಟಿತು. ಆಗಿನಾರಭ್ಯ, ನಮ್ಮದೇ
ಶದ ಇತಿ ಹಾಸದ ಮಾಧುರ್ಯವು ಹತ್ತುತ್ತಾಬಂತು ; ಮತ್ತು ಮಹಾರಾಷ್ಟ್ರದಲ್ಲಿನ ಪ್ರ
ಖ್ಯಾತಪುರುಷರ ಚರಿತ್ರೆಯು ಪ್ರಸಿದ್ಧವಾಗಲಿಕ್ಕೆ ಪ್ರಾರಂಭವಾಯಿತು. ಇದುಬಹಳ
ಆನಂದವಾದ ಮಾತಾಗಿದೆ. ಪರಂತು, ಏನು ಇದೆಯೋ ಅದು ಇರಲಿ. ಅದ್ಯಾಪಿ
1857–58 ನೆ ಇಸ್ವಿಯ ದಂಗೆಯಲ್ಲಿ, ಪ್ರಖ್ಯಾತಿಯಾದ ಈ ಸ್ತ್ರೀರತ್ನದ ಪರಿಶ್ರಮವು
ಪ್ರಸಿದ್ಧವಾಗಲಿಲ್ಲ ಆದ್ದರಿಂದ ಆ ವಿಷಯದ ಉತ್ಸುಕತೆ ಮತ್ತು ಅಪೂರ್ವತೆ, ಹಾಗೆಯೇ
ನಿಂತಿತು. ಝಾನ್ಸಿ ಸಂಸ್ಥಾನದ ರಾಣೀಸಾಹೇಬಳ ಸಂಬಂಧವಾಗಿ, ಮಹಾರಾಷ್ಟ್ರ
ಜನಗಳ ಮನಸ್ಸಿನಲ್ಲಿ ಪ್ರೇಮಭಾವ ಉತ್ಪನ್ನವಾಗುವದಕ್ಕೆ, ವಿಶೇಷವಾದ ಕಾರಣವು
ಬಂತು. ಮೊದಲಿನಿಂದಲೂ, ಝಾನ್ಸಿ ಸಂಸ್ಥಾನವು, ಸ್ವತಃ ಪೇಷ್ವೆ ಸರ್ಕಾರದ ಒಬ್ಬ
ಶುಭೆದಾರನದಾಗಿತ್ತು. ಅದರಲ್ಲಿಯೂ, ಅಲ್ಲಿಯ ರಾಣೀಸಾಹೇಬಳಂತು ಒಬ್ಬ ಬ್ರಾಂ
ಹ್ಮಣ ವಿಧವೆಯಾಗಿದ್ದು, ಅವಳು ಲೋಕಪ್ರಸಿದ್ಧಳಾಗಿ ಹೋಗಿ, ಬಹಳ ಸ್ವಲ್ಪ ದಿವಸ
ವಾಯಿತು. ಆದ್ದರಿಂದ ಆಕೆಯ ಚರಿತ್ರೆಯು ಜನಗಳ ಕಣ್ಣಮುಂದೆ ಜಾಗ್ರದವಸ್ಥೆ
ಯಲ್ಲಿರಬೇಕಾದದ್ದು, ಸಹಜವಾಗಿಯೇ ಇದೆ. ಪರಂತು, ಆ ಸಂಬಂಧದ ಪರಿಶ್ರಮವು
ಮಹಾರಾಷ್ಟ್ರಭಾಷೆಯಲ್ಲಿ ಇವತ್ತಿನವರೆಗೂ, ಮೂಲತಃ ಪ್ರಸಿದ್ಧವಾಗಲಿಲ್ಲ ವೆಂಬ
ಮಾತು, ಅತ್ಯಂತ ವ್ಯಸನಕರವಾದದ್ದಾಗಿದೆ. ಈವತ್ತಿನವರೆಗೂ ಝಾನ್ಸಿ ಸಂಸ್ಥಾನದ
ವಿಶೇಷ ತಿಳುವಳಿಕೆಯು, ಮಹಾರಾಷ್ಟ್ರಿಯರಿಗೆ ಮೂಲತಃ ಇರಲಿಲ್ಲ. 1857 ರಲ್ಲಿ,

---

* "A people which takes no pride in the noble achievements of their ancestors will never achieve anything worthy to be remembered with pride by their descendants."

MCEAULAY.

ಆ ಸಂಸ್ಥಾನದ ರಾಣಿ ಲಕ್ಷ್ಮೀಬಾಯಿ ಹೆಸರು ಯಾವಾಗ ಲೋಕವನ್ನೆಲ್ಲಾ ಹರಡಿಕೊಂಡಿತೋ ಆಗ ಝಾನ್ಸಿಯ ಹೆಸರು ಸರ್ವರ ಬಾಯಿಯಲ್ಲಿಯೂ ವಿಶೇಷವಾಯಿತು. ಈ ಸಂಸ್ಥಾನದ ಸ್ವಲ್ಪ ಇತಿಹಾಸವು ಬಹಳ ದಿವಸದ ಹಿಂದೆ, 'ದಂಬಹಾರಕ' ಎಂಬ ಒಂದು ಮಾಸಿಕ ಪುಸ್ತಕದಲ್ಲಿ ಪ್ರಸಿದ್ಧವಾಗಿತ್ತು. ಪರಂತು, ಅದು ಅಪೂರ್ಣವಾಗಿದ್ದದ್ದರಿಂದ, ಅದರಲ್ಲಿ ರಾಣಿಯ ಪರಿಶ್ರಮವು ಶುದ್ಧಾಂಗ ಪ್ರಸಿದ್ಧಿಗೆ ಬರಲಿಲ್ಲ. ಆದ್ದರಿಂದ ವಾಚಕರು, ಸ್ವಲ್ಪ ರುಚಿಯನ್ನು ನೋಡಿ ಸುಮ್ಮನೆ ಇದ್ದರು. ಮುಂದೆ ಆ ಪುಸ್ತಕವೂ ನಿಂತುಹೋಯಿತು. ಆ ಬಳಿಕ ಶಾಸ್ತ್ರಿಯು ತನ್ನ 'ನಿಬಂಧಮಾಲೆ' ಯಲ್ಲಿ 'ನಮ್ಮದೇಶದ ಸ್ಥಿತಿ' ಎಂಬ ವಿಷಯವನ್ನು ಬರೆಯುವಾಗ ಒಂದು ಸ್ಥಳದಲ್ಲಿ, ಈ ಅತುಳ ಪರಾಕ್ರಮಿಯಾದ ರಾಣಿ ಸಾಹೇಬಳ ವಿಷಯದಲ್ಲಿ, ಇಂಥಾ ಒಂದು ವ್ಯಸನವನ್ನು ತೋರಿಸಿದ್ದಾನೆ. "ಈ ಸ್ತ್ರೀರತ್ನವು ಮಾತ್ರ ಯೂರೋಪ ಖಂಡದ ಯಾವದಾದರೂ
"ಒಂದು ದೇಶದಲ್ಲಿ ಉತ್ಪನ್ನವಾಗಿದ್ದರೆ, ಅದು ಎಷ್ಟುಪ್ರಕಾಶಕ್ಕೆ ಬರುತ್ತಿತ್ತು ಎಂಬು
"ವದು ಹೇಳುವದಕ್ಕೆ ಆಗುವದಿಲ್ಲ. ಅದರಮೇಲೆ ಎಷ್ಟು ನಾಟಕಗಳು ಮತ್ತು
"ಕಾದಂಬರಿಗಳು ಆಗುತ್ತಿದ್ದವೋ ಮತ್ತು ಎಷ್ಟು ಚರಿತ್ರಕಾರಕರು ಸಹ, ಆದರ
"ವೃತ್ತಾಂತದಲ್ಲಿಸೇರಿಸಿ, ಜಗತ್ತಿಗೆ ಸಮರ್ಪಣೆಮಾಡುತ್ತಿದ್ದರೋ ಯೇನೋ? ಒಬ್ಬ
"ಇಂಗ್ರೇಜಿ ಇತಿಹಾಸಕಾರಕನು ಆಕೆಗೆ ಫ್ರಾನ್ಸ್ ದೇಶದಲ್ಲಿನ ಪ್ರಸಿದ್ಧಳಾದ 'ಜೋನ
"ಆಫ'ಆರ್ಕ' ಎಂಬುವಳ ಉಪಮಾನವನ್ನು ಕೊಟ್ಟಿದ್ದಾನೆ."

ಇಂಥಾ ಟಿಪ್ಪಣೆಯನ್ನ ಮಾಡಿ, ಆತನು "ದಂಭಾರ್ಕರ್ನ' ಪತ್ರಿಕೆಯಲ್ಲಿ ಪ್ರಸಿದ್ಧಿಯಾದ ಮುಂದೆ ಬರೆದಿರುವ ಭಾಗವನ್ನ ಬಹಳ ಕೌತುಕದಿಂದ ತನ್ನ ವಾಚಕರಿಗೆ ಸಮರ್ಪಣೆಮಾಡಿದ್ದಾನೆ:—

"Among the Native rulers who have heroically resisted foreign invaders, none have shown stronger qualities than Lakshmee Boyee, the Ranee or Queen of Jhansi; whose wonderful generalship held the British Army in check; and who headed her troops in person, dressed as a Cavalry Officer, and was killed on the field. Sir Hugh Rose declared that, the best man on the enemy's side was the Rani of Jhansi."

ಝಾನ್ಸಿಯ ರಾಣಿಯ ಸಂಬಂಧವಾಗಿ, ಯುರೋಪಿಯನ ಗ್ರಂಥಕರ್ತರು ಬರೆದಿರುವ ಈ ಪ್ರಕಾರವಾದ ವರ್ಣನೆಯನ್ನು ಕೇಳಿ, ಪ್ರತಿ ಒಬ್ಬನ ಮನಸ್ಸಿನಲ್ಲಿಯೂ, ಆಕೆಯ ಚರಿತ್ರೆಯನ್ನು ಶ್ರವಣಮಾಡುವ ವಿಷಯದಲ್ಲಿ, ಇಚ್ಛೆಯು ಹೆಚ್ಚು ಹೆಚ್ಚಾಗಿ ಪ್ರಬಲವಾಗಿ ಹೋಗಬೇಕಾದದ್ದು ಸಹಜವಾಗಿದೆ. ಯಾವದಾದರೂ ಒಂದು ವಿಷಯದ

ಸಮ್ಬಂಧವಾಗಿ, ಮನಸ್ಸಿನಲ್ಲಿ ಅತಿಶಯ ಉತ್ಸಾಹವುಹುಟ್ಟಿ, ಅದು ಪ್ರಾಪ್ತಿಯಾಗುವದಕ್ಕೆ ವಿಳಂಬವಾಗಿ, ಇರುವಾಗ ಆಕಾಂಕ್ಷಿತವಸ್ತು ವಿಷಯದ, ಸ್ತುತಿಪರ ವರ್ಣನೆಯು, ಮೇಲೆ ಮೇಲೆ ಕಿವಿಗೆ ಬಿತ್ತೆಂದರೆ, ಹ್ಯಾಗೆ ಆ ಅಭಿಲಾಷೆಯನ್ನು ತಡೆಯಲಿಕ್ಕೆ ಆಗುವದಿಲ್ಲವೋ, ಆ ಪ್ರಕಾರವಾಗಿ ದಿನದಿನಕ್ಕೆ, ಈ ಸ್ತ್ರೀರತ್ನದ ಪುಷ್ಕಳಗುಣಮಹಿಮೆಯು ಮೇಲೆ ಮೇಲೆ ವಾಚಕರ ಕಿವಿಯುಮೇಲೆಬಿದ್ದು, ಈ ಸಮಾಚಾರವು ಯಾವಾಗ ಕೇಳುವದಕ್ಕೆ ಶಿಕ್ಕೀತೆಂತ ಆತುರಹುಟ್ಟಿರಬಹುದೆಂಬುವದನ್ನ, ಸ್ವಾನುಭವದಿಂದಲೇ, ಒಪ್ಪಿಕೊಳ್ಳುವದಕ್ಕೆ ಬಹಳ ಬಾಧಕವೇನೂ ಬರಲಾರದು. ಪರಂತು, ರಾಣಿಯ ಚರಿತ್ರೆಯು ನಿಜವಾದ ಪರಿಶ್ರಮವು, ಪ್ರಾಪ್ತಿಯಾಗುವದಕ್ಕೆ ಕಷ್ಟವಾಗಿದ್ದದ್ದರಿಂದ, ಆ ಸರ್ವ ಅಭಿಲಾಷೆ ಮತ್ತು ಉತ್ಸಾಹವನ್ನ ಬಹಳ ದಿವಸಗಳವರೆಗೂ ಮನಸ್ಸಿನಲ್ಲಿ ಒತ್ತಿಡಬೇಕಾದ ಸಂಭವವು ಎಲ್ಲರಿಗೂ ಇತ್ತು.

ಮುಂದೆ 1890ನೇ ಇಸವಿಯಲ್ಲಿ, ಆಕಸ್ಮಿಕವಾಗಿ, ಬಹಳ ಚಮತ್ಕಾರವಾದ ಒಂದು ಯೋಗವು ಬಂದು ಸಂಭವಿಸಿತು. ಆ ಯೋಗದಿಂದ ಪುನಃ ಈ ವಿಷಯದ ಕಡೆಗೆ ವಾಚಕರ ಆದರವುಳ್ಳ ಮನಸ್ಸು ಪೂರ್ವದಂತೆ ಹೋಯಿತು. ಆ ಯೋಗವು ಈ ಪ್ರಕಾರ:—ಪೂನೇಯಲ್ಲಿನ ವಸಂತೋತ್ಸವದಲ್ಲಿ ಪಂಡಿತ ವಸಂತರಾವ್ ಎಂಬ ಒಬ್ಬ ಗೃಹಸ್ಥನು "ವಾಯುವ್ಯ ಪ್ರಾಂತ್ಯ ಮತ್ತು ಅಯೋಧ್ಯಾ ಪ್ರಾಂತ್ಯದಲ್ಲಿನ 30 ವರುಷಗಳ ಹಿಂದಿನ ಸಮಾಚಾರ" ಎಂಬ ವಿಷಯದಮೇಲೆ ಒಂದು ಉಪನ್ಯಾಸಮಾಡಿದನು. ಅದರಲ್ಲಿ ಅವನು ಝಾಸಿರಾಣಿಯ ಸಂಬಂಧವಾಗಿ ಮನೋರಂಜಿತವಾದ ಅನೇಕಮಾತುಗಳನ್ನು ಹೇಳಿದನು. ಆ ಉಪನ್ಯಾಸದ ಸಾರಾಂಶವು, ಪೂನೇ ಕೇಸರಿಪತ್ರದ ತಾರೀಖು 27ನೇ ಮೇ 1890ರ ಅಂಕದಲ್ಲಿ ಪ್ರಸಿದ್ಧಿಯಾಯಿತು. ಪಂಡಿತ ವಸಂತರಾಯನು ಆ ಸರ್ವ ಪ್ರಸಿದ್ಧ ವಿಷಯಕ್ಕೆ ಕಾದಂಬರಿಯ ಮಾದ್ರಿಯಲ್ಲಿ, ಸ್ವಲ್ಪ ಉಪ್ಪುಖಾರ ಹಚ್ಚಿ ವಿಸ್ತಾರಪಡಿಸಿ ಹೇಳಿದ್ದರಿಂದಲೂ ಮತ್ತು ಆತನವಾಕ್ಚಾತುರಿಯು ಬಹಳ ಚಿತ್ತಾಕರುಷಣೆಮಾಡತಕ್ಕದ್ದಾಗಿದ್ದದ್ದರಿಂದಲೂ, ಪುಣ್ಯಪತನಸ್ಥರಾದ ಜನಗಳಿಗೆ ಅದು ಬಹಳ ಆನಂದದಾಯಕವಾಯಿತು ; ಮತ್ತು ಕೇಸರಿ ಪತ್ರದಲ್ಲಿ ಆ ವಿಷಯದ ಸಾರವು, ಪ್ರಸಿದ್ಧಿಯಾದ್ದರಿಂದ, ಕೇಸರಿಯ ವಿವಿಧವಾಚಕರಿಗೆ ಸಹ ಅದರ ರುಚಿಯು ಹತ್ತಿತು. ಈ ಪ್ರಕಾರವಾಗಿ, ಸರ್ವಪ್ರಿಯವಾದ, ಈ ವಿಷಯವು ಪುನಃ ಪ್ರಕಾಶವಾಗಿ, ಅಲ್ಲಲ್ಲಿ ಝಾಸಿಯ ರಾಣಿ ವಿಷಯವನ್ನು ಕುರಿತು, ಧನ್ಯವಾದ ಮತ್ತು ಆಕೆಯ ಚರಿತ್ರಶ್ರವಣದ ವಿಷಯದ, ಆತುರ ತೋರಿಸತಕ್ಕ ಆಸಕ್ತಿಯ ಟಿಪ್ಪಣಿಗಳು ಪುನಃ ಹುಟ್ಟಲಿಕ್ಕೆ ಪ್ರಾರಂಭಿಸಿದವು. ಇಷ್ಟರಲ್ಲಿ ಕೇಸರಿಯಲ್ಲಿ ಪ್ರಸಿದ್ಧವಾಗಿದ್ದ ವ್ಯಾಖ್ಯಾನದ ಒಂದು ವಿಶೇಷ ಪರಿಣಾಮವಾಯಿತು. ಅದು ಎಷ್ಟು ಮಹಾತ್ಮೆಯುಳ್ಳದ್ದಾಗಿತ್ತೆಂದರೆ, ಅದರ ದೆಶೆಯಿಂದ ಈಗ ಈ ಚರಿತ್ರೆಯನ್ನು ವಾಚಕರಿಗೆ ಸಮರ್ಪಣೆಮಾಡುವ ಸುಸಂಧಿಪ್ರಾಪ್ತಿಯಾಯಿತು, ಎಂಬುವದನ್ನು ಬಹಳ ಆನಂದದಿಂದ ಇಲ್ಲಿ ನಾವು ವ್ಯಕ್ತಮಾಡದೆ, ಬಿಡುವದಕ್ಕೆ ಮಾರ್ಗವಿಲ್ಲ.

ಝಾಂಸಿ ರಾಣಿ ಲಕ್ಷ್ಮೀಬಾಯಿ ಸಾಹೇಬಳ ದತ್ತಪುತ್ರ ಶ್ರೀಮಂತ ದಾಮೋದರ ರಾವ್ ಝಾಂಸಿ ಇಲೆ—ಈತನ ಸಮ್ಮಂಧವಾಗಿ, ಮಹರಾಷ್ಟ್ರದಲ್ಲಿ ಜನಗಳಿಗೆ, ಕೇಳಿ ಕೂಡಾ ಪರಿಶ್ರಮವಿರಲಿಲ್ಲ. ಅಂಥಾ ಜನಗಳ ಎದುರಿಗೆ ಪಂಡಿತ ವಸವಂತರಾಯನ ಉಪ ನ್ಯಾಸವು ನಡೆಯಿತು. ಶ್ರೀಮಂತ ದಾಮೋದರರಾಯನು ಪ್ರತ್ಯಕ್ಷವಾಗಿ ರಾಣಿಸಾಹೇಬಳ ದತ್ತಪುತ್ರನಾಗಿದ್ದಕಾರಣ ಆತನಿಗೆ ಆಕೆಯ ಸಮ್ಮಂಧವಾದ ನಿಜವಾದ ಬಹಳ ಸಂಗತಿ ಗಳು ಪರಿಶ್ರಮ ಇರುವದು, ಕೇವಲ ಸ್ವಭಾವಿಕವಾಗಿದೆ. ಅದ್ದರಿಂದ ಆ ಕೇಸರಿ ಪತ್ರ ದಲ್ಲಿ ಪ್ರಸಿದ್ಧವಾದ ಲೋಕ ಚಿತ್ತಾಕರ್ಷಣೆ ಮಾಡತಕ್ಕಂಥಾ, ಪರಂತು, ಕೇವಲ ಅಸತ್ಯ ಮತ್ತು ಸ್ವಯಂಕಲ್ಪಿತವಾದ ವ್ಯಾಖ್ಯಾನವನ್ನು ಓದಿದ ಕ್ಷಣವೆ ಶ್ರೀಮಂತನಿಗೆ ಬಹಳ ಖೇದವುಂಟಾಗಿ, ಆತನು ಆ ಉಪನ್ಯಾಸದ ಯೋಗದಿಂದ ರಾಣಿ ಸಾಹೇಬಳ ವಿಷಯವಾಗಿ ಜನಗಳ ಮನಸ್ಸಿನಲ್ಲಿ ಉತ್ಪನ್ನವಾದ ತಪ್ಪು ತಿಳುವಳಿಕೆಯನ್ನು ಹೋಗಲಾಡಿಸುವ ಉದ್ದೇಶದಿಂದ, ತಾರೀಖು 10 ಜೂನ್ 1890ನೇ ದಿವಸ ಕೇಸರಿಯಲ್ಲಿ ಒಂದು ಪತ್ರವನ್ನು ಪ್ರಸಿದ್ಧಪಡಿಸಿದನು. ಅದರಲ್ಲಿ, ಆ ಉಪನ್ಯಾಸಕಾರಕನು ಹೇಳಿದ್ದ ಸರ್ವಸಂಗತಿಯೂ ಕಲ್ಪನೆ ಮತ್ತು ಅಸತ್ಯವಾಗಿದೆಯಂತ ಸ್ಪಷ್ಟಪಡಿಸಿ, ಅದನ್ನು ಕುರಿತು ವ್ಯಾಖ್ಯಾನ ಕಾರಕನ ಹತ್ತರ ಯೇನಾದರೂ ರುಜುವಾತು ಇದ್ದರೆ, ಆತನು ಅದನ್ನು ಮುಂದಕ್ಕೆ ತರಬೇಕೆಂತ ತಿಳಿಸಿದನು. ಶ್ರೀಮಂತನ ಈ ಪತ್ರವನ್ನು ನೋಡತ್ತಲೆ, ಕೇಸರಿ ಪತ್ರಿಕಾ ಕರ್ತರು, ಶ್ರೀಮಂತನ ಕ್ಷಮಾಪಣೆಯನ್ನು ಕೇಳಿಕೊಂಡರು.

ಈ ಕ್ಷಮಾಪಣೆಯ ಸಂಗತಿ ನಡಿದಮೇಲೆ, ಇಲ್ಲಿ ಅಲ್ಲಿ ಪುಷ್ಕಳ ಜಿಜ್ಞಾಸ ನಡೆದು, ಪಂಡಿತ ವಸವಂತರಾಯನು ಈಗ ಯೇನು ದೃಷ್ಟಾಂತ ಪ್ರಸಿದ್ಧಿಮಾಡುತ್ತಾನೆಂಬುವ ದನ್ನು ನೋಡುವದಕ್ಕೆ, ಸರ್ವರ ದೃಷ್ಟಿಬಿತ್ತು. ಪರಂತು, ಆ ಸಮ್ಮಂಧವಾಗಿ, ಪಂಡಿ ತನ ಹತ್ತರ ಏನೂ ದೃಷ್ಟಾಂತವಿಲ್ಲದ ರಿಂದ ಆತನು 1890ನೇ ಇಸಿವಿ ಸೆಪ್ಟೆಂಬರು ತಾರೀಖು 23ನೇ ದಿವಸ, ಕೇಸರಿಪತ್ರದ ಮೂಲಕ ಶ್ರೀಮಂತನ ಕ್ಷಮಾಪಣೆಯನ್ನು ಕೇಳಿಕೊಂಡನು.

ಇಲ್ಲಿಯವರೆಗೆ ಎಲ್ಲಾ ಸರಿಯಾಗಿ ಹೋಯಿತು. ಪರಂತು, ಆ ಉಪನ್ಯಾಸದ ದೆಶೆ ಯಿಂದ, ರಾಣಿ ಸಾಹೇಬಳ ಸಮ್ಮಂಧದ ನಿಜವಾದ ಸಮಾಚಾರವನ್ನು ತಿಳುಕೊಳ್ಳುವ ವಿಷಯದಲ್ಲಿ ಹುಟ್ಟಿದ ಜಿಜ್ಞಾಸ ಮತ್ತು ಉತ್ಸಾಹ ಮಾತ್ರ ಬಹಳ ಪ್ರಬಲವಾಯಿತು. ಶ್ರೀಮಂತ ದಾಮೋದರರಾಯನು ಪ್ರಸಿದ್ಧಳಾದ ತನ್ನ ಮಾತೋಶ್ರೀಯ ನಿಜವಾದ ಚರಿ ತ್ರೆಯನ್ನು, ಪ್ರಸಿದ್ಧಿಮಾಡಿದರೆ, ಮಹರಾಷ್ಟ್ರ ಓದತಕ್ಕವರಮೇಲೆ ಆತನ ಉಪ ಕಾರವು ಬಹಳವಾಗಿ ಆದೀತೆಂತ ಅನೇಕರಿಗೆ ತೋರುತ್ತಾಬಂತು. ಆ ಪ್ರಕಾರವಾಗಿ ಆನೇಕ ಜನಗಳು ಶ್ರೀಮಂತನಿಗೆ ಅಂಥಾ ಅಭಿಪ್ರಾಯವನ್ನು ಸೂಚಿಸಿದರು. ಆ ವೇಳೆ ಯಲ್ಲಿ ನಮ್ಮ ಮನಸ್ಸಿನಲ್ಲಿಯೂ ಈ ವಿಷಯ ಸಮ್ಮಂಧವಾಗಿ ಹೆಚ್ಚು ಅಭಿರುಚಿ ಉತ್ಪ ನ್ನವಾಗಿ ಆ ಪರಾಕ್ರಮಿ ರಾಣಿ ಸಾಹೇಬಳ ಸಮ್ಮಂಧವಾಗಿ ಕೆಲವು ಪರಿಶ್ರಮವನ್ನು ಸಂಪಾದಿಸಿ, ಆಕೆಯ ಅದ್ವಿತೀಯ ಗುಣಮಹಿಮೆಯನ್ನು ನಮ್ಮದೇಶ ಬಾಂಧವರಿಗೆ

ಸಮರ್ಪಣೆಮಾಡಬೇಕೆಂಬ ಅಭಿಲಾಷೆ ಹುಟ್ಟಿತು. ಆ ಸಮಯದಲ್ಲಿ ರಾಣಿ ಸಾಹೇಬಳ ಇಷ್ಟು ವಿಸ್ತಾರವಾದ ಚರಿತ್ರೆ ಬರೆಯುವಷ್ಟು ತಿಳುವಳಿಕೆ ಶಿಕ್ಕೀತೆಂತ, ನಮಗೆ ಹೆಚ್ಚಾಗಿ ತಿಳಿದಿರಲಿಲ್ಲ. ಪರಂತು, ಶ್ರೀಮಂತನಕಡೆಯಿಂದ ಶಿಕ್ಕಬಹುದಾದಷ್ಟು, ಸಂಗತಿಗಳನ್ನು ಸಂಪಾದಿಸುವದಕ್ಕೆ ಪ್ರಯತ್ನಮಾಡಿ, ರಾಣಿಸಾಹೇಬಳ ಒಂದು ಸಣ್ಣ ಚರಿತ್ರೆಯನ್ನು ಬರೆಯಬೇಕೆಂತ ನಿಶ್ಚಯಮಾಡಿದೆವು. ಈ ನಮ್ಮ ಮನೋದಯಕ್ಕೆ ನಮ್ಮ ಮಿತ್ರನಾದ ರಾ. ರಾ. ಯೇಕನಾಥಗಣೇಶಭಾಂಡಾರೆಯು ತನ್ನ ಸಂಪೂರ್ಣವಾದ ಸಮ್ಮತಿಯನ್ನು ಕೊಟ್ಟನು. ಆ ಬಳಿಕ ನಾವಿಬ್ಬರೂ ಶ್ರೀಮಂತ ದಾಮೋದರರಾಯನಿಗೆ, ಒಂದು ವಿನಂತಿ ಪತ್ರವನ್ನು ಕಳುಹಿಸಿ, ನಮ್ಮ ಉದ್ದೇಶ್ಯವನ್ನು ಆತನಿಗೆ ನಿವೇದನವನ್ನು ಮಾಡಿದೆವು. ಶ್ರೀಮಂತನಿಗೆ ತನ್ನ ಪರಮಪೂಜ್ಯಳಾದ ಮಾತೋಶ್ರೀಯ ವಿಷಯದಲ್ಲಿ ಅತ್ಯಂತ ಅಭಿಮಾನ ಮತ್ತು ಪ್ರೇಮವಿದ್ದದ್ದರಿಂದ, ಆತನು ಬಹಳ ಸಂತೋಷವಾಗಿ, ನಮ್ಮ ವಿನಂತಿಯನ್ನು ಮಾನ್ಯಮಾಡಿ, ಝಾರ್ಸಿ ಮತ್ತು ರಾಣಿ ಸಾಹೇಬಳ ಸಂಬಂಧವಾಗಿ ಆತನ ಹತ್ತರ ಇದ್ದ ಸರ್ವದೃಷ್ಟಾಂತಗಳನ್ನು ನಮ್ಮ ಕಡೆಗೆ ಕಳುಹಿಸುವದಕ್ಕೆ ಒಪ್ಪಿಕೊಂಡನು. ಆಪ್ರಕಾರವಾಗಿ, ಪ್ರಥಮತಃ ಝಾರ್ಸಿ ಸಂಸ್ಥಾನದ ಸಮ್ಮಂಧದ ಪರಿಶ್ರಮವನ್ನು ಆತನ ಕಡೆಯಿಂದ ಸಂಪಾದಿಸಿಕೊಂಡು, ಅದನ್ನ ಮಹಾರಾಷ್ಟ್ರ ಕೋಕಿಲ್ ಎಂಬ ಮಾಸಿಕ ಪುಸ್ತಕದಲ್ಲಿ ಛಾಪಿಸಿ, ಪ್ರಸಿದ್ಧಿಪಡಿಸುವದಕ್ಕೆ ಪ್ರಾರಂಭಮಾಡಿದೆವು.

ಈ ಪ್ರಕಾರವಾಗಿ ನಮ್ಮ ಪ್ರಯತ್ನಕ್ಕೆ ಸ್ವಲ್ಪಯಶಸ್ಸುಬಂದು ಝಾರ್ಸಿ ಸಂಸ್ಥಾನದ ಇತಿಹಾಸವು ಮಹಾರಾಷ್ಟ್ರ ಕೋಕಿಲ ಎಂಬ ಪತ್ರದಲ್ಲಿ ಪ್ರಸಿದ್ಧವಾಗುತ್ತಾಹೋದ ನಂತರ ಪುನಃ ಇನ್ನೊಂದು ಮಹತ್ವದ ಸಂಗತಿ ಬಂದು ಒದಗಿತು. ಅದರ ಯೋಗದಿಂದ, ರಾಣಿ ಸಾಹೇಬಳ ಚರಿತ್ರೆಯನ್ನು ವಿಸ್ತಾರಮಾಡಿ, ಬರೆಯುವ ವಿಷಯದಲ್ಲಿ, ದ್ವಿಗುಣವಾದ ಪ್ರೋತ್ಸಾಹ ಬಂತು. ಅದೇ ವರುಷ ಏಪ್ರಿಲ್ ತಿಂಗಳಲ್ಲಿ, ನಮಗೂ ಮತ್ತು ಸರದಾರ್ ರಾವ್ ಬಹದೂರ್ ಗೋಪಾಲರಾವ್ ಹರಿದೇಶ ಮುಕನಿಗೂ, ಪೂನೆಯಲ್ಲಿ ದರ್ಶನವಾಯಿತು. ಆ ಪ್ರಸಂಗದಲ್ಲಿ, ಝಾರ್ಸಿರಾಣಿಯ ಸಮ್ಮಂಧವಾಗಿ ಪುಷ್ಕಳ ಮಾತು ಹೊರಟಿತು. ಅದರಲ್ಲಿ ರಾವ್ ಬಹದ್ದೂರನು ಅನೇಕ ಮನೋರಂಜಕವಾದ ಸಂಗತಿಗಳನ್ನು ಹೇಳಿದನು. ಆ ವಿಷಯವಾಗಿ ಬಹಳಕಾಲ ಸಂಭಾಷಣೆಯಾದನಂತರ, ರಾವ್ ಬಹದ್ದೂರನು ಬಹಳ ಕಳವಳದಿಂದ, ಕೊನೆಗೆ ಹೇಳಿದ್ದೇನಂದರೆ, “ ನೀವು ಝಾರ್ಸಿ ಸಂಸ್ಥಾನದ ಇತಿಹಾಸವನ್ನು ಪ್ರಸಿದ್ಧಿಮಾಡುವದಕ್ಕೆ ಮನಸ್ಸಿನಲ್ಲಿ ತೆಗೆದುಕೊಂಡಿದ್ದೀರಿ ಎಂಬುವದನ್ನು ನೋಡಿ ನನಗೆ ಬಹಳ ಸಂತೋಷತೋರುತ್ತದೆ. ಆದಾಗ್ಯೂ ನಿಮಗೆ ನಾನು ಎರಡು ಮಾಹಾತ್ಮೆಯುಳ್ಳ ಮಾತುಗಳನ್ನು ಹೇಳದೆ ಬಿಡಲಿಕ್ಕೆ ಆಗುವದಿಲ್ಲ. ಯಾವವೆಂದರೆ, ನಿಮಗೆ ನಿಮ್ಮದೇಶದಲ್ಲಿ ಸುಪ್ರಸಿದ್ಧರಾದ ಸ್ತ್ರೀ ಚರಿತ್ರೆಯನ್ನು ಬರೆಯುವ ಅಭಿಲಾಷೆ ಇರುವ ಪಕ್ಷಕ್ಕೆ, ಅವಶ್ಯವಾಗಿ ನೀವು ಎರಡು ಚರಿತ್ರೆಯನ್ನು ಬರಿಯಿರಿ. ಒಂದು ಮಹಾರಾಣಿ ಅಹಲ್ಯಾಬಾಯಿ ಹೋಳಕರದ್ದು, ಎರಡನೆಯದು ಝಾರ್ಸಿ

ರಾಣಿ ಲಕ್ಷ್ಮೀಬಾಯಿಯದು, ಈ ಎರಡು ಸ್ತ್ರೀಯರಂಥಾ ಲೋಕೋತ್ತರ ಪ್ರಸಿದ್ಧರಾದ ಸ್ತ್ರೀಯರು ಪ್ರಪಂಚದಲ್ಲೆಲ್ಲಾ ಹುಡುಕಿದರೆ ಸಿಕ್ಕಲಿಕ್ಕಿಲ್ಲ. ಅಹಲ್ಯಾಬಾಯಿಯ ಹಾಗೆ ಬಹಳ ಚಾತುರ್ಯದಿಂದ ರಾಜಕಾರಭಾರ ಮಾಡತಕ್ಕವಳು, ಉದಾರಿ, ಸಾಧು, ಸ್ತ್ರೀ ಪ್ರಪಂಚದ ಎಲ್ಲಾ ಇತಿಹಾಸದಲ್ಲಿಯೂ, ಹುಡುಕಿದರೆ, ಒಬ್ಬಳಾದರೂ ಸಿಕ್ಕಲಿಕ್ಕಿಲ್ಲ. ಅದೇ ಪ್ರಕಾರವಾಗಿ, ಝಾಸಿ ರಾಣಿಯಹಾಗೆ ಶಸ್ತ್ರಪ್ರವೀಣಳಾದ ಮತ್ತು ಮಹಾ ಪರಾಕ್ರಮಿಯಾದ ಸ್ತ್ರೀಯು ಪುನಃ ಹುಟ್ಟಲಾರಳು. ಅಹಲ್ಯಾಬಾಯಿ ಮತ್ತು ಲಕ್ಷ್ಮೀಬಾಯಿ ಇವರಿಬ್ಬರೂ, ಹಿಂದೂಸ್ಥಾನದಲ್ಲಿ, ಅಮೌಲ್ಯವಾದ ರತ್ನಗಳಾಗಿದ್ದಾರೆ.'' ರಾವ್ ಬಹದ್ದೂರನು ಇಂಥಾ ಪ್ರೇಮಪೂರ್ವಕವಾದ, ಆದರ ಸಹಿತ ಸೂಚನೆಯನ್ನು ಮಾಡಿದ ಬಳಿಕ, ನಮ್ಮ ಮನಸ್ಸಿನಲ್ಲಿ ಈ ಎರಡು ಸ್ತ್ರೀಚರಿತ್ರೆಗಳನ್ನು ಬರೆಯುವ ವಿಷಯದಲ್ಲಿ, ಆಸಕ್ತಿ ಹುಟ್ಟಿ, ಆ ಸಮ್ಮಂಧವಾದ ಸಂಗತಿಗಳನ್ನೆಲ್ಲಾ ಸಂಪಾದಿಸಿಕೊಳ್ಳುವದಕ್ಕೆ ಪ್ರಯತ್ನ ನಡೆಸಿದೆವು. ವಸ್ತುತಃ, ಇಂಥಾ ಅತ್ಯಂತ ಮಹಾತ್ಮೆಯ ಕೆಲಸ ಒಳ್ಳೇ ವಿದ್ವಾಂಸರ ಕೈಗೆ ಹೋಗಬೇಕಾದದ್ದು, ಇಷ್ಟ ಮತ್ತು ಅವಶ್ಯಕವಾದ್ದಾಗಿ ಇತ್ತು. ಅಂಥಾ ಯೋಗ ಯಾವಾಗಬರುವದೋ ಆಗ ಬರಲಿ. ಪರಂತು ಸಧ್ಯಕ್ಕೆ ನಮ್ಮ ಅಂತಃಕರಣದಲ್ಲಿ ಪ್ರೇರಿಸಿದಂತೆ, ನಮ್ಮ ಕೈಯಿಂದ, ಆದಷ್ಟು ಒಳ್ಳೇದು ಕೆಟ್ಟದ್ದು ಸೇರಿಸಿದ ರೀತಿಯಿಂದ, ಈ ಮಹಾತ್ಮೆಯುಳ್ಳ ಎರಡು ಚರಿತ್ರೆಗಳನ್ನು ಪ್ರಸಿದ್ಧಿಮಾಡಬೇಕೆಂತ ಸಂಪೂರ್ಣ ಸಂಕಲ್ಪಮಾಡಿದೆವು. ಆದಿಯಲ್ಲಿ ನಾವು ಅಹಲ್ಯಾಬಾಯಿ ಹೋಳಕರ ಸಮ್ಮಂಧವಾದ ಪರಿಶ್ರಮಗಳನ್ನು ಸಂಪಾದಿಸಿಕೊಳ್ಳುವದಕ್ಕಾಗಿ, ಇಂದೂರಿನಲ್ಲಿನ ಒಬ್ಬ ಸ್ನೇಹಿತನ ಮೂಲಕ ಪ್ರಯತ್ನಪಟ್ಟೆವು. ಪರಂತು, ಹಿಂದೆ ಯಶವಂತರಾವ್ ಹೋಳಕರನ ಆಡಳತದಲ್ಲಿ ಮಹೇಶ್ವರದ ದಫ್ತರವೆಲ್ಲಾ ಸುಟ್ಟುಹೋದದ್ದರಿಂದ, ಅಹಲ್ಯಾಬಾಯಿ ಸಂಬಂಧವಾಗಿ ಹೋಳಕರನ ದರ್ಬಾರಿನಲ್ಲಿ ಹೇಳುವದಕ್ಕೆ ಅರ್ಹವಾದ ತಿಳುವಳಿಕೆಯು, ಮೂಲತಃ ಇಲ್ಲವೆಂತ ಆ ಕಡೆಯಿಂದ ನಿರುತ್ಸಾಹಕರವಾದ ಉತ್ತರವು ಸಿಕ್ಕಿತು. ಖುದ್ದ ಹೋಳಕರ ಸರ್ಕಾರದ, ದಫ್ತರದಲ್ಲಿಯೇ ಮಹಾರಾಣಿ ಅಹಲ್ಯಾಬಾಯಿಯ ವೃತ್ತಾಂತ ಸಿಕ್ಕದೆ ಹೋದಮೇಲೆ, ಅದು ಇತರ ಸ್ಥಳದಿಂದ, ಹ್ಯಾಗೆ ದೊರೆಯಬೇಕು ? ಆ ಸಮ್ಮಂಧದಲ್ಲಿ ಹೋಳಕರನ ಕೈಫೀತು, ಎಂಬುವದರಲ್ಲಿ, ಪ್ರಸಿದ್ಧಿಯಾಗಿದ್ದ ಸ್ವಲ್ಪ ಸಮಾಚಾರ ಮತ್ತು 'ಸೆಂಟ್ರಲ್ ಇಂಡಿಯಾ' ಎಂಬ ಪುಸ್ತಕದಲ್ಲಿ, ಮಹಾರಾಣಿ ಅಹಲ್ಯಾಬಾಯಿಯ ಸಮ್ಮಂಧವಾಗಿ, ಸರ್‌ಜಾನ್ ಮಲ್ಕಾಂ ಸಾಹೇಬನು ಬರೆದಿರುವ ವೃತ್ತಾಂತ, ಇವಿಷ್ಟುಮಾತ್ರ ಸಧ್ಯಕ್ಕೆ ಕಾಣತಕ್ಕದ್ದಾಗಿವೆ. ಹೀಗಿರುವಾಗ ಇಷ್ಟು ಸಾಹಿತ್ಯದಮೇಲೆಯೇ ಆ ಲೋಕೋತ್ತರ ಪ್ರಸಿದ್ಧವಾದ ಸ್ತ್ರೀ ಚರಿತ್ರೆಯನ್ನ ಬರೆಯುವದಕ್ಕೆ ನಮಗೆ ಬಹಳ ವ್ಯಸನ ತೋರಿದ್ದರಿಂದ, ಆ ಆಲೋಚನೆಯನ್ನ ಸಧ್ಯಕ್ಕೆ ನಾವು ನಿಲ್ಲಿಸಿದೆವು.

ಅನಂತರ ನಾವು ಝಾಸಿ ರಾಣಿಯ ಸಮ್ಮಂಧವಾದ ಸಂಗತಿಗಳನ್ನು ಸಂಪಾದಿಸುವದಕ್ಕೆ ವಿಶೇಷ ಪ್ರಯತ್ನವನ್ನು ನಡಿಸಿದೆವು. ಅದರಲ್ಲಿ ಪ್ರಥಮತಃ ದತ್ತಪುತ್ರ ಶ್ರೀ

ಮಂತ ದಾಮೋದರರಾಯನು, ರಾಣೀ ಸಾಹೇಬಳ ಆದ್ಯಂತ ಸಮಾಚಾರವನ್ನು ಕೊಡುವದಕ್ಕೆ ಆಶ್ವಾಸನವನ್ನು ಕೊಟ್ಟನು. ಆದ್ದರಿಂದ ನಮಗೆ ಬಹಳ ಪ್ರೋತ್ಸಾಹವು ಹುಟ್ಟಿತು. ಯಾಕಂದರೆ, ಶ್ರೀಮಂತನ ಕಡೆಯಿಂದ ಸಿಕ್ಕತಕ್ಕ ತಿಳುವಳಿಕೆಯು ಸಂಪೂರ್ಣವಾಗಿ ನಂಬುವದಕ್ಕೆ ಅರ್ಹವಾಗಿದ್ದದ್ದರಿಂದ, ಅದರ ಯೋಗ್ಯತೆಗೆ ಸರಿಯಾದ ತಿಳುವಳಿಕೆಯು ಎರಡನೆಯ ಕಡೆಯಿಂದ ಸಿಕ್ಕುವದು ಕೇವಲ ಅಸಾಧ್ಯವಾಗಿತ್ತು. ಶ್ರೀಮಂತನು, ತನ್ನ ಸ್ವತಃ ಅನುಭವದಮೇಲೂ, ರಾಣಿ ಸಾಹೇಬಳ ವೃದ್ಧಸೇವಕರ ಕಡೆಯಿಂದಲೂ, ಮತ್ತು ಕಾಗದ ಪತ್ರದಲ್ಲಿ ಬರೆದಿದ್ದ ಮಾತಿನಿಂದಲೂ, ಒಂದೆರಡು ವರ್ಷ ಅನೇಕ ಪ್ರಯತ್ನಮಾಡಿ, ಒಳ್ಳೇ ಸಂಗತಿಗಳನ್ನು ಸೇರಿಸಿ, ಅದನ್ನೆಲ್ಲಾ ನಮ್ಮ ಕಡೆಗೆ ಕಳುಹಿಸಿ ಕೊಟ್ಟನು. ಶ್ರೀಮಂತ ದಾಮೋದರರಾಯನು, ನಮಗೆ ಕಳುಹಿಸಿದ ಪರಿಶ್ರಮಗಳನ್ನು, ಓದಿ ನೋಡಿದ ಬಳಿಕ, ಜನಗಳಲ್ಲಿ ಪ್ರಾಚುರ್ಯವಾಗಿದ್ದ ಸಂಗತಿ, ಮತ್ತು ಕೆ. ಮ್ಯಾಲಿಸನ್ ಮುಂತಾದ ಇಂಗ್ರೇಜಿ ಇತಿಹಾಸಕಾರಕರು ಬರೆದಿದ್ದ ವೃತ್ತಾಂತದಲ್ಲಿ ಅನೇಕ ತಪ್ಪು ತಿಳುವಳಿಕೆ ಇದೆಯಂತ ನಮಗೆ ಸಂಪೂರ್ಣವಾಗಿ ನಂಬಿಕೆ ಹುಟ್ಟಿತು. ಪರಂತು ಶ್ರೀಮಂತನ ಪರಿಶ್ರಮದಮೇಲೆಯೇ ಈ ವಿಷಯದ ಸತ್ಯತ್ವವನ್ನು ನಿರ್ಣಯಮಾಡದೆ, ರಾಣಿ ಸಾಹೇಬಳ ಸಮ್ಮಂಧವಾಗಿ, ನಮ್ಮ ದೇಶದ ಮತ್ತು ಪರದೇಶದ ಗೃಹಸ್ಥರುಗಳಿಂದ, ಎಷ್ಟು ತಿಳುವಳಿಕೆ ಒದಗಬಹುದಾಗಿತ್ತೋ ಅಷ್ಟನ್ನು ಸೇರಿಸಿಕೊಂಡು, ನಂತರ ಅದನ್ನು ಕುರಿತು ವಿಚಾರಮಾಡಬೇಕೆಂತ ನಮಗೆ ಯುಕ್ತತೋರಿದ್ದರಿಂದ, ಆ ಸಮ್ಮಂಧದಲ್ಲಿ ಶೋಧನೆಯನ್ನು ಮಾಡಿದೆವು. ಕೇ. ಮತ್ತು ಮ್ಯಾಲಿಸನ್ ಇಬ್ಬರು ಗ್ರಂಥಕರ್ತರ ಹೊರತು ದಂಗೆಯ ಸಮ್ಮಂಧವಾಗಿ ವಿಲಾಯತಿಯಲ್ಲಿ ಅನೇಕ ಯುರೋಪಿಯನ್ ಜನಗಳು ಪುಷ್ಕಳ ಪುಸ್ತಕಗಳನ್ನು ಪ್ರಸಿದ್ಧಿಮಾಡಿದ್ದಾರೆ. ಇಷ್ಟೇ ಅಲ್ಲದೆ, ಇನ್ನೂ ದಂಗೆ ಸಮಾಪ್ತಿಯಾದನಂತರ ಇಂಗ್ಲೆಂಡಿನಲ್ಲಿ, ಕೆಲವು ಕಾಲ ಪರ್ಯಂತರ, 'ದಂಗೆಯ ಕಾಗದ ಪತ್ರ' (Mutiny Literature) ಎಂಬುವದು ಸರ್ವಪ್ರಿಯ ವಿಷಯವಾಗಿತ್ತು. ಆ ಭಯಂಕರವಾದ ಪ್ರಳಯದಿಂದ ಜೀವವುಳಿಸಿಕೊಂಡು, ಸ್ವದೇಶಕ್ಕೆ ಹಿಂತಿರುಗಿ ಹೋದ ಯೂರೋಪಿಯನ್ ಜನಗಳು ದಂಗೆ ಸಮ್ಮಂಧವಾಗಿ ತಮ್ಮ ಸ್ವತಃ ಅನುಭವದ ಪ್ರತ್ಯ ಪ್ರತ್ಯೇಕವಾದ ಸಮಾಚಾರವನ್ನು ಪ್ರಸಿದ್ಧಪಡಿಸಿ, ತಮ್ಮದೇಶ ಬಾಂಧವರ ಮನಸ್ಸನ್ನು ಕೇವಲ ಆಕರ್ಷಣೆಮಾಡಿ ಬಿಟ್ಟಿದ್ದರು. ಹೀಗಿರುವಾಗ, ವಿಲಾಯತಿಯಲ್ಲಿ ಪ್ರಸಿದ್ಧಿಯಾಗಿದ್ದ, ಝಾನ್ಸಿ ರಾಣಿಯ ಸಮ್ಮಂಧದ ವೃತ್ತಾಂತವು ಎಷ್ಟುಸಿಕ್ಕಬಹುದೋ ಅಷ್ಟು ಸಂಪಾದಿಸಿದರೆ, ಇಂಗ್ರೇಜಿ ಗ್ರಂಥಕಾರರೆಲ್ಲಾ, ಆಕೆಯ ವಿಷಯದಲ್ಲಿ, ಏನು ಹೇಳುತ್ತಾರೆ, ಎಂಬುವದು ಸರಿಯಾಗಿ ತಿಳದೀತೆಂತ ಯೋಚನೆಮಾಡಿ, ಆ ಸಮ್ಮಂಧವಾಗಿ ಬಹಳ ಪ್ರಯತ್ನಪಟ್ಟೆವು. ಇಂಗ್ರೇಜಿ ಜನಗಳು ಜಾತ್ಯಾ ಬಹಳ ಉದಾರ ಬುದ್ಧಿಯವರು ಮತ್ತು ಗುಣಗ್ರಾಹಿಗಳು ಆಗಿರುವದ್ದರಿಂದ, ಅವರು ನಮಗೆ ಒಳ್ಳೇ ಸಹಾಯ ಮಾಡ್ಯಾರಾಗಿ, ನಮಗೆ ನಂಬಿಕೆ ಇತ್ತು. ಆ ಪ್ರಕಾರವಾಗಿ, ಅಲ್ಲಿನ ಕೆಲವು ನಮ್ಮ

ಪರಿಚಯುಸ್ಥ ಗೃಹಸ್ಥರಿಗೆ ವಿನಂತಿಮಾಡಿ ನೋಡಿದೆವು. ಅದರಲ್ಲಿ ನಾವು ಹಿಂದೂಸ್ಥಾನದ ಪ್ರಿಯುಮಿತ್ರನಾದ ಮಿ. ವಿಲಿಯಮ್ ಡಿಗ್ಬಿ, ಸಿ. ಐ. ಇ., ಸಾಹೇಬನಿಗೂ ನಮ್ಮ ಉದ್ದೇಶ್ಯ ವನ್ನು ತಿಳಿಸಿದೆವು. ಮಿ. ಡಿಗ್ಬಿ ಸಾಹೇಬನಿಗೆ ಝಾಸಿ ರಾಣಿಯ ಕೀರ್ತಿಯು, ಚನ್ನಾಗಿ ಪರಿಶ್ರುತವಿದ್ದ ಕಾರಣ, ಆತನು ಅಂಥಾ ಶೂರಸ್ತ್ರೀಯ ಚರಿತ್ರೆಯು ಪ್ರಸಿದ್ಧಿಯಾಗ ಬೇಕಾದದ್ದು ತುಂಬಾ ಅವಶ್ಯಕವಾಗಿದೆ ಎಂತ ತಿಳಿದು ಬಹಳ ಅಭಿನಂದನೆಯ ಮನಸ್ಸಿನಿಂದ, ಆ ಸಮ್ಮಂಧವಾಗಿ ವಿಲಾಯತಿಯಲ್ಲಿ ಪ್ರಾಚುರವಾಗಿದ್ದ ಎಲ್ಲಾ ಸಮಾಚಾರ ವನ್ನೂ ಮತ್ತು ಝಾಸಿ ಸಂಸ್ಥಾನದ ಕಾಗದ ಪತ್ರಗಳನ್ನೂ ಸಹ, ಸಂಪಾದಿಸುವದಕ್ಕೆ ಪ್ರಯತ್ನಮಾಡಿದನು. ಅದೇ ಪ್ರಕಾರವಾಗಿ ಬೇರೇ ಕೆಲವು ಯುರೋಪಿಯರ್ ಗೃಹ ಸ್ಥರೂ, ಒಳ್ಳೇಸಹಾಯ ಮಾಡಿದರು. ಇದು ಅತ್ಯಂತ ಸಂತೋಷಕರವಾದ ಮಾತಾಗಿದೆ. ಇದು ಹಾಗಿರಲಿ. ಈ ರೀತಿಯಾಗಿ ಯುರೋಪಿಯರ್ ಗ್ರಂಥಕಾರರು, ದಂಗೆಯ ಇತಿಹಾಸದಲ್ಲಿ, ರಾಣಿ ಸಾಹೇಬಳ ಸಮ್ಮಂಧವಾಗಿ ಏನು ಬರೆದಿರುತ್ತಾರೆ ಎಂಬುವದ ನ್ನೆಲ್ಲಾ ಬಹಳಮಟ್ಟಿಗೆ ನೋಡುವದಕ್ಕೆ ಸಿಕ್ಕಿತು. ಅದರ ಮೇಲಿನಿಂದ ರಾಣಿ ಸಾಹೇಬಳ ಸಮ್ಮಂಧವಾಗಿ, ಅವರು ತಪ್ಪು ತಿಳುವಳಿಕೆ ತಿಳುಕೊಂಡಿದ್ದಾರೆಂತ ದಿನ ದಿನಕ್ಕೆ ತೋರುತ್ತಾ ಬಂತು. ಪರಂತು, ಅವುಗಳಲ್ಲಿ ಸರ್‌ಹ್ಯುರೋಜ್ ಸಾಹೇಬನ ಸ್ವಾರಿಸಂಗಡ ಝಾಸಿ ಮುಂತಾದ ಯುದ್ಧಗಳಲ್ಲಿ ಸಮಕ್ಷಮವಾಗಿದ್ದ ಡಾ.ಲೋ ಮತ್ತು ಡಾ.ಸಿಂಹ್ಲೇಸ್ಟರ್ ಮುಂತಾದ ಗೃಹಸ್ಥರು ಬರೆದಿರುವ ವೃತ್ತಾಂತವು ಬಹಳಮಟ್ಟಿಗೆ ನಿಜವಾದ್ದೆಂತ ಕಂಡು ಬಂತು. ತಥಾಪಿ ಪರಕೀಯ ಜನಗಳು ಕೊಟ್ಟ ತಿಳುವಳಿಕೆಗೇನೇ ಕೇವಲ ಲಕ್ಷ್ಯ ಕೊಟ್ಟರೆ, ಅದರಲ್ಲಿ 'ಸ್ವಜಾತಿರ್ದುರತಿಕ್ರಮಃ' ಎಂಬಂತೆ ಇರಲೇಬೇಕೆಂಬುವದು ಸ್ಪಷ್ಟ ವಾಗಿದೆ. ಇಂಗ್ರೇಜಿ ಜನಗಳು ಬರೆದಿರುವ ಸಮಾಚಾರಗಳಮೇಲೆ, ಇತ್ತಕಡೆ ಜನಗಳ ಚರಿತ್ರೆಯ ಸತ್ಯ ಸ್ವರೂಪವನ್ನು ತಿಳುಕೊಂಡು, ಬರೆಯುವದೂ ಮತ್ತು ಅದರಮೇಲೆ ಆದರಿಸಿ ಕಾಲನ್ನ ಊರುವದೂ ಸಹ ಸ್ವಲ್ಪ ಚಮತ್ಕಾರವಾದ್ದಾಗಿದೆ ಎಂತ ಎಲ್ಲರಿಗೂ ತೋರಿಬರಬಹುದು. ಪರಂತು, ಸದ್ಯಸ್ಥಿತಿಯನ್ನು ಮನಸ್ಸಿನಲ್ಲಿ ತಂದುಕೊಂಡು ನೋಡಿದರೆ, ನಮ್ಮ ದೇಶದ ಇತಿಹಾಸಗಳನ್ನು ಪಾಶ್ಚಿಮಾತ್ಯ ಜನಗಳು ಬರೆಯಬೇಕು. ನಮ್ಮ ದೇಶದ ಪ್ರಸಿದ್ಧ ಪುರುಷರಚರಿತ್ರೆಗಳನ್ನು ಅವರೇ ಬರೆಯಬೇಕು ; ಮತ್ತು ನಮ್ಮ ದೇಶದಲ್ಲಿ ಲೋಕೋತ್ತರ ಪ್ರಸಿದ್ಧಿಯಾದ ಮತ್ತು ಪ್ರಸಂಶನೀಯವಾದ ಮಾತಿನ ಶೋಧನೆಯನ್ನು ಅವರೇ ನಡಸಬೇಕು ; ಆ ಬಳಿಕ ನಾವು ಜಾಗ್ರತರಾಗಬೇಕು. ಇಂಥಾ ಕ್ರಮವು ನಡವಳಿಕೆಯಲ್ಲಿ ಇದೆ. ಇದಕ್ಕೆ ಯಾರ ಉಪಾಯವೂ ಇಲ್ಲ. ತಥಾಪಿ, ಅದರಲ್ಲಿಯೂ ಪ್ರಯತ್ನಪಟ್ಟು, ನಮ್ಮ ದೇಶದ ಜನಗಳ ಕಡೆಯಿಂದಲೂ, ರಾಣಿಸಾಹೇಬಳ ಸಮ್ಮಂಧ ವಾಗಿ ಇನ್ನೂ ಕೆಲವು ಪರಿಶ್ರಮವನ್ನು ಸಂಪಾದಿಸಿಕೊಳ್ಳುವದಕ್ಕೆ ನೋಡಬೇಕೆಂತ, ನಾವು ಸಂಕಲ್ಪಮಾಡಿ, ಆ ವಿಷಯದಲ್ಲಿ ಪ್ರಯತ್ನಪಡಲು ಪ್ರಾರಂಭಿಸಿದೆವು.

ಸ್ವದೇಶದ ಇತಿಹಾಸದ ಸಾದ್ಯಂತ ಪರಿಶ್ರಮವನ್ನು ಬರೆದಿಡುವ ಪದ್ಧತಿಯು ನಮ್ಮ ದೇಶದಲ್ಲಿ ಹೆಚ್ಚಾಗಿ ಪ್ರಚುರವಾಗಿಲ್ಲನ್ದರಿಂದ, ಅದನ್ನೆಲ್ಲಾ ಸಂಪಾದಿಸಿಕೊಳ್ಳು

ವದು ಬಹಳ ದುರ್ಲಭವಾಗಿದೆ. ತಥಾಪಿ, ರಾಷ್ಟ್ರೀಯ ವಿಷಯದಲ್ಲಿ ಬರೆದಿರುವ ಹಳೇಕಾಗದ ಪತ್ರಗಳು, ಮರಾಟೀ ಭಾಷೆಯಲ್ಲಿ 'ಬಖೈರ್,' ಮತ್ತು ಹಿಂದೀ ಭಾಷೆಯಲ್ಲಿ 'ತವಾರಿಖಾ' ಮತ್ತು 'ರಾಯಸೆ' ಇಷ್ಟುಮಾತ್ರ ಸ್ವಲ್ಪಮಟ್ಟಿಗೆ ಸಿಕ್ಕುವ ಸಂಭವ ಇದೆ. ಆದರೆ ರಾಣಿಯ ಸಮ್ಮಂಧವಾಗಿ ಅಂಥಾ ಪರಿಶ್ರಮಕೂಡ ಸಿಕ್ಕುವ ಸಂಭವ ಮೂಲತಃ ಇಲ್ಲ. ಯಾಕಂದರೆ, ರಾಣಿಸಾಹೇಬಳ ಚರಿತ್ರೆ ಭಾಗವೆಲ್ಲಾ, ಇಂಗ್ರೇಜಿ ಆಡಳಿತವಲ್ಲಿನದಾಗಿಯೂ ಮತ್ತು ದಂಗೆ ಪ್ರಕರಣದ್ದಾಗಿಯೂ ಇದ್ದಕಾರಣ, ಅದನ್ನ ಯಾರು ಬರೆದಿಡಲಿಲ್ಲ. ಎರಡನೆಯಲ್ಲಿ, ಝಾಸಿ ಸಂಸ್ಥಾನವನ್ನು ಸರ್ಕಾರಕ್ಕೆ ಸೇರಿಸಿಕೊಂಡದ್ದರಿಂದಲೂ, ಮತ್ತು ದಂಗೆಯ ಸಮಯದಲ್ಲಿ ಅಲ್ಲಿನ ಪರಿಶ್ರಮವುಳ್ಳ ಯಲ್ಲಾ ಜನಗಳೂ ನಾಶವಾಗಿ ಹೋದ್ದರಿಂದಲೂ, ರಾಣಿ ಸಾಹೇಬಳ ನಿಜವಾದ ವೃತ್ತಾಂತ ತಿಳಿದಿದ್ದ ಜನಗಳು ಈಗ ಸಿಕ್ಕುವ ಆಶೆಯು ಇಲ್ಲ. ದಂಗೆ ಸಮಯದಲ್ಲಿ ಯಾರು ಪುರಸ್ಕೃತರಾಗಿದ್ದರೋ ಅಥವಾ ಆ ವೇಳೆಯಲ್ಲಿ ಯಾರು ಸಮಕ್ಷಮ ಇದ್ದು ಎಲ್ಲಾ ವೃತ್ತಾಂತವನ್ನು ನೋಡಿದ್ದರೋ ಅಂಥಾವರಿಗೆ ರಾಣಿ ಸಾಹೇಬಳ ನಿಜವಾದ ವೃತ್ತಾಂತವು ತಿಳಿದಿರಬೇಕು. ಪರಂತು, ಅವರು ಯುದ್ಧ ಮಧ್ಯದಲ್ಲಿ ಪತನರಾದರು. ಅದರಲ್ಲಿ ಯಾರಾದರೂ ಒಬ್ಬನು ಉಳಕೊಂಡಿದ್ದರೆ, ಅವನು ಈಗ ಜೀವಂತನಾಗಿ ಇದ್ದಾನೆಯೋ ಇಲ್ಲವೋ ಎಂಬುವದನ್ನು ತಿಳಿಯುವದು ಬಹಳ ಕಷ್ಟ. ಈ ವಿಧವಾದ ಅನೇಕ ಕಾರಣಗಳಿಂದ, ಆ ಸಮ್ಮಂಧದ ನಿಜವಾದ ಸಂಗತಿಗಳನ್ನು ತಿಳಿಯುವದು ಬಹಳ ಕಷ್ಟವಾಯಿತು. ತಥಾಪಿ 'ಪ್ರಯತ್ನಾಂತೆ ರಮೇಶ್ವರಃ' ಎಂಬಂತೆ ಪುಷ್ಕಳ ಪ್ರಯತ್ನಮಾಡಿದ ಬಳಿಕ, ನಮಗೆ ಆ ಸಮ್ಮಂಧವಲ್ಲಿ ಬಹಳ ವೃತ್ತಾಂತಗಳು ಸಿಕ್ಕಿತೆಂಬುವದನ್ನ, ತಿಳಿಸುವದಕ್ಕೆ ಬಹಳ ಸಂತೋಷಪಡುತ್ತೇವೆ. ಈ ಕೆಲಸಕ್ಕೆ ನಮ್ಮ ಸನ್ಮಾನ ಮಿತ್ರ ಮತ್ತು ಸುಪ್ರಸಿದ್ಧ ವಿದ್ವಾನ್ ರಾ. ಬಾ. ಚಿಂತಾಮಣಿರಾವ್ ವೈದ್ಯಾ, ಯಂ. ಏ; ಯಲ್. ಯಲ್. ಬಿ., ಮಾಲ್ವ ಪ್ರಾಂತ್ಯದ ಜಡ್ಜ್, ಮತ್ತು ರಾ. ಸಾ. ಮಾಧವರಾವ್ ವೆಂಕಟೇಶ, ಲೆ. ಲೆ. ಬಿ. ಎ., ಯಲ್. ಸಿ. ಇ; ಅಸಿಸ್ಟೆಂಟು ಡಾಕ್ಟರ್ ಆಫ್ ಲ್ಯಾಂಡ್ ರಿಕಾರ್ಡ್ಸ್, ಗ್ವಾಲಿಯರ್, ಈ ಇಬ್ಬರು ಗೃಹಸ್ಥರು ನಮಗೆ ಬಹಳ ಸಹಾಯಮಾಡಿದರು. ರಾ. ಬಾ. ವೈದ್ಯನೂ, ಝಾಸಿಯುದ್ಧ ಸಮಯದಲ್ಲಿ, ರಾಣಿಸಾಹೇಬಳ ಆಶ್ರಿತನಾದ ಒಬ್ಬ ಬಹುಶ್ರುತ ಮತ್ತು ಚಾಣಾಕ್ಷ ಗೃಹಸ್ಥನ ಕಡೆಯಿಂದ, ರಾಣಿ ಸಾಹೇಬಳ ಮತ್ತು ಝಾಸಿಯಲ್ಲಿ ನಡೆದ ಯುದ್ಧದ ವೃತ್ತಾಂತವನ್ನ ಬರಿಸಿ ತೆಗೆದುಕೊಳ್ಳುವ ಪ್ರಯತ್ನವನ್ನು ಮಾಡಿದನು; ಮತ್ತು ರಾ ಸಾ. ಲೇಲೆಯು ಝಾಸಿ ಸಂಸ್ಥಾನದ ಸಂಗಡ, ಯಾರಿಗೆ ಒಳ್ಳೇ ಸಮ್ಮಂಧವಿತ್ತೋ ಅಂಥಾ ಒಬ್ಬ ತಿಳುವಳಿಕೆಯುಳ್ಳ ಗೃಹಸ್ಥನ ಕಡೆಯಿಂದ, ಸಂಸ್ಥಾನದ ಎಲ್ಲಾ ಸಮಾಚಾರವನ್ನೂ ಬರಿಸಿ ತೆಗೆದುಕೊಂಡು, ದಯಮಾಡಿ ಅದನ್ನು ನಮ್ಮ ಕಡೆಗೆ ಕಳುಹಿಸಿಕೊಟ್ಟನು. ಈ ಪ್ರಕಾರವಾಗಿ ಇಬ್ಬರು ವಿದ್ವಾಂಸರು, ತಮ್ಮ ಬೆಲೆಯುಳ್ಳ ಕಾಲವನ್ನು ವೆಚ್ಚಮಾಡಿ, ಬಹಳ ಮಾಹಾತ್ಮ್ಯವುಳ್ಳ ಕೆಲಸವನ್ನುಮಾಡಿ, ತಮ್ಮ ಸ್ವದೇಶವ

ಇತಿಹಾಸದ ವಿಷಯದಲ್ಲಿ ಪ್ರೀತಿಯನ್ನು ತೋರಿಸಿದ್ದಕ್ಕಾಗಿ ಅವರಿಗೆ ಎಷ್ಟು ಸ್ತುತಿಮಾಡಿದಾಗ್ಯೂ ಸ್ವಲ್ಪವೇ ಆಗಿದೆ. ಈ ಪ್ರಕಾರವಾಗಿ ಶ್ರೀಮಂತ ದಾಮೋದರರಾವ್, ರಾ. ಬಾ. ವೈದ್ಯ ಮತ್ತು ರಾ. ಸಾ. ಲೇಲೇ ಮಂಡಲಿಯಿಂದ, ಬಹಳ ಸಹಾಯ ಸಿಕ್ಕಿದನಂತರ, ಮುಂದೆ ನಮಗೆ ತಿಳಿದಿದ್ದೇನಂದರೆ ; ರಾಣಿ ಸಾಹೇಬಳ ಸಾಪತ್ನಿ ಮಾತುಶ್ರೀ ಮತ್ತು ಬಂಧು, ಅದ್ಯಾಪಿ ಜೀವಿಸಿದ್ದಾಳೆ. ಅದೇಪ್ರಕಾರ, ಆಕೆಯ ತಂಗಿ ಯೊಬ್ಬಳು, ಕಾಲ್ಪಿಯ ಸಮೀಪದಲ್ಲಿನ ಚಿರಷ್ಟಿ ಎಂಬ ಒಂದು ಊರಿನಲ್ಲಿದ್ದಾಳೆ. ಆಕೆಯನ್ನು ಅಲ್ಲಿನ ಒಬ್ಬ ಜಹಗೀರುದಾರನಿಗೆ ಕೊಟ್ಟಿದ್ದಾರೆಂತ ತಿಳಿಯ ಬಂತು. ಆಗ ಆಕೆಗೆ ಝಾಂಸಿ ಸಮ್ಮಂಧದ ಯೇನಾದರೂ ಪರಿಶ್ರಮವಿದ್ದರೆ, ಹುಡುಕಬೇಕೆಂಬ ಉದ್ದೇಶದಿಂದ ನಾವು ರಾಣಿ ಸಾಹೇಬಳ ಬಂಧುವಾದ ರಾ. ಸಾ. ಚಿಂತಾಮಣಿರಾವ್ ತಾಂಬೆಗೆ ವಿನಂತಿ ಪತ್ರವನ್ನು ಕಳುಹಿಸಿಕೊಟ್ಟೆವು. ಆತನೂನು ಬಹಳ ಆನಂದದಿಂದ, ತನ್ನ ಮಾತೋಶ್ರೀ ಚಿಮಾಬಾಯಿ ಸಾಹೇಬಳಿಗೆ ಎಲ್ಲಾ ಸಂಗತಿಗಳನ್ನೂ ವಿಚಾರಮಾಡಿ, ಆಗಾಗ್ಯೆ ನಮಗೆ ಬೇಕಾದ ತಿಳುವಳಿಕೆಯನ್ನ ಕೊಟ್ಟನು.

ಈರೀತಿಯಾಗಿ ರಾಣಿಸಾಹೇಬಳ ಚಿರಂಜೀವಿ, ಆಕೆಯ ಬಂಧುವು, ಮತ್ತು ಇತರ ಸಾಮಾನ್ಯ ಮಿತ್ರರು, ಮತ್ತು ಸದ್ಗ್ರಹಸ್ಥರ ಕಡೆಯಿಂದ ಬಹಳ ಸಮಾಚಾರಗಳು ಸಿಕ್ಕು, ಯುರೋಪಿಯನ್ ಗ್ರಂಥಕಾರರು, ರಾಣಿ ಸಮ್ಮಂಧವಾಗಿ ಬರದಿದ್ದ ಸಂಗತಿಗಳೆಲ್ಲಾ ಅವಗತವಾದಮೇಲೆ, ಆ ವಿಷಯದ ಸಮ್ಮಂಧವಾಗಿ, ಈ ಕಡೆಗೆ ಪ್ರಸಿದ್ಧವಾಗಿದ್ದ ವೃತ್ತಾಂತವನ್ನು ಶೋಧನೆ ಮಾಡಿದೆವು. ಅದರಮೇಲೆ, ಸರದಾರಪುರದ ಏಜಂಟನ ಹೆಡ್‌ಕ್ಲಾರ್ಕ್, ಯಾರೋ ಒಬ್ಬ ಬಾಬುಚಂಡಿ, ಚರಣಮಿತ್ರನೆಂಬುವನು, ಝಾಂಸಿ ರಾಣಿ ಎಂತ ಬಂಗಾಲಿ ಭಾಷೆಯಲ್ಲಿ ಒಂದು ಸಣ್ಣ ಚರಿತ್ರೆಯನ್ನು ಬರದಿದ್ದಾನೆ, ಎಂತ ತಿಳಿಯ ಬಂತು. ಪರಂತು, ಆ ಗೃಹಸ್ಥನ ಮತ್ತು ಶ್ರೀಮಂತ ದಾಮೋದರರಾಯನ ಪರಿಚಯವಿದ್ದದ್ದರಿಂದ, ಆತನ ತಿಳುವಳಿಕೆಯ ಸಂಗತಿಯಲ್ಲಾ, ದಾಮೋದರರಾಯನ ಬರವಣಿಗೆ ಯಲ್ಲಿ ಬಂದಿದೆ. ಇದು ಹೊರ್ತು, ಶಿರಸಾಜಿಲ್ಲೆ, ಅಲಹಾಬಾದ್‌ನಲ್ಲಿನ ಲಾಲಾ ಕಾಸೀನಾಥ ನೆಂಬುವನು, ಹಿಂದಿ ಭಾಷೆಯಲ್ಲಿ 'ಭಾರತ ವರ್ಷಕಿ, ವಿಖ್ಯಾತರಾಣಿಯೋಂಕೆ ಚರಿತ್ರ' ಎಂತ ಒಂದು ಪುಸ್ತಕವನ್ನು ಬರೆದಿದ್ದಾನೆ. ಅದರಲ್ಲಿ, ರಾಣಿ ಸಾಹೇಬಳ ಸಮ್ಮಂಧವಾಗಿ ಸ್ವಲ್ಪ ಸಂಗತಿಗಳನ್ನು ಕೊಟ್ಟಿದ್ದಾನೆ. ಅದೇ ಪ್ರಕಾರವಾಗಿ, ಅಜಮೀರನಲ್ಲಿನ ರಾಜಸ್ಥಾನ ಸಮಾಚಾರವೆಂಬ ಪತ್ರದಲ್ಲಿ ಮತ್ತು ಕಲ್ಕತ್ತೆಯಲ್ಲಿನ, ವಂಗವಾಸಿ, ಮತ್ತು ನ್ಯಾಷನಲ್ ಗಾರ್ಡಿಯನ್ ಎಂಬ ಪತ್ರದಲ್ಲಿಸಹ, ರಾಣಿ ಸಾಹೇಬಳ ಸಮ್ಮಂಧವಾಗಿ ಸಂಕ್ಷಿಪ್ತವಾದ ಚರಿತ್ರೆ ಪ್ರಸಿದ್ಧವಾಗಿದೆ ; ಮತ್ತು ಈಚೆಗೆ ಮರಾಟಿ ಭಾಷೆಯಲ್ಲಿ 'ಶೂರ ಅಬಲ' ಎಂತ ಧನುರ್ಧಾರಿಯು, ಒಂದು ಪುಸ್ತಕವನ್ನು ಬರೆದು ಅದರಲ್ಲಿ, ರಾಣಿ ಸಾಹೇಬಳ ಸ್ವಲ್ಪ ವೃತ್ತಾಂತವನ್ನು ಕೊಟ್ಟಿದ್ದಾನೆ. ಪರಂತು, ಆ ಸರ್ವವೃತ್ತಾಂತವೂ, ಇಂಗ್ರೇಜಿ ಇತಿಹಾಸಕಾರಕರಾದ, ಕೇ. ಮತ್ತು ಮ್ಯಾಲಿಸ್ನ ಸಾಹೇಬರ ಗ್ರಂಥದ ಆಧಾ

ರದಮೇಲೇನೇ ವಿಶೇಷವಾಗಿ ತಿಳಿಕೊಂಡಿದ್ದರಿಂದ, ಅದು ಕೇವಲ ಸಂಕ್ಷಿಪ್ತವಾಗಿದ್ದು. ಅದರಲ್ಲಿ ಸತ್ಯವುಎಷ್ಟೋ, ಅಷ್ಟೇಇದೆ. ಆದ್ದರಿಂದ, 1857ನೇ ಇಸ್ವಿಯ ದಂಗೆಯ ಇತಿಹಾಸವೆಂತ, ರಾ. ರಾ. ವಿನಾಯಕ ಕೋಡದೇವಾ ಓಕನು, ಮರಾಟಿಬಾಷೆಯಲ್ಲಿ. ಪ್ರಸಿದ್ಧಮಾಡಿದ ಒಂದುಗ್ರಂಥವಿದೆ. ಅದರಲ್ಲಿ, $2\frac{1}{2}$ ಹಾಳೆಗಳಲ್ಲಿ ಈಸಮಾಚಾರವಿದೆ. ಆಸುಪ್ರಸಿದ್ಧ ಇತಿಹಾಸದ ಸಮ್ಮಂಧವಾಗಿ ಹಿಂದೆ, ಕೈಲಿಪ್ಣು ಶಾಸ್ತ್ರಿ ಚಿಪ್ರಳೋಣಕರನು ನಿಬಂಧಮಾಲೆಯಲ್ಲಿ ಸ್ತೋತ್ರ ಮಾಡಿಯೇ ಇದ್ದಾನೆ. ಹೀಗಿರುವಾಗ ಅದರಲ್ಲಿನ ಸಮಾಚಾರವನ್ನು ವಿಶೇಷವಾಗಿ ವರ್ಣನೆ ಮಾಡುವದಕ್ಕೇನೂ ಕಾರಣವಿಲ್ಲ.

ಇದುಹಾಗಿರಲಿ ಈಪ್ರಕಾರವಾಗಿ ಮರಾಟಿಭಾಷೆಯಲ್ಲಿ, ಕೇವಲ ಅಶ್ರುತ ಪೂರ್ವವಾಗಿದ್ದ ನಿಜವಾದ ತಿಳುವಳಿಕೆಯನ್ನು ಪ್ರಸಿದ್ಧಪಡಿಸಿ, ರಾಣಿಸಾಹೆಬಳ ಸಮ್ಮಂಧದಲ್ಲಿ ಜನಗಳಲ್ಲಿ ಪ್ರಚುರವಾಗಿದ್ದ, ಅಸತ್ಯ ಮತ್ತು ನಿರಾಧಾರವಾದ ತಿಳುವಳಿಕೆ ಯನ್ನು ಹೋಗಲಾಡಿಸಬೇಕು; ಮತ್ತು ರಾಣಿಯು ಸ್ವಭಾವದಲ್ಲಿ ನಿಜವಾದಗುಣಗಳನ್ನು ಸಂಪೂರ್ಣವಾಗಿ ಪ್ರಕಾಶಮಾಡಬೇಕೆಂಬ ಉದ್ದೇಶದಿಂದ, ಯಥಾನುಶಕ್ತಿ ಪ್ರಯತ್ನ ಮಾಡಿ, ನಮ್ಮ ದೇಶದ ಜನಗಳಿಂದ ಸಿಕ್ಕಿದ ಮತ್ತು ಇಂಗ್ರೇಜಿ ಜನಗಳು ಬರೆದಿಟ್ಟಿದ್ದ ವೃತ್ತಾಂತವನ್ನು ಸಂಪಾದಿಸಿ ತೆಗೆದುಕೊಂಡೆವು. ಅನಂತರ ಪುನಃ ದಂಗೆಯಲ್ಲಿ ಪ್ರಸಿದ್ಧಿಯಾಗಿದ್ದ ಸ್ಥಳವನ್ನು ಸಮಕ್ಷಮ ದರ್ಶನ ತೆಗೆದುಕೊಂಡಿದ್ದಾದರೆ, ಅಲ್ಲಿ ಕದಾಚಿತು ಇನ್ನೂ ಹೆಚ್ಚಿಗೆ ತಿಳುವಳಿಕೆ ಸಿಕ್ಕೀತು ಮತ್ತು ಆ ಪ್ರಖ್ಯಾತಿಯಾದ ಸ್ಥಳದ ಸೃಷ್ಟಿಯನ್ನು ಪ್ರತ್ಯಕ್ಷವಾಗಿ ನೋಡಿದರೆ, 1857ನೇ ಇಸವಿಯಲ್ಲಿನ ಭಯಂಕರ ಪ್ರಸಂಗದ ವಿಷಯದಲ್ಲಿ ಬಹಳ ಊಹೆ ಮಾಡಬಹುದು ಎಂತ ನಮಗೆ ತೋರಿತು, ನಮ್ಮ ಸುದೈವದಿಂದ 1893ನೇ ಇಸ್ವಿ ಜನವರಿ ತಿಂಗಳಲ್ಲಿ, ಉತ್ತರ ಹಿಂದೂಸ್ಥಾನದಲ್ಲಿನ, ಪರವಾಸದಯೋಗವು ಒದಗಿ ಬಂದು, ಝೂನ್ಸಿ, ಗ್ವಾಲಿಯರ್, ಕಾನ್‌ಪುರ್, ಆಗ್ರ, ಲಕ್ನೋಮುಂತಾದ ಪಟ್ಟಣಗಳನ್ನು ನೋಡಿದೆವು. ಅದರಲ್ಲಿ, ಝೂನ್ಸಿರಾಣಿಯು ಸಮ್ಮಂಧವಾಗಿ. ಪುಷ್ಕಳ ಸಮಾಚಾರವು ತಿಳದೀತೆಂತ ನಮ್ಮ ಯೋಚನೆಯಾಗಿತ್ತು. ಪರಂತು, ಅದು ಅನುಭವದ ಕೊನೆಯಲ್ಲಿ. ಶುದ್ಧಾಂಗ ತಪ್ಪಾಯಿತು. ಝೂನ್ಸಿಯು ಮರಾಟಿಯವರ ಪ್ರಸಿದ್ಧವಾದ ಒಂದು ಸಂಸ್ಥಾನವಾಗಿತ್ತು. ಆದರೆ ಆಸಂಸ್ಥಾನಿಕರ ಆಳ್ವಿಕೆಯಲ್ಲಿ ಅದರ ಯಶಸ್ಸು ಇಷ್ಟು ಪ್ರಸಿದ್ಧಿಯಾಗಲಿಲ್ಲ. ಪರಂತು ಅಲ್ಲಿನ ಶೌರ್ಯಶಾಲಿನಿಯಾದ ರಾಣಿಯ ಪರಾಕ್ರಮದಿಂದ ಅದರಹೆಸರು ಎಲ್ಲಾ ಕಡೆಯಲ್ಲಿಯೂ ಕುಣಿಯಲಿಕ್ಕೆ ಪ್ರಾರಂಭವಾಯಿತೆಂತ ಹೇಳಿದರೆ ನಡೆಯುಬಹುದು. ಹೀಗಿರುವಾಗ ಇಂಥಾ ಅದ್ವಿತೀಯ ಸ್ತ್ರೀರತ್ನದ ಚರಿತ್ರೆಯು ಪ್ರಕಾಶವಾದ, ಆಸ್ಥಳದ ದರುಶನವು ಯಾವ ಸುಹೃದಯಾಪ್ರೇಕ್ಷಕನ ಚಿತ್ತವೃತ್ತಿಯನ್ನು ಹರಣಮಾಡದೆ ಇರಲಿಕ್ಕಿಲ್ಲ ವೆಂಬುವದು, ಪ್ರತ್ಯಕ್ಷವಾಗಿದೆ. ಝೂನ್ಸಿಪಟ್ಟಣವು ಈಗ ಇಂಗ್ರೇಜಿಯವರ ಅಧೀನದಲ್ಲಿದ್ದು, ಅಲ್ಲಿ ಅವರ ಒಂದು ಪ್ರಚಂಡವಾದ ಸೈನ್ಯದವಸತಿ ಇದೆ. ಅಲ್ಲಿ 'ಇಂಡಿಯನ್ ಮಿಡ್ಲಾಂಡ್ ರೈಲ್ವೆಯಸ್ಟೇಷನ್, ಇರುವದರಿಂದ, ಆಪಟ್ಟಣಕ್ಕೆ

ಬಳ್ಳೀ ಶೋಭಾಬಂಡಿದೆ. ಪರಂತು, ಅದರ ಪೂರ್ವದ ವೈಭವವು, ನಷ್ಟವಾದ್ದರಿಂದ, ಅದಕ್ಕೆ ಈಗ ಕೇವಲ ಹೀನದಶಾ ಪ್ರಾಪ್ತವಾಗಿದೆ. ತಥಾಪಿ, ಅಲ್ಲಿಪೂರ್ವದ ದೊಡ್ಡಮನೆಗಳು. ಅಥವಾ ಝಾನ್ಸಿ ಸಂಸ್ಥಾನಿಕರ ಅರಮನೆ, ಇವುಗಳ ಹೆಸರೇ ಈಗ ಇಲ್ಲ. ಆ ಅರಮನೆಯಲ್ಲಿ ಸರ್ಕಾರಿಕಚೇರಿ ಇದೆ; ಮತ್ತು ಯುರೋಪಿಯನ್ ಜನಗಳಿಗೋಸ್ಕರ ಒಂದು ಹೋಟಲ್ ಇದೆಎಂಬುವದ್ದರಿಂದ ಅದಕ್ಕೆ ಈಗ ಕ್ವೀನ್ಸ್ ಹೋಟಲ್, ಎಂತ ಅಭಿದಾನವಿದೆ. ತಾತ್ಪರ್ಯವೇನಂದರೆ, ಕಾಲಾಂತರದಲ್ಲಿ ಝಾನ್ಸಿ ಪಟ್ಟಣದ ಎಲ್ಲಾ ಸ್ಥಿತಿಯೂ, ಕೇವಲ ವ್ಯತ್ಯಾಸವಾಗಿದೆ ಸ್ವಸತ್ವವುಳ್ಳ ಕಾರ್ಥೇಜ್ ಮತ್ತು ರೋಮ್ ದೇಶಗಳು ನಷ್ಟವಾದಮೇಲೆ, ಅವುಗಳಿಗೆ ಯಾವದೀನ ಸ್ಥಿತಿಬಂತೋ ಹಾಗೆಯೇ ಈ ಸಣ್ಣ ಸಂಸ್ಥಾನದ ಸ್ಥಿತಿ ಆಯಿತೆಂತ ಹೇಳಬಹುದಾಗಿದೆ. ದಂಗೆಯು ಪರಿಸಮಾಪ್ತಿಯಾದ ನಂತರ, ಅಲ್ಲಿನ ಸರ್ವಮುಖ್ಯಮುಖ್ಯ ಜನಗಳು ನಾಶವಾದ್ದರಿಂದ, ಮಹಾರಾಣಿಯು ಮನೋಹರವಾದ ಬಾಯಿಕಥೆಯನ್ನು ಹೇಳುವದಕ್ಕೆ ಕೂಡ, ಯಾರೂ ಉಳಿಯಲಿಲ್ಲ. ಝಾನ್ಸಿಯಲ್ಲಿ, ರಾಣಿಯ ಸಮ್ಮಂಧವಾಗಿ, ಯೇನಾದರೂ ತಿಳುವಳಿಕೆ ಸಿಕ್ಕೀತೆಂಬ ನಮ್ಮ ಆಶೆಯು ಶುದ್ಧಾಂಗ ವ್ಯರ್ಥವಾಯಿತು. ಝಾನ್ಸಿ ಯಂಥಾಮುಖ್ಯಸ್ಥಳದಲ್ಲಾದರೂ, ರಾಣಿಸಾಹೇಬಳ ಕೀರ್ತಿಯು, ನಾವುಮಾತ್ರ ಕೇಳುವದಕ್ಕೆ ಸಿಕ್ಕದೆ ಮೇಲೆಹೋದ, ಇತರಸ್ಥಳದಲ್ಲಿ ಹೆಚ್ಚಿಗೆತಿಳುವಳಿಕೆ ಸಿಕ್ಕುವ ಆಶೆಯು ಉಳಿಯಲಿಲ್ಲ. ಇದುಹಾಗಿರಲಿ. 1857ನೇ ಇಸ್ವಿಯ ದಂಗೆಯಲ್ಲಿ ಪ್ರಸಿದ್ಧವಾಗಿದ್ದ ಸ್ಥಳವನ್ನು ನೋಡಿ, ಆಸಮ್ಮಂಧವಾಗಿ ಯಾವ ಪ್ರಯೋಜನವನ್ನೂ ಹೊಂದಬೇಕೆಂಬ ಆಸೆಯಿತ್ತೊ, ಅದುನಮಗೆ ಆಸ್ಥಳದ ದರುಶನ ಮಾತ್ರದಿಂದ ಸಂಪೂರ್ಣವಾಗಿ ಆಯಿತೆಂತ ಮನ್ನಿಸಬೇಕಾದ ಸಂಭವಬಂತು.

ರಾಣಿಸಾಹೇಬಳ ಚರಿತ್ರೆಯ ವಿಷಯದಲ್ಲಿ ಈರೀತಿಯಾಗಿ ಅನೇಕ ಸಾಮಗ್ರಿಗಳು ಸಿಕ್ಕಿದಬಳಿಕ, ನಾವು ಇದನ್ನು ಬರೆಯುವದಕ್ಕೆ ಪ್ರಾರಂಭಮಾಡಿದೆವು. ವಸ್ತುತಃ, ಈಚರಿತ್ರೆ ಎಂಬುವದು, ಝಾನ್ಸಿ ಯಲ್ಲಿನ ದಂಗೆಯ ಇತಿಹಾಸವಾಗಿದೆ ಯೆಂತ ಹೇಳಬಹುದು. ಈ ಇತಿಹಾಸವನ್ನು ಬರೆಯುವದು ಅನೇಕ ಕಾರಣಗಳಿಂದ ವ್ಯಸನಕರವಾದದ್ದಾಗಿದೆ. ಗವರ್ನರ್ ಜನರಲ್ ಲಾರ್ಡ್ ಡೆಲ್ಹೌಜಿ ಸಾಹೇಬನ ಕಾಲದಲ್ಲಿ, ನಮ್ಮ ಸಂಸ್ಥಾನಿಕರ ಮತ್ತು ಸರ್ದಾರ ಜನಗಳಮೇಲೆ, ಆಗಿನರಾಜ್ಯ ಪದ್ಧತೀ ಪ್ರಕಾರ ಬಲೋದ್ಬಂಧವಾದ ಅಧಿಕಾರ ನಡಿಸಿದ್ದರಿಂದ, ಆಸಂಸ್ಥಾನಿಕರ ಸಹನಶೀಲತೆ ಮತ್ತು ರಾಜಭಕ್ತಿ ಸಹ ಭಂಗವಾಗಿ ಹೋಗಿ, ಅವರು ಸ್ವಧರ್ಮಾಭಿಮಾನ ಮತ್ತುಸ್ವಾಭಿಮಾನದ ಬಲದ ಮೇಲೆ, ಕೃಪಾಳುಗಳಾದ ಇಂಗ್ರೇಜಿ ಸರ್ಕಾರದವರಿಗೆ ವಿರುದ್ಧವಾಗಿ ಶಸ್ತ್ರಧಾರಣೆಮಾಡುವ ಪ್ರಸಂಗ ಬಂದುವದಗಿದ್ದು, ಬಹಳ ದುರಾದೃಷ್ಟದ ಮಾತಾಗಿದೆ. ಶ್ರೀಮಂತ ಬಾಜಿರಾವ್ ಸಾಹೇಬ್ ಪೇಶ್ವೆಯ ಚಿರಂಜೀವಿ ನಾನಾಸಾಹೇಬ, ಬಾಂದಾಸಂಸ್ಥಾನದ ನವಾಬ್, ಅಯೋಧ್ಯೆಯ ರಾಜಮನೆತನದ ತೇಜಸ್ವಿಯಾದ ಒಬ್ಬ ಪುರುಷನು, ಮತ್ತು ಝಾನ್ಸಿ ಸಂಸ್ಥಾನದ ರಾಣಿಸಾಹೇಬಳು, ಇವರೆಲ್ಲರೂ ಇಂಗ್ರೇಜಿ ಸರ್ಕಾರದ ಕೇವಲ ಸ್ನೇಹಿತರಾಗಿ

ಷ್ಠರು. ಇಷ್ಟೇ ಅಲ್ಲದೆ, ಇನ್ನೂ ಅವರು, ಅವರಿಗೆ ಆಗಾಗ್ಯೆ ಬೇಕಾದ ಸಹಾಯವನ್ನು ಕೊಡುವದಕ್ಕೆ ಹಿಂದೆ ಮುಂದೆ ನೋಡುತ್ತಿರಲಿಲ್ಲ. ಹೀಗಿದ್ದಾಗ್ಯೂ, ಲಾರ್ಡ್ ಡೆಲ್ಹೂಜಿ ಸಾಹೇಬನು ತನ್ನ ಆಡಳತದಲ್ಲಿ, ಅವರ ಯೋಗ್ಯತೆಯನ್ನಾಗಲಿ ಸ್ನೇಹವನ್ನಾಗಲಿ, ವಿಚಾರಮಾಡದೆ, ಅವರ ರಾಜ್ಯ, ಪೆನ್ಷನ್ ಮತ್ತು ಇತರ ಉತ್ಪನ್ನವನ್ನು ಸಹ ಸರ್ಕಾರಕ್ಕೆ ಸೇರಿಸಿಕೊಂಡು, ಅವರ ಸಹನ ಶೀಲತೆಯ ಮೇಲೆ, ಹಾಕಿದ ಬಲವಾದ ಆಘಾತದ ಪರಿಣಾಮವೇ, 1857ನೇ ಇಸ್ವಿಯಲ್ಲಿ ನಡೆದ ಭಯಂಕರವಾದ ದಂಗೆಯಾಗಿದೆ ಎಂತ ಬಹಳ ಜನಗಳು ತಿಳಿದಿದ್ದಾರೆ. ದಂಗೆಯಕಾರಣವು ಯೇನಾದರೂ ಇರಲಿ, ತಥಾಪಿ ಅದರ ಇತಿಹಾಸವು ಪುಷ್ಕಳ ಭೋಧ ಪರವಾಗಿದೆ ಎಂಬುವದರಲ್ಲೇನೂ ಸಂಶಯವಿಲ್ಲ. ಇಂಗ್ರೇಜಿ ಇತಿಹಾಸಕಾರಕರು, ದಂಗೇ ಸಮ್ಮಂಧವಾಗಿ ಅನೇಕ ಗ್ರಂಥಗಳನ್ನು ಬರೆದಿರುತ್ತಾರೆ. ಅದರಲ್ಲಿ, ಕೇ, ಮ್ಯಾಲಿಸನ್, ಹೋಮ್ಸ್, ಮಾರ್ಟಿನ್, ಮುಂತಾದ ಪುಷ್ಕಳ ಇತಿಹಾಸಕಾರಕರ ಗ್ರಂಥಗಳು ಪ್ರಸಿದ್ಧಿಯಾಗಿವೆ. ಅವುಗಳಲ್ಲೆಲ್ಲಾ, ಕೇ ಸಾಹೇಬನ ಇತಿಹಾಸವು ನಿಷ್ಪಕ್ಷಪಾತದ ಸಮ್ಮಂಧದಲ್ಲಿ ಪ್ರಸಿದ್ಧವಾಗಿದೆ. ಪರಂತು, ಅದರಲ್ಲಿಕೂಡಾ, ಅಲ್ಲಲ್ಲಿ ಬಹಳ ತಪ್ಪು ತಿಳುವಳಿಕೆ ಯಾಗಿರುವಂತೆ ಕಂಡು ಬರುತ್ತದೆ. ಮ್ಯಾಲಿಸನ್ ಸಾಹೇಬನ ಸರ್ವೋಪ ಲಭ್ಧ ತಿಳುವಳಿಕೆಯನ್ನು ಸೇರಿಸಿಕೊಂಡು, ತನ್ನ ಗ್ರಂಥವನ್ನು ದೊಡ್ಡದಾಗಿಮಾಡಿದ್ದಾನೆ; ಮತ್ತು ಅದನ್ನೇ ಸಧ್ಯಕ್ಕೆ ದಂಗೆಯ ಸಮ್ಮಂಧವಾದ ಇತಿಹಾಸದಲ್ಲಿ, ಶ್ರೇಷ್ಠವಾದ್ದೆಂದು, ಭಾವಿಸುತ್ತಾ ಬರುತ್ತದೆ. ತಥಾಪಿ, ಅದರಲ್ಲಿ, ರಾಜಕಾರ್ಯದ ಧೋರಣೆಯನ್ನು ಲಕ್ಷ್ಯದಲ್ಲಿಟ್ಟುಕೊಂಡು, ಲೇಖಣಿಯ ಯಜಮಾನಿಕೆಯನ್ನು ನಡಿಸಿದ್ದರಿಂದ ಎರಡನೆ ಪಕ್ಷದ ಪ್ರತಿಬಿಂಬವನ್ನು ಎಷ್ಟರಮಟ್ಟಿಗೆ, ನಿಜವಾಗಿ ತೋರಿಸ ಬೇಕಾಗಿತ್ತೋ, ಅಷ್ಟರಮಟ್ಟಿಗೆ ಸರಿಯಾಗಿ ತೋರಿಸ ಲಿಲ್ಲವೆಂತ ಎಲ್ಲರೂನೂ ಒಪ್ಪಿಕೊಳ್ಳ ಬೇಕಾದೀತು. ಇತರ ಗ್ರಂಥಕರ್ತರು ಸಾಧಾರಣ ಮನಸ್ಸಿನಿಂದ, ಆ ಯಾಯ ಸಮಯದಲ್ಲಿ ಉಪಲಬ್ಧವಾದ ಪರಿಶ್ರಮದ ಮೇಲೆ, ಸಂಗತಿಗಳನ್ನು ಬರೆದಿರುತ್ತಾರೆ. ಆದ್ದರಿಂದ, ಅವರಲ್ಲಿ ಸತ್ಯಾಸತ್ಯಗಳೆರಡೂ ಮಿಶ್ರವಾಗಿವೆ. ಆದ್ದರಿಂದ ಪ್ರತ್ಯೇಕ ಪ್ರತ್ಯೇಕ ಗ್ರಂಥದಲ್ಲಿ, ಪುಷ್ಕಳಮತಭೇದವು ದೃಷ್ಟಿಗೆ ಬೀಳುತ್ತವೆ. ಪರಂತು, ಸಧ್ಯಕ್ಕೆ ವಿಲಾಯತಿಯಲ್ಲಿನ ಜನಗಳದೃಷ್ಟಿಯು ದಂಗೆಯ ನಿಜವಾದ ವೃತ್ತಾಂತವನ್ನು ಪ್ರಸಿದ್ಧ ಮಾಡುವದರಕಡೆಗೆ, ವಿಶೇಷವಾಗಿ ಹೋಗಿರೋಣದ್ದರಿಂದ, ಆ ಸಮ್ಮಂಧವಾಗಿ ನಿಷ್ಪಕ್ಷಪಾತದಿಂದ ಬರೆದ, ಅನೇಕ ನವೀನ ಗ್ರಂಥಗಳು ಪ್ರಸಿದ್ಧವಾಗುತ್ತಿವೆ; ಮತ್ತು ಅದರಲ್ಲಿ ಪುಷ್ಕಳ ನಿಜವಾದ ಸಂಗತಿಗಳೂ ಹೊರಕ್ಕೆ ಬರಲು ಪ್ರಾರಂಭವಾಗಿವೆ. ಸ್ವತಃ ಹಿಂದೂಸ್ಥಾನದ ಸರ್ಕಾರದ ಕಾಗದಪತ್ರದ ಅಧಿಕಾರಿ. ಮಿ, ಫಾರೆಸ್ಟ್ ಸಾಹೇಬನು, ದಂಗೆಯ ವೇಳೆಯ, ಯುದ್ಧಕ್ಕೆ ಸಮ್ಮಂಧ ಪಟ್ಟ ಕಾಗದ ಪತ್ರಗಳನ್ನು ಸ್ವತಃ ಸರ್ಕಾರದ ಕಾಗದಪತ್ರಗಳಿಂದ ಹುಡುಕಿ ತೆಗೆದು, ಪ್ರಸಿದ್ಧ ಪಡಿಸುತ್ತಾ ಇದ್ದಾನೆ; ಮತ್ತು ಅದರಮೇಲಿನಿಂದ, ಅನೇಕ ಸತ್ಯಸಂಗತಿಗಳು ಜನರಮುಂದೆ ಬಂದೀತೆಂತ, ನಂಬಿಸುವದಕ್ಕೆ ಪುಷ್ಕಳ ಆಸ್ಪದವಿದೆ. ಇದು ಹಾಗಿರಲಿ. ದಂಗೆಯ ನಿಜವಾದ ಇತಿಹಾಸದ ಸಾಮಗ್ರಿಯು ಯಾವಾಗ ಪ್ರಸಿದ್ಧಿಯಾಗು

ವದೋ, ಆವಾಗ ಆಗಲಿ. ಆದರೆ ಅವರಲ್ಲಿ ಅದ್ವಿತೀಯ ಶೌರ್ಯಗುಣದಿಂದ ಪ್ರಸಿದ್ಧಿಯಾದ ವ್ಯಕ್ತಿಯ ವಿಚಾರವನ್ನು ಮಾಡುವದು, ಸಧ್ಯಕ್ಕೆ ಬಹಳ ಅವಶ್ಯಕವಾಗಿದೆ. ಅದರಲ್ಲಿ ಝಾನ್ಸಿಯ ರಾಣಿಯು, ಜಾತ್ಯಾಸ್ತ್ರೀಯಾಗಿದ್ದು, ಬಹಳ ಪರಾಕ್ರಮವನ್ನು ತೋರಿಸಿದ ಳೆಂಬುವದ್ದರಿಂದ, ಆಕೆಯ ಹೆಸರು ದಂಗೆಯವರ, ಅಧ್ವರ್ಯಮಂಡಲಿಯಲ್ಲಿ, ಪ್ರಮುಖ ಸ್ಥಾನದಲ್ಲಿ, ಗಣನೆಮಾಡುತ್ತಾ ಬರುತ್ತದೆ. ಬಹಳವಟ್ಟಿಗೂ ಇಂಗ್ರೇಜಿ ಇತಿಹಾಸಕಾ ರಕರು ಹೇಳುವದೇನಂದರೆ;—“ 57ನೇ ಇಸ್ವಿಯ ದಂಗೆಯಲ್ಲಿ, ಹಿಂದೂಸ್ಥಾನದಲ್ಲಿ ಹೆಸರುತೆಗೆದುಕೊಳ್ಳುವದಕ್ಕೆ ಯೋಗ್ಯನಾದ ಒಬ ಮನುಷ್ಯನು ಇದ್ದನೆಂತ ಪ್ರತ್ಯಕ್ಷ ವಾಗಿ ತೋರಿಬಂದದ್ದು, ಒಂದು ವಿಶೇಷ ಮಹಾತ್ಮೆಯುಳ್ಳ ಮಾತಾಗಿದೆ. ” ಅರ್ಥಾತ್, ಯಾರಿಗೂ ಅಂಥಾಮನುಷ್ಯನ ಅಭಿಮಾನ ತೋರುವದು ಕೇವಲ ಸಹಜವಾಗಿದೆ. ಅದೇ ಪ್ರಕಾರವಾಗಿ ನಮ್ಮದೇಶದಲ್ಲಿನ ಪ್ರತಿ ಒಬ್ಬ ಸ್ವದೇಶಾಭಿಮಾನಿಗೂ ಝಾನ್ಸಿರಾಣಿಯ ಅಭಿಮಾನವು ತೋರಲೇಬೇಕು. ಪರದೇಶದ ಅನೇಕ ಇತಿಹಾಸಕಾರಕರು, ಈ ಸ್ತ್ರೀಯ ಪರಾಕ್ರಮ ಮಹಿಮೆಯನ್ನು ಕುರಿತು ಬರೆಯುವದರಲ್ಲಿ ಅವರ ಲೇಖಣಿಗಳು ಸವೆದು ಹೋಗಿ, ಸಾಕಾಗಿ ಹೋಗಿರುತ್ತಾರೆ. ಆದರೆ ಇದರಲ್ಲಿ ಆಶ್ಚರ್ಯವೇನೂ ಇಲ್ಲ. ಯಾಕಂ ದರೆ, ಆ ಅಲೌಕಿಕವ್ಯಕ್ತಿ (ಸ್ತ್ರೀ) ಯಲ್ಲಿ ಅಂಥಾ ಅಸದೃಶವಾದ ಗುಣಗಳು ಸ್ವಾಭಾವಿಕ ವಾಗಿದ್ದವು. ಹೀಗಿದ್ದಾಗ್ಯೂ ನಮ್ಮ ಸ್ವದೇಶದವರು ತಮ್ಮ ಇತಿಹಾಸ ವಿಷಯದಲ್ಲಿ, ಅಭಿಮಾನ ಶೂನ್ಯರಾಗಿ ಹೋಗಿ, ನಿರಂತರ ಪ್ರಲಾಪಮಾಡಲು ಪ್ರಾರಂಭಿಸಿದ್ದಾರೆ. ಅಂ ಥಾವರಿಗೆ, ಇಂಗ್ರೇಜಿ ಗ್ರಂಥಕಾರರು, ಈ ಪರಾಕ್ರಮ ಶಾಲಿನಿಯನ್ನು ಕುರಿತು, ಮಾಡುತ್ತಿ ರುವ ಗಾಯನವು ವಿಶೇಷ ಭೂಷಣ ವಾದದ್ದು ಮತ್ತು ಮಹತ್ವವಾದದ್ದು ಎಂತ ತೋರ ಲಾರದು. ಪರಂತು, ಅವರ ವಿಷಯದಲ್ಲಿ, ವಿದ್ವಾನ್ ಕೇಸರಿ ಪತ್ರಿಕಾಕರ್ತನು, ಸ್ಪಷ್ಟ ವಾಗಿ ಈ ರೀತಿ ಬರೆದಿದ್ದಾನೆ :—“ ಸ್ವದೇಶದ ಇತಿಹಾಸವನ್ನ ಓದುವದ ರಿಂದ, ‘ಯೇನೂ ಪ್ರಯೋಜನವಿಲ್ಲ ವೆಂತ, ಈಚೆಗೆ ಕೆಲವುಕೆಲಸಕ್ಕೆ ಬಾರದ ಲೇಖಕರ ಪ್ರಳಾಪವು ಹೊರ ಡುವದಕ್ಕೆ ಹತ್ತಿದೆ. ಆದರೆ ವಿನಃ ಕಾರಣ ಇತಿಹಾಸ ಲೇಖಕರ ಬರವಣಿಗೆಯನ್ನು ದೂಷಿಸತಕ್ಕಂಥಾ ಅಭಿಮಾನಶೂನ್ಯರು ಏನು ಹೇಳಿದಾಗ್ಯೂ, ಕಳೆದ ಶತಮಾನದಲ್ಲಿ ಮಹ ರಾಷ್ಟ್ರ ದೇಶದ ಜನಗಳು ಮಾಡಿದ ಸಾಹಸ ಕಾರ್ಯಗಳಿಗಾಗಿ; ಅವರ ವಿಷಯದಲ್ಲಿ, ಅವರ ವಂಶಸ್ಥರಿಗೆ ಉತ್ಸಾಹ ಮತ್ತು ಸಮಾಧಾನತೋರದೇ ಒಂದು ಕ್ಷಣವೂ ಇರಲಾರದು.” (ಕೇಸರಿ ವರ್ಷ 14. ಅಂಕ 1[illegible].) ಇದುಹಾಗಿರಲಿ, ಈಗ ಆ ಸಮ್ಮಂಧದಲ್ಲಿ ಹೆಚ್ಚಿಗೆ ಬರೆಯಬೇಕಾದ ಅವಶ್ಯಕತೆ ಏನೂ ಇರುವದಿಲ್ಲ.

ಝಾನ್ಸಿ ರಾಣಿ ಸಮ್ಮಂಧದಲ್ಲಿ, ಇಂಗ್ರೇಜಿಜನಗಳಿಗೆ, ಪುಷ್ಕಳ ತಪ್ಪು ತಿಳುವಳಿಕೆ ಯಾಗಿದೆ. ಆದರೆ ಅವರು, ಆಕೆಯ ಅದ್ವಿತೀಯ ಶೌರ್ಯಗುಣಕ್ಕಾಗಿ, ಅಭಿನಂದನೆಮಾಡು ವದಕ್ಕೆ ಯಾವಾಗ್ಯೂ ಹಿಂದೆಮುಂದೆ ನೋಡಲಿಲ್ಲ. ರಾಣಿಸಂಗಡ, ಇಂಗ್ರೇಜಿಯವರ ಪಕ್ಷದಲ್ಲಿ, ಯುದ್ಧಮಾಡಿದ, ಸುಪ್ರಸಿದ್ಧನಾದ ಮಹಾಶೌರ್ಯಶಾಲಿಯಾದ ಸರ್‌ಹ್ಯುರೋಜ್

ಸಾಹೇಬನು ಸಹ, ಆಕೆಯ ಅಸಮಾನ ಪರಾಕ್ರಮ ಮತ್ತು ವಿದ್ಯಾ ಚಾತುರ್ಯವನ್ನು ನೋಡಿ, ಆಕೆಯನ್ನು ಸ್ತೋತ್ರಮಾಡಿದ್ದಾನೆ. ಇದಲ್ಲದೆ, ಕೇ, ಮ್ಯಾಲಿಸನ್, ಡಾಲೋ, ಸರಎಡ್ವಿನ್ ಆರ್ನಾಲ್ಡ್, ಟಾರೆನ್ಸ್, ಜಸ್ಟಿನ್ ಮ್ಯಾಕರ್ತಿ, ಮುಂತಾದ ಅನೇಕ ಗುಣಗ್ರಾಹಿಗಳಾದ ಇಂಗ್ರೇಜಿ ಗ್ರಂಥಕರ್ತರು, ಆಕೆಯ ವಾಸ್ತವಿಕ ಗುಣವನ್ನು ಕುರಿತು, ಸ್ತುತಿಮಯವಾಗಿ ಅನಂದವರ್ಣನೆಯನ್ನು ಬರೆದು, ಆಕೆಯವಿಷಯದಲ್ಲಿ ತಮ್ಮ ಆದರ ಬುದ್ಧಿಯನ್ನು ವ್ಯಕ್ತಪಡಿಸಿದ್ದಾರೆ. ಪರಂತು. ನಮ್ಮ ದುರ್ದೈವ ದಿಂದ, ನಮ್ಮದೇಶದ ಭವಿಷ್ಯದ ಉನ್ನತಿಯ ಕೆಲಸವನ್ನು ಬಲವಾಗಿ ಮಾಡುವದಕ್ಕಾಗಿ, ಮುಂದಿನದುಮುಂದಕ್ಕೆ ಮಾಡತಕ್ಕಜ್ಞಾನ ಸಂಪನ್ನನಾದ ಒಬ್ಬ ಗೃಹಸ್ಥನು," ಹಿಂದೂಸ್ಥಾನದಲ್ಲಿನ ಶಿಪಾಯಿ ದಂಗೆಗೆ ಕಾರಣ " ಎಂಬುವದನ್ನು ಬರೆಯುವಾಗ, ಇಂಥಾ ಪರಾಕ್ರಮಿ ಮತ್ತು ಸರ್ವವಂದ್ಯಳಾದ ರಾಣಿಯ ಸಂಭಾವನ ಮಾಡಿರುವ ದನ್ನು ನೋಡಿ, ಯಾರಿಗೂ ಪರಮಾವಧಿ ದುಃಖವು ತೋರದೇ ಇರಲಾರದು. ಈ ಇತಿಹಾಸಕಾರಕನು ಈ ರೀತಿ ಬರೆಯುತ್ತಾನೆ:—

" ದಂಗೆಗೆ ಮೂಲಕಾರಣವು, ಧರ್ಮಾಭಿಮಾನ ವೆಂಬುವದು ನಿಜ. ಆದರೆ, ಅದಕ್ಕಿಂತಲೂ ಇತ್ತಲಾಗಿನ ಮುಖ್ಯ ಕಾರಣವೆಂದರೆ, ಅಜ್ಞಾನವಾಗಿತ್ತು. ಮದ್ದಿನ ತೋಟೆಗೆ ಆಕಳು ಮತ್ತು ಹಂದಿಯ ಚರಬಿ ಹಚ್ಚುತ್ತಾರೆ ಎಂಬುವದನ್ನು ಮಾತ್ರ ಕೇಳಿದ್ದರಿಂದಲೇ ಮೂರ್ಖಜನಗಳು ತಿರುಗಿ ಬಿದ್ದರು. ಕೇಳಿದಮಾತು ನಿಜವೋ ಅಥವಾ ಸುಳ್ಳೋ ಎಂಬುವದನ್ನು ಯಾರಾದರೂ ಶೋಧನೆ ಮಾಡಿದರೋ? ಒಬ್ಬನು ಹೇಳಿದನೆಂತ ಇನ್ನೊಬ್ಬನು ಹೇಳಿದನು; ಮತ್ತು ಎರಡನೆಯವನು ತಿರುಗಿಬಿದ್ದನೆಂತ, ಮೂರನೆಯವನು ತಿರುಗಿಬಿದ್ದನು. ಈರೀತಿ ಅಂಧಪಾರಂಪರ್ಯವಾಗಿನಡೆದು, ಅವಿಚಾರಿಗಳಾದ ಮೂರ್ಖರಸಭಾ ಸೇರಿತು, ಮತ್ತು ದಂಗೆ ಯೆದ್ದರು. ಅದಕ್ಕೆ ತಾತ್ಯಾಬಾಳಾರಾವ್ ನಾನಾ ಝಾನ್ಸಿಯ ರಾಣಿ ಮುಂತಾದ, ತಲೆ ಇಲ್ಲದ ಮನುಷ್ಯರು ಸೇರಿಕೊಂಡರು. ಇವರೆಲ್ಲರೂ ಸೇರಿ ಮಾಡಿದ್ದೇನು? ದೇಶದದುರ್ದಶೆ, ಎರಡನೆಯಾವದೂ ಇಲ್ಲ."

"ಯಾರು ಇಷ್ಟು ಅವಿವೇಕಕೃತ್ಯವನ್ನು ಮಾಡಿ, ಸಾವಿರಾರು ಜನಗಳ ನಾಶವನ್ನು ಮತ್ತು ಸ್ವದೇಶಕ್ಕೆ ಕುಂದಕವನ್ನು ಸಹ ಉಂಟುಮಾಡಿ, ತಾವೂ, ಕೆಟ್ಟರೋ, ಅವರಿಗೆ ಯೇನು ಹೇಳಬೇಕು? ಯಾರಾದರೂ ಒಬ್ಬ ಬುದ್ಧಿಶಾಲಿಯು ಅವರಿಗೆ ಶೂರರು ಅಥವಾ ಪರಾಕ್ರಮಿಗಳೆಂತ ಹೇಳ್ಯಾರೇನು? ಕೆಲವುಪ್ರಾಂತ್ಯದಲ್ಲಿ ಚೋರರು ಮತ್ತು ದರೋಡೆಖೋರರು ಇರುತ್ತಾರೆ. ಅವರು ಜನಗಳ ಮನೆಮಾರನ್ನ ಲೂಟಮಾಡಿ, ದ್ರವ್ಯ ತೆಗದುಕೊಂಡು ಹೋಗುತ್ತಾರೆ, ಅಥವಾ ಕೆಲವುಮಟ್ಟಿಗೆ ಹಿಂಸೆಪಡಿಸುತ್ತಾರೆ. ಇಷ್ಟರಿಂದ ಯೇನು? ಆದರೆ ಈ ಭಂಡಖೋರರು, ಅದಕ್ಕಿಂತಲೂ ದುಷ್ಟರಾಗಿದ್ದರು."

(ಹಿಂದುಸ್ಥಾನದ ಕಥಾಸಾರಪೃಷ್ಟ 276)

ಈವಿಧವಾದ ಇತಿಹಾಸ ರಸವು, ನಮ್ಮದೇಶದ ಗೃಹಸ್ಥನ ಲೇಖನಿಯಿಂದ ಹೊರಪಟ್ಟಿದ್ದು, ಅತ್ಯಂತ ದುಃಖಕರವಾದ ಮಾತಾಗಿದೆ. ನಮ್ಮಮೇಲೆ ರಾಜ್ಯವನ್ನಾಳತ

ಕ್ಕಂಥ, ದಯಾಳುಗಳಾದ ಬ್ರಿಟಿಷ್ ರಾಷ್ಟ್ರದಲ್ಲಿನ, ವಿದ್ವಾಂಸರು ಮತ್ತು ಉದಾರಪುರುಷರು, ಅಲೋಕೋತ್ತರ ಪ್ರಸಿದ್ಧಿಯಾದ ಸ್ತ್ರೀಯ ಶೌರ್ಯವನ್ನು ಕುರಿತು, ಅತಿಶಯವಾಗಿ ಸ್ತುತಿಮಾಡಿದ್ದಾರೆ. ಆಕೆಯ ಶೌರ್ಯಮತ್ತು ಪರಾಕ್ರಮದ ಯೋಗ್ಯತೆಯನ್ನು ಚೋರರು ಮತ್ತು ದರೋಡೆಖೋರರ ಕೃತ್ಯಕ್ಕಿಂತಲೂ, ನೀಚವಾದ್ದೆಂತ ನಾವು ಬರೆಯುವದಕ್ಕೆ ಸಿದ್ಧವಾದದ್ದಕ್ಕಿಂತಲೂ ಹೆಚ್ಚಾದ ಗರ್ಹಣೀಯವಾದ ಎರಡನೆಯದು ಯಾವದೂ ಇಲ್ಲ. ಕರ್ನಲ್ ಮ್ಯಾಲಿಸನ್ ಸಾಹೇಬನಂಥ ಇತಿಹಾಸ ಕಾರಕನು ತನ್ನ ರಾಷ್ಟ್ರದ ಅಭಿಮಾನವನ್ನು ಎಂದಿಗೂ ಬಿಡತಕ್ಕವನಲ್ಲ ವಾಗಿದ್ದಾಗ್ಯೂ ಅವನು 'ಬ್ರಿಟಿಷ್ * ಸರ್ಕಾರದ ದೃಷ್ಟಿಯಿಂದ ರಾಣೀಸಾಹೇಬಳ ದೋಷವೇನಿದ್ದಾಗ್ಯೂ, ಆ ಶೂರಸ್ತ್ರೀ ಸಮ್ಮಂದದಲ್ಲಿ, ಆಕೆಯ ದೇಶಬಾಂಧವರು, ಆಕೆಯನ್ನು ಸ್ತೋತ್ರ ಮಾಡಿ, ಆಕೆಯ ಪಕ್ಷವು ನ್ಯಾಯವಾದದ್ದೆಂತ ಹೇಳಿ, ಬುಂದೇಲ್‌ಖಂಡ ಮತ್ತು ಮಧ್ಯ ಹಿಂದೂಸ್ಥಾನದಲ್ಲಿ ದಂಗೆ ನಡೆಯುವದಕ್ಕೆ ಲಾರ್ಡ ಡೆಲ್ಹೌಜಿ ಸಾಹೇಬನು, ಆಕೆಗೆ ತೋರಿಸಿದ, ನಿಷ್ಠುರ ನಡವಳತಿಯೇ ಕಾರಣ ವಾಯಿತೆಂತಲೇ ತಿಳುಕೊಂಡಾರು ; ಮತ್ತು ಅವರಿಗೆ ಆ ಸ್ತ್ರೀಯನ್ನ ಚಿರಕಾಲ ಶೌರ್ಯಶಾಲಿನಿ ಎಂತ ಭಾವಿಸಿ ಆಕೆಗೆ ಸದಾ ತಮ್ಮ ಅಭಿಮಾನವನ್ನು ತೋರಿಸುತ್ತಾ ಬಂದಾರು." ಇಂಥಾ ಅಭಿಪ್ರಾಯದ ಟಿಪ್ಪಣಿಯನ್ನು ಬರೆಯುತ್ತಾ, ನಾವು ಆಕೆಯ ವಿಷಯದಲ್ಲಿ, ಮೇಲೆ ಬರೆದಿರುವ ರೀತಿಯಲ್ಲಿ ನಿಂದೆ ಮಾಡಿರುವ ಮಾತು, ನಮ್ಮದು ನಮಗೇನೇ ಶೋಭಿಸಬೇಕು. ಇತರರಿಗೆ ಎಂದಿಗೂ ಶೋಭಿಸಲಾರದು.

ಇದು ಹಾಗಿರಲಿ. ರಾಣೀಸಾಹೇಬಳ ಸಮ್ಮಂಧವಾಗಿ ಪುಷ್ಕಳ ಇಂಗ್ರೇಜಿ ಗ್ರಂಥಕರ್ತರು, ಝಾನ್ಸಿಯಲ್ಲಿ ನಡೆದ ಯುರೋಪಿಯನ್ ಜನಗಳ ಕೊಲೆ'ಪಾತಕವು ರಾಣಿಯೇ ಮಾಡಿಸಿದಳೆಂತ ತಪ್ಪು ತಿಳುವಳಿಕೆಯನ್ನು ಮಾಡಿದ್ದಾರೆ. ಇದಕ್ಕೆ ಮುಖ್ಯ ಕಾರಣವೇನಂದರೆ. ಝಾನ್ಸಿ ಸಂಸ್ಥಾನವನ್ನು ಲಾರ್ಡ ಡೆಲ್ಹೌಜಿ ಸಾಹೇಬನು ಸರ್ಕಾರಕ್ಕೆ ಸೇರಿಸಿ ಕೊಂಡನು. ಆದ್ದರಿಂದ ರಾಣೀಸಾಹೇಬಳಿಗೆ ಅತಿಶಯವಾದ ಸಿಟ್ಟುಬಂದು,

---

* ಕರ್ನಲ್ ಮ್ಯಾಲಿಸನ್ ಸಾಹೇಬನು ಈ ಪ್ರಕಾರವಾದ ಟಿಪ್ಪಣಿ ಬರದಿದ್ದಾನೆ :—
"Whatever her faults in British eyes may have been, her countrymen will ever believe that she was driven by ill treatment into rebellion, that her cause was arighteous cause: and that the treatment she received at the hands of Lord Dalhousie was one of the main causes of the dis-affection in Bundlekand and Central India in 1857—58. *To them she will always be a heroine.*"

Malleson's History of the Indian Mutiny.

ಅವಳು ಅಘೋರವಾದ ಕೃತ್ಯವನ್ನ ಮಾಡಿಸಿರಬೇಕೆಂತ ಅವರಿಗೆ ತೋರುತ್ತಿದೆ. ಆದರೆ ಅದು ನಿಜವಾದದ್ದಲ್ಲ. ಆಕೆಯು ಯುರೋಪಿಯನ್ ಜನಗಳ ಕೊಲೆಪಾತಕವನ್ನ ಮೂಲತಃ ಮಾಡಿಸಲೇಇಲ್ಲ, ಎಂಬುವದು ಈಪುಸ್ತಕದ ೧ನೇ ಪ್ರಕರಣದಿಂದ, ವಾಚಕರ ಲಕ್ಷ್ಯದಲ್ಲಿ ಬರಲೇಬೇಕು. ಝಾನ್ಸಿಯ ರಾಣಿಯು ನೀಚತನದಿಂದ, ಇಂಗ್ರೇಜಿ ಜನಗಳ ವಧೆ ಮಾಡಿಸಿದ್ದು ಸುಳ್ಳು. ಆದರೆ ಯಾವದೋ ಒಂದು ಕಾರಣ ದಿಂದ, ಅವರಸಂಗಡ ಯುದ್ಧ ಮಾಡುವದಕ್ಕೆ ಸಿದ್ಧಳಾಗಿ ಸಮರಾಂಗಣದ ಮಧ್ಯದಲ್ಲಿ, ಆಕೆಯು ತನ್ನ ಪರಾಕ್ರಮ ವನ್ನು ಮಾತ್ರ ಚನ್ನಾಗಿ ವ್ಯಕ್ತ ಪಡಿಸಿದ ಳೆಂಬಮಾತು ಯೇನಿದೆಯೋ, ಅದು ಸತ್ಯವಾಗಿದೆ. ಪರಂತು, ರಾಣಿಯ ಶೌರ್ಯಗುಣಕ್ಕೆ, ಕಳಂಕತರುವದಕ್ಕಾಗಿ, ಇಂಗ್ರೇಜಿ ಇತಿಹಾಸಕಾರಕರು, ಝಾನ್ಸಿಯಲ್ಲಿ ನಡೆದ ಭಯಂಕರವಾದ ಕೊಲೆಪಾತಕದ ದೋಷವನ್ನು ಆಕೆಯಮೇಲೆ ಹೊರಿಸುತ್ತಾರೆ. ಇದಕ್ಕೆ ಯಾರ ವುಪಾಯವೂ ಇಲ್ಲ. ಶ್ರೀಮಂತ ನಾನಾಸಾಹೇಬ ಪೇಷ್ವೆ ಮತ್ತು ಝಾನ್ಸಿಯ ರಾಣಿ ಸಹ, ಮಹಾ ಭಯಂಕರ ವಾದ ಕೃತ್ಯವನ್ನು ಮಾಡಿದರು ಎಂತ, ಅವರ ಹೆಸರಿನಿಂದ ಇಂಗ್ರೇಜಿ ಇತಿಹಾಸಕಾರಕರು ಕೂಗಿ ಕೊಳ್ಳುತ್ತಾ ಇರುವದರಲ್ಲಿ ಸತ್ಯಾಂಶವು ಬಹಳ ಸ್ವಲ್ಪ ವಿದೆಯಂತ ಈಗನಿಜವಾದ ಇತಿಹಾಸವು ಪ್ರಸಿದ್ಧಿಯಾದ್ದರಿಂದ ಅದು ದಿನದಿನಕ್ಕೆ ಹೊರಪಡಲು, ಪ್ರಾರಂಭ ವಾಗಿದೆ. ಅದರಲ್ಲಿ, ರಾಣಿಸಾಹೇಬಳ ಸಮ್ಮಂಧವಾಗಿರತಕ್ಕ ಆರೋಪವಂತೂ ಕೇವಲ ತರ್ಕಮಯ ಮತ್ತು ಅಸತ್ಯವಾದ್ದಾಗಿದೆ. ಶ್ರೀಮಂತ ನಾನಾಸಾಹೇಬ ಪೇಷ್ವೆಯ ಸಮ್ಮಂಧದಲ್ಲಿ ನೋಡಿದರೆ, ಪುಷ್ಕಳ ಆಖ್ಯಾಯಿಕಗಳು ಅಸತ್ಯವಾಗಿವೆ ಎಂತ ಈಗ ಪ್ರಸಿದ್ಧವಾಗಿವೆ. ಕಾನ್‌ಪುರದಲ್ಲಿ, ಇಂಗ್ಲಿಷು ಹೆಂಗಸರು ಮಕ್ಕಳ ಕೊಲೆ ಪಾತಕವು ನಡೆದದ್ದರಲ್ಲಿ, ಅವರನ್ನು ಅಮರ್ಯಾದೆ ಮಾಡಿದರು ಎಂತ ಹೇಳುವದಂತೂ, ಕೇವಲ ಅಸತ್ಯವಾಗಿದೆ. ಇಷ್ಟೇ ಅಲ್ಲದೆ ನಾನಾಸಾಹೇಬನ ಮನಸ್ಸಿನಲ್ಲಿ, ಇಂಗ್ರೇಜಿ ಹೆಂಗಸರು ಮಕ್ಕಳನ್ನು ರಕ್ಷಣೆ ಮಾಡಬೇಕೆಂತ ನಿಜವಾದ ಉದ್ದೇಶವಿತ್ತೆಂತ ವಿಲಿಯಂಸ್ ಪೋರ್ಟೆಸ್ ಮಿಚೆಲ್ ಎಂಬ ದಂಗೆಯ ಸಮಯದಲ್ಲಿ ಹಾಜರಿದ್ದ ವೃದ್ಧಗೃಹಸ್ಥನು ಪ್ರಸಿದ್ಧವಾಗಿ ತಿಳಿಸಿರುತ್ತಾನೆ. ಇದರಿಂದ ಆ ಕ್ಷುಬ್ಧ ಸಮಯದಲ್ಲಿ, ಅತ್ಯಂತ ಪ್ರಕುಪಿತವಾಗಿದ್ದ, ಬುದ್ಧಿಗೆ, ಯಾವಮಾತು ನಿಜವಾಗಿ ತೋರಿ, ಆವೇಳೆಯಲ್ಲಿ, ಪ್ರಸಿದ್ಧಿಯಾಗಿದೆಯೋ, ಅದರಮೇಲೆಯೇ, ತುಂಬಾ ನಂಬಿಕೆ ಇಡುವದು, ಶುದ್ಧಾಂಗ ಸರಿಯಾದದ್ದಲ್ಲ. ಈಗ ಕೊಲೆಪಾತಕವು ನಡದದ್ದಂತೂ ಸುಳ್ಳಲ್ಲ. ಪರಂತು, ಆ ಯಾಯ ಕಾಲಾನುಸಾರವಾಗಿ, ಏನು ಆಗಬೇಕಾಗಿತ್ತೋ ಅದು ಆಗಿಹೋಯಿತು. ಅದನ್ನು ಕುರಿತು, ಆಗಿನಕಾಲದ ನಿಜಸ್ಥಿತಿಯನ್ನು ಮನಸ್ಸಿಗೆ ತರದೆ ಸುಮ್ಮನೆ ದೋಷ ಹೊರಿಸುವದು ಯುಕ್ತವಾದದ್ದಲ್ಲ. ಕಾನ್‌ಪುರ ಮತ್ತು ಝಾನ್ಸಿ ಮುಂತಾದ ಸ್ಥಳದಲ್ಲಿ, ಇಂಗ್ರೇಜಿ ಜನಗಳ ಪ್ರಾಣನಾಶವಾದದ್ದನ್ನು ಕುರಿತು, ಯಾರಿಗೂ ಖೇದತೋರದೆ ಇರಲಾರದ್ದು ನಿಜ. ಪರಂತು, ಆ ಸಮ್ಮಂಧದಲ್ಲಿ, ಯುರೋಪಿಯನ್ ಗ್ರಂಥಕಾರರು, ಸಿಟ್ಟು ಮತ್ತು ಈರ್ಷೆಯಿಂದ ನಮ್ಮ ದೇಶದ ಜನಗಳನ್ನು ಅಗಾಗ್ಯ ನಿಂದೆಮಾಡತ

ಕ್ಕದ್ದು ಮಾತ್ರ ಸರಿಯಾದದ್ದಲ್ಲ. ಯಾವದಾದರೂ ಒಂದು ರಾಷ್ಟ್ರದಲ್ಲಿ, ಪ್ರಳಯ ಕಾಲ ಬಂದರೆ, ಅವರ ಕೈಯಿಂದ ಇದೇಪ್ರಕಾರವಾದ ಕೆಲಸಗಳು ನಡೆದಿವೆ ; ಮತ್ತು ಸ್ವತಃ ನಾವು ದಯಾಭೂತರೆಂತ ಹೇಳಿಕೊಳ್ಳುತ್ತಲಿರುವ ಯುರೋಪಿಯನ್ ಜನಗಳ ಕೈಯಿಂದಲೂ ಹೀಗೆಯೇ ನಡದಿದೆ. ಅದನ್ನು ಕುರಿತು ಒಬ್ಬ ಇಂಗ್ರೇಜಿ ಗ್ರಂಥಕಾರನು ತೆಗೆದಿರುವ ಟಿಪ್ಪಣಿಯು ಲಕ್ಷ್ಯದಲ್ಲಿಡತಕ್ಕದ್ದಾಗಿದೆ. ಆತನು ಹೇಳುವದೇನಂದರೆ :—

"It is only with a painful moral effort that one can dwell with cool and deliberate judgment on this subject; but it is highly necessary to call attention on the fact that there is not anything peculiarly "Asiatic" in the authentic horrors of Jhansi, Delhi and Cawnpore. In the outbreak of an exasperated people and especially where a marked distinction of race adds rancour and terror to the feelings of the insurgents, extermination is always their plan. It was so during the Greek uprising of 1821, when upwards of twenty thousand Turks, a peaceful agricultural population—men, women, and children—were murdered in Cold blood, "*as a necessary measure of wise policy,*" according to Hetairists, "because the Turkish population in Greece was small and could not be removed." (Finlay's Greek Revolution Vol. 1, P. P. 172, 182, 187, 188.)"

Empire in India. P. 5.

ಇದು ಹಾಗಿರಲಿ. ಸ್ವತಃ ಇಂಗ್ರೇಜಿ ಜನಗಳ ಕೈಯಿಂದಲೂ ಇಂಥಾ ಅನೇಕ ಕೆಲಸಗಳು ನಡೆಯಲಿಲ್ಲವೆಂಬ ಇತಿಹಾಸವೂ ವಾಚಕರಿಗೆ ಒಪ್ಪಿಕೊಳ್ಳುವದಕ್ಕಾಗಲಾರದು. ಕಾನಪುರ, ಝಾನಸಿ, ಮುಂತಾದ ಸ್ಥಳಗಳಲ್ಲಿ ವಿಜಯಪ್ರಾಪ್ತಿಯಾದನಂತರ ಯಾವರೀತಿಯಾಗಿ ನಡೆಯಿತು ಎಂಬುವದನ್ನೂ ಸಮಾಧಾನವಾಗಿ ಭೂತದಯೆಯಿಂದ ನಡಕೊಳ್ಳತಕ್ಕವರಿಗಾದರೂ ಕೇಳುವವರೇ ದಿಕ್ಕಿಲ್ಲ. ಕಾನಪುರವನ್ನು ತೆಗದುಕೊಂಡ ನಂತರ ಜನರಲ್ ನೀಲ್ ಸಾಹೇಬನು ಸಿಕ್ಕಿದ ದಂಗೆ ಖೋರರನ್ನು ಯಾವ ಸ್ಥಿತಿ ಮಾಡಿದನು ಎಂಬುವದನ್ನು ಕೇಳಿದಕೂಡಲೆ, ಮೈಯುಮೇಲೆ ಮುಳ್ಳೇಳದೆ ಇರತಕ್ಕಂಥಾ ಮನುಷ್ಯನು ಬಹಳ ಅಪರೂಪ !

ಇದು ಹಾಗಿರಲಿ. ಹೀಗಿರುವಾಗ ಇಂಥಾ ಭಯಂಕರವಾದ ವಿಷಯವನ್ನು ಕುರಿತು ಒಬ್ಬರಮೇಲೊಬ್ಬರು ದೋಷಾರೋಪಣ ಮಾಡದೆ, ಸಮಾಧಾನವಾಗಿ ಸರಿ

ಯಥಾರ್ಥಬುದ್ಧಿಯಿಂದ, ದಂಗೆ ಸಮಯದಲ್ಲಿ ನಡೆದ ಸಂಗತಿಗಳನ್ನು ಪ್ರಸಿದ್ಧಮಾಡತಕ್ಕದ್ದು ಸದ್ಯಕ್ಕೆ ಬಹಳ ಅಗತ್ಯವಾಗಿದೆ. ದಂಗೆ ಸಮಯದಲ್ಲಿ ಸಂಭವಿಸಿದ, ಒಳ್ಳೇದು ಕೆಟ್ಟದ್ದು, ಈ ಎರಡನ್ನು ಶಾಂತತೆಯಿಂದ ವಿಚಾರಮಾಡಿ, ಅದರಲ್ಲಿ ಯೋಗ್ಯವಾದ್ದನ್ನು, ಆರಿಸಿ ತೆಗದುಕೊಳ್ಳುವದಕ್ಕೆ ಸಮಯವಾಗಿದೆ. ಇಂಗ್ಲಂಡಿನಲ್ಲಿ ಈಗ ದಂಗೆಯ ಸಮ್ಮಂಧವಾಗಿ, ಅನೇಕ ನವೀನ ಗ್ರಂಥಗಳು ಹೊರಡುತ್ತವೆ. ಇಷ್ಟೇ ಅಲ್ಲದೆ, ಹಿಂದೂಸ್ಥಾನದಲ್ಲಿ ಹೊರಡತಕ್ಕ ಆಂಗ್ಲೋ ಇಂಡಿಯನ್ ಪತ್ರದಲ್ಲಿ ನೋಡಿದರೆ, 1857ನೇ ಇಸವಿ ಸಮ್ಮಂಧದ ಎಷ್ಟು ಸಣ್ಣ ಸಂಗತಿಯಾಗಿದ್ದರೂ, ಅದು ಪ್ರಸಿದ್ಧಿಯಾಗದೆ ಇರುವದಿಲ್ಲ. ಈ ವಿಷಯದ ಸಮ್ಮಂಧವಾಗಿ, ಆಂಗ್ಲೋ ಇಂಡಿಯನ್ ಜನಗಳಿಗೆ ಇಷ್ಟು ರುಚಿ ಹತ್ತಿದೆ. ಹೀಗಿರುವಾಗ ಇಂಥಾ ವಿಷಯದಲ್ಲಿ ನಾವುಕೂಡಾ ಜಿಜ್ಞಾಸಪೂರ್ವಕವಾಗಿ ಪರಿಶ್ರಮವನ್ನು ಸಂಪಾದಿಸಿಕೊಂಡು, ಅದರಲ್ಲಿ ನಿಜವಾದದ್ದನ್ನು, ಜನರಮುಂದೆ ಹಾಕತಕ್ಕದ್ದು ಅವಶ್ಯಕವಾಗಿದೆ.

ಝಾನ್ಸಿಯ ರಾಣಿ ಸಮ್ಮಂಧವಾಗಿ, ನಮಗೆ ಬೇರೆ ಬೇರೆ ಮಾರ್ಗದಿಂದ ಸಿಕ್ಕಿದ ತಿಳುವಳಿಕೆಯು ಅನೇಕ ದೃಷ್ಟಾಂತರಗಳಿಂದ, ನಿಜವೆಂದು ತೋರತಕ್ಕದ್ದನ್ನು, ನಾವು ಬಹಳ ರಾಜನಿಷ್ಠತೆಯಿಂದ, ಎರಡುಪಕ್ಷದಕಡೆಗೂ, ಸಮಬುದ್ಧಿಯನ್ನು ಇಟ್ಟು, ಬರೆದಿರುತ್ತೇವೆ. ರಾಣಿಯ ಸಮ್ಮಂದವಾಗಿ, ಕೆಲವು ಯುರೋಪಿಯನ್ ಜನಗಳ ಮನಸ್ಸು, ವ್ಯರ್ಥವಾಗಿ ಕುಪಿತವಾಗಿದೆ, ಎಂಬುವದರಲ್ಲಿ, ದೊಡ್ಡ ಆಶ್ಚರ್ಯವೇನೂ ಇಲ್ಲ. ಪರಂತು ಆ ಸಮ್ಮಂಧವಾಗಿ ನಮ್ಮ ಕಡೆಯಿಂದ ಅನೇಕ ಅಸತ್ಯವಾದ ಮಾತುಗಳು ಪ್ರಸಿದ್ಧವಾದ್ದರಿಂದ, ಸರ್ವಜನಗಳ ಮನಸ್ಸು ಆಕೆಯ ವಿಷಯದಲ್ಲಿ, ಕೇವಲ ತಪ್ಪು ತಿಳುವಳಿಕೆಯಾಗಿರುವಂತೆ, ಕಾಣುತ್ತದೆ ಆತಪ್ಪು ತಿಳುವಳಿಕೆಗೆ, ಪಂಡಿತ ವಸವಂತರಾಯನ ವ್ಯಾಖ್ಯಾನವೇ ಪ್ರತ್ಯಕ್ಷ ಉದಾಹರಣೆ ಯಾಗಿದೆ. ಈ ವಿಧವಾದ ತಪ್ಪು ತಿಳುವಳಿಕೆ ಮತ್ತು ಕುತರ್ಕ ಸಹ ಇಲ್ಲದಂತೆ ಮಾಡಿ, ರಾಣಿಸಾಹೇಬಳ ವಿಷಯದಲ್ಲಿ, ನಿಜವಾದ ತಿಳುವಳಿಕೆ ಪ್ರಸಿದ್ಧಿ ಯಾಗ ಬೇಕೆಂಬುವದರಲ್ಲಿ, ನಮಗೆ ಬಹಳ ಮನಸ್ಸಿದ್ದದ್ದರಿಂದ, ಈ ನಮ್ಮ ಅಲ್ಪ ಪ್ರಯತ್ನ ವನ್ನು ನಮ್ಮ ಪ್ರಿಯರಾದ ದೇಶಬಾಂಧವರಿಗೆ ಸಮರ್ಪಣೆ ಮಾಡಿದ್ದೇವೆ. ಇಂಗ್ರೇಜಿ ಗ್ರಂಥಕಾರರು ರಾಣಿಯ ಸಮ್ಮಂದವಾಗಿ, ಬಹಳ ಕಲ್ಪನೆಯ ಸಂಗತಿಗಳನ್ನು ಪ್ರಸಿದ್ಧಿಮಾಡಿ, ಆಕೆಯ ತೇಜಸ್ಸು ಮತ್ತು ಶುದ್ಧಯಶಸ್ಸಿಗೆ, ಕೆಲವು ಕಳಂಕವನ್ನು ಹಚ್ಚಿದ್ದಾರೆ. ಪರಂತು, ಅವರು [illegible] ರಾದ್ದರಿಂದ, ಅವರ [illegible]ಯಿಂದ, ಆಕೆಲಸ ನಡದಿದ್ದು ಕ್ಷಮಿಸತಕ್ಕ ದ್ದಾಗಿದೆ. ಕೆಲವು ವರ್ಷಗಳ ಕೆಳಗೆ 'ಗಿಲಿಯನ್' ಎಂಬ ಹೆಸರಿಟ್ಟು ಕೊಂಡು, ಒಬ್ಬ ಇಂಗ್ರೇಜಿ ಅಧಿಕಾರಿಯು, 'The Rani or the Legend of Bundelkhand (ರಾಣಿಅಥವಾ ಬುಂದೇಲಖಂಡದ ಒಂದು ದಂತಕಥೆ) ಎಂಬಹೆಸರಿನ ಒಂದು ಪುಸ್ತಕವನ್ನು ಪ್ರಸಿದ್ಧಿ ಮಾಡಿದ್ದಾನೆ. ಈ ಗೃಹಸ್ಥನು, ಝಾನ್ಸಿ ತುಂಬಾ ಪರಿಶ್ರಮ ಉಳ್ಳವನಾಗಿದ್ದು, ಆತನಿಗೆ ರಾಣಿಯ ಪರಿಚಯವು ಚನ್ನಾಗಿ ಸಿಕ್ಕಿತ್ತೆಂತ, ಆಪುಸ್ತಕದಿಂದ ಕಂಡು ಬರುತ್ತದೆ. ಪರಂತು

ಅವನು ಅಪ್ರಸ್ತುತದಲ್ಲಿ ಸ್ವಂತ ಬುದ್ಧಿಯನ್ನು ಹೆಚ್ಚಾಗಿ ಉಪಯೋಗಿಸಿ, ರಾಣಿಯ ಮೇಲೆ ನಿಜವಲ್ಲದ ಆರೋಪ ಹೊರಿಸುವದಕ್ಕಾಗಿ, ಪ್ರಯತ್ನ ಪಟ್ಟಿದ್ದಾನೆ. ಆದ್ದರಿಂದ, ಅಪ್ರಸ್ತುತಕ್ಕೆ ಕಲ್ಪಿತವಾದ ಕಾದಂಬರಿಗಿಂತಲೂ, ಹೆಚ್ಚಾಗಿ ಗೌರವವನ್ನು ಕೊಡಲಿಕ್ಕೆ ಆಗುವದಿಲ್ಲ. ಇದುಹಾಗಿರಲಿ. ಈ ವಿಧವಾಗಿ ರಾಣಿಯಸಂಬಂಧದಲ್ಲಿ ಯುರೋಪಿಯನ್ ಜನಗಳು, ಎಷ್ಟು ಕಲ್ಪಿತವಾದ ಮತ್ತು ತಪ್ಪು ತಿಳುವಳಿಕೆಯ ಅಸತ್ಯವಾತುಗಳನ್ನು ಬರೆದು, ಆಕೆಯಮೇಲೆ ಎಷ್ಟು ದೋಷಾರೋಪಣೆ ಮಾಡಿದರೂನೂ, ಸತ್ಯ ನಿರಿಕ್ಷಣೆಯ ಕಾಲವು ಯಾವಾಗಲಾದರು ಬರಬೇಕಾದ್ದರಿಂದ, ಈ ಸರ್ವ ಸಂಗತಿಯು ದಿನದಿನಕ್ಕೆ ಇಲ್ಲದಂತ ಆಗುತ್ತಾ ಹೋಯಿತು ಎಂಬುವದರಲ್ಲಿ ಏನೂ ಸಂಶಯವಿಲ್ಲ.

ಝಾನ್ಸಿ ರಾಣಿಯ ವಿಶಿಷ್ಟ ಚರಿತ್ರೆಯ ಮೇಲಿಂದ, ಅನೇಕ ಸಂಗತಿಗಳು ಕಲಿತುಕೊಳ್ಳುವಹಾಗಿವೆ. ಲಾರ್ಡ್ ಡೆಲ್ಹೂಜಿ ಸಾಹೇಬನು, ತನ್ನ ದೇಶಬಾಂಧವರ ಹಿತಚಿಂತನೆ ಮಾಡುವದಕ್ಕಾಗಿ, ಹಿಂದೂಸ್ಥಾನದಲ್ಲಿನ ಸಂಸ್ಥಾನಗಳನ್ನು ಅನ್ಯಾಯವಾಗಿ ಸರ್ಕಾರಕ್ಕೆ ಸೇರಿಸಿಕೊಳ್ಳುವ ಕ್ರಮವನ್ನು ಏಕಪ್ರಕಾರವಾಗಿ ನಡಿಸಿಕೊಳ್ಳುತ್ತಾ ಹೋದನು. ಆದರೆ, 'ಅತಿಲೋಭೋನ ಕರ್ತವ್ಯಃ ಚಕ್ರಂಭವತಿ ಮಸ್ತಕೆ' ಈ ಹೇಳಿಕೆಯ ಪ್ರಕಾರ, ಆತನ ಅತಿಲೋಭದಿಂದ, ನ್ಯಾಯ ಅನ್ಯಾಯಗಳ ವಿಚಾರವಿಲ್ಲದೆ ಹೋಗಿ, ಆತನ ಕೈಯಿಂದ ಬಹಳ ಬಲೋದ್ಬಂದಿ ಕೆಲಸಗಳು ನಡೆದದ್ದರಿಂದ, ಅಲ್ಲಲ್ಲಿ ಅಸಂತೋಷವು ತೋರುತ್ತಾ ಹೋಗಿ, ಒಂದೇಸಲ ಭಯಂಕರವಾದ ಪ್ರಳಯವು ಹುಟ್ಟಿತು. ಈ ಅಪಾಯಕರವಾದ ರಾಜನೀತಿಯನ್ನು ಕುರಿತು, ಲಾರ್ಡ್ ಡೆಲ್ಹೂಜಿ ಸಾಹೇಬನಮೇಲೆ, ಸರ್‌ಜಾನ್‌ಕೆ, ಮೇಜರ್ ಯುಹಾನ್ಸ್‌ಬೇಲ್ ಮತ್ತು ನಾರ್ಟನ್ ಮುಂತಾದ ಗ್ರಂಥಕರ್ತರು, ಪುಷ್ಕಳ ಟೀಕ ಮಾಡಿದ್ದಾರೆ. ಆ ಟೀಕದ ದೆಸೆಯಿಂದ, ವಿಲಾಯತಿಯಲ್ಲಿ ಬಹಳ ತರ್ಕ ನಡೆಯಿತು. ಅಗ ಲಾರ್ಡ್ ಡೆಲ್ಹೂಜಿಯ, ಆಡಳಿತವನ್ನ ಪೋಷಿಸಿ, ಅವನಿಂದ ನಡೆದ ಅಪಕೀರ್ತಿಯು ಇಲ್ಲದಂತೆ ಮಾಡುವದಕ್ಕಾಗಿ, ಬಂಗಾಳೆಯ ಅಡ್ವೋಕೇಟ್ ಜನರಲ್, ಜಾಕ್ಸನ್ ಸಾಹೇಬನು ಲಾರ್ಡ್ ಡೆಲ್ಹೂಜಿಯ 'ರಾಜ್ಯಕಾರಭಾರಿನ ಸಮರ್ಥತೆ,' (The Vindication of Marquis of Dalhousie's Administration) ಎಂಬ ಒಂದು ಪುಸ್ತಕವನ್ನು ಬರೆಯಬೇಕಾಗಿಬಂತು. ಪರಂತು, ಮೇಜರ್ ಯುಹಾನ್ಸ್‌ಬೇಲ್ ಸಾಹೇಬನು ಪುನಃ ಅದರ ಮೇಲೂ ಪ್ರತಿಟೀಕಾ ಬರೆದು, ಜಾಕ್ಸನ್ ಸಾಹೇಬನ ಸರ್ವಮತವನ್ನು ಖಂಡನೆಮಾಡಿಬಿಟ್ಟು, ಕೊನೆಗೆ ಲಾರ್ಡ್ ಡೆಲ್ಹೂಜಿ ಆಡಳಿತವು, ಕೇವಲ ಅನ್ಯಾಯ ಮತ್ತು ಬಲೋದ್ಬಂದಿ ಮಾದದ್ದೆಂತ ಸಿದ್ಧಾಂತ ಪಡಿಸಿದನು. ಆ ಬಲೋದ್ಬಂದಿಯಲ್ಲಿಯೇ, ಝಾನ್ಸಿ ಸಂಸ್ಥಾನವು ಹ್ಯಾಗೆ ಬಲಿಯಾಗಿಬಿತ್ತು ಎಂಬುವದು ವಾಚಕರಿಗೆ ಈ ಚರಿತ್ರೆಯಲ್ಲಿ ತಿಳಿದು ಬರಬಹುದು. ಪರಂತು ಆ ಅನ್ಯಾಯಕೃತಿಯ ಪರಿಣಾಮವು ಶುದ್ಧಾಂಗ ಒಳ್ಳೇದಾಗಲಿಲ್ಲ. ಕವಿಮೋರೋಪಂತನು ಹೇಳಿದ್ದಾನೆ:—

ಆಯರ್ಗ.

---

### ಧರ್ಮನ್ಯಾಯ ವಿರೋಧ ಕೋಣಾಚರಿನಾ ಇಷ್ಟಸಾಧೇಲ ॥

ಈ ಪ್ರಕಾರವಾಗಿ, ಆ ಅನ್ಯಾಯ ಕೃತ್ಯದ, ಕೆಟ್ಟಫಲವು ಸಂಭವಿಸಿದಮೇಲೆ, ಕೊನೆಗೆ, ಈ ದೇಶದ ಸಂಸ್ಥಾನಗಳನ್ನು ಸರ್ಕಾರಕ್ಕೆ ಸೇರಿಸಿಕೊಳ್ಳುವ ಪದ್ಧತಿಯನ್ನು ಕೈಬಿಟ್ಟದ್ದೇನೇ ಮಹಾತ್ಮೆಯುಳ್ಳದ್ದಾಗಿದೆ ಎಂಬುವದು, ಸ್ಪಷ್ಟವಾಗಿದೆ. ಮತ್ತು ಆಪ್ರಕಾರವಾಗಿ, ಈ ದೇಶದ ಸಂಸ್ಥಾನಿಕರಿಗೆ ದತ್ತು ಸ್ವೀಕಾರವಮಾಡಿಕೊಳ್ಳುವ ಅಪ್ಪಣೇ ಸಿಕ್ಕಿದ್ದೂ * ಮತ್ತು ಮಹಾರಾಣಿಯ ಮಹಾತ್ಮೆಯುಳ್ಳ ಪ್ರಸಿದ್ಧಪತ್ರಿಕೆ ದೊರೆತದ್ದೂ ಸಹ ವಿಶೇಷವಾಗಿ ಲಕ್ಷ್ಯದಲ್ಲಿ ಇಟ್ಟುಕೊಳ್ಳತಕ್ಕದ್ದಾಗಿದೆ. ಇದು ಹೊರ್ತು,

---

* ಈ ದೇಶದ ಸಂಸ್ಥಾನವನ್ನ ಸ್ಥಿರವಾಗಿಡುವದರಲ್ಲಿ, ಬ್ರಿಟಿಷ ಸರ್ಕಾರಕ್ಕೆ ಅತ್ಯಂತ ಹಿತವಾದದ್ದೆಂತ, ಲಾರ್ಡ್ ಕ್ಯಾನಿಂಗ್ ಸಾಹೇಬನು ದತ್ತಿನ ಅಪ್ಪಣೆಯಲ್ಲಿ ಟಿಪ್ಪಣಿ ಬರೆದಿರುತ್ತಾನೆ. ಅದನ್ನು ಈ ಪುಸ್ತಕದ ನೇ ಪುಟದಲ್ಲಿ ಕೊಟ್ಟದೆ, ಆ ಸಮ್ಮಂಧದಲ್ಲಿ ಲಾರ್ಡ್ ಕ್ಯಾನಿಂಗ್ ಸಾಹೇಬನು ಖಾಸಿಗಿ ಕಾಗದ ಬರೆದಿರುತ್ತಾನೆ. ಅದೂನೂ ಬಹಳ ಮಹಾತ್ಮೆಯುಳ್ಳದ್ದಾಗಿರುವದ್ದರಿಂದ ಅದನ್ನು ಇಲ್ಲಿ ಕೊಟ್ಟದ್ದೇವೆ. *Extract from Earl Canning's last private Letter to General Sir Mark Cubbon, K. C. B. Commissioner of Mysore, dated November 24th 1860.*

"I have no doubt that the policy of disruption and separation was the right one fifty years ago, when the Rohillas and Mahrattas possessed armies and artillery they could increase at pleasure without our consent, and, indeed without our knowledge. But now it is quite different. These Chiefs can scarcely cast a gun—they certainly could not equip it unknown to us. They feel their dependance on us, since 1857 more than ever. We have nothing to fear from them, individually, if we treat them rightly; whilst they have individually an influence which is invaluable to us as Supreme Ruler in India, if we will but turn it to account. To do this we must put them into a position to become useful instruments of civil Government, and to take a pride in it............"

"In one way or another—in every way, in short we must teach these men unmistakably, that, whether they be Chiefs of

ಈ ಪುಸ್ತಕದಲ್ಲಿ, ಬರೆದಿರತಕ್ಕ ದಂಗೇಖೋರರ ಸಮಾಚಾರದ ಮೇಲಿನಿಂದ ಅನೇಕ ಸಂಗತಿಗಳನ್ನು ತಿಳುಕೊಳ್ಳುವಹಾಗೆ ಇದೆ. ಆ ಸಮಾಚಾರದಿಂದ, ದಂಗೇಖೋರರ ನಿಜವಾದ ಸಾಮರ್ಥ್ಯ, ಅವರ ಸೈನ್ಯದ ಅವ್ಯವಸ್ಥೆ ಮತ್ತು ಅವರ ಅವಿಚಾರವೂ ಸಹ ಚನ್ನಾಗಿ ವ್ಯಕ್ತಪಟ್ಟು, ಅವರು ಪರಾಭವವಾಗುವದಕ್ಕೆ ಏನೇನು ಕಾರಣವಾಯಿತು ಎಂಬುವದು ಸರಿಯಾಗಿ ತಿಳಿಯಬರಬಹುದು. ಅವರಲ್ಲಿ ಝಾಁಸಿ ರಾಣಿ ಒಬ್ಬಳ ಹೊರ್ತು, ಇನ್ಯಾರು ಒಳ್ಳೇಜನ ಇರಲಿಲ್ಲ. ಆದ್ದರಿಂದ ಒಬ್ಬ ಯಜಮಾನ ನಿಲ್ಲದೆ, ಅವರ ಪ್ರಚಂಡಸೇನೆಯ ಪರಾಕ್ರಮ ಮತ್ತು ಶಕ್ತಿ ಸಹ ವ್ಯರ್ಥವಾಗಿ ಹೋಯಿತು. * ಈ ವಿಧವಾದ ಪುಷ್ಕಳ ಸಂಗತಿಗಳನ್ನು, ಈ ಚರಿತ್ರೆಯಿಂದ ಕಲಿಯುವ ಹಾಗೆ ಇದೆ. ಇದು ಹಾಗಿರಲಿ. ಈಪ್ರಕಾರವಾಗಿ, ಈಗ ನಾಲ್ಕಾರು ವರುಷಗಳಿಂದಲೂ ಸತತ ಪ್ರಯತ್ನ ಮಾಡಿದ್ದರಲ್ಲಿ ಸಿಕ್ಕಿದ ಪರಿಶ್ರಮವನ್ನು ಈ ಚರಿತ್ರೆಯಲ್ಲಿ ಬರೆದಿದೆ. ಅದರಲ್ಲಿ, ವ್ಯಕ್ತಿವಿಷಯಕ ತಿಳುವಳಿಕೆಗೆ, ಮಹಾತ್ಮೆಯನ್ನು ಕೊಡದೆ, ಸುಯುಕ್ತವಾಗಿ ಮತ್ತು ಸ ಆಧಾರವಾಗಿ ತೋರುವಷ್ಟನ್ನೇ ತೆಗದುಕೊಂಡಿದ್ದೇವೆ. ಪುಷ್ಕಳ ಸಂಗತಿಗಳಿಗೆ ಆಧಾರವಿಲ್ಲದ್ದರಿಂದ ಅದನ್ನು ಪ್ರಸಿದ್ಧಮಾಡಲಿಲ್ಲ. ಕದಾಚಿತು

---

states or subjects, no change in the Supreme Power in India will be a gain to them, either as regards property, religion, social position, or national prejudices, and that *the largest possible share of consideration and authority which they can have under any Paramount Power, they shall have under ours.* If, as is very probable, the day of a European War is not distant, the need to us of such a conviction in their minds will soon make itself felt. To hold our Indian Empire in its present dimension, through a war with France and Russia, we must hold it by some other means than the few English Regiments which, in such case, would be spare to us."

* ಈ ಮಾತನ್ನ ಒಬ್ಬ ಇಂಗ್ರೇಜಿ ಗ್ರಂಥಕಾರನು ಸ್ಪಷ್ಟವಾಗಿ ಒಪ್ಪಿಕೊಂಡಿರುತ್ತಾನೆ.

"The great want of the rebels in 1857 was a leader of Commanding ability and recognised position, with his own martial resources, his own basis and centre of operations, and a distinct and intelligible cause of his own, a leader whom they could obey and trust, who would relieve them of individual responsibility and make them feel as if the law was on their side."

ಇನ್ನೂ ಏನಾದರೂ ಅಪೇಕ್ಷೆಯುಳ್ಳ ಕಾಗದ ಪತ್ರಗಳು ಸಿಕ್ಕಿದರೆ ಅವನ್ನ ಮುಂದೆ ಪ್ರಸಿದ್ಧಪಡಿಸಲಾದೀತು. ಈ ಪುಸ್ತಕದಲ್ಲಿ ಪ್ರಸಿದ್ಧಮಾಡಿ ಬರೆದಿರುವ ಸಂಗತಿಗಳಲ್ಲಿ, ಎಲ್ಲಿಯಾದರೂ ಕೆಲವು ತಪ್ಪುಗಳಿರುವ ಪಕ್ಷಕ್ಕೆ, ಅಥವಾ ಇನ್ನೇನಾದರೂ ಕೈಬಿಟ್ಟಿರುವ ಪಕ್ಷಕ್ಕೆ ಅದನ್ನು ಕುರಿತು ಯಾರಾದರೂ ಯೋಗ್ಯವಾದ ಸೂಚನೆ ಮಾಡಿದರೆ, ಅಥವಾ ಇನ್ನೂ ಏನಾದರೂ ಹೆಚ್ಚಿಗೆ ತಿಳುವಳಿಕೆಯನ್ನು ಕಳುಹಿಸಿಕೊಟ್ಟರೆ, ಅವರ ಉಪಕಾರವು ನಮಗೆ ಬಹಳವಾಗಿ ಆಗುತ್ತದೆ.

ಇದು ಹಾಗಿರಲಿ. ಈ ಕೆಲಸದಲ್ಲಿ ನಮಗೆ ಒಳ್ಳೇಸಹಾಯ ಮಾಡಿರತಕ್ಕಂಥಾ ಗೃಹಸ್ಥರುಗಳಿಗೆ ಅಂತಃಕರಣ ಪೂರ್ವಕ ಕೃತಜ್ಞರಾಗಿ ವಂದನೆಮಾಡಿ, ವಿಸ್ತಾರವಾದ ಈ ಪುಸ್ತಕವನ್ನು ನಾವು ಮುಗಿಸುತ್ತೇವೆ.

ನಮಗೆ ಪರಿಶ್ರಮ ಕೊಡತಕ್ಕ ಕೆಲಸದಲ್ಲಿ, ಸ್ವತಃ ರಾಣಿಸಾಹೇಬಳ ದತ್ತು ಪುತ್ರ ಸಾದಶ್ರೀಮಂತ ದಾಮೋದರರಾವ್ ಝಾನ್ಸಿ ವಾಲೆಯು, ಎಲ್ಲರಿಗಿಂತಲೂ ಅತ್ಯುತ್ತಮ ಸಹಾಯಮಾಡಿದ ಗೃಹಸ್ಥನಾಗಿದ್ದಾನೆ. ಆ ದೊಡ್ಡಮನುಷ್ಯನ ದೈವ ದುರ್ವಿಪಾಕದ ಕಥೆಯನ್ನು ಈ ಪುಸ್ತಕದ ಕೊನೆಯಲ್ಲಿ ಕೊಟ್ಟಿದ್ದೇವೆ. ಈ ಗೃಹಸ್ಥನು ತನ್ನ ಅತುಳ ಪರಾಕ್ರಮಿ ಮಾತೋಶ್ರೀಯ ಆದ್ಯಂತ ವೃತ್ತಾಂತವನ್ನು ನಮಗೆ ಸಂಗ್ರಹಮಾಡಿ ಕೊಟ್ಟಿದ್ದು, ಆತನ ಉಪಕಾರವು ನಮ್ಮಮೇಲೆ ಬಹಳವಾಗಿದೆ. ಈ ಶಬ್ದವನ್ನು ವ್ಯಕ್ತಪಡಿಸುವದಕ್ಕೆ ನಾವು ಸಮರ್ಥರಾಗಿದ್ದೇವೆ.

ಶ್ರೀಮಂತನಂತೆ ಯೇ, ಮಿ. ಡಿಗ್ಬಿ; ರಾ. ಬಾ. ಚಿಂತಾಮಣಿರಾವ್ ವೈದ್ಯ; ರಾ. ಸಾ. ಮಾಧವರಾವ್, ಲೇ. ಲೆ; ರಾ. ಸಾ. ಚಿಂತಾಮಣಿರಾವ್ ತಾಂಬೆ ಮುಂತಾದ ಸದ್ಗೃಹಸ್ಥರು ಪುಷ್ಕಳ ವೃತ್ತಾಂತವನ್ನು ಸೇರಿಸಿಕೊಟ್ಟಿದ್ದರಿಂದ, ಅವರ ಮತ್ತು ಅದೇ ಪ್ರಕಾರವಾಗಿ ಕೇ; ಮ್ಯಾಲಿಸನ್: ಮಾರ್ಟಿನ್; ಬೇಲ್; ಆರ್ನೋಲ್ಡ್; ಲೋ; ಸಿಂಹ್ಲೇಸ್ಟರ್ ಮುಂತಾದ ಅನೇಕ ಇಂಗ್ರೇಜಿ ಗ್ರಂಥಕಾರರ ಉಪಕಾರವು ನಮ್ಮಮೇಲೆ ಬಹಳವಾಗಿದೆ. ಇದು ಹೊರ್ತು ನಾನಾವಿಧವಾಗಿ ಅನೇಕ ಮಿತ್ರಮಂಡಲಿಯವರು ನಮಗೆ ಸಹಾಯ ಮಾಡಿರುವದರ ಉಪಕಾರವು ನಮ್ಮಮೇಲೆ ಬಹಳವಾಗಿದೆ. ತಥಾಪಿ, ಅದರಲ್ಲಿಯೂ ನಮ್ಮ ಮಿತ್ರನಾದ, ಪ್ರೊ. ಬಾಲಗಂಗಾಧರತಿಲಕನು, ಆಗಾಗ್ಯೆ ಪ್ರೋತ್ಸಾಹಪೂರ್ವಕ ಬಹಳ ಉಪಯೋಗವಾದ ಸೂಚನೆಯನ್ನು ಕೊಟ್ಟನು. ಸತಾರದ ಹೈಕೋರ್ಟು ವಕೀಲ್ ರಾ. ಸಾ. ರಘುನಾಥ ಪಾಂಡುರಂಗ್ ಕಂದೇರ್ಕರನು, ಬಹಳ ಆಸಕ್ತಿ ತೆಗೆದುಕೊಂಡು, ವಿಷಯ ರಚನೆಯ ಸಮ್ಬಂಧವಾಗಿ, ಆಗಾಗ್ಯೆ ಒಳ್ಳೇ ಸಲಹೆಯನ್ನು ಕೊಟ್ಟನು. ರಾ. ರಾ. ವಾಸುದೇವಗಣೇಶಚಿಮಾರ್ಣಳ, ಬಿ. ಏ; ಎಲ್. ಎಲ್ ಬಿ; ಮತ್ತು ರಾ. ರಾ. ನರಸಿಂಹಚಿಂತಾಮಣಿ ಕೇಳಕರ್ ಇವರು 'ಪ್ರೂಫ್' ಸರಿಮಾಡುವ ಕೆಲಸದಲ್ಲಿ ಬಹಳ ಸಂತೋಷದಿಂದ ಸಹಾಯಮಾಡಿದರು. ಈ ಸರ್ವರಿಗೂ ಅಂತಃಕರಣಪೂರ್ವಕವಾಗಿ, ಕೃತಜ್ಞರಾಗಿದ್ದೇವೆ. ಇದು ಹೊರ್ತು ಮಿ. ವಿಶ್ರಾಂಲಕ್ಷ್ಮನ್, ಕೋರ್ಗಾಂಕ

ರನು ವಿಶೇಷ ಶ್ರಮ ತೆಗೆದುಕೊಂಡು ಪುಸ್ತಕವನ್ನು ಶೋಧಿಸಿದಕ್ಕಾಗಿ ಆತನಿಗೆ ಬಹಳ ಕೃತಜ್ಞರಾಗಿದ್ದೇವೆ.

ಈಚಿಗೆ ಈ ಪುಸ್ತಕವನ್ನು ಛಾಪಿಸಿ, ಪ್ರಸಿದ್ಧಿಪಡಿಸಿದ, ಛಾಪಖಾನೆಯಜಮಾನ ರಾ. ರಾ. ತುಕ್ಕಾರಾಂಜವಾಜಿಯು, ಈ ಪುಸ್ತಕದ ಸಮ್ಮಂಧವಾಗಿ, ಮಧ್ಯದಲ್ಲಿ ಅನೇಕ ವಿಘ್ನಬಂದಾಗ್ಯು, ಬಹಳ ದೃಢ ಮನಸ್ಸಿನಿಂದ ವಿಶೇಷ ಆಸಕ್ತಿ ತೆಗೆದುಕೊಂಡು, ಸಮಾಧಾನದಿಂದ ಈ ಪುಸ್ತಕದ ಕೆಲಸವನ್ನು ಮುಗಿಸಿದ್ದಕ್ಕಾಗಿ ನಮ್ಮ ಕೃತಜ್ಞತೆಯನ್ನು ತೋರಿಸುವದು ಅವಶ್ಯಕವಾಗಿದೆ.

ಇದು ಹಾಗಿರಲಿ. ಈ ನಮ್ಮ ಅಲ್ಪಸೇವೆಯನ್ನು ವಾಚಕರು ಹಂಸಕ್ಷೀರ ನ್ಯಾಯವನ್ನನುಸರಿಸಿ, ಸ್ವೀಕಾರ ಮಾಡಬೇಕೆಂಬುವದೇ, ಜಗನ್ನಿಯಾಮಕನ ಹತ್ತರ, ನಮ್ಮ ಪ್ರಾರ್ಥನೆಯಾಗಿದೆ. ಇದು ಪೂರ್ಣವಾಗಲಿ.

ದತ್ತಾತ್ರಯ ಬಲವಂತ್ ಪಾರ್ಸನೆಸ್.

ಮೊಕ್ಕಾಂ,<br>
ಸತಾರ,<br>
ತಾರೀಖು 4 ನವಂಬರು 1894.



## ಶುದ್ಧಾಶುದ್ಧ ಪತ್ರಿಕೆಯ ಪೀಠಿಕೆ.



ಈ ಗ್ರಂಥವನ್ನು ಛಾಪಿಸುವದರಲ್ಲಿ, ಕೆಲವು ಶಬ್ದಗಳು ಹಸ್ತದೋಷದಿಂದ ಅಶುದ್ಧವಾಗಿರುವದರಿಂದ, ಈ ಪುಸ್ತಕಕ್ಕೆ ಶುದ್ಧಾಶುದ್ಧ ಪತ್ರಿಕೆಯನ್ನು ಸೇರಿಸಬೇಕಾದ ಅವಶ್ಯಕತೆಯುಂಟಾದುದಕ್ಕಾಗಿ ತುಂಬಾ ವಿಷಾದಿಸಬೇಕಾಗಿದೆ. ಆದರೆ, ವಿದ್ಯಾಭಿಮಾನಿಗಳಾದ ವಾಚಕ ಮಹಾಶಯರು, ದಯವಿಟ್ಟು, ಇದರಲ್ಲಿನ ಭಾಷೆಯ ನ್ಯೂನಾತಿರಿಕ್ತಗಳಿಗೆ ವಿಶೇಷ ಗಮನ ಕೊಡದೆ, ವಿಷಯ ಮತ್ತು ಮಹತ್ವದ ಮೇಲೆ ಕಟಾಕ್ಷ ವಿಡಬೇಕೆಂದು ವಿನಯದಿಂದ ಪ್ರಾರ್ಥಿಸುತ್ತೇನೆ. ಈ ಗ್ರಂಥವನ್ನು ಇನ್ನೊಂದು ವೇಳೆ ಛಾಪಿಸುವಾಗ ಇದನ್ನು ಸರಿಪಡಿಸಲು, ಅತಿ ಜಾಗರೂಕನಾಗಿರುವದು, ಸಕರ್ತವ್ಯಾಂಶವಾಗಿರುತ್ತದೆ.

# ಅನುಕ್ರಮಣಿಕೆ.

# ಪರಿಶಿಷ್ಟ.







# ಚಿತ್ರಾನು ಕ್ರಮ.







ಶ್ರೀ

ಶುಭಮಸ್ತು.

ಝಾನ್ಸಿ ಸಂಸ್ಥಾನದ

# ಮಹಾರಾಣೀ ಲಕ್ಷ್ಮೀಬಾಯಿ ಸಾಹೇಬಳ ಚರಿತ್ರೆ.

## ೧ ನೇ ಪ್ರಕರಣ.

---

### ಝಾನ್ಸಿ ಸಂಸ್ಥಾನ.



ಉತ್ತರ ಹಿಂದೂಸ್ಥಾನದ ಮಧ್ಯ, ಬುಂದೇಲಖಂಡ * ವೆಂಬ ಹೆಸರುಳ್ಳ ಬಹಳ ಫಲವತ್ತಾದ ಪ್ರದೇಶವಿಧೆ. ಈ ಪ್ರಾಂತ್ಯದಲ್ಲಿರತಕ್ಕ ಅನೇಕ ಪ್ರಸಿದ್ಧ ಸಂಸ್ಥಾನಗಳಲ್ಲಿ, ಝಾನ್ಸಿ ಯೆಂಬುವದೊಂದು, ಮುಖ್ಯ ಸಂಸ್ಥಾನವಾಗಿಧೆ. ಇದು ವಿಂಧ್ಯಾದ್ರಿಯ ದಕ್ಷಿಣಭಾಗದ ಇಳಿಜಾರು ಪ್ರದೇಶವಲ್ಲಿದ್ದು, ಪೂರ್ವ ರೇಖಾಂಶ $78^{0}, 22^{1}, 15^{11}$; ಮತ್ತು $79^{0}, 27^{1}, 30^{11}$;

---

* ಬುಂದೇಲಖಂಡ ಅಂದರೆ ಬುಂದೇಲೆಯೆಂಬ ಜನಗಳ ಪ್ರದೇಶ. ಬುಂದೇಲೆ ಯೆಂಬ ಹೆಸರಿನ ಸಮ್ಮಂಧವಾಗಿ ಯೆರಡು ವಿಧವಾದ ಇತಿಹಾಸಗಳು ಇವೆ. ಯಾವ ವೆಂದರೆ :—

ಮತ್ತು ಉತ್ತರ ಅಕ್ಷಾಂಶ $25^{0}, 3^{1}, 45^{11}$; ಮತ್ತು $25^{0}, 58^{1}, 48^{11}$; ಈ ಮಧ್ಯೆ ಇದೆ. ಈ ಸಂಸ್ಥಾನಕ್ಕೆ ಉತ್ತರದಲ್ಲಿ, ಗ್ವಾಲಿಯರ್ ಮತ್ತು ಸಿಮಿಥರದ ಪ್ರದೇಶ; ಪೂರ್ವಕ್ಕೆ, ಧಸಾನ್ ನದಿ ಮತ್ತು ಅದರ ಈಚೆಗೆ ಹಮೀರಪುರ; ದಕ್ಷಿಣಕ್ಕೆ, ಲಲಿತಪುರ ಪರ್ಗನ, ಓರ್ಛ ಅಥವ ಟೆಹೇರಿ ಪ್ರದೇಶ; ಮತ್ತು ಪಶ್ಚಿಮಕ್ಕೆ, ದತ್ತಿಯ ಮತ್ತು ಗ್ವಾಲಿಯರ್; ಈರೀತಿ ಮೇರೆಗಳಿವೆ. ಇದರ ವಟ್ಟು ಕ್ಷೇತ್ರ ಫಲ $4983\frac{1}{6}$ ಚದರ ಮೈಲಿಗಳು, ಮತ್ತು 934934 ಜನಸಂಖ್ಯೆ ಇದೆ. ಇದಕ್ಕೆ 9 ಡಿಸ್ಟ್ರಿಕ್ಟಗಳು, 2140 ಊರುಗಳೂ ಇವೆ. ಈ ಪ್ರಾಂತ್ಯದಲ್ಲಿ ಮೂರು ಮುಖ್ಯ ನದಿಗಳು ಹರಿಯುತ್ತವೆ. ಯಾವವಂದರೆ :— ಪಹೂನ, ವೇತ್ರವತಿ, ಧಸಾನ್ ಯೆಂಬವುಗಳು. ಈ ಪ್ರಾಂತ್ಯದಲ್ಲಿ ಕೆಲವು ಬೆಟ್ಟ ಪ್ರದೇಶಗಳಿವೆ. ಈ ಸಂಸ್ಥಾನದ ರಾಜಧಾನಿಯಾದ ಝಾನ್ಸಿಯಲ್ಲಿ ಒಂದು ಬಲವಾದ ಕೋಟೆ ಇಧೆ.

---

1. ಕಾಶೀರಾಜನ ವಂಶದಲ್ಲಿ, ಪಂಚಮನೆಂಬ ಹೆಸರುಳ್ಳ ಒಬ್ಬ ರಾಜನಿದ್ದನು. ಅವನ ಬಂಧುಗಳು ಬಲೋನ್ಮತ್ತರಾಗಿ, ಆತನನ್ನ ಪದಭ್ರಷ್ಟನನ್ನಾಗಿ ಮಾಡಿ, ಓಡಿಸಿಬಿಟ್ಟರು. ಆಗ ರಾಜನು ನಿರಾಶನಾಗಿ, ವಿಂಧ್ಯಾ ಪರ್ವತಕ್ಕೆ ಹೋಗಿ, ಅಲ್ಲಿ ಬಹಳ ಪ್ರಸಿದ್ಧವಾಗಿರತಕ್ಕ ವಿಂಧ್ಯವಾಸಿನಿ ಯೆಂಬ ದೇವಿಯನ್ನ ತನಗೆ ರಾಜ್ಯಪ್ರಾಪ್ತ್ಯರ್ಥವಾಗಿ, ಆರಾಧನೆ ಮಾಡಲಿಕ್ಕೆ ಪ್ರಾರಂಭಿಸಿ, ಆ ದೇವತೆಯನ್ನ ಸುಪ್ರಸನ್ನಳಾಗಿ ಮಾಡಿಕೊಳ್ಳುವ ಗೋಸ್ಕರ ತನ್ನ ದೇಹವನ್ನ ಬಲಿಯಾಗಿ ಅರ್ಪಿಸಲು ನಿಶ್ಚಯಿಸಿ, ಖಡ್ಗವನ್ನು ತನ್ನ ಶರೀರದಮೇಲೆ ಪ್ರಯೋಗಿಸಿದನು. ಈ ನಿಸ್ಸೀಮ ಭಕ್ತಿಗೆ ದೇವಿಯು ಪ್ರಸನ್ನಳಾಗಿ, ತನ್ನ ಮೂರ್ತಿಯ ದರ್ಶನವನ್ನು ಈ ಭಕ್ತನಿಗೆ ದಯಪಾಲಿಸಿ, ಆತನ ಹಸ್ತದಲ್ಲಿದ್ದ ಖಡ್ಗವನ್ನು ಸೆಳದುಕೊಂಡು, ರಾಜ್ಯವು ನಿನಗೆ ಪುನಹ ಪ್ರಾಪ್ತವಾಗಲೀ ಯೆಂತ ವರ ಪ್ರದಾನ ಮಾಡಿದಳು. ಆಗ್ಗೆ ರಾಜನ ಮೈಮೇಲೆ ಆಗಿದ್ದ ಘಾಯದಿಂದ ರಕ್ತ ಬಿಂದು ಸುರಿಯುತ್ತಿತ್ತು. ಈ ವಿಲಕ್ಷಣ ಭಕ್ತಿ ಮತ್ತು ಆತನ ಭಯಂಕರವಾದ ಕೃತ್ಯ ಸಹಾ, ಆ ರಾಜನ ವಂಶಸ್ಥರಿಗೆ ಸ್ಮರಣೆಯಲ್ಲಿರಬೇಕೆಂಬುವ ಉದ್ದೇಶ್ಯದಿಂದ, ಬುಂದೇಲೆಯೆಂಬ ಹೆಸರು ಬಂತು.

2. ಕಾಶೀರಾಜನ ಮನೆತನದಲ್ಲಿ, ಹರದೇವನೆಂಬ ಒಬ್ಬ ಪುರುಷನಿದ್ದನು. ಅವನು ತನ್ನ ದೇಶದಿಂದ ಒಬ್ಬ ಹುಡಗಿಯನ್ನು ಓಡಿಸಿಕೊಂಡು ಬಂದು, ಓರ್ಛಾ ಯೆಂಬ ಸ್ಥಳದಲ್ಲಿ ವಾಸವಾಗಿದ್ದನು. ಅಲ್ಲಿರತಕ್ಕ ಜನಗಳು, ಆ ಹುಡಗಿಯನ್ನ ಬುಂದಿ ಅಂದರೆ ದಾಸಿಯೆಂತ ಕರೆಯುತ್ತಿದ್ದರು. ಕೆಲವುಕಾಲದ ನಂತರ, ಅಲ್ಲಿನ ರಾಜನಿಗೂ ಮತ್ತು ಹರದೇವನಿಗೂ ಪರಿಚಯವಾಗಿ, ಆ ಹುಡಗಿಯನ್ನು ಸಂಪಾದಿಸಿ ಕೊಳ್ಳುವಗೋಸ್ಕರ, ರಾಜನು ಹರದೇವನನ್ನ ಮಧುರವಾದ ಮಾತಿನಿಂದ ವಶಮಾಡಿ ಕೊಂಡು, ಆತನಿಗೆ ಆಶೋತ್ತರ ಹೇಳಿ, ಆ ಹುಡಗಿಯನ್ನು ಲಗ್ನಮಾಡಿಕೊಂಡನು. ಈ ರಾಜನ ಸಂತತಿಯವರಿಗೆ, ಬುಂದೇಲ್ ಯೆಂಬ ಹೆಸರು ಬಂತು.

ಝಾನ್ಸಿ ಸಂಸ್ಥಾನದ ಪ್ರಾಚೀನ ಇತಿಹಾಸದ ಮೂಲ ಆಧಾರಗಳು ಇಲ್ಲದ ಕಾರಣ,
ನಂಬತಕ್ಕ ಆ ಸಮ್ಮಂಧದ ಪರಿಚಯು ಸಿಕ್ಕುವದಿಲ್ಲ. ಆದರೆ, ಸನ್ 1500 ನೇ ಇಸವಿ
ಪ್ರಾರಂಭಿಸಿಕೊಂಡು, ಕೆಲವು ಆಧಾರಗಳು ಸಿಕ್ಕುತ್ತವೆ. ಆಕಾಲದಲ್ಲಿ, ಈ ದೇಶವು
ಓರ್ಛ ಸಂಸ್ಥಾನದ ರಾಜನಾದ ಬೀರಸಿಂಗ ದೇವ ಯೆಂಬುವನ ಕೈಕೆಳಗೆ ಇದ್ದು, ಅದ
ರಲ್ಲಿ ಝಾನ್ಸಿಯು, ಒಂದು ಸಣ್ಣ ಹಳ್ಳಿಯಾಗಿತ್ತು. ಬೀರಸಿಂಗ ದೇವನು ತನ್ನ ಆಳಿಕೆ
ಯಲ್ಲಿ, ಝಾನ್ಸಿಯಲ್ಲಿ ಒಂದು ಪ್ರಚಂಡ ಕೋಟೆಯನ್ನು ಕಟ್ಟಿ, ಆ ಊರನ್ನು ಒಳ್ಳೇ
ಸ್ಥಿತಿಗೆ ತಂದನು. ಈ ರಾಜನು ಬಹು ಕ್ರೂರ ಕರ್ಮಿಯಾಗಿದ್ದನು. ಅವನು 1602 ನೇ
ಇಸ್ವಿಯಲ್ಲಿ, ದಿಲ್ಲಿ ಅಧಿಪತಿಯಾಗಿದ್ದ ಪ್ರಸಿದ್ಧನಾದ ಅಕ್ಬರ್ ಪಾದಷಹನ ಪ್ರಿಯನಾದ
ಮುತ್ಸದ್ದಿ, ಮತ್ತು ಇತಿಹಾಸ ಕಾರಕನಾದ ಅಬ್ದುಲ್ ಫಜೇಲ್ ಯೆಂಬುವ ನನ್ನ
ಕೊಂದು ಹಾಕಿದನು. ಇದರಿಂದ ಅಕ್ಬರ್ ಪಾದಷಹಾಗೆ ಬಹಳ ಕೋಪಬಂದು ಬೀರಸಿಂ
ಗ ದೇವನನ್ನ ಶಿಕ್ಷಿಸುವದ ಕ್ಕೋಸ್ಕರ, ತನ್ನ ಪುತ್ರನಾದ ಸೇಲಂ ಯೆಂಬುವ ನನ್ನು ದಂಡು
ಸಮೇತ ಬುಂದೇಲಖಂಡಕ್ಕೆ ಕಳುಹಿಸಿದನು. ಆಗ ಬೀರಸಿಂಗ ದೇವನು ಹೆದರಿ, ಯೆಲ್ಲಿ
ಯೋ ಓಡಿಹೋಗಿ ಬಿಟ್ಟನು. ಇದೇ ಸೇಲಂ ಯೆಂಬುವನು ಮುಂದೆ 1605ನೇ
ಇಸ್ವಿಯಲ್ಲಿ, ದಿಲ್ಲೀ ಸಿಂಹಾಸನಾರೂಢನಾಗಿ, ಜಹಂಗೀರನೆನ್ನಿಸಿಕೊಂಡು ಪ್ರಸಿದ್ಧ
ಬಾದಷಹನಾಗಿ ಪ್ರಕಾಶಿಸಿದನು. ಈತನಿಗೆ ಪುನಹ ಬೀರಸಿಂಗ ದೇವನಮೇಲೆ, ದಯ
ಹುಟ್ಟಿ, ಆತನ ಅಪರಾಧವನ್ನ ಕ್ಷಮಾಮಾಡಿ, ಝಾನ್ಸಿ ಪ್ರಾಂತ್ಯವನ್ನ ಹಿಂದಕ್ಕೆ ಕೊ
ಟ್ಟನು. ಜಗತ್ತಿನಲ್ಲಿ ಪ್ರಖ್ಯಾತಿ ಹೊಂದಿದ ಈ ಬಾದಷಹನು 1627 ನೇ ಇಸ್ವಿ ಮಧ್ಯ
ದಲ್ಲಿ, ಮೃತನಾದನು. ಅನಂತರ, ಆತನ ಪುತ್ರನಾದ ಷಹಜಹಾನನು ದಿಲ್ಲಿ ಸಿಂಹಾ
ಸನಾರೂಢನಾದನು. ಬೀರಸಿಂಗನು, ಪುನಃ ಅಧರ್ಮಕಾರ್ಯವನ್ನ ಸ್ವೀಕಾರಮಾಡಿ,
ಬಾದಷಹನ ರಾಜ್ಯದಲ್ಲಿ ದಂಗೆ, ಲೂಟಿ, ಸಹಮಾಡಲು ಪ್ರಾರಂಭಿಸಿದ ಸಂಗತಿಯು
ಬಾದಷಹಗೆ ತಿಳಿದ ಕೂಡ್ಲೆ, ಅವನ ಚೇಷ್ಟೆಯನ್ನ ನಿಲ್ಲಿಸಿ, ಆತನ ವಿಶಿಷ್ಟ ಜಹಗೀರಿ
ಯನ್ನು ಸರ್ಕಾರಕ್ಕೆ ಸೇರಿಸಿಕೊಂಡುಬಿಟ್ಟನು. ಅಲ್ಲಾಗಾಯಿತು, 1707 ನೇ ಇಸ್ವಿ
ವರೆಗೂ ಝಾನ್ಸಿಯು ಡಿಲ್ಲೀ ಬಾದಷಹನ ಸ್ವಾಧೀನದಲ್ಲಿತ್ತು. ತದನಂತರ, ಅದೇ
ಇಸವಿ ಮಧ್ಯಕಾಲದಲ್ಲಿ ಬಹದೂರ್‌ಷಹನು ದಿಲ್ಲೀ ಸಿಂಹಾಸನಕ್ಕೆ ಬಂದನಂತರ, ಝಾನ್ಸೀ
ಪರಗಣವನ್ನ, ಛತ್ರಸಾಲ್ ರಾಜನಿಗೆ ಜಹಗೀರಿಯಾಗಿ ಕೊಟ್ಟನು.

ಈ ಛತ್ರಸಾಲ್ ರಾಜನು, ಪರಮಾರ ಜಾತಿಯ, ರಜಪೂತ ರಾಜನಾಗಿ, ಪನ್ನಾ
ದೇಶದಲ್ಲಿ ರಾಜ್ಯ ವಾಳುತ್ತಿದ್ದನು. ಈತನ ತಂದೆ ಚಂಪತಿರಾಯನು, ಬಹಳ ಶೂರನು,
ಮತ್ತು ಹಿಂದೂಧರ್ಮಾಭಿಮಾನಿಯಾಗಿದ್ದು, ಸರ್ವ ಬುಂದೇಲಖಂಡದಮೇಲೆ, ತನ್ನ
ಪೂರ್ಣ ಪ್ರಾಬಾಲ್ಯಯಿಟ್ಟುಕೊಂಡು, ಒಳ್ಳೇಧನ ವೈಭವ ಸಂಪನ್ನನಾಗಿದ್ದನು.
ಈತನ ಸತ್ಕೀರ್ತಿಯು ಸರ್ವ ಹಿಂದುಸ್ಥಾನದ ಮಧ್ಯದಲ್ಲಿ, ಪ್ರಕಾಶಮಾನವಾಗಿತ್ತು.
ತತ್ಕಾಲಿಕನಾದ ಒಬ್ಬ ಕವಿಯು, ಛತ್ರಸಾಲ್ ರಾಜನ ವರ್ಣನೆಯನ್ನ ಹಿಂದೀ ಭಾಷೆ
ಯಲ್ಲಿ ಬಹಳ ಸುರಸವಾಗಿ ಮಾಡಿರುತ್ತಾನೆ. ಅದು ಈ ಪ್ರಕಾರ:—

ಚಾಕ ಚಕ ಚಮೂಕೆ ಅಚಾಕ ಚಕ ಚಹೂಂ ಓರ್
ಚಾಕಸಿ ಫಿರತ ಧಾಂಕ್ ಚಂಪತಿಕೆ ಲಾಲ ಕಿ ।
ಭೂಷಣ ಭಣತ ಬಾದಾಶಾಹಿ ಮಾರಿ ಜೇರಕರಿ
ಕಾಹೂ ಉಮರಾವ್ ನಾಕರೇರಿ ಕರಬಾಲಕಿ ॥
ಸುನಿ ಸುನಿ ರೀತಿ ಬೀರ ದೈತಕೆ ಬಡಪನಕಿ
ಥಪ್ಪನೌ ಥಪ್ಪನೌಕೀರೀತಿ ಛತ್ರಸಾಲಕೀ ।
ಜಂಗ ಜೀತಿ ಲೇವಾತೆ ವೈ ಹ್ಯೈ ಕೈದಾಮ ದೇವ
ಭೂಪ ಸೇವ ಲಾಗೇ ಕರತ ಮಹೇವಾಲಹಿಪಾಲಕಿ ॥ ೧ ॥

ಭುಜ ಭುಜಗೇಶ ಕೇವೈ ಸಂಗಿನಿ ಭುಜಂಗಿನೀಶಿ
ಖೇದಿ ಖಾತಿ ದಿಹ ದಾರುಣ ದಲ ನಿಕೆ ।
ಬಕ್ತರ್ ಪಾಖರನಿ ಬೀಚಧಸೀ ಜಾತ
ಮೀನ ಪೈರಿ ಪಾರಿಜಾತ ಪರಬಾಹಾ ಜೋಜಲಂಕೆ ॥
ರೈಯಾರವಿ ಚಂಪತಿಕೆ ಛತ್ರಶಾಲ ಮಹಾರಾಜ್
ಭೂಷಣ ಸಕತಕೋ ಬಖಾನಿಯೋ ಬಲನಕೋ ।
ಪಛ್ಛೀ ಪರಛೀನೆ ಯೇಸೆ ಪರೇಪರ್ ಛೀನೇ ಬೀರ
ತೇರಿಬರ್ ಛೀನೇ ಬರ್ ಛೀನೇ ಹ್ಯೈ ಖಲನಕೆ ॥ ೨ ॥

ರಾಜತ ಅಖಂಡ ತೇಜ ಛಾಜತ ಸುಜಸ ಬಡೋ
ಗಾಜತ ಗಯುದ್ನ ದಿಗ್ಗಜ ನಿಹೀಯೆ ಶಾಲಕೋ ।
ಜಾಕೆ ಪರತಾಪಸೋ ಮಲಿನ ಆಫ್ತಾಬ್ ಹೋತ
ತಾಪ ತೀಜ ದುಜ್ಜನ ಕರ್ತ ಬಹು ಖ್ಯಾಲಕೋ ।
ಸಾಜಿ ಸಜ್ಜಿ ಗಜತುರಿ ಕೋಶಲ ಕತಾರಿ
ದೀರ್ ಹೇ ಭೂಷಣ ಭನತ ಯೇಸೋದೀನ ಪ್ರತಿಪಾಲಕೋ ।
ಜಾರ ರಾಜ ರಾವ ಮನ ಯೇಕ ಹೂನ ಲ್ಯಾಂವ್ಹೂ
ಅಬ ಸಾಹುಕೋ ಸರಾಹೌ ಕೀಸರ ಹೌಛತ್ರಶಾಲಕೋ ॥ ೩ ॥

ತಥಾಸ್ತು. ಬುಂದೇಲ ಖಂಡಕ್ಕೆ ಅಧಿಪತಿಯಾದ ಛತ್ರಸಾಲ ರಾಜನು, ಉತ್ತಮ ರೀತಿಯಲ್ಲಿ ರಾಜ ಚಕ್ರವನ್ನ ನಡಸುತ್ತಾ ಇದ್ದದ್ದರಿಂದ, ಆತನಮೇಲೆ ಸರ್ವ ಪ್ರಜೆಗಳು ಸಂತುಷ್ಟರಾಗಿ ಯಿದ್ದರು. ಪರಂತು, " ಪರವೃದ್ಧಿಭಿರಾಹಿತವ್ಯಥಃ ಸ್ಫುಟನಿರ್ಭಿನ್ನ ದುರಾಶಯೋ ಧಮಃ. " ಈ ನಿಯಮ ಪ್ರಕಾರ ಅಧಿಕಾರ ಮದದಿಂದ ಉನ್ಮತ್ತರಾಗಿ, ಹಿಂದೂರಾಜರುಗಳಿಗೆ ಉಪದ್ರವನ್ನು ಕೊಡೋಣವೇ ಭೂಷಣವೆಂತ ತಿಳಿದಿದ್ದ, ಯವನ ಸಮೂಹಕ್ಕೆ ಮಾತ್ರ, ಛತ್ರಸಾಲ ರಾಜನ ಪ್ರಾಬಲ್ಯವು ಸಹನವಾಗಲಿಲ್ಲ. ಮೊಳವ್ಯ

ದೇಶದ ಶುಭೇದಾರ ಮತ್ತು ಅಲಹಾಬಾದಿನ ನವಾಬ್ ಮಹಮ್ಮದ್‌ಖಾನ್ ಬಂಗಷ್ ಎಂಬುವರು, ಛತ್ರಸಾಲ ರಾಜನ ಮೇಲೆ, ಪದೇಪದೇ, ದಂಡೆತ್ತಿಹೋಗಿ, ಆತನನ್ನು ನಿರ್ವಿಣ್ಣನನ್ನಾಗಿ ಮಾಡಲು, ಪ್ರಾರಂಭಿಸಿದರು. ಈ ಸಮಯದಲ್ಲಿ ದೌರ್ಭಾಗ್ಯಶಾಲಿಯಾದ ಛತ್ರಸಾಲ ರಾಜನು, ವಾರ್ಧಿಕ್ಯಾವಸ್ಥೆಯಲ್ಲಿದ್ದ ಕಾರಣ, ಬಲೋನ್ಮತ್ತನಾದ ಯವನ ಶುಭೇದಾರನ ತಂಟೆಗೆ ಹೋಗಲಿಲ್ಲ. ಛತ್ರಸಾಲ ರಾಜನು ಚಿಂತಾಕ್ರಾಂತನಾಗಿ, ಬಲಿಷ್ಠರಾದ ರಾಜರ ಆಶ್ರಯವನ್ನು ಪಡೆಯಲು ಅಪೇಕ್ಷಿಸಿದನು. ಯವನ ಶುಭೇದಾರನಿಗೆ ದಿಲ್ಲೀ ಬಾದಷಹನ ಸಹಾಯ ಚನ್ನಾಗಿ ಇದ್ದದ್ದಲ್ಲದೆ, ಆತನ ಹತ್ತಿರ 5000 ದಂಡು ಸಿದ್ಧವಾಗಿತ್ತು. ಮಹಾಪ್ರಬಲನಾಗಿ ಈತನು ಇದ್ದದ್ದರಿಂದ, ಆದುಷ್ಟನನ್ನು ನಿಗ್ರಹಿಸುವದು, ರಾಜನಿಗೆ ಅಸಾಧ್ಯವಾಗಿ ತೋರಿತು! ಇಷ್ಟರಲ್ಲಿ ಮಹಾರಾಷ್ಟ್ರ ದೇಶದಲ್ಲಿ, ಕ್ಷತ್ರಿಯ ಕುಲೋತ್ಪನ್ನ, ಗೋಬ್ರಾಹ್ಮಣ ಪ್ರತಿಪಾಲಕ, ಶ್ರೀಮಂತ ಛತ್ರಪತಿ, ಷಾಹು ಮಹಾರಾಜನ ಪಟ್ಟಪ್ರಧಾನ ಪೇಷ್ವೆ ದೊಡ್ಡ ಬಾಜಿರಾಯನ ರಣಶೌರ್ಯವು ರಾಜನ ಸ್ಮರಣೆಗೆಬಂದು, ಅವನಿಗೆ ಸೈನ್ಯಸಹಿತ ಬುಂದೇಲ ಖಂಡಕ್ಕೆ, ದಯಮಾಡಿಸಿ, ತನ್ನನ್ನು ಯವನರ ಬಾಧೆಯಿಂದ ಮುಕ್ತನನ್ನಾಗಿ ಮಾಡಿಸಬೇಕೆಂತ ವಿನಂತಿಪತ್ರವನ್ನು ಕಳುಹಿಸಿಕೊಟ್ಟನು. ಈ ವಿನಂತಿ ಪತ್ರವು ವಿಶೇಷ ಕರುಣಾರಸದಿಂದ ಭರಿತವಾಗಿತ್ತು. ಮತ್ತು ಅದರ ಮಧ್ಯದಲ್ಲಿ, 100 ಶ್ಲೋಕಗಳನ್ನು ಹಿಂದುಸ್ಥಾನಿ ಭಾಷೆಯಲ್ಲಿ ಬರೆದಿತ್ತು. ಅವುಗಳಲ್ಲಿ ಒಂದನ್ನು, ಮಾದ್ರಿಗೋಸ್ಕರ ಇಲ್ಲಿ ತೋರಿಸಿದೆ :—

ದೊಹರಾ (ಶ್ಲೋಕ.)

ಜೈಸಿ ಬಿತಿಥಿ ಗಜರಾಜಕು ವೈಶಿ ಬೀತಿ ಹೈ ಆಜ।
ಬಾಜಿ ಜಾತ ಬುಂದೇಲಕಿ, ರಾಕೋ ಬಾಜಿ ಲಾಜ * ॥ ೧ ॥

ಈ ರೀತಿಯಾದ ವಿನಂತಿ ಪತ್ರವನ್ನು ನೋಡಿ, ಛತ್ರಸಾಲ ರಾಜನಮೇಲೆ ಕರುಣ ಹುಟ್ಟಿ, ಬಾಜೀರಾಯನು ಶ್ರೀಮಂತ್ ಛತ್ರಪತಿ ಸರ್ಕಾರದ ನಿರೂಪ ಪಡೆದು, ಬುಂದೇಲ ಖಂಡಕ್ಕೆ ಹೋಗಲು ನಿಶ್ಚಯಿಸಿದ್ದಲ್ಲದೆ, ಕೂಡಲೆ ಸರ್ವ ಸೈನ್ಯವನ್ನು ಸಿದ್ಧಮಾಡಿ

* ಈ ಪೂರಾ ದೊಹರೆಗಳನ್ನ ಸೇರಿಸುವದಕ್ಕೆ ಬಹಳ ಪ್ರಯತ್ನ ಮಾಡಿದ್ದಾಯಿತು! ಅಲ್ಲದೆ, ಛತ್ರಸಾಲ ರಾಜನ ತಾತ್ಕಾಲ ವಂಶಸ್ಥ ಛತ್ರಪುರದ ಮಹಾರಾಜ, ವಿಶ್ವನಾಥಸಿಂಗ್ ಬಹದ್ದೂರಿಗೂ ಮತ್ತು ಪನ್ನಾ ಮಹಾರಾಜರಾದ ಮಹೀಂದ್ರ ಸರ್ ಪ್ರತಾಪಸಿಂಗ್ ಬಹದ್ದೂರ್ ಕೇ. ಸಿ. ಯಸ್. ಐ., ಈ ಉಭಯತ್ರಿಗೆ ಕೇಳಿಕೊಂಡು ನೋಡಿದ್ದಾಯಿತು. ಆದರೆ ಉಪಯೋಗವಾಗಲಿಲ್ಲ.

* ನಿಬಂಧಮಾಲೆಯ 31ನೇ ಅಂಕದಲ್ಲಿ 'ಶಾ. ಬಾ. ಸಹಿ ಯಸುವ ಪತ್ರವಿದೆ. ಅದರಲ್ಲಿ ಒಂದು ಶ್ಲೋಕ ಕೊಟ್ಟಿದ್ದಾನೆ. ಅದು ಈ ಪ್ರಕಾರ :—

" ಜೋಗತಿ ಗ್ರಾಹ ಗಜೇಂದ್ರಕಿ ಸೋಗತ ಭಾಯಿ ಹೈ ಆಜ।
ಬಾಜಿ ಜಾತ ಬುಂದೇಲಕಿ ರಾಖೋ ಬಾಜೀರಾವ್ ॥ ೧ ॥ "

ಕೊಂಡು, ಶುಭಮುಹೂರ್ತದಲ್ಲಿ ಹೊರಟು, ಪ್ರಯಾಣದಮೇಲೆ ಪ್ರಯಾಣಮಾಡಿಕೊಳ್ಳುತ್ತಾ, ಚಾಕಣ ಚೋರ್ಯಾಯೆಂಬ ಊರಿಗೆ ತಲ್ಪಿ, ಅನಂತರ ಸುಮಾರು 21 ದಿವಸಗಳಲ್ಲಿ ಬುಂದೇಲ ಖಂಡಕ್ಕೆ ಬಂದು ಸೇರಿದನು. ಅಲ್ಲಿ ಛತ್ರಸಾಲ ರಾಜನ ಶತ್ರುವಾದ ಮಹದ್‌ಖಾನ್ ಬಂಗಷ್‌ಗೂ, ಬಾಜೀರಾಯನಿಗೂ ಯುದ್ಧ ನಡದ್ದರಲ್ಲಿ, ಮರಾಟೀ ಸೈನ್ಯದವರು ಯವನ ಸೈನ್ಯವನ್ನ ಕೇವಲ ನಿಸ್ಸಾರಕ್ಕೆ ತಂದರು. ಕೊನೆಗೆ, ಮಹಮ್ಮದ್‌ಖಾನನು, ಬಾಜೀರಾಯನ ಪ್ರತಾಪ ಸೂರ್ಯನ ತೇಜಸ್ಸಿಗೆ ಕಣ್ಣುಮುಚ್ಚಿ ಓಡಿಹೋದನು. ಈಪ್ರಕಾರವಾಗಿ ಛತ್ರಸಾಲ ರಾಜನ ಸಂಕಟವು ನಿವಾರಣೆಯಾಯಿತು. ಮತ್ತು ಬಾಜೀರಾವ್ ಸಾಹೇಬನ ಕೊರಳಿಗೆ, ವಿಜಯ ಶ್ರೀಯು, ಪುಷ್ಪಮಾಲೆಯನ್ನ ಹಾಕಿದಳು. ತದನಂತರ, ಪನ್ನಾಯೆಂಬ ಸ್ಥಳದಲ್ಲಿ, ಬಾಜೀರಾವ್ ಸಾಹೇಬನ ಮತ್ತು ಛತ್ರಸಾಲ ರಾಜನ ಪ್ರೇಮಪೂರ್ವಕವಾದ ಭೇಟಿ ಆದ್ದರಲ್ಲಿ, ರಾಜನು ಆ ನರಪುಂಗವನಾದ ಬಾಜೀರಾಯನಿಗೆ ತನ್ನ ದೇಶದ ಕೆಲವು ಪ್ರಾಂತ್ಯವನ್ನು ಉಚಿತವಾಗಿ ಕೊಟ್ಟು, ಉತ್ತಮ ರೀತಿಯಲ್ಲಿ ಉಪಚಾರಮಾಡಿದನಲ್ಲದೆ, ಅವನನ್ನ ತನ್ನ ತೃತೀಯ ಪುತ್ರನಂತೆ ಭಾವಿಸಿ ತನ್ನ ಮರಣ ಸಮಯದಲ್ಲಿ, ತನಗೆ ಯಿದ್ದ ಮೂರುಕೋಟಿ ರಾಜ್ಯದ ಪೈಕಿ, ಒಂದು ಕೋಟಿ ಆದಾಯವುಳ್ಳ ಪ್ರಾಂತ್ಯವನ್ನು ಕೊಟ್ಟನು. *

ಈ ಪ್ರಕಾರ ಸಿಕ್ಕಿದ ಒಂದು ಕೋಟಿ ಉತ್ಪನ್ನದ ರಾಜ್ಯವನ್ನ ಶ್ರೀಮಂತ ಬಾಜೀರಾವ್ ಪೇಶ್ವೆಯು, ಮೂರು ಭಾಗ ಮಾಡಿ, 3 ಶುಬೇದಾರರನ್ನ ನೇಮಿಸಿದನು. ಒಂದನೇ ಶುಬೇದಾರ ಗೋವಿಂದಪಂತ ಬುಂದೇಳೆ (ಈತನ ಪೂರ್ವದ ಹೆಸರು ಗೋವಿಂದ ಖೇರ್ ಯೆಂತ ಇದ್ದು, ಬಾಜೀರಾವ್ ಸಾಹೇಬನ ಹತ್ತಿರ ಶಿಷ್ಯವೃತ್ತಿ ಮಾಡುತ್ತಿದ್ದನು.) ಈಶುಬೇದಾರನಿಗೆ, ಸಾಗರ, ಗುಲ್ಸರಾಯಿ, ಜಾಲವನ ಮುಂತಾದ ಸಲವತ್ತು ಲಕ್ಷ ಉತ್ಪನ್ನವುಳ್ಳದೇಶದ ಆಡಳತವನ್ನ ವಹಿಸಿದನು. † ಬಾಜೀರಾಯನ ಅತಿಶಯ ಸೌಂದರ್ಯಕ್ಕೆ ಲುಬ್ಧ

---

* ಛತ್ರಸಾಲ ರಾಜನಿಗೆ, ಜಗತ್‌ ರಾಜದೇವ ಮತ್ತು ಹರದೇವ ಯೆಂಬ ಇಬ್ಬರು ಮಕ್ಕಳಿದ್ದರು. ಆದರೆ, "ಮರಾಟೀ ಸಾಮ್ರಾಜ್ಯದ ಚಿಕ್ಕ ಇತಿಹಾಸದಲ್ಲಿ," 52 ಜನಗಳಿದ್ದರು ಯೆಂತ ಬರದಿಧೆ. ಆ ಪೈಕಿ, ಬುದ್ಧಸಿಂಗ್ ಯೆಂಬುವನು ಮಹಮ್ಮದ್ ಖಾನ್ ಬಂಗಷ್‌ನನ್ನ ಸೀಕ್ಷಿಸುವ ಕೆಲಸದಲ್ಲಿ, ಬಹಳ ಸಹಾಯಮಾಡಿದನೆಂತಲೂ ಬರೆದಿಧೆ. ಆದರೆ ಅದಕ್ಕೆ ಇತರೇ ಆಧಾರ ಸಿಕ್ಕುವದಿಲ್ಲ !

† ಪಾಣಿಪತ್ತಿನ ಯುದ್ಧದಲ್ಲಿ, ಗೋವಿಂದಪಂತ ಬುಂದೇಲೆಯನ್ನ ನಜೀಬ್‌ಖಾನ್ ರೋಹಿಲಾನು ಕೊಂದುಹಾಕಿದನು. ಅವನಿಗೆ ಇಬ್ಬರು ಮಕ್ಕಳಿದ್ದರು. ಅವರ ಕಡೆ, ಕಾಲ್ಪೀ ರಾಜ್ಯ ಕೆಲವು ದಿವಸ ನಡೆಯುತ್ತಾ ಇತ್ತು. ಈಗ ಅವರ ವಂಶದವರಿಗೆ ಸಾಗರ ಮುಂತಾದ ದೇಶಗಳ ಪೈಕಿ ಗುಲಸರಾಯಿ, ಮುಂತಾದ ಮೂರು ಲಕ್ಷದ ಪ್ರಾಂತ್ಯ ನಡೆಯುತ್ತದೆ. ಈಗ ಗುಲ್ಸರಾಯಿಯಲ್ಲಿರತಕ್ಕ ರಾಜನ ಹೆಸರು ರಾಜಾ ಆತ್ಮಾರಾಂ ಬಾಬಾ ಬಹದ್ದೂರ್, ಯೆಂತ ಆಗಿಧೆ.

ಳಾಗಿ, ಅವನ ಅಲೌಕಿಕ ಶೌರ್ಯಾದಿ ಗುಣಗಳಿಗೆ ಮೋಹಿಸಿ, ಅಂತಃಪುರದಲ್ಲಿದ್ದ, ಮಸ್ತಾನಿಯೆಂಬ ಸ್ತ್ರೀಮೂಲಕ ಬಾಜೀರಾಯನಿಂದ ಉತ್ಪನ್ನನಾದ ಸಂಸೇರ ಬಹದ್ದೂರ್ ಯೆಂಬ ಬಾಲಕನನ್ನು ಯೆರಡನೇ ಸುಬೇದಾರನನ್ನಾಗಿ ನೇಮಿಸಿ, ಅವನಿಗೆ ಕಾಲ್ಪಿ ಮುಂತಾದ ನಲವತ್ತು ಲಕ್ಷ ಉತ್ಪತ್ತಿಯುಳ್ಳ ಪ್ರಾಂತ್ಯವನ್ನು ಬಿಟ್ಟನು. ಪರಂತು, ಅವನು ಚಿಕ್ಕವನಾಗಿದ್ದಕಾರಣ, ಆಡಳತವನ್ನ ಸಿಂಧ್ಯಾನ ಕಡೆಗೆ ವಹಿಸಿದನು. ‡ ಬಾಕಿ ಉಳಿದ ಇಪ್ಪತ್ತು ಲಕ್ಷ ರಾಜ್ಯವನ್ನ, ನಾರೋಶಂಕರ ಮೋತಿವಾಲೆಯಂಬವನನ್ನ ಸುಬೇದಾರನನ್ನಾಗಿ ನೇಮಿಸಿ, ಆತನಿಗೆ ಕೊಟ್ಟನು. ಈ ಇಪ್ಪತು ಲಕ್ಷ ಉತ್ಪನ್ನವುಳ್ಳ ದೇಶವೇ ಝಾನ್ಸಿಯಾಗಿದೆ.

1756 ನೇ ಇಸ್ವಿಯಲ್ಲಿ, ಪೂರ್ವದಗೋಸಾವೀ ರಾಜನು ಝಾನ್ಸಿಯಲ್ಲಿ ದಂಗೇ ಮಾಡಿ, ಅಲ್ಲೀ ಪೇಷ್ವೆ ಸುಬೇದಾರನನ್ನ * ಓಡಿಸಿ ಬಿಟ್ಟನು.

---

‡ 1817 ನೇ ಇಸ್ವಿಯಲ್ಲಿ, ಇಂಗ್ರೇಜಿ ಸರ್ಕಾರದವರ ಸಂಸೇರ ಬಹದರನ ವಂಶದವರಿಗೆ ವರ್ಷಂಪ್ರತಿ ನಾಲ್ಕುಲಕ್ಷ ರೂಪಾಯಿಗಳನ್ನು ಕೊಡುವದಕ್ಕೆ ಗೊತ್ತುಮಾಡಿ ಬಾಂದಾಪ್ರಾಂತ್ಯವನ್ನು ತೆಗೆದುಕೊಂಡರು. ಈಗ್ಯೂ ಅವರ ವಂಶದವರು ಇಂಪೂರಿನಲ್ಲಿರುತ್ತಾರೆ. ಅವರಿಗೆ ಇಂಗ್ರೇಜಿ ಸರ್ಕಾರದವರ ಕಡೆಯಿಂದ ವರ್ಷಂಪ್ರತಿ 13000 ರೂಪಾಯಿಗಳು ಪೆನ್ಷನ್‍ಸಿಕ್ಕುತ್ತದೆ.

* ಝಾನ್ಸಿಯಲ್ಲಿದ್ದ ಪೇಷ್ವೆಯವರ ಸುಬೇದಾರರ ಸಮ್ಮಂಧವಾಗಿ ಬಹಳ ಮತಭೇದ ತೋರುತ್ತದೆ. ಶ್ರೀಮಂತದಾಮೋದರರಾವ್ ಸಾಹೇಬ್ ಝಾನ್ಸಿವಾಲೆ ತಿಳುವಳಿಕೆಯಲ್ಲಿ, ನಾರೋಶಂಕರ್ ಮೋತಿವಾಲೆಗೆ ಝಾನ್ಸೀ ಸುಬೇದಾರಿ ಶಿಕ್ಕಿತುಯಂತ ಬರದುಇಧೆ. ಡಂಭಹಾರ್ಕಯೆಂಬದರಲ್ಲಿ ಇತಿಹಾಸಲೇಖಕನು ಬರದಿರುವದೇನಂದರೆ:— "ಝಾನ್ಸಿಯಲ್ಲಿ ಪ್ರಥಮತಃ ಗಂಗಾಧರಪಂತನಿಗೆ ನೇಮಕವಾಯಿತು'; ಅನಂತರ, ಗೋವಿಂದಪಂತಬುಂದೇಲೆ, ಅನಂತರ 1757 ನೇ ಇಸ್ವಿಯಲ್ಲಿ ಪೇಷ್ವೇಯವರು ನಾರೋಶಂಕರನನ್ನ ಹಿಂದಕ್ಕೆ ಕರಶಿ, ಮಹಾದಾಜೀ ಗೋವಿಂದನನ್ನು ನೇಮಿಶಿದರು. ಅವನು ರೋಹಿಲ್ ಖಂಡವನ್ನ ಜಯಿಸಿ ತೆಗೆದುಕೊಂಡನು. ಅನಂತರ 1759 ನೇ ಇಸ್ವಿಯಲ್ಲಿ, ಕನ್ಹಯುರಾಯು, ಯಂಬುವನಿಗೆ ನೇಮಕವಾಯಿತು. ಆ ಸಮಯದಲ್ಲಿ ಗೋವಿಂದಪಂತ ಬುಂದೇಲೆಯು ಪೇಷ್ವೆಯವರಿಗೆ, ಯಾರಾದರೂ ಒಬ್ಬ ಶೂರಸರದಾರನನ್ನ ಕಳುಹಿಸಿಕೊಟ್ಟಲ್ಲಿ, ಈಕಡೇ ಪುಷ್ಕಳರಾಜ್ಯ ಸಿಗಬಹುದೆಂತ ಬರೆದುಕಳುಹಿಸಿದನು. ಅದಕ್ಕೆ ಅವರು, ಚಿಂತಾಮಣಿರಾವ್, ಹರಿ, ಮತ್ತು ರಘುನಾಥರಾವ್ ಹರಿನೇವಾಸ್ಕರ್, ಇವರನ್ನ, ಕಳುಹಿಸಿದರು." ಇ. ಇ. ಲೋಕಹಿತವಾದಿ ಹೇಳುವದೇನಂದರೆ :— "1742 ನೇ ಇಸ್ವಿಯಲ್ಲಿ ಬಾಳಾಜಿ ಪಂಡಿತನಕಡೇ ನಾರೋಶಂಕರ್, ರಾಜೇಬಹದೂರ್‌ನು ಬುಂದೇಲ

ಈ ಸಂಗತಿ ಪೇಷ್ವೇ ಸರ್ಕಾರಕ್ಕೆ ವರ್ತಮಾನ ತಿಳಿದಕೂಡಲೆ, ಅವರು ರಘುನಾಥಹರಿನೇವಾಳಕರ್ ಯೆಂಬ ಹೆಸರುಳ್ಳ ಒಬ್ಬ ಶೂರ ಸರದಾರನನ್ನ ಅಲ್ಲಿಗೆ ಕಳುಹಿಸಿದರು. ಅವನು ಝಾರ್ಸೀಗೆ ಹೋಗಿ, ಬಹಳ ಶೌರ್ಯದಿಂದ ಅಲ್ಲಿನ ಜಹಗೀರದಾರ ಗೋಸಾವಿಪುಂಡನ್ನ, * ಅಡಗಿಸಿ, ಪುನಹ ಪೇಷ್ವೆಯವರ ಶುಬೇದಾರಿಯನ್ನ ಸ್ಥಾಪಿಸಿದನು.

ಈ ಸಂಗತಿ ಪುನೇಯಲ್ಲಿ ಪೇಷ್ವೇ ಸರ್ಕಾರಕ್ಕೆ ತಿಳಿದ ಕೂಡಲೆ, ರಘುನಾಥಹರೀಗೆ ಬಹಳನಾಗಿ ಸ್ತೋತ್ರಮಾಡಿ, ಅವನ ಶೌರ್ಯಕ್ಕೋಸ್ಕರ, ಝಾರ್ಸೀ ಶುಬೇದಾರಿಯನ್ನ, ಆತನ ವಂಶ ಪಾರಂಪರ್ಯ ನಡೆಯುತಕ್ಕದ್ದೆಂತ ಮಹಿಸಿದರು. ರಘುನಾಥರಾ

---

ಖಂಡಕ್ಕೆ ಬಂದು, ಬುಂದೇರಾಜನಿಂದ ಇನ್ನೂ ಕೆಲವು ದೇಶವನ್ನು ತೆಗೆದುಕೊಂಡು, ಝಾರ್ಸೀ ಕೋಟೆಯನ್ನ ಸರಿಪಡಿಸಿ ಪಟ್ಟಣವನ್ನಾಗಿಮಾಡಿದನು. ಮತ್ತು ಪನ್ನಾದಲ್ಲಿ ಇದ್ದ ವಜ್ರದ ಕಣೀಯಲ್ಲಿ ಅರ್ಧಭಾಗತೆಗದು ಕೊಂಡನು; ಮುಂದೆ, ನಾರೋಶಂಕರ್ ಹಿಂದಕ್ಕೆಬಂದು ಮಹದಾಜಿಗೋವಿಂದ್ ಅಲ್ಲಿಗೆಹೋದನು. ಅನಂತರ ಬಾಪೂರಾಯನಿಗೆ ನೇಮಿಣಿ ಇತ್ತು. ಅವನು ಹಿಂದಕ್ಕೆ ಬಂದು ಪುನಃ 1761 ನೇ ಇಸ್ವಿಯಲ್ಲಿ, ನಾರೋಶಂಕರ್ ಹೋದನು. ಇದೇ ಇಸ್ವಿಯಲ್ಲಿ, ಜಾಲವಾಣದ ಶುಬೇದಾರ್ ಗೋವಿಂದಪಂತ ಬುಂದೇಲೆಯು, ಪಾನಪತ್ತದಲ್ಲಿ ಸತ್ತುಹೋದನಂತರ, ಸಂಸೇರ್ ಬಹದರ್‌ನನ್ನ ಬುಂದೇಲಖಂಡಕ್ಕೆ ಪುನೇದಿಂದ ಕಳುಹಿಸಿದರು. ಅನಂತರ, ಅವನಹಿಂದೆ ವಿಶ್ವಾಸರಾವ್ ಲಕ್ಷ್ಮಣ, ಮತ್ತು ನಂತರ 1770ನೇ ಇಸ್ವಿಯಲ್ಲಿ ರಘುನಾಥಹರಿ, ಇವನು ಇಪ್ಪತ್ತುನಾಲ್ಕು ವರುಷ ಸ್ವತಂತ್ರದಿಂದ ಕಾರಬಾರ ಮಾಡಿದನು." ಈ ಮಧ್ಯಕಾಲದ ಸಮಾಚಾರವೇನೂ ಸಿಕ್ಕುವದಿಲ್ಲ. 1756 ನೇ ಇಸ್ವಿಯಲ್ಲಿ ಝಾರ್ಸಿಗೋಸಾವಿಯು ದಂಗೆಯೆದ್ದು ನಾರೋಶಂಕರನನ್ನ ಹೊರಡಿಸಿಬಿಟ್ಟದ್ದರಿಂದ ಪೇಷ್ವೇ ಸರ್ಕಾರದವರು, ರಘುನಾಥಹರಿ ನೆವಾಳಕರ್‌ನನ್ನನೇಮಿಸಿದರು, ಯೆಂಬುವದನ್ನ ನಂಬಿದರೆ ನಾರೋಶಂಕರನು ಬಹಳಶೂರನಾಗಿದ್ದು, ಗೋಸಾವಿಗೆ, ಯೆಂದಿಗೂ ಸೋಲತಕ್ಕಂಥ ಗೃಹಸ್ಥನಾಗಿರಲಿಲ್ಲ ಯೆಂಬ ಅಭಿಪ್ರಾಯಕ್ಕೆ ವೆತಿರಿಕ್ತತೋರುತ್ತೆ. ಇದು ಆತನ ರಾಜೇಬಹದೂರ್‌ಯೆಂಬ ಬಿರದಿನಿಂದ ಸ್ಪಷ್ಟವಾಗುತ್ತೆ. ಅಲ್ಲದೆ, ಪಾನಿಪತ್ತದ ಲಡಾಯಿದಲ್ಲಿ ಅವನ ಹೆಸರು ಬಹಳಪ್ರಸಿದ್ಧಿಯಾಗಿದ್ದು, ಭಾವುಸಾಹೇಬರಿಗೆ, ನಾರೋಶಂಕರನು ಪ್ರೀತ್ಯಾಸ್ಪದವಾದ ಶೂರಸರದಾರನಾಗಿದ್ದ ಯೆಂಬುವದು ಯೆಲ್ಲರೂ ಕೇಳಿದ್ದೇಇಧೆ. ಈನಾರೊಶಂಕರನ ವಿಷಯವಾಗಿ ಫಾರಿಸ್ಟಸಾಹೇಬನು, ' ಗಾವರ್ಮೆಂಟ್ ಶಿಲೆಕ್ಷ್ಸನ್' ನಲ್ಲಿ ಈರೀತಿ ಬರದು ಇರುತಾನೆ:—

"In the reign of Shahu Raja of Satara, the first of the family (Raja Bahadar family) whose name was

ಯನು ಝಾನ್ಸೀ ಕಾಯಂ ಸುಬೇದಾರನಾದಮೇಲೆ ಬುಂದೇಲಖಂಡದ ರಾಜ್ಯದ ಭದ್ರತೆಗೋಸ್ಕರ ವಳ್ಳೀ ಸೈನ್ಯವನ್ನು, ಇಟ್ಟಿದ್ದಲ್ಲದೆ, ಆಕಾಲದಲ್ಲಿ ಪುಂಡುತನ ಮಾಡುತ್ತಾಯಿದ್ದ ಗೋಸಾವಿಯ ಅನಂತ ಆಭಾನ, ಆಖಾತ, ಮತ್ತು ನಾಗ, ಈ ಹೆಸರುಗಳುಳ್ಳ ನಾಲ್ಕು ತುಕಡಿ ಜನಗಳನ್ನು, ತನ್ನ ಅಧೀನದಲ್ಲಿ ಇಟ್ಟುಕೊಂಡನು.

ಆ ಒಂದೊಂದು ತುಕಡೀಯಲ್ಲಿ, ಒಂದೊಂದು ಸಾವಿರ ಜನರು ಇದ್ದರು. ಒಬ್ಬೊಬ್ಬ ಗೋಸಾವಿಗೆ, ತಿಂಗಳು ಮಂದರ ನಾಲ್ಕು ರೂಪಾಯಿನಂತೆ ಸಂಬಳ ನೇಮಕ ಮಾಡಿ, ಅವರು ಯುದ್ಧಕಾಲದಲ್ಲಿ ತನಗೆ ಸಹಾಯ ಮಾಡಬೇಕು, ಯುದ್ಧದಲ್ಲಿ ಸಿಕ್ಕುವ ಲೂಟಿ ದ್ರವ್ಯದಲ್ಲಿ ಅರ್ಧ ಹಿಸ್ಸೇ ತೆಗದುಕೊಳ್ಳಬೇಕು, ಈ ಪ್ರಕಾರ ಕ್ರಮ

---

Naro Shankar Dani (of the sect of Rigvedi Brahman) was nominated by Nana Saheb Peishwa to collect the revenues of Jhansi in Hindustan. He held the office for fourteen years without contributing one rupee to Government, and eventually assumed a Nowbut as a military leader, for which reasons he was recalled to Puna. And on his entry he not only caused his Nowbut to be beaten throughout the city, but came directly to the Peishwa's palace, where he claimed apartments. Having sufficient address to satisfy the Peishwa of his conduct, he was henceforward treated as one of the great military chiefs of the empire, and known by the name of Motiwala from an enormous pearl which he wore."

ಇದರಿಂದ ನಾರೋ ಶಂಕರನು, ನಾನಾಸಾಹೇಬ್ ಪೇಷ್ವೆಯವರ ಕಾಲದಲ್ಲಿ, ಝಾನ್ಸಿ ಸುಬೇದಾರನಾಗಿದ್ದ ಯೆಂಬುವದು ಮಾತ್ರ, ನಿಶ್ಚಯವಾಗುತ್ತೆ. ಆದರೆ, ರಘುನಾಥಹರಿ ಹಿಂದೆ ಇದ್ದ ಸುಬೇದಾರನ ಸರಿಯಾದ ತಿಳುವಳಿಕೆ ಸಿಕ್ಕುವದಿಲ್ಲ.

* ಮುಂದೆ ಕೆಲವು ಕಾಲದಲ್ಲಿ ಝಾನ್ಸೀ ಗೋಸಾವಿಯು ರಘುನಾಥರಾಯನಿಗೆ ಶರಣಾದ್ದರಿಂದ, ಆತನಿಗೆ ವಂಶ ಪಾರಂಪರ್ಯವಾಗಿ ಹತ್ತು ಹನ್ನೆರಡು ಸಾವಿರ ರೂಪಾಯಿಗಳ ಜಹಗೀರಿಯನ್ನು ಕೊಟ್ಟನು. ಅದು ಅದ್ಯಾಪಿ, ಆ ಗೋಸಾವಿ ವಂಶಜರ ಕಡೆಗೆ ನಡೆಯುತ್ತಾ ಇದೆ.

ಇಟ್ಟಿದ್ದನು. ಬಿಚ್ಚುಕತ್ತಿ, ಬಾಣ, ತೋಟೆದಾರರ ಬಂದೂಕು, ಅಂಬೂ, ಬಿಲ್ಲು, ಮತ್ತು ಬಂಟೀಮೇಲಿನ ಜಂಜಾಳ ಸಹ, ಆ ಗೋಸಾವಿಗಳ, ಆಯುಧಗಳಾಗಿದ್ದವು. ಈ ಗೋಸಾವಿ ಸೈನ್ಯ ಸಹಾಯದಿಂದಲೇ ರಘುನಾಥರಾಯನು, ಬುಂದೇಲ ಖಂಡದಲ್ಲಿ ಮೂವತ್ತು ಮೂವತ್ತೆರಡು ಸಂಸ್ಥಾನೀಕರನ್ನ ಅಧೀನರನ್ನಾಗಿ ತಂದುಕೊಂಡಿದ್ದನು. ಆ ಸರ್ವ ಸಂಸ್ಥಾನೀಕರು, ಪೇಷ್ವೆಯವರ ಪ್ರಾಂತ್ಯದಲ್ಲಿ ಲೂಟಿಮುಂತಾದ್ದು ಮಾಡುವ ಪನ್ನ ಬಿಟ್ಟಿದ್ದಲ್ಲದೆ, ತಮ್ಮತಮ್ಮಲ್ಲಿ ವ್ಯಾಜ್ಯಹುಟ್ಟಿದ ವೇಳಗಳಲ್ಲೆಲ್ಲಾ, ಝಾನ್ಸೀ ಶುಬೇದಾರ್ ರಘುನಾಥರಾಯನನ್ನ, ಸಹಾಯಕ್ಕೆ ಕರಸಿಕೊಂಡು ಆತನ ಪ್ರೀತ್ಯರ್ಥವಾಗಿ, ಐದು, ಆರುಲಕ್ಷರೂಪಾಯಿಗಳನ್ನು ಮರ್ಯಾದೆ ಕೊಡುತ್ತಿದ್ದರು. ಬುಂದೇಲ್ ಖಂಡದ ಮಧ್ಯದಲ್ಲಿ ಮರಾಟೆ ಅಧಿಕಾರವನ್ನ ಪೂರ್ಣವಾಗಿ ಸ್ಥಾಪನೆಮಾಡಲು, ರಘುನಾಥರಾಯನಿಗೆ, ಆತನ ಬಂಧುಗಳಾಗಿದ್ದ, ಲಕ್ಷ್ಮಣರಾವ್ ಮತ್ತು ಶಿವರಾಮಭಾವು, ಇವರ ಸಹಾಯ ಚನ್ನಾಗಿ ಆಯಿತು.

ರಘುನಾಥಹರಿ ನೇವಾಳಕರ್‌ನ ಮೂಲಪುರುಷ ಬಂದನೇ ರಘುನಾಥರಾವ್ ಯೆಂಬುವನು ಕೊಂಕಣಪ್ರಾಂತ್ಯದಲ್ಲಿ ಮೌಜೆ ಕೋಟ್‌ಕಡೆ, ಪಾವಸ ಸುಭಾ ರಾಜಪುರದಲ್ಲಿ, ಅಷ್ಟಾಧಿಕಾರಿಯಾಗಿದ್ದನು. ಅವನು ಖಾನ ದೇಶದ ಮಧ್ಯದಲ್ಲಿ, ಧೂಳ್ಯ ಸಮೀಪ ಮೌಜೆ ಬಹದರ್ ಪುರಯೆಂಬ ಗ್ರಾಮಕ್ಕೆ ಬಂದು ವಾಸವಾಗಿದ್ದನು. ಆತನಿಗೆ, ಮಂದನೇಖಂಡೇರಾವ್, ಯೆರಡನೇ ದಾಮೋದರಪಂತ' ಯೆಂಬ ಹೆಸರುಳ್ಳ ಇಬ್ಬರು ಪುತ್ರರಿದ್ದರು. ಆ ಇಬ್ಬರು ಮಕ್ಕಳುಸಹಿತ, ರಘುನಾಥರಾಯನು ಬಡತನ ಸ್ಥಿತಿಯಲ್ಲಿ, ತನ್ನಕಾಲಕ್ರಮಣಮಾಡಿ ಕೊಳ್ಳುತ್ತಾ ಇದ್ದನು. ಮುಂದೆ, ಆ ಇಬ್ಬರು ಮಕ್ಕಳಿಗೆ ಸಂತತಿಯಾಯಿತು. ಅವರುಪಳ್ಳೀ ಭಾಗ್ಯಶಾಲಿಗಳಾಗಿ ಜನಿಸಿದಕಾರಣ, ಅನಾಮಧೇಯವಾದ ಬಹದುರ ಪುರಯೆಂಬ ಕ್ಷಾಮಕೊಂಪೆ ಗ್ರಾಮದಲ್ಲಿ ವಾಸವಾಗಿದ್ದ, ನೇವಾಳಕರ್ ಮನೆತನವೂ ವಳ್ಳಪ್ರಕಾಶಕ್ಕೆಬಂತು. ದಾಮೋದರಪಂತನಿಗೆ ರಾಘೋಪಂತ, ಸದಾಶಿವಪಂತ, ಮತ್ತು ಹರಿಪಂತಯೆಂಬ ಮೂರುಜನ ಪುತ್ರರುಇದ್ದರು. ಇವರು ಬಹಳಚುರಕು (ಹುಷಾರ್) ಮತ್ತು ಪರಾಕ್ರಮಿಗಳಾಗಿದ್ದು, ಶ್ರೀಮಂತ ಪೇಷ್ವೇ ಸರಕಾರದಕಡೇ ಮತ್ತು ಮಾಳವಾದೇಶದ, ಶುಬೇದಾರ್ ದೊಡ್ಡ ಮಲ್ಹಾರಿರಾವ್ ಹೋಳಕರ್ ಕಡೆ ಹೋಗಿ ತಮ್ಮ ಶೌರ್ಯಾದಿ ಗುಣಗಳ ಯೋಗದಿಂದ, ಅವರ ಪ್ರೇಮ ಸಂಪಾದನೇ ಮಾಡಿ, ಅವರಿಂದ ಖಾನ ದೇಶದಲ್ಲಿ, ಚೋರವಡಪರಗಣಾವ, ವೃತ್ರಾಣದಲ್ಲಿ ಮತ್ತು ಗುಜರಾತಿನಲ್ಲಿ, ಅಹಮುದಾಬಾದ್ ಮುಂತಾದ ಪ್ರಾಂತ್ಯದಲ್ಲಿ ಮಾಮಲೇ ಉದ್ಯೋಗ ಮಾಡಿ, ಬಳ್ಳೇ ಐಶ್ವರ್ಯವನ್ನೂ, ಮರ್ಯಾದೆಯನ್ನು ಸಂಪಾದಿಸಿಕೊಂಡರು. ಮುಂದೆ ಅವರಿಗೆ ಹೋಳಕರನ ಸೈನ್ಯದಲ್ಲಿ, ಸರಬಾರಿ ಕೆಲಸವೂ, ಶಿಕ್ಕಿತು. ತಮ್ಮ ಸ್ವ ಬಲದಿಂದ ಅನೇಕ ಪರಾಕ್ರಮ ಕೆಲಸಗಳನ್ನು ಮಾಡಿ ಖಾನ ದೇಶದಲ್ಲಿ, ಸಾರೊಳೆ ಮುಂತಾದ, ಊರುಗಳನ್ನ ಜಹಗೀರಿ ಸಂಪಾದಿಸಿಕೊಂ

ಡರು. ರಾಘೋಪಂತನು ಯುದ್ಧದಲ್ಲಿ ಮೃತಪಟ್ಟನು. ಆತನ ಬಂಧು ಸದಾಶಿವ
ಪಂತ, ಮತ್ತು ಹರಿಪಂತನು ಮಗ ಲಕ್ಷ್ಮಣರಾವ್, ಸಹ ಪಾರೋಳ್ಯದಲ್ಲಿದ್ದು ತಮ್ಮ
ಜಹಗೀರಿಯನ್ನು ಭದ್ರಪಡಿಸಿಕೊಳ್ಳುತ್ತಾ ಇದ್ದರು ಹರಿಪಂತನು ಪೂನಾದಲ್ಲಿ, ಪೇಷ್ವೇ
ಸರ್ಕಾರದವರ ಹತ್ತರ ಇದ್ದು ಫೌಜಿನ ಸರದಾರೀ ಕೆಲಸವನ್ನು ಮಾಡುತ್ತಾ ಇದ್ದನು.
ಆ ಹರಿಪಂತನ ಪುತ್ರ ರಘುನಾಥರಾಯನು, ಶ್ರೀಮಂತನ ಸಮೀಪ ಇದ್ದದ್ದರಿಂದ,
ಅವನ ಗುಣಗಳು ಶ್ರೀಮಂತನ ದೃಷ್ಟಿಗೆ ಬಿದ್ದು, ಅವನ ಪ್ರೀತಿಗೆ ಪಾತ್ರನಾಗಿದ್ದನು.
ಆದ್ದರಿಂದ ಝಾಂಸಿಯಲ್ಲಿ, ಗೋಸಾವಿಗಳ ದಂಗೇ ಸಂಗತಿ ಪುನೇಗೆ ವರ್ತಮಾನವಾದ
ತತ್‌ಕ್ಷಣ, ರಘುನಾಥರಾಯನ ಯೋಗ್ಯತಾ ಸ್ಮರಣೆಗೆ ಬಂದು ಆತನನ್ನು ಕಳುಹಿಸಿ
ದನು. ರಘುನಾಥರಾಯನು ಝಾಂಸಿಗೆ ಹೋಗಿ ತನ್ನ ಪರಾಕ್ರಮವನ್ನ ಯಾವರೀತಿ
ಯಲ್ಲಿ ವ್ಯಕ್ತಪಡಿಸಿದನೆಂಬುವದು, ಮತ್ತು ಝಾಂಸೀ ಶುಭೇದಾರಿ ಯಾವರೀತಿ ಸಂಪಾ
ದನೆ ಮಾಡಿದನೆಂಬುವದು ಸಹಾ, ಮೇಲೆ ವಿವರವಾಗಿ ಹೇಳಲ್ಪಟ್ಟಿದೆ. ಅವನು
ನಾಲ್ವತ್ತು ವರುಷಗಳ ಪರಿಯಂತರ ಝಾಂಸಿಯಲ್ಲಿದ್ದು ಪೇಷ್ವೆಯವರ ಶುಭೇದಾರೀ
ಕೆಲಸವನ್ನ ಉತ್ತಮ ರೀತಿಯಲ್ಲಿ ನೆರವೇರಿಸಿ, ಸರ್ವದೇಶವನ್ನೂ ಒಳ್ಳೇ ಸ್ಥಿತಿಗೆ (ಬಂ
ದೋಬಸ್ತಿಗೆ) ತಂದದ್ದೂ ಅಲ್ಲದೆ ಮಹಾರಾಷ್ಟ್ರ ರಾಜ್ಯದ ಧ್ವಜವನ್ನ ಬುಂದೇಲ್
ಖಂಡದ, ಮಧ್ಯದಲ್ಲಿ, ಪ್ರಕಾಶಮಾನವಾಗಿ ಸ್ಥಾಪಿಸಿ, ಮಹಾರಾಷ್ಟ್ರ ಜನಗಳ ಶರೀರ
ದಲ್ಲಿ ಸ್ವಧರ್ಮಾಭಿಮಾನ, ತೇಜಸ್ಸು, ಪರಾಕ್ರಮ, ಮುಂತಾದ ಗುಣಗಳು ಯಾವ ರೀತಿ
ಯಲ್ಲಿ, ವಾಸಮಾಡುತ್ತಿದ್ದವು ಎಂಬದನ್ನ ಜನಗಳಿಗೆ, ಸ್ಪಷ್ಟವಾಗಿ ತೋರಿಸಿದನು.
ಇಂಥಾ ಪ್ರತಾಪ ಚೂಡಾಮಣಿಯ ವಂಶದಲ್ಲಿ, ಪುರುಷ ಮಾತ್ರರಲ್ಲದೆ, ತಮ್ಮ ಪ್ರತಾಪ
ಕಿರಣಗಳಿಂದ ಅಖಿಳ ಜಗತ್ತನ್ನೇ ಕಣ್ಣು ಮುಚ್ಚಿಸುವಂಥಾ, ಸ್ತ್ರೀಯರು ಸಹ ಉತ್ಪ
ನ್ನರಾಗುವದು ಆಶ್ಚರ್ಯವೇನು ? ತಾತ್ಪರ್ಯವೇನಂದರೆ, ಝಾಂಸಿಶೂರ, ಶುಬೇದಾರ್
ರಘುನಾಥರಾವ್‌ಹರಿ ನೇವಾಳಕರ್‌ನು, ನಮ್ಮ ಚರಿತ್ರನಾಯಕಳಾದ, ಮಹಾರಾಣೀ
ಲಕ್ಷ್ಮೀಬಾಯಿ ಸಾಹೇಬಳ ಭರ್ತೃವಂಶದ, ಮೂಲಪುರುಷನಾಗಿದ್ದಾನೆ, ಯಂಬುದನ್ನು
ಹೇಳಬೇಕಾದ್ದಿಲ್ಲ.

ರಘುನಾಥರಾಯನು ಸಾಮಾನ್ಯ ಪುರುಷನಾಗಿರಲಿಲ್ಲ. ಅವನು ಝಾಂಸಿ ಶುಬೇ
ದಾರೀಮಾಡಿ ತನ್ನ ಸ್ವಪ್ರಯೋಜನಪೂರ್ತಾ ನೋಡಿ ಕೊಳ್ಳಲಿಲ್ಲ. ಸ್ವತಃ ಪಾರಲೌಕಿಕ
ಸುಖವನ್ನ ಅನುಭವಿಸಲು, ಅಲೌಕಿಕ ಪುಣ್ಯ ಸಂಪಾದನೆಯನ್ನು ಮಾಡಿ, ಇಹಲೋಕ
ದಲ್ಲಿ ತನ್ನ ಹೆಸರು ಚಿರಕಾಲ ಇರಬೇಕೆಂಬ ಪ್ರಯತ್ನವನ್ನು ಮಾಡಿದನು. ಅವನು ತನಗೆ
ವೃದ್ಧದಶಾ, ಬಂತೆಂದು ತಿಳಿದು, ತನ್ನ ಕನಿಷ್ಟ ಬಂಧುವಾದ, ಶಿವರಾವ್ ಭಾವೂಗೆ ಝಾಂ
ಸೀ ಶುಬೇದಾರಿಕೊಟ್ಟು, ವುಳಿದ ತನ್ನ ಆಯುಷ್ಯವನ್ನ, ಈಶ್ವರ ಚಿಂತನೆಯಲ್ಲಿ, ಕಳೆಯು
ವಗೋಸ್ಕರ, ಕಾಶೀಕ್ಷೇತ್ರಕ್ಕೆ ಗಮನಮಾಡಿದನು. 1776 ನೇ ಇಸವಿಯಲ್ಲಿ, ಆತನು

ಆ ಮಹಾಕ್ಷೇತ್ರದಲ್ಲಿ ಸ್ವರ್ಗಸ್ಥನಾದನು. ರಘುನಾಥರಾಯನ, ವೈಭವ, ಸಂಪನ್ನತೆಯನ್ನೂ ಮತ್ತು ವೈರಾಗ್ಯಶೀಲತೆಯನ್ನು, ಅವಲೋಕನಮಾಡಿದರೆ 'ಯಾವಪ್ರಪಂಚ ಸಾಧು, ಪರಮಾರ್ಥದ ಲಾಭವನ್ನು, ಸಂಪಾದಿಸಿ ಕೊಳ್ಳುತಾನೋ, ಆ ನರನು ಧನ್ಯನು. ಯೆಂಬ ಸಾಧುವಚನವನ್ನನುಸರಿಸಿ, ಯಾರೂ ಆತನಿಗೆ, ಧನ್ಯನೆಂದು ಅನ್ನದೇ, ಇರಲಿಕ್ಕಿಲ್ಲಾ.

ಇದು ಹಾಂಗೆ ಇರಲಿ. ರಘುನಾಥರಾಯನ ಮುಂಚೆ ಶಿವರಾವ್ ಭಾವು, ಝಾನ್ಸೀ ಶುಬೇದಾರನಾಗಿದ್ದನೆಂತ ಮೇಲೆಯೇ ಹೇಳಲ್ಪಟ್ಟಿದೆಯಷ್ಟೆ. ಆ ಶಿವರಾವ್ ಭಾವೂಕೂಡ, ಬಹಳ ಶೂರನಾಗಿದ್ದನು. ಆ ಕಾಲದಲ್ಲಿ, ಯೆರಡನೇ ಬಾಜೀರಾವ್ ಪೇಷ್ವೆಯು, ಪೂನೇ ಗದ್ದಿಗೇಮೇಲೆ, ವಿರಾಜಮಾನನಾಗಿ ಇದದ್ದರಿಂದ, ದರ್ಬಾರಿನ, ಯಲ್ಲಾ ಕಾರಭಾರಗಳೂ ಗಲಭೆಯಾಗಿ ಇತ್ತು. ಸರ್ವ ದೇಶದಮೇಲಿನ ವಿಚಾರಣೆ ಕಮ್ಮಿಯಾದ್ದರಿಂದ, ಪೇಷ್ವೇ ಸರಕಾರಕ್ಕೆ ಕಪ್ಪಕೊಟ್ಟುಕೊಂಡು ಅವರ ಹೆಸರಿನಲ್ಲಿ ಅಲ್ಲಲ್ಲಿ ರಾಜ ಕಾರಭಾರಮಾಡತಕ್ಕಂಥ ಶುಬೇದಾರರುಗಳೂ ಸ್ವತಂತ್ರರಾದರು. ಝಾನ್ಸೀ ಶುಬೇದಾರಿಯನ್ನ ಪೇಷ್ವೆಯವರು, ರಘುನಾಥರಾಯನಿಗೆ, ವಂಶಪಾರಂಪರ್ಯವಾಗಿ ಕೊಟ್ಟಿದ್ದಾಗ್ಯೂ ಅವನು ಪೂನೇ ಸರ್ಕಾರಕ್ಕೆ ಪ್ರತಿವರುಷವೂ ಆದಾಯ ವೆಚ್ಚದ ಯಾದಿಯನ್ನು ಕಳುಹಿಸತಕ್ಕದ್ದಾಗಿ ಇತ್ತು. ಪರಂತು, ಬಾಜೀರಾವ್ ಆಡಳಿತದಲ್ಲಿ ಅನಾಯಕತ್ವವಾದ್ದರಿಂದ, ಶಿವರಾವ್‌ಭಾವು, ಆದಾಯ ವೆಚ್ಚದ ಪಟ್ಟಿಯನ್ನ ಕಳುಹಿಸುವದನ್ನ ನಿಲ್ಲಿಸಿಬಿಟ್ಟನು. ಶಿವರಾವ್‌ಭಾವು ಬುಂದೇಲ್ ಖಂಡದಲ್ಲೆಲ್ಲಾ ಅಗ್ರೇಸರನಾಗಿದ್ದ ಕಾರಣ, ಅಲ್ಲಿನ ಸರ್ವ ರಾಜರುಗಳು ಅವನ ಆಜ್ಞೆಯಲ್ಲಿ, ಜಲಪ್ರಾಶನ ಮಾಡುತ್ತಾ ಇದ್ದುದ್ದರಿಂದ, ಬ್ರಿಟಿಷ್ ಸರ್ಕಾರದವರು ಆತನ ಸ್ನೇಹ ಸಂಪಾದಿಸಲು ಉದ್ಯುಕ್ತರಾದರು. ಆ ಕಾಲದಲ್ಲಿ, ಇಂಗ್ಲಿಷ್‌ರಾಜ್ಯದವರ ಪ್ರಾಬಲ್ಯ ವಿಶೇಷವಾಗಿ ಹಿಂದೂಸ್ಥಾನದಲ್ಲಿರಲಿಲ್ಲ. ಆದರೆ, ಪೇಷ್ವೇ ಸರ್ಕಾರದವರ ಸಂಗಡ ಮಾಡಿಕೊಂಡಿದ್ದ ವಸಹಿ ತಹನಾಮೆ ಮೂಲಕ, ಮರಾಟೇ ಸಾಮ್ರಾಜ್ಯದಲ್ಲಿ ಅವರ ಅವಯವದ ತೀಕ್ಷ್ಣಭಾಗವು ಪ್ರವೇಶವಾಗಿತ್ತು. ಶಿಂಧೆ, ಹೋಳಕರ್, ನಾಗಪುರಕರ್ ಭೋಂಸಲೆ, ಮುಂತಾದ ರಣಶೂರ ಮರಾಟೆ ಸರದಾರರ ಸಂಗಡ ಯುಕ್ತಿಯಿಂದ ಝಗಳ ಕೆಣಕಿ, ಅವರ ಜುಟ್ಟಿನ ಶಕ್ತಿಯನ್ನು ಶಳಕೊಳ್ಳುವ ನಿಮಿತ್ತ, ದೊಡ್ಡ ದೊಡ್ಡ ಇಂಗ್ರೇಜಿ ಸೇನಾಪತಿಗಳಾದ ವೆಲಸ್ಲಿ, ಲೇಕ್ ಮುಂತಾದ ಸರದಾರರು ಬಾಹ್ಯತಃ ಪೇಷ್ವೆಯವರ ಪಕ್ಷ ವಹಿಸಿ ಝಗಳ ಮಾಡುತ್ತಾ ಇದ್ದರು. ಲೇಕ್ ಸಾಹೇಬನು ಬುಂದೇಲ ಖಂಡದ ಪರಿಯಂತ ದಂಡೆತ್ತಿ ಹೋದನು. ಪರಂತು, ಅಲ್ಲಿ ಅನೇಕ ರಾಜರುಗಳು ಪೇಷ್ವೆಯವರ ಪಬ್ರಲ ಶುಬೇದಾರನಾದ ಶಿವರಾವ್ ಭಾವೂನ ತೇಜಸ್ಸಿನಲ್ಲಿ ಬಹಳ ಬಲಾಢ್ಯರಾಗಿ ಇದ್ದುದರಿಂದ, ಬ್ರಿಟಿಷ್ ಸರ್ಕಾರದವರು ಅಲ್ಲಿಗೆ ಸುಲಭವಾಗಿ ಪ್ರವೇಶಮಾಡುವ ಆಶಾ ಶುದ್ಧಾಂಗ ಇರಲಿಲ್ಲ. ಆಗ ಲೇಕ್ ಸಾಹೇಬನು ಇಜೆಲ್‌ಖಾರ್ನ ನೆಂಬ, ವಕೀಲನ ಮಧ್ಯಸ್ಥಿಕೇಮೇಲೆ

ಶಿವರಾವ್‌ಭಾವೂ ಮತ್ತು ಬ್ರಿಟಿಷ್ ಸರ್ಕಾರದವರ ನೂತನ ಸ್ನೇಹ ಬೆಳಸತಕ್ಕ ಅವಶ್ಯಕತೆಯನ್ನು ವಿಚಾರಮಾಡಿ, 1803 ನೇ ಯಿಸವಿ ನವಂಬರು ತಾರೀಖು 18 ರಲ್ಲಿ, 'ವಜೀಬ-ವುಲ-ಅರ್ಜ,' ಯೆಂಬ ಸಖ್ಯ ಬೆಳಸತಕ್ಕ ವಂದು ತಹಾನಾಮೆಯನ್ನು ಪಡದುಕೊಂಡನು.

ಈ ಖಲೀತ, ಅಂದರೆ ಸನದಿನ, ಮೂಲಕ ಬುಂದೇಲ್ ಖಂಡದಲ್ಲಿ ಪ್ರಮುಖ ಶುಬೇದಾರ್, ಶಿವರಾವ್‌ಭಾವು ಇಂಗ್ರೇಜಿ ಸರ್ಕಾರಕ್ಕೆ ಅನುಕೂಲನಾದ್ದರಿಂದ, ಅಲ್ಲಿ ಬ್ರಿಟಿಷ್‌ರಾಜ್ಯ ಸತ್ವವನ್ನ ಸ್ಥಾಪನೆ, ಮಾಡುವಕಾರ್ಯದಲ್ಲಿ, ಆತನಿಂದ ಬಹಳ ಉಪಯೋಗವಾಗಿತ್ತು. 1804 ನೇ ಇಸವಿಯಲ್ಲಿ, ಇಂಗ್ರೇಜಿಯವರಕಡೆ ಕ್ಯಾಪ್ಟನ್ ಬೇಲಿಸ್ ಸಾಹೇಬನೆಂಬುವನು, ಕೆಲವು ಸೈನ್ಯಸಮೇತನಾಗಿ, ಬುಂದೇಲ್ ಖಂಡಕ್ಕೆ ಬಂದನು. ಅವನಿಗೆ, ಭಾವೂನೂ ರಾಜನೀಯ ಸಮ್ಮಂಧವಾದ ಬಳ್ಳೇ ಸಲಹಾ ಕೊಟ್ಟಿದ್ದರ ವಿಷಯವಾಗಿ ಆ ಕಾಲದಲ್ಲಿ, 'ಕಮ್ಯಾಂಡರ್-ಇನ್-ಚೀಫ್', ಆಗಿದ್ದ ಲೇಕ್ ಸಾಹೇಬನಿಗೆ, ಬಹಳ ಶ್ಲಾಘ್ಯವಾಗಿ ಕಂಡಿತು ಯೆಂಬುವದು, ಕ್ಯಾಪ್ಟನ್ ಬೇಲಿಸ್‌ನು, ಗೌರ್‍ನರ್ ಜನರಲ್‌ರವರ, ಅಪ್ಪಣೇಮೇರೆಗೆ 1804 ನೇ ಇಸವಿ, ಫೆಬ್ರುವರೀ ತಾರೀಖು 6 ನೇ ದಿವಸ ಆದ, ವಂಭತ್ತು ಕಲಂವುಳ್ಳ, ತಹಾನಾಮೆಯಿಂದ ತೋರಿಬರುತ್ತದೆ. ಅದರ ಸಾರಾಂಶವೇನಂದರೆ:—“ಭಾವೂ ಮತ್ತು ಬ್ರಿಟಿಷ್ ಸರ್ಕಾರದವರು ಪರಸ್ಪರ ಮಿತ್ರತ್ವವನ್ನು ಸ್ವೀಕರಿಸಿದ್ದಾರೆ. ಅವಶ್ಯಯುಕ್ತ, ಆಪತ್ತುಕಾಲಗಳಲ್ಲಿ ವೊಬ್ಬರಿಗೊಬ್ಬರು ಸಹಾಯಮಾಡಬೇಕು. ಶಿವರಾಂಭಾವು ಬ್ರಿಟಿಷ್ ಸರ್ಕಾರದವರ ಅನುಮತಿಇಲ್ಲದೆ, ಇಂಗ್ಲೀಷ್ ಅಥವಾ ಯುರೋಪ್ ಖಂಡದ, ಯಾವರಾಷ್ಟ್ರದ, ಅಥವ ಜಾತಿಯ ಮನುಷ್ಯನನ್ನು, ತನ್ನನೌಕರೀಗೆ ಶೇರಿಸಕೂಡದು. ಪೂರ್ವದಂತೆ, ಪೇಷ್ವೇ ಸರ್ಕಾರದವರಿಗೆ, ಮರ್ಯಾದೆಯನ್ನು ಸಲ್ಲಿಸತಕ್ಕದ್ದು, ಯಿಂತವಗೈರೆ.

ಈ ತಹಾನಾಮೇ ಅನುಸರಿಸಿ, ಶಿವರಾಂಭಾವು ಬ್ರಿಟಿಷ್‌ಸರ್ಕಾರದವರ ಸಂಗಡ, ಸ್ನೇಹದಲ್ಲಿದ್ದುಕೊಂಡು ಅವರಿಗೆ ಆಗಾಗ್ಯೆ ವುತ್ತಮ ಸಹಾಯ ಮಾಡಿದ್ದಾನೆಂಬದನ್ನು ಹೇಳಬೇಕಾದ್ದಿಲ್ಲ. ಹ್ಯಾಂಗೆ ಅಂದರೆ, 'ಚಿತ್ತೆವಾಚಿ ಕ್ರಿಯಾಯಾಂಚ ಮಹತಾ ಮೇಕ ರೂಪತಾ,' ಈರೀತಿಯಾಗಿ ಸಜ್ಜನರು ನಡಕೊಳ್ಳತಕ್ಕಂಥಾ ನ್ಯಾಯವು ಭಾವೂನಲ್ಲಿ, ಸಂಪೂರ್ಣವಾಗಿತ್ತು. ಈತನ ಸತ್ಯತೆಯನ್ನು ಕುರಿತು ಬ್ರಿಟಿಷ್ ಸರಕಾರದವರ ಹತ್ತರವೇ, ಸರಿಯಾದ, ಸಾಕ್ಷತ್ವಇದೆ. 1804 ನೇ ಇಸ್ವಿ ಏಪ್ರೇಲ್ ತಾರೀಖು 12 ರಲ್ಲಿ, ಆಕಾಲದ ಗೌರ್‍ನರ್ ಜನರಲ್, ಲಾರ್ಡ್ ವೆಲಿಸ್ಲಿ ಮತ್ತು ಅವರ ಕೌನ್ಸಿಲ್ಲಿನ, ಜಿ. ಹೆಚ್. ಬಾಲೊರ್ಲೀ ಮತ್ತು ಜೇ. ಅಡನೆ, ಇವರುಗಳು ವಿಲಾಯತಿಯಲ್ಲಿದ್ದ, ಕೋರ್ಟ್ ಆಫ್ ಡೈರೆಕ್ಟರ್‌ರ, ಗುಪ್ತ ಕಮಿಟೀಗೆ ಮಾಡಿರತಕ್ಕ ರಿಪೋರ್ಟನಲ್ಲಿ ಶಿವರಾಂಭಾವುಮಾಡಿದ, ಸಹಾಯವನ್ನು ಕುರಿತು, ಸ್ಪಷ್ಟವಾಗಿ ಬರದಿರುತ್ತಾರೆ.* ಅದಲ್ಲದೆ ಬ್ರಿಟಿಷ

* “Soon after Captain Ballies' arrival in Bundelcund, he received proposals from the Subadar of

ಸರ್ಕಾರದವರಿಗೆ ಸದಾ ಸ್ಮರಿಸತಕ್ಕಂಥಾ ವುಪಕಾರವನ್ನು, ಶಿವರಾಂಬಾವು ಮಾಡಿರುತ್ತಾನೆಂಬುವದು ವ್ಯಕ್ತವಾಗುತ್ತೆ. ಇದಕ್ಕೋಸ್ಕರ, 'ನಹಿಕೃತ ಮುಪಕಾರಂ ಸಾಧವೋ ವಿಸ್ಮರಂತಿ' ಯೆಂಬ ನ್ಯಾಯವನ್ನು ಅನುಸರಿಸಿ, ಲಾರ್ಡ್ ವೆಲೆಸ್ಲಿ ಮತ್ತು ಲಾರ್ಡ್ ಲೇಕ್ ಸಾಹೇಬರು ಬಹಳ ಕೃತಜ್ಞತೆಯಿಂದ, ಅಭಿನಂದನಮಾಡಿರುತ್ತಾರೆ. ಕಾರಣವೇನಂದರೆ, ಭಾವೂನಮಿತ್ರತ್ವದಿಂದ ಬುಂದೇಲ್‌ಖಂಡದಲ್ಲಿ ಇರತಕ್ಕ ಸ್ವರಾಜರುಗಳೂ ಬ್ರಿಟಿಷ್ ಸರ್ಕಾರಕ್ಕೆ, ತುಂಬಾ ಅನುಕೂಲರಾದರು. ಇದು ಮಹಾತ್ಮೆವುಳ್ಳದ್ದಾಗಿದೆ.

ಶಿವರಾಂಭಾವು ತನ್ನ ಬಂಧುವಾದ ರಘುನಾಥರಾಯನ ಹಾಗೆಯೇ, ಝಾಁಸಿಸಂಸ್ಥಾನದ ರಾಜ್ಯಕಾರಭಾರವನ್ನು ಸುಮಾರು 8 ವರುಷಮಾಡಿ, ಒಳ್ಳೇ ಕೀರ್ತಿಯನ್ನು ಸಂಪಾದಿಸಿದನು. 1814 ನೇ ಇಸವಿಯಲ್ಲಿ ಆತನಿಗೆ ಅಶಕ್ತಿಯಾಯಿತು. ಆಗ ತನಗೆ

---

Jhansi, who holds the fort of that name and its dependent districts under the nominal authority of the Peishwa, to connect his interests with those of the British Government, to which his Excellency the Commander-in-chief authorized Captain Ballies to accede.

On the 4th of January 1804, the Subadar of Jhansi arrived in the British camp.

Regular engagements have been concluded with that chief by Captain Ballies, and have received the approbation of the Commander-in-chief, and the Governor-General-in-Council.

The troops of the Subadar of Jhansi have since been employed in co-operating in the defence of Bundelcund and the adjoining districts in the neighbourhood of Jhansi. The example of the Subadar has induced several other chiefs in that quarter to please themselves under the protection of the British Government."—*Despatch of the Governor-General-in-Council to the secret Committee*, 12*th April* 1804, *Vol.* 5, *p.* 92.

ಪಾಶಿಯಾಗತಕ್ಕ, ಆಶೆಯಿಲ್ಲವೆಂತ ತಿಳಿದು ತನ್ನ ಮಮ್ಮಗ, ರಾಮಚಂದ್ರರಾಯನಿಗೆ, ಝಾನ್ಸೀ ಶುಬೇದಾರಿ ಕೊಟ್ಟು ರಾಜ್ಯ ವ್ಯವಸ್ಥೆಯನ್ನ ತನಗೆ ವಿಶ್ವಾಸಕ್ಕೆ ಪಾತ್ರರಾದ ಜನಗಳ ಕಡೆಗೆ ವಹಿಸಿ, ಶ್ರೀ ಕಾಶೀಕ್ಷೇತ್ರ ಬ್ರಹ್ಮಾವರ್ತಕ್ಕೆ ಹೋದನು. ಅಲ್ಲೀ ಅವನು ಗಂಗೆಯಲ್ಲಿ, ಆಸನದಮೇಲೆ ಕೂತುಕೊಂಡು, ಶ್ರೀರಾಮನಾಮವನ್ನು ವುಚ್ಚಾರಣೆಮಾಡುತ್ತಾ ದೇಹ ಬಿಟ್ಟನು! ರಾಜ್ಯಾಧಿಕಾರದ ಯಥೇಷ್ಟ ಉಪಭೋಗವನ್ನು ತೆಗದುಕೊಂಡು, ಅಂತ್ಯಕಾಲದಲ್ಲಿ, ಪರಮೇಶ್ವರನಿಗೆ ಪ್ರೀತಿಯಾಗತಕ್ಕಂಥಾ ಮುಖ್ಯ ಸಾಧನೀಭೂತವಾದ, ಆತನ ನಾಮಸ್ಮರಣೆಯನ್ನು ಉತ್ತಮ ಪ್ರಕಾರದಲ್ಲಿ ಮಾಡುತ್ತಾ ಪರಲೋಕ ಲಾಭವನ್ನು ಪಡೆಯತಕ್ಕಂಥಾ ರಾಜಪುರುಷರು, ಝಾನ್ಸೀ ಶುಬೇದಾರ್ರಲ್ಲಿದ್ದ ಇಬ್ಬರಂತೆ, ಇರತಕ್ಕವರು ಪ್ರಪಂಚದಲ್ಲಿ ಬಹಳ ಕಡಮೆಯಂತ ಧೃಡವಾಗಿ ಹೇಳುವದಕ್ಕೆ ಯೇನೂ ಅಡ್ಡಿಯಿಲ್ಲ.

ಶಿವರಾಂಭಾವೂಗೆ, ಕೃಷ್ಣರಾವ್, ರಘುನಾಥರಾವ್, ಮತ್ತು ಗಂಗಾಧರರಾವ್, ಹೀಂಗೆ ಮೂರು ಜನ ಪುತ್ರರಿದ್ದರು, ಅಪತಿಗಳಾದ ಇಬ್ಬರು ಹೆಣ್ಣುಮಕ್ಕಳೂ ಇದ್ದರು. ಪೈಕಿ ಕೃಷ್ಣರಾವ್ 1811 ನೇ ಇಸವಿಯಲ್ಲಿಯೇ ಕೈಲಾಸವಾಸಿಯಾದ್ದರಿಂದ, ಆತನ ಮಗ ರಾಮಚಂದ್ರರಾವ್, ಗದ್ದಿಗೇಮೇಲೆ ಬಂದನು. ಅವನು ಚಿಕ್ಕವನಾಗಿದ್ದದ್ದರಿಂದ, ಆತನ ಮಾತೋಶ್ರೀ ಸಖೂಬಾಯಿ ಮತ್ತು ಸಂಸ್ಥಾನದ ನೂತನ ದಿವಾನ್, ರಾವ್ ಗೋಪಾಲರಾವ್ ಭಾವು ಸಹ, ಸಂಸ್ಥಾನದ ಆಡಳತವನ್ನ ನೋಡುತ್ತಾ ಇದ್ದರು. ಆ ಕಾಲದಲ್ಲಿ ಪುಣ್ಯಹೀನರಾದ ಪೇಷ್ವೇ ಸರ್ಕಾರದವರು ಅವಿವೇಕದ ಶಿಖರಕ್ಕೆ ಸೇರಿದ್ದದ್ದರಿಂದ ಪೇಷ್ವೆಯವರ ವಿಶಿಷ್ಟ ಸತ್ವವೂ, ಬ್ರಿಟಿಷ್ ಸರ್ಕಾರದವರ ಕೈವಶವಾಗುತ್ತಾ ಇತ್ತು. * 1817 ನೇ ಇಸವಿ ಜೂನ್ ತಾರೀಖು 13ರಲ್ಲಿ ಪೇಷ್ವೇ

---

* 1802 ನೇ ಇಸವಿಯಲ್ಲಿ, ವಸಯಿ ಮೊಕ್ಕಾಂನಲ್ಲಿ, ಇಂಗ್ರೀಜಿಯವರಿಗೂ ಮತ್ತು ಶ್ರೀಮಂತ ಬಾಜೀರಾವ್ ಪೇಷ್ವೆಯವರಿಗೂ ನಡವ ತಹಾದಲ್ಲಿ " ಯಾವಚ್ಚಂದ್ರ ದಿವಾಕರೌ,' ನಡೆಸುತಕ್ಕದ್ದು ಯೆಂಬ ವಚನ ವಿದ್ದಾಗ್ಯೂ, ಇಂಗ್ರೀಜಿಯವರು ಅದನ್ನು ಮುರಿದು ಹಾಕಿಬಿಟ್ಟು, ಪೇಷ್ವೆಯವರ ರಾಜ್ಯವನ್ನ ಕೈವಶಮಾಡಿಕೊಂಡಿದ್ದನ್ನ ನೋಡಿ, ಒಬ್ಬ ಇಂಗ್ರೀಜಿ ಇತಿಹಾಸಕಾರಕನು ಹೇಳುವದೇನಂದರೆ :—

"The treaty was to last "while sun and moon endureth." The day was soon to come when these eternal vows were to be pooh-poohed as mere dead flowers of oriental rhetoric. But the original of the reaty from first to last stands in the handwriting of

ಸರ್ಕಾರದ ಅನುಮತಿಯಿಂದ ಅವರ ಕಡೆಯು ವಕೀಲ್, ಮೋರದೀಕ್ಷಿತ, ಮತ್ತು ಬಾಳಾಜಿ ಲಕ್ಷ್ಮಣ ಯೆಂಬುವರು, ಬೇಟೂಯೆಂಬ ಸ್ಥಳದಲ್ಲಿ, ಎಲ್ಫಿನ್ಸ್ಟನ್ ಸಾಹೇಬನ ಬಂಗಲೆಯಲ್ಲಿ ಮಾಡಿದ 13 ಕಲಂವುಳ್ಳ ತಹನಾಮೆಯಿಂದ ಬುಂದೇಲ್ ಖಂಡದ ಮೇಲಿನ ಸರ್ವ ಸ್ವಾಮಿತ್ವವೂ, ಬ್ರಿಟಿಷ್ ಸರ್ಕಾರದವರಿಗೆ ಬಂತು. † ಅದರಿಂದ, ಬ್ರಿಟಿಷ್ ಸರ್ಕಾರದವರು ತಮ್ಮ ಸ್ವಾಮಿತ್ವದ ಹಕ್ಕನ್ನು ಸ್ಥಾಪಿಸಿಕೊಳ್ಳುವಗೋಸ್ಕರ ಝಾಁಸೀ ಶುಬೇದಾರ್ ರಾಮಚಂದ್ರರಾಯನ ಸಂಗಡ, ಹೊಸ ತಹನಾಮೆ ಮಾಡಿಕೊಳ್ಳಬೇಕಾಯಿತು. ಆ ಪ್ರಕಾರ 1817 ನೇ ಇಸವಿ ನವಂಬರು ತಾರೀಖು 17 ರಲ್ಲಿ ಝಾಁಸೀ ಶುಬೇದಾರ್, ರಾವ್ ರಾಮಚಂದ್ರನಕಡೆ, ಗೋಪಾಲರಾವ್ ಭಾವು, ಬ್ರಿಟಿಷ್ ಸರ್ಕಾರದವರ ಕಡೆ, ಪೊಲಿಟಿಕಲ್ ಸೂಪರಿಂಟೆಂಡೆಂಟ್, ಜಾರ್ಜ ವಾಹು ಚೆಪ', ಇವರ ಮಧ್ಯೆ, ಪಿಪ್ಪರೀ ಮೊಕ್ಕಾಂನಲ್ಲಿ, 14 ಕಲಂವುಳ್ಳ ತಹನಾಮೆ ಆಯಿತು. ‡ ಈ ತಹನಲ್ಲಿ ಬ್ರಿಟಿಷ್ ಸರ್ಕಾರದವರು ಝಾಁಸೀ ಸಂಸ್ಥಾನದ, ರಾವ್ ರಾಮಚಂದ್ರನಿಗೆ ವಂಶಪಾರಂಪರ್ಯವಾಗಿ ಸಂಸ್ಥಾನದ ಹಕ್ಕನ್ನು ನಡಸಿಕೊಡುವದಕ್ಕೆ ಒಪ್ಪಿಕೊಂಡರು. ಅಲ್ಲದೇ, ಝಾಁಸೀ ಸಂಸ್ಥಾನದವರು ಇಂಗ್ರೇಜಿ ಸರ್ಕಾರಕ್ಕೆ ಸತ್ಯದಿಂದ ನಡಕೊಳ್ಳುತ್ತಾ ಬರಬೇಕು ; ಸಮಯಗಳಲ್ಲಿ ಒಬ್ಬರಿಗೊಬ್ಬರು ಸಹಾಯ ಮಾಡಬೇಕು ; ಯೆಂತ ನಿಶ್ಚಯವಾಯಿತು.

---

the Governor-General. Peishwa and Satara have passed away, but these words of his will not pass away!"—*Empire in Asia*, p. 243.

ಮೇಲಿನ ಗೋಷ್ಟಿಯಿಂದ ಇಂಗ್ರೇಜರಿಗೆ ಸ್ವವಚನ ರಕ್ಷಣೆಯ ದಕ್ಷತೆ ಮೊದಲಿನಿಂದಲೂ ಇತ್ತು ಯೆಂಬುವದು ಪ್ರಸಿದ್ಧವಾಗಿದೆ ಯೆಂತ ಕಾಣುತ್ತೆ.

† ಸದರಿ ಕಲಂನಲ್ಲಿ ಈ ಪ್ರಕಾರ ಬರೆದಿದೆ :—

"His Highness Rao Pandit Prudhan Bahadoor hereby cedes to the Honourable East India Company all his rights, interest, or pretentions, feudal, territorial or pecuniary, in the province of Bundelkhand, including Saugor, Jhansi and the lands held by Nana Govindrao, and agrees to relinquish all connection with the chiefs in that quarter."

‡ ಆ ತಹ ಬಹಳ ಮಹತ್ಮೆಯುಳ್ಳದ್ದಾಗಿದೆ. ಪೂರ್ಣಿಕ—ಅ—ಮಧ್ಯದಲ್ಲಿ ಕೊಟ್ಟಿದೆ.

ಶುಬೇದಾರ್ ರಾಮಚಂದ್ರರಾಯನು ಮೇಲಿನ ತಹನಾಮೆ ಅನುಸರಿಸಿ ಬ್ರಿಟಿಷ್ ಸರ್ಕಾರದವರಿಗೆ ಉತ್ಕೃಷ್ಟ ಸಹಾಯಮಾಡಿದನು. ಹ್ಯಾಗಂದರೆ: —1825 ನೇ ಇಸವಿಯಲ್ಲಿ ಲಾರ್ಡ್ ಕೊಂಬರ್ ಮಿಯರ್‌ನು ಭರತಪುರವನ್ನು ಮುತ್ತಿಗೆ ಹಾಕಿ ತೆಗೆದು ಕೊಂಡನು. ಆ ಕಾಲದಲ್ಲಿ ಮಧ್ಯ ಹಿಂದುಸ್ಥಾನದಲ್ಲಿ, ಪಿಂಡಾರೆವಗೈರೆ ದಂಗೇಖೋರ ಜನಗಳು ಪುಂಡೆದ್ದು ವಿಪರೀತ ಪ್ರಳಯಮಾಡಿ ಬಿಟ್ಟಿದ್ದರು. ಅದರಲ್ಲಿ ಝೂಲವಾಣ ಸಂಸ್ಥಾನದ ಗದ್ದಿಗೆಯ ಹಕ್ಕುದಾರನೆಂತ ಹೇಳಿಕೊಳ್ಳುತ್ತಿದ್ದ, ನಾನಾ ಪಂಡಿತನೆಂಬ, ದಂಗೇಖೋರನು ಸೈನ್ಯಸೇರಿಸಿಕೊಂಡು ಬಹಳವುನ್ಮತ್ತನಾಗಿದ್ದನು. ಅವನು ಇಂಗ್ರೇಜಿಯವರ ಸಂಗಡ, ಅತಿದ್ವೇಷ ಬೆಳಸಿ, ಅವರ ಸ್ವಾಧೀನದಲ್ಲಿದ್ದ ಕೆಲವುಪ್ರಾಂತ್ಯಗಳನ್ನು ಕಿತ್ತುಕೊಂಡಿದ್ದಲ್ಲದೆ, ಕಾಲ್ಪೀಷಹರಿನಮೇಲೆ ಬಿದ್ದು ಜಯಿಸಿತೆಗೆದುಕೊಂಡನು. ಅದನ್ನುನೋಡಿ, ಇಂಗ್ರೇಜಿ ಸರ್ಕಾರದವರು ಬಹಳ ಚಿಂತಾಗ್ರಸ್ತರಾಗಿದ್ದರು. ಆಗ, ಝಾಂಸಿ ಪೊಲಿಟಿಕಲ್ ಯೇಜಂಟನಾಗಿದ್ದ, ಅರ್ನಸ್ಲೀ ಸಾಹೇಬನು ಝಾಂಸೀ ಸರ್ಕಾರದ ಸಹಾಯವನ್ನ ತೆಗದುಕೊಳ್ಳದ ಹೊರ್ತು, ಉಪಾಯವಿಲ್ಲವೆಂತ ಯೋಚಿಸಿ, ರಾವ್ ರಾಮಚಂದ್ರ ಶುಬೇದಾರನಿಗೆ, ಪಳ್ಳೀ ಯುದ್ಧ ಸಾಮಗ್ರಿಯನ್ನು ಕೊಡಬೇಕೆಂತ ಅಪೇಕ್ಷಿಸಿದನು. ರಾಮಚಂದ್ರರಾಯನು ತತ್‍ಕ್ಷಣವೇ ಅವರ ಕೇಳಿಕೆಯನ್ನ ಮನ್ನಿಸಿ ತನ್ನ ಸೇನೆಯಿಂದ ನಾಲ್ಕುನೂರು ಸವಾರರು, ವಂದು ಸಾವಿರ ಪಾಯಿದಳ (ಅಂದರೆ ಶೂರ ಶಿಪಾಯಿಗಳು) ಮತ್ತು ಯರಡು ತೋಪುಗಳನ್ನು ಸಹಾ, ಇಂಗ್ರೇಜಿಯವರ ಸಹಾಯಕ್ಕೆ ಕಳುಹಿಸಿದನು. ಈ ಸೈನ್ಯವು ಕಾಲ್ಪಿಗೆ ಹೋಗಿ, ದಂಗೇಖೋರರನ್ನ ದಂಡಿಸಿ, ಕಾಲ್ಪೀ ಷಹರನ್ನ, ಪುನಃ ಇಂಗ್ರೇಜಿಯವರ ಸ್ವಾಧೀನಕ್ಕೆ, ಬಿಡಿಸಿಕೊಟ್ಟರು. ಝಾಂಸೀ ಸೈನ್ಯದ ಶೌರ್ಯವನ್ನು ನೋಡಿ, ಇಂಗ್ರೇಜಿ ಅಧಿಕಾರಿಗಳಿಗೆ ಅತ್ಯಾನಂದವಾಯಿತು. ಆ ಕಾಲದಲ್ಲಿ, ಗೌರ್ನರ ಜನರಲ್ ಆಗಿದ್ದ ಲಾರ್ಡ್ ವಿಲಿಯಂ ಬೆಂಟಿಂಕ್, ಸಾಹೇಬನು ಝಾಂಸೀ ಸೈನ್ಯಕ್ಕೆ ಸ್ತೋತ್ರಮಾಡಿ, ಶುಭೇದಾರ್ ರಾಮಚಂದ್ರರಾಯನು ಮಾಡಿದ ಅತ್ಯುತ್ತಮ ಉಪಕಾರಕ್ಕೆ ಕೃತಜ್ಞತೆಯಿಂದ 1832 ನೇ ಇಸವಿ ಡಿಸೆಂಬರು ತಾರೀಖು 11ನೇ ದಿವಸ ಝಾಂಸಿಯಲ್ಲಿ ದೊಡ್ಡ ಸಭಾ ಸೇರಿಸಿ, ಆತನಿಗೆ "ಮಹಾರಾಜಾಧಿರಾಜ" ಮತ್ತು "ಫಿದವೀ ಬಾದಷಹಾ, ಜಾನೂಜಾ ಇಂಗ್ಲಿಸ್ತಾನ," (Devoted Servant of the Glorious King of England,) ಯೆಂಬ ಬಿರುದನ್ನು ಅರ್ಪಿಸಿದನು. ಇಷ್ಟೇ ಅಲ್ಲದೆ, ಛತ್ರ ಚಾಮರ ಮತ್ತು ನಗಾರಿ ಮುಂತಾದ ಬಿರದುಗಳಿಂದ, ಆತನಿಗೆ ಅಲಂಕಾರಮಾಡಿ, ಆತನ ಉಪಕಾರದಿಂದ ಮುಕ್ತನಾಗುವ ಪ್ರಯತ್ನ ಮಾಡಿದನು. ಆ ಸಮಯದಲ್ಲಿ, ರಾಮಚಂದ್ರರಾಯನು "ಯೂನಿಯನ್ ಜಾಕ್" ಯೆಂಬ ನಿಶಾನೆಯನ್ನು ಝಾಂಸೀ ಕೋಟೇಮೇಲೆ ಹಾಕಿಕೊಳ್ಳುವ ಗೋಸ್ಕರ ಬ್ರಿಟಿಷ್ ಸರ್ಕಾರದವರನ್ನ ಕೇಳಿಕೊಂಡ ಮೇರೆಗೆ ಅವರು ಬಹಳ ಸಂತೋಷದಿಂದ, ಮನ್ನಿಸಿ, ಅಪ್ಪಣೇ ಕೊಟ್ಟರು. ಈ ಧ್ವಜಸ್ಥಾಪನೆಯಿಂದ, ಝಾಂಸೀ ಸಂಸ್ಥಾನೀಕರಿಗೆ, ಬ್ರಿಟಿಷ್ ಸರ್ಕಾರಧವರಲ್ಲಿ ಯಷ್ಟುಮಟ್ಟಿಗೆ, ಅಚಲವಾದ ವಿಶ್ವಾಸ ವಿಶ್ರಂಭವಿದ್ದು

ವ್ಯಕ್ತವಾಗುತ್ತೆ. * ತಮ್ಮ ಸ್ವಂತಕೋಟೆಯಮೇಲೆ ಬ್ರಿಟಿಷ್‌ರಾಜರ ರಾಜಚಿನ್ಹೆಯು ಅಂತಿತವು ಸ್ಥಾಪಿತವಾಗಿರಬೇಕೆಂಬ ಅಪೇಕ್ಷೆಯಿಂದ, ಧ್ವಜಸ್ಥಾಪನೆಮಾಡಿದ ಝಾಸಿ ಸಂಸ್ಥಾನದವರ ರಾಜಭಕ್ತಿಯು, ಯಷ್ಟೆಂತ ಹೇಳುವದು ಯಾರಿಂದಲಾದೀತು ?

ಅದು ಹಾಗಿರಲಿ. ರಾಮಚಂದ್ರರಾಯನ ಚಿಕ್ಕತನದಲ್ಲಿ, ಝಾಸೀಸಂಸ್ಥಾನದ ರಾಜಸೂತ್ರವನ್ನ ಆತನ ಮಾತೋಶ್ರಿ ಸಖೂಬಾಯಿ ನಡೆಸುತ್ತಾಯಿದ್ದಳೆಂತ, ಮೇಲೆ ಹೇಳಲ್ಪಟ್ಟಿಧೆ. ಈ ಸಖೂಬಾಯಿಯು ಬಹಳ ಕೋಪಿಷ್ಟಳು ಮತ್ತು ಕ್ರೂರ ಸ್ವಭಾವದವಳಾಗಿಇದ್ದಳು. ರಾಮಚಂದ್ರರಾವ್ ಪ್ರಾಪ್ತವಯಸ್ಸಿಗೆ ಬಂದಮೇಲೆ ಅಡಳತವನ್ನವಹಿಸಿಕೊಂಡು, ಸ್ವತಂತ್ರನಾಗಿ ಕೆಲಸ ನಡಿಸಲು ಪ್ರಾರಂಭಿಸಿದನು. ಅದು, ರಾಮಚಂದ್ರರಾಯನು ತನಗೆ ಔರಸಪುತ್ರನಾಗಿದ್ದಾಗ್ಯೂ ಆಕೆಗೆ ಸಹಿಸದೆ, ಸಖೂಬಾಯಿಯು ಆತನನಾಶವನ್ನಅಪೇಕ್ಷಿಸಿ, ರಾಜ್ಯ ತನ್ನ ಕೈವಶವಾಗಬೇಕೆಂತ ಯೋಚಿಸಿದಳು, ತನ್ನಅಪೇಕ್ಷೆಯನ್ನ ನೆರವೇರಿಸಿಕೊಳ್ಳುವ ವುದ್ದೇಶ್ಯ ತನ್ನ ಪುತ್ರನ ಪ್ರಾಣನಾಶಮಾಡುವಗೋಸ್ಕರ, ಅನೇಕ ಘಾತುಕ ವುಪಾಯಗಳನ್ನು, ಅವಲಂಬಿಸಿದಾಗ್ಯು, ಸಫಲವಾಗಲ್ಲಿಲ್ಲ. ಅನಂತರ, ಝಾಸಿಯಲ್ಲಿ ಸ್ನಾನಮಾಡತಕ್ಕ ಲಕ್ಷ್ಮೀಸರೋವರದಲ್ಲಿ, ಈಸುವ ಆಶೆ ರಾಮಚಂದ್ರರಾಯನಿಗೆ ಹೆಚ್ಚಾಗಿದ್ದದ್ದರಿಂದ ಅದರಲ್ಲಿ ಗೋಪ್ಯದಿಂದ ಭಾಲೆಯನ್ನ ಹೂಳಿಇಟ್ಟಳು ! ಅಹಹಾ, ಅಹಹಾ ! ರಾಜ್ಯಲೊಭವು ಯಷ್ಟುಪಾಪಿಯಾಗಿಧೆ ! ಅದರಯೋಗದಿಂದ ಅಬಲಾಪ್ರಬಲಳಾಗಿಹೋಗಿ, ಅತಿಕ್ರೂರ ಕೃತ್ಯವನ್ನುಕೂಡ ಅವಲಂಬಿಸಲು ಹ್ಯಾಂಗೆ ಉದ್ಯುಕ್ತಳಾಗುತ್ತಾಳೆ ಯಂಬುವದು ಈ ಇತಿಹಾಸದಿಂದ ಚೆನ್ನಾಗಿ ತೋರಿಬರುತ್ತೆ. ಪೇಷ್ವೆಯವರ ಮನೆತನದಲ್ಲಿ, ಅನಂದಬಾಯಿಯು ರಾಜ್ಯಲೋಭಾಧೀನಳಾಗಿ, ತನ್ನ ಭಾವನ ಮಗನನ್ನ ವಧೆಮಾಡಿಸಿ ತನ್ನ ದುರ್ನಾಮವನ್ನ, ಇತಿಹಾಸದಲ್ಲಿ ಅಜರಾಮರವನ್ನಾಗಿ ಮಾಡಿಟ್ಟಳು. ಅದೇ ರೀತಿಯಲ್ಲಿ ಝಾಸೀ ಕುಲದೀಪಕಳಾದ, ಸಖೂಬಾಯಿಯು ಪ್ರತ್ಯಕ್ಷ ತನ್ನ ಉದರದಲ್ಲಿ ಜನಿಸಿದ ಬಾಲಕನನ್ನು ನೀಚರೀತಿಯಿಂದ, ವಧೆಮಾಡತಕ್ಕ ಪ್ರಯತ್ನಮಾಡಿ ತನ್ನ ದುರ್ನಾಮವನ್ನು ಝಾಸೀ ಸಂಸ್ಥಾನದ

---

* ಈ ಸಮ್ಮಂಧದಲ್ಲಿ ಒಬ್ಬ ಯೂರೋಪಿಯನ್ ದೊಡ್ಡಮನುಷ್ಯನು ಬರೆದಿಟ್ಟಿರುವವನ್ನ ಲಕ್ಷದಲ್ಲಿಡಲು ಯೋಗ್ಯವಾಗಿಧೆ :—

"The adoption of the British Government by a friendly and a little state was truly expressive of that loyalty and faithfulness for which the Hindus are always remarkable in the history of humanity."—*cf. Indophilus' letters to the times, p.* 11.

ಇತಿಹಾಸದಲ್ಲಿ ಪ್ರಸಿದ್ಧಮಾಡಿದಳು ಯೆಂಬು ಹೇಳುವದಕ್ಕೇನೂ ಸಂಶಯವಿಲ್ಲ, ಪರಂತು, ನಾರಾಯಣರಾವ್ ಪೇಷ್ವೇ ಹತ್ತರ, ಚಾಫಾಜಿ, ಟಳೇಕರ್ ಯಂಬ ಸ್ವಾಮಿ ಭಕ್ತಿವುಳ್ಳ ಸೇವಕ ಹ್ಯಾಂಗೆ ಇದ್ದನೋ, ಅದೇಪ್ರಕಾರ ತನ್ನ ಧಣಿಯ ರಕ್ಷಣೆಗೋಸ್ಕರ ತನ್ನ ಪ್ರಾಣವನ್ನು ಕೊಡುವದಕ್ಕೆ ಸಿದ್ಧನಾಗಿದ್ದ ಲಾಲೂಕೋದಲಕರ್ ಯೆಂಬ ಸ್ವಾಮಿ ನಿಷ್ಠಸೇವಕನು ರಾಮಚಂದ್ರರಾಯನ ಹತ್ತರ ಇದ್ದನು. ಅವನಿಗೆ ಸಖೂಬಾಯಿಯ ಅಘೋರವಾದ ಪ್ರಾಣಘಾತುಕದ ಕೆಲಸವು ತಿಳಿದು ಬಂದದ್ದರಿಂದ, ರಾಮಚಂದ್ರರಾಯನು ಸರೋವರದಲ್ಲಿ ಹಾರಬೇಕೆಂಬ ಅಷ್ಟರಲ್ಲಿ, ಸಾಜ್ಞೆಮಾಡಿ, ತಡೆದು ನಿಲ್ಲಿಸಿ, ಆತನ ಪ್ರಾಣವನ್ನು ಉಳಿಸಿದನು. ಇದಕ್ಕೆ ಪ್ರತ್ಯುಪಕಾರವಾಗಿ ರಾಮಚಂದ್ರರಾಯನು ತನ್ನ ವಿಶ್ವಾಸ ಶೇವಕನ ಮನಸ್ಸಂತೋಷಪಡಿಸಿದ್ದು, ಸಖೂಬಾಯಿ ಸಹಿಸದೇ ಶಿಟ್ಟುಬಂದು, ಶ್ರೀರಾಮ ಸೇವಕ ಹನುಮಂತನೋಪಾದಿಯಲ್ಲಿ ಇದ್ದ ರಾಮಚಂದ್ರರಾಯನ ಸೇವಕನನ್ನು, ದುಷ್ಟ ಜನಗಳನ್ನು ಕಳುಹಿಸಿ ಕೋಟೇಕೆಳಗೆ ಮೋಸದಿಂದ ಕೊಲ್ಲಿಸಿಬಿಟ್ಟಳು ! ರಾಮಚಂದ್ರರಾಯನು, ಸಾಧು * ಸ್ವಭಾವನಾಗಿದ್ದದ್ದರಿಂದ, ತನ್ನ ಮಾತೋಶ್ರಿಯನ್ನು ದಂಡಿಸಲು ಇಚ್ಛಯಿಸಲಿಲ್ಲ. ಆದರೆ ಝಾಂಸೀಸಂಸ್ಥಾನದಲ್ಲಿ ಇದ್ದ ಬುದ್ಧಿಶಾಲಿಗಳಾದ ಚತುರ ಪ್ರಧಾನ ಮಂಡಲಿಯವರಿಗೆ, † ಸಖೂಬಾಯಿಯ ದುಷ್ಟಕೃತ್ಯ ಅಸಹ್ಯ ಹುಟ್ಟಿ, ಆಕೆಯನ್ನು ಕಟಾರಾಯೆಂಬ ಕೋಟೆಯಲ್ಲಿ ಯಾವಜ್ಜೀವಪರಿಯಂತ, ಸೆರೆಯಲ್ಲಿಡಿಸಿದರು. ಯಾವಮನೆತನದಲ್ಲಿ, ಲೋಕೋತ್ತರ ಪ್ರಖ್ಯಾತಿಪಡೆದ ಸುಶೀಲಸ್ತ್ರೀ

---

* ರಾಮಚಂದ್ರರಾಯನ ವಿಷಯವಾಗಿ ಬುಂದೇಲ್ ಖಂಡದ ಪೊಲಿಟಿಕಲ್ ಯೇಜಂಟ್, ಕರ್ನಲ್ ಶಿಮ್ಲರ್, ಬರೆದಿರುವದೇನಂದರೆ :—

"The Rajah of Jhansi, Ramchunder Row, died a few months ago, leaving a young widow and a mother, but no child. He was a young man of about twenty-eight years of age, timid, but of good capacity and most amiable disposition."

† ಝಾಂಸಿ ದರ್ಬಾರಿನ ಮುತ್ಸದ್ದೀಮಂಡಲಿಯ ಜಾಣತನವನ್ನು ಕುರಿತು ಕರ್ನಲ್ ಸ್ಲಿಮರ್ನು ಬಹಳ ಪ್ರಸಂಶೆ ಮಾಡಿದ್ದಾನೆ. ಹ್ಯಾಗಂದರೆ:—

"The Rajahs of Jhansi had hitherto been served by the most respectful, able and honourable men in the country, while, the other chiefs of Bundlecund could get no man of this class to do their work for them—that this was the only court in Bundlecund in which such men could be seen, simply because it was the only one they could feel themselves secure."

ಲಕ್ಷ್ಮೀಬಾಯಿ ಉತ್ಪನ್ನಳಾದಳೋ, ಅದೇ ಮನೆತನದಲ್ಲಿ ತನ್ನ ಸ್ವಂತವುದರದಲ್ಲಿ ಜನಿಸಿದ ಪುತ್ರನನ್ನು ನಾಶಮಾಡುವದಕ್ಕೆ ವುದ್ಯುಕ್ತಳಾದ ಪಾಷಾಣಹೃದಯಸ್ತ್ರೀ ಸಖೂಬಾಯಿ ವುತ್ಪನ್ನಳಾಗಿದ್ದದ್ದು ಯೆಷ್ಟು ಆಶ್ಚರ್ಯ! ಆಶ್ಚರ್ಯಯೆಂಬುವದೇನು ? ಛೆ! 'ಒಂದೇವೃಂದಾವನದಲ್ಲಿ ತುಳಸಿಮತ್ತು ಭಂಗೀಸಹ ಹುಟ್ಟುವದು, ಆಶ್ಚರ್ಯವಲ್ಲವೇ! ಅದೇರೀತಿ ಇದನ್ನೂ ತಿಳಿಯುತಕ್ಕದ್ದು.

ರಾಮಚಂದ್ರರಾಯನ ಕಾರಭಾರಿನಲ್ಲಿ ಸಂಸ್ಥಾನದ ಆಡಳತಗಳಿಗೆ ಸರಿಯಾಗಿ ದೃಷ್ಟೀಕೊಡದೇ ಹೋದಪ್ರಯುಕ್ತ, ವಸೂಲಿ ಕಡಮೆಯಾಗುತ್ತಾಬಂತು. ಬುಂದೇಲೇ ಜನಗಳು, ಪುಂಡೆದ್ದು ಪಹೂಜಾ ಮುಂತಾದ ಪರಗಣಾಗಳಲ್ಲಿ ಲೂಟಿ, ಮತ್ತು ಹಿಂಸೆಮಾಡಲಿಕ್ಕೆ ಪ್ರಾರಂಭಿಸಿದರು. ಪರಂತು, ಸ್ವಲ್ಪಕಾಲದಲ್ಲಿಯೇ, ಅವರ ಪುಂಡನ್ನು ನಿಲ್ಲಿಸಿದ್ದಾಯಿತು.

ರಾಮಚಂದ್ರರಾವ್ 1835 ನೇ ಇಸವಿಯಲ್ಲಿ ಅಸ್ವಸ್ಥನಾಗಿ ಮೃತಪಟ್ಟನು. ಅವನಿಗೆ ಪುತ್ರಸಂತಾನ ವಿರಲಿಲ್ಲವಾದ್ದರಿಂದ, ಆತನ ಪತ್ನಿಯು ತನ್ನ ಸಹೋದರೀಮಗ ಕೃಷ್ಣರಾವ್ (ಸಾಗರಪ್ರಾಂತ್ಯದಲ್ಲಿದ್ದ ಮೂರ್ಯೈಶ್ವರ್ಯರಾವ್‌ಕೇರ್ ಯೆಂಬುವನ ಪುತ್ರ) ಯೆಂಬ ಬಾಲಕನನ್ನು ದತ್ತು ತೆಗದುಕೊಂಡಳು. ಪರಂತು, ಆದತ್ತುವಿಧಾನವು ಅಶಾಸ್ತ್ರೀಯವಾಗಿದ್ದದ್ದರಿಂದ, ಝಾರ್ಸೀ ದರ್ಬಾರಿನಲ್ಲಿ ಇತ್ತಂಡವಾಯಿತು. ಆದಕಾರಣ ಬಾಧ್ಯತೇವಿಷಯವನ್ನು ಕುರಿತು, ಬ್ರಿಟಿಷ್ ಸರ್ಕಾರದವರೆವಿಗೂ ಹೋಗಿ, ಶಿವರಾವ್ ಭಾವು ಔರಸ ಮಗನಾದ ರಾಮಚಂದ್ರರಾಯನ ತಂದೆಯ ಸಹೋದರನಾದ, ಮೂರನೇ ರಘುನಾಥರಾಯನು ಸಂಸ್ಥಾನದ ಪದವಿಗೆ ನಿಜವಾದ ಹಕ್ಕುದಾರನಾಗಿದ್ದಾನೆಂತ, ಇತ್ಯರ್ಥವಾಯಿತು. ಆ ಪ್ರಕಾರ ಝಾರ್ಸೀ ಪೊಲಿಟಿಕಲ್ ಯೇಜಂಟ್ ಬೆಗ್ಬಿ ಸಾಹೇಬನು ರಘುನಾಥರಾಯನನ್ನು ಝಾರ್ಸೀ ಗದ್ದಿಗೇಮೇಲೆ, ಕೂಡಿಸಿದನು.

ರಘುನಾಥರಾಯನು, ಸದಾ ದುರ್ವ್ಯಸನಿಯಾಗಿದ್ದು, ರಾಜ್ಯ ವ್ಯವಹಾರ ಶೂನ್ಯನಾಗಿದ್ದನು. ಝಾರ್ಸೀ ಸಂಸ್ಥಾನದ ಆಧಿಪತ್ಯವು ಸಿಕ್ಕುತ್ತಲೇ, ಆನಂದದಲ್ಲಿ ಮಗ್ನನಾಗಿ, ಗಾಯಕರ ಮತ್ತು ವಾರಾಂಗನೆಯರ ಸಮೂಹವನ್ನು ಸೇರಿಸಿಕೊಳ್ಳಲು ಪ್ರಾರಂಭಿಸಿದನು. ಹೀಗಾದ್ದರಿಂದ, ಸಂಸ್ಥಾನದ ಉತ್ಪತ್ತಿಯು * $\frac{1}{4}$ ಪಾಲಿಗೆ ಬಂದು, ಮನಸ್ವೀ ಸಾಲವಾಗುತ್ತಾ ಹೋಯಿತು.

---

* ರಘುನಾಥರಾಯನ ಆಡಳತದಲ್ಲಿ ವಸೂಲಿ ಸ್ಥಿತಿ ಹ್ಯಾಗೆಯಿತ್ತೆಂಬುವದು, ಕೆಳಗೆ ಬರೆದಿರುವ ವಾಕ್ಯದಿಂದ ಕಂಡುಬರುತ್ತೆ:—

"The revenue, which is said at one period to have been eighteen lacs of rupees, having fallen from twelve lacs, its amount in 1832, to three lacs."—*Gazetteer of India by Thornton.*

ರುಗಳನ್ನ ಕಳುಹಿಸಿಕೊಟ್ಟನು. ಅವರು, ಕನ್ಯೆಯ ಸುಸ್ವರೂಪ ಮತ್ತು ಇತರ ಗುಣಗಳನ್ನು ಕುರಿತು ಬಾಬಾಸಾಹೇಬನಿಗೆ, ವಿಶ್ವಾಸವಾಗುವ ಹಾಗೆ, ಹೇಳಿದರು. ತರುವಾಯ, ಆತನು ಅನುಮತಿಕೊಟ್ಟು, ಝಾಶಿಯಲ್ಲಿ ಲಗ್ನ ಸಮಾರಂಭವನ್ನು ನೇರಿಸುವದಕ್ಕೆ ನಿಶ್ಚಯಿಸಿದನು. ಮೋರೋಪಂತ್ ತಾಂಬೆಯು, ಬ್ರಹ್ಮಾವರ್ತದಿಂದ ಕೆಲವು ಪರಿವಾರಸಹಿತ ಶಕ 1899ಕ್ಕೆ ಸಲ್ಲುವ 1842ನೇ ಇಸ್ವಿಯಲ್ಲಿ ಝಾಶಿಗೆ ಬಂದನು. ವೈಶಾಖ ಮಾಸದಲ್ಲಿ ಲಗ್ನಕ್ಕೆ ಮುಹೂರ್ತವಿಟ್ಟು, ಉತ್ತಮ ಪ್ರಕಾರದಲ್ಲಿ, ಮಂಗಳವಿಧಿ ನಡೆಯಿತು. ಮಹಾರಾಜಾ ಗಂಗಾಧರರಾಯನು, ಹುಡುಗೀಕಡೆಯವರಿಗೆ ಬಹಳ ಬಹಳ ಉಚಿತವನ್ನು ಕೊಟ್ಟನು. ಮತ್ತು ಝಾಶೀ ಸಂಸ್ಥಾನದಲ್ಲಿರತಕ್ಕ ಸರ್ವಜನಗಳಿಗೂ ಯೋಗ್ಯತೇಪ್ರಕಾರ, ಉಡುಗರೆಯನ್ನು ಕೊಟ್ಟನು.

ಯಾವದಿವಸ ಕನ್ಯಾ ಒಪ್ಪಿಸಿಕೊಳ್ಳುವ ಸಮಾರಂಭ ನಡೆದು, ವಧೂವರರು ಅರಮನೆಯನ್ನು ಪ್ರವೇಶಿಸಿದರೋ, ಆ ದಿವಸ ಸರ್ವ ಜನಗಳಿಗೂ, ಝಾಶೀ ಮಧ್ಯದಲ್ಲಿ, ಲಕ್ಷ್ಮಿಯೇ ಕೇವಲ ಮೂರ್ತಿವಂತಳಾಗಿ ಅವತಾರವನ್ನು ತಾಳಿದಳೋ ಯೆಂಬ ಹಾಗೆ ತೋರಿ ಬಂತು. ಆದ್ದರಿಂದ ಆ ವೇಳೆಯಲ್ಲಿ ಹುಡಿಗಿಯ ಹೆಸರು ಲಕ್ಷ್ಮೀಬಾಯಿ ಯೆಂತ ಯಿಟ್ಟು, ಆನಂದ ಪ್ರದರ್ಶನಾರ್ಥವಾಗಿ ಸಕ್ಕರೆಯನ್ನು ಹಂಚಿದರು. ಮತ್ತು ತೋಫಿಗೆ ನರಬತ್ತಿ ಕೊಟ್ಟರು. ಈ ನಾಮಮಹಿಮಾ ಯೆಷ್ಟು! ಈ ಭಾಗ್ಯವೆಂಥಾದ್ದು! ತನ್ನ ಕನ್ಯಾರತ್ನವು ಯೋಗ್ಯವಾದ ಹಗೆಯನ್ನು ಶೋಧಿಸಿ ತೆಗೆದಳು ಯೆಂಬುವದನ್ನು ನೋಡಿದ ವೇಳೆಯಲ್ಲಿ, ಪರಮ ವಾತ್ಸಲ್ಯವುಳ್ಳ, ಆ ಪಿತನಿಗೆ ಯೆಷ್ಟು ಆನಂದವಾಗಿರಬಹುದು! ನಿಜವಾಗಿ, ಯಾರಿಗೆ ತನ್ನ ಕನ್ಯಾ ಒಬ್ಬ ಸಂಸ್ಥಾನಾಧಿಪತಿಯ ಪಟ್ಟದ ರಾಣಿಯಾಗತಕ್ಕವಳು ಯೆಂಬ ಸಂಗತಿಯು ಸ್ವಪ್ನದಲ್ಲಿಯೂ ಕೂಡ ಕಂಡಿರಲಿಲ್ಲವೋ, ಅವನಿಗೆ ಪ್ರತ್ಯಕ್ಷವಾಗಿ ಲಭಿಸಿದ್ದನ್ನ ನೋಡಿ, ತಾನು ಯೆಷ್ಟು ಧನ್ಯ ಧನ್ಯನೆಂದು ತೋರಿರಬಹುದು! ಈಶ್ವರನ ಕಾರ್ಯವು ಅಗಾಧವಾಗಿದೆ.

ಯನ್ಮನೋರಥ ಶತೈರ ಗೋಚರಂ ನಸ್ಪೃಶಂತಿ ಕವಯೋಪಿ ಯದ್ಗಿರಾ ।
ಸ್ವಪ್ನವೃತ್ತಿರಪಿ ಯತ್ರ ದುರ್ಲಭಾ ಲೀಲಯೈವ ವಿದಧಾತಿ ತದ್ವಿಧಿಃ ॥ ೧ ॥

ಮನೂಬಾಯಿಯು ಎಷ್ಟು ಗಟ್ಟಿಗಳಾಗಿದ್ದಾಳೆ ಎಂಬದನ್ನು ತೋರಿಸತಕ್ಕ ಒಂದು ಚಮತ್ಕಾರ ಸಂಗತಿಯು ವಿವಾಹ ಸಮಯದಲ್ಲಿ ತೋರಿಬಂತು. ಲಗ್ನಕಾಲದಲ್ಲಿ ವಧೂವರರ ಶರಗಿಗೆ ಗಂಟುಹಾಕತಕ್ಕ ಸಂಪ್ರದಾಯವಿರುತ್ತೆ. ಆ ಪ್ರಕಾರವಾಗಿ, ಭೂರಿ ಜಗಲೀಮೇಲೆ, ಪುರೋಹಿತನು ಮಹಾರಾಜನ ಶಲ್ಯಕ್ಕೂ ಮತ್ತು ಮನೂಬಾಯಿಯ ಶಲ್ಯಕ್ಕೂ ಗಂಟುಹಾಕಲು ಉದ್ಯುಕ್ತನಾದನು. ಆ ವೇಳೆಯಲ್ಲಿ, ಮನೂಬಾಯಿಯು ಬಹಳ ಧಿಟ್ಟತನದಿಂದ ಪುರೋಹಿತನಿಗೆ ಹೀಗೆ ಹೇಳಿದಳು:—“ಒಳ್ಳೇ ಬಲವಾದ ಗಂಟುಹಾಕು.” ಈ ಮಾತನ್ನು ಕೇಳುತ್ತಲೇ ಸರ್ವರಿಗೂ ಆಶ್ಚರ್ಯ ತೋರಿತು.

ಆ ಶಬ್ದದ ಗೂಢಾರ್ಥವನ್ನು ನೋಡಿ, ಪುರೋಹಿತ ಮತ್ತು ಮಂಟಪ ಸವಿಾಪದಲ್ಲಿದ್ದ ಸರ್ವ ವೇದಶಾಸ್ತ್ರಸಂಪನ್ನ ಮಂಡಲಿಯವರು ಕೇವಲ ಸ್ತಬ್ಧರಾದರು (ಸುಮ್ಮನೆ ಇದ್ದರು.) ಝಾಸೀ ಸಂಸ್ಥಾನಾಧಿಪತಿಯ ಮತ್ತು ನನ್ನ ಗ್ರಂಥಿಯು (ಗಂಟು) ಯೆಂದಿಗೂ ಕಳಚಬಾರದು ; ಅಂದರೆ, ನನ್ನ ಮತ್ತು ಝಾಸಿಯ ಸಮ್ಮಂಧವನ್ನು ಧೃಢ ಮಾಡು, ಯೆಂಬುವದೇ ಆ ಚಾತುರ್ಯ ಪೂರ್ಣವಾದ ಶಬ್ದದ ಭಾವಾರ್ಥವಾಗಿತ್ತು. ಪರಂತು, ದುರ್ದೈವದಿಂದ, ಆಕೆಯ ಆಶೆಯು ಪೂರ್ಣವಾಗಲಿಲ್ಲ ! ಇದು ಹಾಗಿರಲಿ.

ಮನೂಬಾಯಿ, ಝಾಸಿ ಸಂಸ್ಥಾನದ ಮಹಾರಾಣಿಯಾದ ನಂತರ, ಪುನಹ ಬ್ರಹ್ಮಾವರ್ತಕ್ಕೆ ಹೋಗಬೇಕಾದ ಸಂಭವ ಬರಲಿಲ್ಲ. ಮಹಾರಾಜ ಗಂಗಾಧರ ರಾಯನು, ಮೋರೋಪಂತನಿಗೆ ತಿಂಗಳು ವಂದರ ಮುನ್ನೂರು ರೂಪಾಯಿಗಳನ್ನು ಕೊಟ್ಟು, ಝಾಸೀ ದರ್ಬಾರಿನಲ್ಲಿ ಪಬ್ಬ ಸರದಾರನನ್ನಾಗಿ ಮಾಡಿದನು. ಆ ವೇಳೆಯಲ್ಲಿ, ಮೋರೋಪಂತನಿಗೆ ಸುಮಾರು 32 ವರುಷ ವಯಸ್ಸಾಗಿತ್ತು. ಮೋರೋಪಂತನ ಪ್ರಥಮ ಕುಟುಂಬ ತೀರಿಹೋಗಿದ್ದಳು ಯೆಂತ ಮೇಲೆಯೇ ಹೇಳಲ್ಪಟ್ಟಿದೆ. ಆದಕಾರಣ, ಅವನು ಗುಲಸರಾಯಿ ಸಂಸ್ಥಾನದಲ್ಲಿ, ವಾಸುದೇವ ಶಿವರಾವ್‌ಖಾನವಲ್ಕರನ ಕನ್ಯೆಯನ್ನು ಲಗ್ನಮಾಡಿಕೊಂಡನು. ಅವನ ಈ ದ್ವಿತಿಯ ಕುಟುಂಬದ ಹೆಸರು ಚಿಮಾಬಾಯಿ. ಆಕೆಯು ಅದ್ಯಾಪಿ ಜೀವಂತಳಾಗಿದ್ದಾಳೆ.



# ೩ನೇ ಪ್ರಕರಣ.

---

## ಮಹಾರಾಜ ಗಂಗಾಧರರಾಯನ ಆಳ್ವಿಕೆ.

ಶ್ರೀಮಂತ ಗಂಗಾಧರರಾವ್ ವುರುಫ್ ಬಾಬಾಸಾಹೇಬನ ವಿವಾಹವಾದನಂತರ, ಆತನಿಗೆ ಝಾರ್ನಸೀಸಂಸ್ಥಾನದ ಪೂರ್ಣ ಸ್ವಾಮಿತ್ವವು ಸಿಕ್ಕಿತು. ಪೂರ್ವದಲ್ಲಿ, ಸಂಸ್ಥಾನಕ್ಕೆ ಆಗಿದ್ದ ಸಾಲವೆಲ್ಲಾ ತೀರಿಹೋಗಿ, ಅದರ ಎಲ್ಲಾ ವ್ಯವಸ್ಥೆಯು, ಸರಿಯಾಗಿ ಆಯಿತು ಯೆಂದು ತಿಳಿದು, ಬಾಬಾಸಾಹೇಬನ ಯೋಗ್ಯತ ಮತ್ತು ಆಡಳತದ ಶಕ್ತಿಸಹ, ಲಕ್ಷ್ಯಕ್ಕೆ ತಂದು, ಬುಂದೇಲ್‌ಖಂಡದ ಪೊಲಟಿಕಲ್ ಯೇಜಂಟ್, ಕರ್ನಲ್ ಸ್ಲಿಮರ್ನ ಸಾಹೇಬನು, ಝಾರ್ನಸೀಸಂಸ್ಥಾನದ ರಾಜಸೂತ್ರವನ್ನು ಆತನ ಕೈಗೆ ಕೊಡುವದಕ್ಕೋಸ್ಕರ, ಹಿಂದೂಸ್ಥಾನದ ಸರಕಾರಕ್ಕೆ ಸಲಹೇಕೊಟ್ಟನು. ಆ ಪ್ರಕಾರವಾಗಿ, ವಪ್ಪಿರುವದಾಗಿ ಅಪ್ಪಣೆಬಂದು, ಹೊಸ ತಹನಾಮೆ ನಡೆಯಿತು. ಬುಂದೇಲೆ ಜನಗಳು ಬಹಳ ದಂಗೇಖೋರರಾಗಿದ್ದ ಕಾರಣ, ಅವರನ್ನ ಕಟ್ಟನಲ್ಲಿಡುವದಕ್ಕಾಗಿ, ಕೆಲವು ಸೈನ್ಯವನ್ನು ಇಡತಕ್ಕದ್ದು ಅವಶ್ಯವಿದೆ. ಆದ್ದರಿಂದ, ಆ ಖರ್ಚನ್ನು ಝಾರ್ನಸೀ ಸಂಸ್ಥಾನದ ಕಡೆಯವರು ಸಹಿಸಿಕೊಳ್ಳಬೇಕೆಂದು, ಇಂಗ್ರೇಜಿ ಸರ್ಕಾರದವರು ಹಟ ಮಾಡಿದಕಾರಣ, ಯರಡುಲಕ್ಷವೂ ಇಪ್ಪತ್ತೇಳು ಸಾವಿರದ ನಾನೂರು ಐವತ್ತೆಂಟು ರೂಪಾಯಿನ ದೇಶವನ್ನು, ಗಂಗಾಧರರಾಯನು ಇಂಗ್ರೇಜಿ ಸರ್ಕಾರಕ್ಕೆ ಭಾಗಮಾಡಿ ಕೊಡಬೇಕಾಗಿಬಂತು, ಯೆಂಬ ವಿಷಯವನ್ನು ಕುರಿತು ಕೆಲವುಮಟ್ಟಿಗೆ ಹಿಂದೆಯೇ ಹೇಳಲ್ಪಟ್ಟಿಧೆ. ತಥಾಪಿ, ಬಾಬಾಸಾಹೇಬನು ಆ ಕಾಲದಲ್ಲಿ, ಒಳ್ಳೇ ವ್ಯವಸ್ಥೆ ಮಾಡಿಕೊಂಡು, 2 ಪಟಾಲಂ ಸೈನ್ಯಮತ್ತು 2 ತೋಪಖಾನೆ ತನ್ನ ತೈನಾತಿಯಲ್ಲಿ ಇಟ್ಟುಕೊಂಡನು. ತಹಾ ಸರಿಯಾದನಂತರ ಗಂಗಾಧರರಾಯನಿಗೆ, ಅಧಿಕಾರಕೊಡುವ ಸಮಾರಂಭ ನಡೆಯಿತು. ಪೊಲಿಟಿಕಲ್ ಯೇಜಂಟನು ಸಂಸ್ಥಾನದಲ್ಲಿ ವುಳದಿದ್ದ, 30ಲಕ್ಷ ರೂಪಾಯಿಯನ್ನು ಗಂಗಾಧರರಾಯನ ಸ್ವಾಧೀನಮಾಡಿ, ಆತನಿಗೆ ಸನ್ಮಾನ ಪೂರ್ವಕವಾಗಿ, ವಸ್ತ್ರಾಭರಣವನ್ನು ಸಮರ್ಪಣೆ ಮಾಡಿದನು. ಅದೇ ಪ್ರಕಾರವಾಗಿ, ಸಂಸ್ಥಾನದ, ಜಮೀನ್‌ದಾರ್ ಮತ್ತು ಜಾಗೀರ್‌ದಾರ್ ಜನಗಳಿಂದ ಅನಂದ ಪ್ರದರ್ಶನಕ್ಕಾಗಿ, ಅನೇಕ ಬಹುಮಾನಬಂತು. ಇದರಿಂದ ಮಹಾರಾಜ ಗಂಗಾಧರರಾಯನು, ಝಾರ್ನಸೀ ಸಂಸ್ಥಾನದ ಪ್ರಜೆಗೆ ಬಹಳ ಪ್ರೀತ್ಯಾಸ್ಪದನಾಗಿ ಇದ್ದನೆಂತ ಕಂಡು ಬರುತ್ತದೆ.

ಮಹಾರಾಜನು ರಾಜಸೂತ್ರವು ಕೈಗೆ ಬಂದಕೂಡ್ಲೆ, ತನ್ನ ಆಳ್ವಿಕೆ, ಸರ್ವಜನರಿಗೂ ಯಾವಪ್ರಕಾರ, ಸುಖವಾಗಬೇಕೋ ಆ ರೀತಿಮಾಡಲು, ಪ್ರಯತ್ನಿಸಲು ವುದ್ಯುಕ್ತನಾದನು. ಪ್ರಥಮದಲ್ಲಿ, ಅವನು ಸರ್ಕಾರದ ಮತ್ತು ಸ್ವಂತ ವ್ಯವಸ್ಥೆಯನ್ನು ಚೆನ್ನಾಗಿಮಾಡಿ, ಆಯಾಯ ಇಲಾಖೇಮೇಲೆ, ಕರ್ತವ್ಯದಕ್ಷರಾದ ಚತುರ ಮತ್ತು

ಪ್ರಾಮಾಣಿಕ, ಜನಗಳನ್ನ ನೇಮಿಸಿದನು. ಸಂಸ್ಥಾನದ ದಿವಾನಗಿರಿ ಕೆಲಸಕ್ಕೆ ಶಕ್ತನಾದ, ರಾಘೋರಾಮಚಂದ್ರಸಂತ್ ಯೆಂಬುವನನ್ನು ನೇಮಿಸಿ, ದರ್ಬಾರ್ ವಕೀಲಿ ಕೆಲಸಕ್ಕೆ, ನರಸಿಂಹರಾವ್ ಕೃಪಾ ಯೆಂಬುವನನ್ನು ನೇಮಿಸಿದನು. ಅದಾಲತೀ ಕೆಲಸದ ಮೇಲೆ ನಾನಾಭೋಪಟಕರ್ ನನ್ನು ಇಟ್ಟು, ಅದೇಪ್ರಕಾರವಾಗಿ, ಯಲ್ಲಾ ದೊಡ್ಡ ಚಿಕ್ಕ ಉದ್ಯೋಗದಮೇಲೆ, ಯೋಗ್ಯ ಮನುಷ್ಯರನ್ನು ನೇಮಿಸಿ, ತಾಲ್ಲೋಕುಗಳಿಗೆ ಬಳ್ಳೊಳ್ಳೇ ತಹಶೀಲದಾರರುಗಳನ್ನ ಕಳುಹಿಸಿದನು. ಟಾಕೂರ್ ಮತ್ತು ಬುಂದೇಲೆ ಜನಗಳ, ಪ್ರಾಂತ್ಯದ ಮಧ್ಯದಲ್ಲಿ ಬಹಳ ಉಪದ್ರವ ಇತ್ತಾದ್ದರಿಂದ, ಅಲ್ಲಿ ಸ್ವಲ್ಪ ಸೈನ್ಯವನ್ನಿಟ್ಟು, ಅವರನ್ನು ನಿರ್ಬಂಧಪಡಿಸಿದನು. ಈ ರೀತಿಯಿಂದ, ಸಂಸ್ಥಾನದ ಸಕಲ ವ್ಯವಸ್ಥೆಯು ಚನ್ನಾಗಿ ಆದಮೇಲೆ, ನಾಲ್ಕು ಕಡೆ ಶಾಂತವಾಗಿ, ಪ್ರಜೆಗಳು ಸಂತುಷ್ಟರಾಗಿದ್ದರು.

ಮಹಾರಾಜ ಗಂಗಾಧರರಾಯನು, ದೈವಶಾಲೀ ಪ್ರಭುವಾಗಿದ್ದಕಾರಣ, ತನ್ನ ಸಂಸ್ಥಾನದ ವೈಭವವನ್ನು, ಅಭಿವೃದ್ಧಿಗೆ ತರಬೇಕೆಂಬ ಆಶೆಯು ಆತನಿಗೆ ಬಹಳವಾಗಿತ್ತು. ಆತನು ರಾಜ್ಯಾಧೀಶನಾಗುತ್ತಲೆ, ಪೂರ್ವದಸಂಪತ್ತು ಮತ್ತು ಲವಾಜಮಾದ (ಪರಿವಾರದ ಖರ್ಚಿನ) ವ್ಯವಸ್ಥೆ ಮಾಡುವದನ್ನು ಮನಸ್ಸಿನಮೇಲೆ ತೆಗೆದುಕೊಂಡನು. ಹಿಂದೆ ರಘುನಾಥರಾಯನ ಆಡಳತದಲ್ಲಿ, ವಿಶಿಷ್ಟವು ಅವಿವೇಕವಾಗಿದ್ದದ್ದರಿಂದ ಝೂರ್ಸಿಯ ಪುಷ್ಕಳ ವೈಭವವು ನಷ್ಟವಾಗಿ ಹೋಗಿತ್ತು. ಆದಾಗ್ಯೂ ಗಂಗಾಧರರಾಯನು ತನ್ನ ಆಳ್ವಿಕೆಯಲ್ಲಿ, ಅದನ್ನ ಪುನಹ ಸಂಪಾದಿಸಿಕೊಂಡು, ಸಂಸ್ಥಾನವನ್ನು ಪ್ರಕಾಶಗೊಳಿಸಬೇಕೆಂದು ಬಳ್ಳೇ ಪ್ರಯತ್ನಮಾಡಿದನು. ಆ ಸಮಯದಲ್ಲಿ ರಾಣೀ ಲಕ್ಷ್ಮೀಬಾಯಿ ಸಾಹೇಬಳ ಕಾಲಗುಣದಿಂದ, ಸಂಸ್ಥಾನದ ಗತಲಕ್ಷ್ಮಿಯು, ಪುನಃ ಪ್ರವೇಶಮಾಡಲಿಕ್ಕೆ ಪ್ರಾರಂಭಮಾಡಿದಳು ಯೆಂತ ಜನಗಳಿಗೆ ತೋರುತ್ತಲಿತ್ತು. ಸಂಸ್ಥಾನದ ಭಂಡಾರದ ಸ್ಥಿತಿಯು ಉತ್ತಮ ಪ್ರಕಾರದಲ್ಲಿ ಅಭಿವೃದ್ಧಿ ಹೊಂದುತ್ತಾ ಹೋದ ಹೋದ ಹಾಗೆ, ರತ್ನ ಭಂಡಾರಮಧ್ಯದಲ್ಲಿನ ಪೂರ್ವದ ರಾಜ್ಯ ಲಕ್ಷ್ಮಿಯು, ತನ್ನ ದಿವ್ಯ ತೇಜಸ್ಸಿನಿಂದ, ಹೊಳೆಯಲು ಪ್ರಾರಂಭಿಸಿದಳು. ಮಹಾರಾಜನಿಗೆ ಆನೆ ಮತ್ತು ಕುದುರೆಯಮೇಲೆ ಬಹಳ ಆಶೆಯಿತ್ತು. ಸುಮಾರು 22 ಆನೆಗಳನ್ನು ಸಾಕಿಸುತ್ತಾ ಇದ್ದನು. ಅವುಗಳಲ್ಲಿ ಶಿದ್ದಬಕ್ಷ್ಯಯಂಬ ಹೆಸರುಳ್ಳ ಬಂದು ಅಸದೃಶವಾದ ಸುಂದರ ಆನೆ ಇತ್ತು. ಅದು ಮಹಾರಾಜನ (ಸ್ವಂತ) ಸವಾರೀದಾದ್ದರಿಂದ ಅದರ ಸರ್ವ ಅಲಂಕಾರವೂ, ಸುವರ್ಣದಿಂದ ಮಾಡಲ್ಪಟ್ಟಿತ್ತು. ಝೂರ್ಸೀ ಸಂಸ್ಥಾನವು ಅಪಾರ ಸಂಪತ್ತಿಯಿಂದ ಪ್ರಕಾಶಿಸುತ್ತಾಯಿತ್ತು. ಆನೆಗಳ ಸಾಮಾನು, ಕುದುರೆಗಳ ಅಲಂಕಾರ, ಅಂಬಾರಿ, ರಥ, ಮುಂತಾದವು ವಿಶಿಷ್ಟವೂ, ಸುವರ್ಣ ಮತ್ತು ರಜತಮಯವಾಗಿದ್ದವು. ಗಂಗಾಧರರಾಯನು, ಕಾಶಿಯಿಂದ, ಕುಶಲ ಕೆಲಸದವರ ಸಂಗಡ, ಬಂದು ಪಾಲಕಿಯನ್ನು ಮಾಡಿಸಿ ತರಿಸಿದ್ದನು. ಅವರ ಚಿತ್ರ ಕೆಲಸವು ಸುವರ್ಣಮಯವಾ

ದ್ದಾಗಿ ಅಸದೃಶವಾಗಿತ್ತು. ಆ ತರಹದ ಪಾಲಕಿಯು, ಯಾವ ಸಂಸ್ಥಾನಿಕರ ಹತ್ತಿರವೂ ಇರಲ್ಲಿಲ್ಲವೆಂತ ಹೇಳುತ್ತಾರೆ. ಇದು ಹಾಗೆ ಇರಲಿ. ಮಹಾರಾಜನ ಪರಿವಾರವು ಬಹಳ ದೊಡ್ಡದಾಗಿಯೂ, ಶಿಬ್ಬಂದಿ ಚೆನ್ನಾಗಿಯೂ ಇತ್ತು. ಸ್ವಂತ ಮತ್ತು ಠಾಕೂರ್ ಜನಗಳ ಸೈನ್ಯ ಸಹಾ ಶೇರಿ 5000 ಸೈನ್ಯ, ಮತ್ತು 2000 ಪೋಲೀಸ್ ಕೂಡ ಇತ್ತು. ಇದಲ್ಲದೆ, 500 ಸವಾರರ ಇರಸಾಲೆ ಒಂದು ಪ್ರತ್ಯೇಕವಾಗಿದ್ದು, ಸ್ವಂತಕ್ಕೆ ಇತರ ಅಂಗರಕ್ಷಕ ಸವಾರರಿದ್ದರು. ತೋಪಖಾನೆಗಳು ನಾಲ್ಕು ಇದ್ದವು. ಇದರಿಂದ ಗಂಗಾಧರರಾಯನು ತನ್ನ ಆಳ್ವಿಕೆಯಲ್ಲಿ ಝಾಸೀ ಸಂಸ್ಥಾನವನ್ನ ಎಷ್ಟು ವೂರ್ಜಿತ ಸ್ಥಿತಿಗೆ ತಂದಿದ್ದನೆಂಬುವದು ಸ್ಪಷ್ಟವಾಗುತ್ತೆ.

ಮಹಾರಾಜನು ಸ್ವಭಾವದಲ್ಲಿ ದಯಾಳುವಾಗಿದ್ದಾಗ್ಯೂ, ಆತನ ಆಳ್ವಿಕೆಯು ಪ್ರಬಲವಾಗಿತ್ತು. "ಆತನ ರಾಜ್ಯ ಸಮ್ಮಂಧದ, ನೌಕರ್ ಜನಗಳಿಗೂ ಮತ್ತು ರೈತರಿಗೂ, ಬಹಳ ಭಯವಿತ್ತು. ಯಾವಯಾವ ಕಾಲಕ್ಕೆ, ಯೇನೇನು ಕೆಲಸವು ನೇಮಿಸಿರುತ್ತೋ ಅದು ಆಯಾಯ ವೇಳೆಯಲ್ಲಿ ಆಗಲೇ ತೀರಬೇಕು, ಯೆಂಬ ನಿಯಮ ಆತನಿಗೆ ಇತ್ತು. ಯಾವ ನೇಮಿಸಿದ ಕೆಲಸವಾದರೂ ತಾತ್ಸಾರವಾದಲ್ಲಿ, ಸ್ವತಃ ಕೋರ್ಡೆಯಿಂದ ಅಪರಾಧಿಗೆ, ಶಾಸನಮಾಡುತ್ತಾ ಇದ್ದನು. ತನ್ನ ರಾಜ್ಯದಲ್ಲೆಲ್ಲಾ, ಆತನು ನ್ಯಾಯದಿಂದಲೂ ಮತ್ತು ವಿಚಾರಣೆಯಿಂದಲೂ, ಕೆಲಸವನ್ನು ನಡೆಸುತ್ತಾ ಇದ್ದನು ಸಾಹೇಬ್ ಜನಗಳಲ್ಲಿ, ತನ್ನ ವರ್ಚಸ್ಸು ಮತ್ತು ಗುಣಗಳಿಂದ, ತನ್ನ ದೊಡ್ಡ ಸ್ಥಿತಿಯನ್ನು ಸಂಬಾಳಿಸಿಕೊಂಡು ನಡೆಯುತ್ತಿದ್ದನು." * ಇತರ ಸಂಸ್ಥಾನಿಕರಮೇಲೆ ಆತನ ಬಹಳ ಗೌರವ ಇದ್ದಕಾರಣ, ಓರ್ಛಾ, ದತಿಯಾ, ಶಿಮಥರ್, ಚರಖಾರಿ, ಪನ್ನಾ, ಛತ್ರಪುರ ಮುಂತಾದ ಸ್ಥಳದ ಬುಂದೇಲೆ ರಾಜರು ಆತನನ್ನ, 'ಕಾಕಾ' ಯೆಂತ ಕರೆಯುತ್ತಾ ಅವನಲ್ಲಿ ಬಹಳ ಬಹುಮಾನವನ್ನು ಇಟ್ಟಿದ್ದರು. ಆತನ ತೇಜಸ್ಸಿಗೆ ಪುಷ್ಕಳ ದೃಷ್ಟಾಂತರ ಪ್ರಸಿದ್ಧಿಯಾಗಿದೆ.†

---

* ವುಜ್ಜನ ಪ್ರತ.

† ಆ ದೃಷ್ಟಾಂತರಗಳ ಪೈಕಿ, ಬಹಳ ಮಹಾತ್ಮ್ಯವುಳ್ಳ ವಂದು ದೃಷ್ಟಾಂತರವು ಗ್ವಾಲಿಯರ್ ಪುಸ್ತಕದಲ್ಲಿ, ಕೊಡಲ್ಪಟ್ಟಿದೆ. ಅದು ಈ ರೀತಿ :—"ಒಂದು ವರುಷ ದಸರೇ ಹಬ್ಬವು ರವಿವಾರದ ದಿವಸ ಬಂತು. ಕಂಟಿಂಜೆಂಟ್ ಸೇನೆ ಪದ್ಧತೀ ಪ್ರಕಾರ ಬರತಕ್ಕದ್ದು ಬರಲಿಲ್ಲ. ಜನರಲ್ ಸ್ಲಿಮರ್ ಸಾಹೇಬನು, ಈ ದಿವಸ ಆದಿತ್ಯವಾರ ಆದ್ದರಿಂದ ನಾವು ಸೊಂಟಾ ಕಟ್ಟುವದಿಲ್ಲವೆಂತ ಹೇಳಿ ಕಳುಹಿಸಿದನು. ಅದಕ್ಕೆ, ತಹಾಪ್ರಕಾರ ಸೇನೆ ಸಹಾ ಬರಬೇಕು, ಇಲ್ಲದಿದ್ದರೆ, ಕೂಡ್ಲೆ, ದೇಶದಮೇಲೆ ಜಫ್ತಿಗೆ ಕಳುಹಿಸುತ್ತೇನೆಂತ ರಾಜನು ಅಪ್ಪಣೆಮಾಡಿದನು ; ಅಲ್ಲದೆ, ತಕ್ಷಣವೇ ಆನೇಮೇಲೆ ಕೂತುಕೊಂಡು ಹೊರಟನು. ಆಗ ಜಿಲ್ಸರ್ ಸಾಹೇಬನು ಸೇನೆಸಹಿತ, ಬರಬೇಕಾಗಿಬಂತು!"

ಮಹಾರಾಜ ಗಂಗಾಧರರಾಯನು, ಶಕ 1907 ನೇ (1850 ನೇ ಇಸವಿ) ಮಾಘ ಶುದ್ಧ ಸಪ್ತಮೀ ದಿವಸ, ಸಹ ಕುಟುಂಬನಾಗಿ, ಕಾಶೀಯಾತ್ರೆಗೆ ಹೋಗಿದ್ದನು. ಮಹಾರಾಜನ ಸವಾರಿ ರಕ್ಷಣೆಗೋಸ್ಕರವೂ ಮತ್ತು ಯಲ್ಲಾ ಸ್ಥಳದಲ್ಲಿಯೂ, ಆತನ ಮಾನ ಮರ್ಯಾದೆ ಸರಿಯಾಗಿ ನಡೆಯುವಗೋಸ್ಕರವೂ, ಕಲ್ಕತ್ತೆಯಿಂದ, ಗೌರ್ನರ್ ಜನರಲ್ ಸಾಹೇಬನು, ಯಲ್ಲಾ ಸ್ಥಳದ ಅಧಿಕಾರಿಗಳಿಗೆ, ಖಂಡಿತವಾಗಿ ಅಪ್ಪಣೆ ಕೊಟ್ಟಿದ್ದನು. ಮಹಾರಾಜನ ಚಿತ್ತವೃತ್ತಿ ಯಷ್ಟರಮಟ್ಟಿಗೆ, ಸೂಕ್ಷ್ಮವಾಗಿತ್ತೆಂದರೆ, ಯತ್ಕಿಂಚಿತು ಅಪಮಾನವೂ ಕೂಡ, ಆತನಿಗೆ ಸಹನವಾಗುತ್ತಾ ಇರಲಿಲ್ಲ. ಆತನ ಸವಾರಿ, ಕಾಶಿಯಲ್ಲಿರುವಾಗ, ಅಲ್ಲಿ, ಅಧಿಕಾರಿಗಳು ಯದುರುಗೊಂಡು ಬರಲಿಲ್ಲ, ಯಂಬದರ ನಿಮಿತ್ತ, ಆತನು ಕಲ್ಕತ್ತೆಗೆ ಯಾದಿ ಬರದುಕಳುಹಿಸಿ, ಅದಕ್ಕೆ ಅವರಿಂದ ಕ್ಷಮಾತರಿಸಿಕೊಂಡಿದ್ದಲ್ಲದೆ, ಆ ಅಧಿಕಾರಿಗಳಿಗೆ ರಾಜೀನಾಮಾ ಕೊಡಬೇಕಾದ, ಸಂಭವ ತಂದಿಟ್ಟನು ! ಅದೇ ಪ್ರಕಾರವಾಗಿ, ಅಲ್ಲಿ ಒಬ್ಬ ರಾಜೇಂದ್ರಬಾಬು ಯಂತ ಬಹಳ ದೊಡ್ಡ ಬಂಗಾಳಿ ಗೃಹಸ್ತನಿದ್ದನು. ಆತನು ಗಂಗಾಧರರಾಯನಿಗೆ, ಯೆದ್ದು ನಿಂತುಕೊಂಡು ಮರ್ಯಾದೆಕೊಡದೆ ಬಹಳ ಗರ್ವದಿಂದ ಅವಮರ್ಯಾದೆ ಮಾಡಿದನು. ಇದನ್ನು ನೋಡಿದಕೂಡ್ಲೆ, ಮಹಾರಾಜನು ಅವನನ್ನು ಹಿಡಿದು ಕೆಲವುಕಾಲ ಪರಿಯಂತರ ಬಗಲಲ್ಲಿ, ಕೈಹಾಕಿಸಿ, ನಿಲ್ಲಿಶಿದ್ದನು. ಆಗ ಅವನು ಕಲ್ಕತ್ತೆಗೆ ವಿನಂತಿ ಮಾಡಿಕೊಂಡನು. ಅದಕ್ಕೆ ಈ ರೀತಿಯಾಗಿ ಉತ್ತರ ಬಂತು. ಅದೇನಂದರೆ, “ ಮಹಾರಾಜ ಗಂಗಾಧರರಾಯನು ರಾಜನಾಗಿದ್ದಾನೆ. ಆತನಿಗೆ ನಿಂತು ಮರ್ಯಾದೆ ಕೊಡುವದು ನಿಮಗೆ ಇಷ್ಟವಿರಲಿಲ್ಲವಾಗಿದ್ದಪಕ್ಷದಲ್ಲಿ, ನೀವು ಸ್ವಸ್ಥವಾಗಿ ಮನೆಯಲ್ಲಿ ಕೂತಿರಬೇಕಾಗಿತ್ತು ! ” ಅದು ಹಾಗೆ ಇರಲಿ.

ಮಹಾರಾಜ ಗಂಗಾಧರರಾಯನು ಪ್ರಯಾಗ, ಕಾಶಿ, ಗಯ, ಈ ಮೂರು ಸ್ಥಳದ ಯಾತ್ರೆಯನ್ನು ಮಾಡಿ, ತನ್ನ ಗೌರವವನ್ನ ಅನುಸರಿಸಿ ಒಳ್ಳೇ ದಾನಧರ್ಮವನ್ನು ಮಾಡಿದನು. ಕಾಶೀಕ್ಷೇತ್ರದಲ್ಲಿ ಇರುವಾಗ ಮಹಾರಾಣಿ ಲಕ್ಷ್ಮೀಬಾಯಿ ಸಾಹೇಬಳು ತನ್ನ ಜನ್ಮಭೂಮಿಯ ದರ್ಶನವನ್ನು ತೆಗದುಕೊಂಡಳು ಮಹಾರಾಜನ ಸವಾರಿ ಕಾಶೀ * ಯಾತ್ರೆಯಿಂದ ಝಾಸಿಗೆ ಹಿಂತಿರುಗಿ ಬಂದಾಗ ಪಟ್ಟಣದಲ್ಲಿ ದೊಡ್ಡ ಆನಂದೋತ್ಸವ ನಡೆಯಿತು. ಅದೇ ವರುಷ ಅಂದರೆ ಶಕ 1908 (1851)

---

* ಕಾಶೀಯಲ್ಲಿರುವಾಗ, ಮಹಾರಾಜ ಗಂಗಾಧರರಾಯನಿಗೂ ಶ್ರೀಮಂತ, ತ್ರಿ. ಅಣ್ಣಾಸಾಹೇಬ್ ವಿಂಚೂರಕರನಿಗೂ ಭೇಟಿ ಆಗಿತ್ತು. ಆ ಭೇಟಿ ಸಮ್ಮಂಧವಾಗಿ “ ತೀರ್ಥಯಾತ್ರಾಪ್ರಬಂಧ,” ಯಂಬ ಪುಸ್ತಕದಲ್ಲಿ ಬರದಿರುವದೇನಂದರೆ, “ ಇದೇ ಸಮಯದಲ್ಲಿ, ಝಾಸಿ ಸಂಸ್ಥಾನದ ಅಧಿಕಾರಿ, ಗಂಗಾಧರರಾವ್, ಬಾಬಾಸಾಹೇಬ್ ಯೆಂಬುವನು ಇದ್ದನು. ಅವನು ಕಾಶೀಯಾತ್ರೆಗೆ ಬಂದಿದ್ದನು. ಅವನಿಗೆ ರಘುನಾಥರಾಯನ ಸಂಗಡ ಭೇಟಿ ಆಗಿತ್ತು. ಈ ದೊಡ್ಡ ಸಂಸ್ಥಾನಿಕಪುರುಷನ ಸ್ಥಿತಿ ಮತ್ತು

ಮಾರ್ಗಶೀರ್ಷ ಶುದ್ಧ ೧೧ ದಿವಸ ಮಹಾರಾಣಿ ಸಾಹೇಬಳಿಗೆ ಪುತ್ರರತ್ನವಾಯಿತು. ಆ ವೇಳೆಯಲ್ಲಿ ಪಟ್ಟಣವೆಲ್ಲೆಲ್ಲಾ, ಆನಂದವನ್ನು ತೋರಿಸುವದಕ್ಕೋಸ್ಕರ, ಸಕ್ಕರೆ ಹಂಚಲ್ಪಟ್ಟಿತು. ಮಹಾರಾಜಾ ಗಂಗಾಧರರಾಯನು ಪುತ್ರಪ್ರಾಪ್ತಿಯಾದ್ದಕ್ಕೋಸ್ಕರ, ಬಹಳ ದೊಡ್ಡ ಸಮಾರಂಭ ಮಾಡಿದನು. ಪರಂತು, ಮೂರು ತಿಂಗಳು ವಳಗಾಗಿಯೇ ಆ ಪುತ್ರರತ್ನವನ್ನು ದುಷ್ಟ ಯಮನು ಸೆಳೆದುಕೊಂಡು ಬಿಟ್ಟನು. ಆದಕಾರಣ ಮಹಾರಾಜನಿಗೆ ಬಹಳ ದುಃಖ ಪ್ರಾಪ್ತವಾಯಿತು !

---

ಲೋಕರೀತಿ ಆತನು ನಡಕೊಳ್ಳತಕ್ಕ ಕೆಲಸವೂ ಮತ್ತು ಅವನ ಆಚಾರಗಳನ್ನ ಸಹ ನೋಡಿ, ರಘುನಾಥರಾಯನಿಗೆ ಬಹಳ ಆಶ್ಚರ್ಯ ತೋರಿತು," (ಪ್ರಷ್ಠ 131). ಆಶ್ಚರ್ಯ ತೋರಿದ್ದಕ್ಕೆ ಕಾರಣ, ಚೇಷ್ಟೆಗೆ ಬರದದ್ದೆಂತ ಅಂದರೆ ವಳ್ಳೇದಾಗಿತ್ತು. ಮಹಾರಾಜ ಗಂಗಾಧರ ರಾಯನ ಸಮ್ಮಂಧವಲ್ಲಿ, ಅನೇಕ ಜನಗಳ ಅನೇಕ ತರ್ಕನಡೆಯುತ್ತಾ ಇದ್ದು, ಅನೇಕ ಸುಳ್ಳುಸಂಗತಿಗಳು ನಮ್ಮ ಕೇಳಿಕೆಯಲ್ಲಿ ಬಂದುಇವೆ. ಆದರೆ, ಆತನ ವಿಷಯ ವಾಗಿ, ಪೂರ್ಣವಿಚಾರ ಮಾಡಿದ್ದರಲ್ಲಿ ನಮಗೆ ತಿಳಿಯಬರುವದೇನಂದರೆ:—ಮಹಾರಾಣಿ ಲಕ್ಷ್ಮೀಬಾಯೀ ಸಾಹೇಬಳು, ಅತ್ಯಂತ ಶೂರಳಾದ್ದರಿಂದ, ಜನಗಳು ಆಕೆಯ ಪತಿಯ ಮೇಲೆ ಅನೇಕ ಸುಳ್ಳು ಹುಟ್ಟಿಸಿದರು ; ಪರಂತು, ಅದೆಲ್ಲಾ ಅಸತ್ಯವಾಗಿದ್ದರೆ, ಸ್ತ್ರೀ ಶೌರ್ಯಗುಣದಲ್ಲಿ, ಪ್ರಸಿದ್ಧಳಾಗುತ್ತಲೇ, ಆಕೆಯ ಗಂಡನ ಶರೀರದಲ್ಲಿ, ಸತ್ವ ವಿಲ್ಲ ಅಥವ ಗಂಡಸ್ತನ ಅಭಾವ, ಯಂತ ಜನಗಳು ವುತ್ಪ್ರೇಕ್ಷೆಮಾಡುವದು ಸಹಜವಾಗಿದೆ. ಇಷ್ಟರಮೇಲೆ ಆತನನ್ನ ದೂಷಣೆಮಾಡುವದು, ಸರಿಯಾದ್ದಲ್ಲ. ಮಹಾರಾಜ ಗಂಗಾಧರರಾಯನ ಸಮ್ಮಂಧವಾಗಿ ಯಾವಸಂಗತಿ ಹೇಳುತ್ತಾಇಧೆಯೋ, ಅದೇರೀತಿ, ಆತನಸತ್ಯತೆ ಸಂಬಂಧವಾಗಿ ಮೂಲಾಧಾರ ಸಿಕ್ಕುವದಿಲ್ಲ. ಇಷ್ಟೇ ಅಲ್ಲ. ಅದರಲ್ಲಿ, 'ಪಾದರಸದ ಕಾಗಿ' ಆದಂತೆ ದೃಷ್ಟಿಗೆ ಬೀಳುತ್ತೆ. ಕೆಲವರು ಮಹಾರಾಜ ಗಂಗಾಧರ ರಾಯನು ಕೈಯಿಗೆ ಬಳೇ ತೊಟ್ಟುಕೊಳ್ಳುತ್ತಾ ಇದ್ದನೆಂತ ಹೇಳು ತ್ತಾರೆ ! ಪರಂತು, ಅದು ನಿಜವಾದದ್ದಲ್ಲ. ಅವನು ಯಾವಾಗಲೂ ಮಾತನಾಡುವದ ರಲ್ಲಿ, "ನಾವು ಸಂಸ್ಥಾನಿಕರು. ಈಗ, ಬಳೇ ತೊಟ್ಟುಕೊಳ್ಳಬೇಕಾಗಿಧೆ !" ಯಂತ ಅನ್ನುತ್ತಿದ್ದನು. ಅದರ ಅರ್ಥವೇನಂದರೆ, ಸರ್ವ ಸಂಸ್ಥಾನಿಕರ ಸ್ಥಿತಿಯು ಈಗ ಸ್ತ್ರೀಯರಂತೆ ಪರರನ್ನ ಅವಲಂಬಿಸಿಕೊಂಡು ಇರಬೇಕಾಗಿ ಬಂದು ಇಧೆ. ಇದರಂತೆ ಮುಂದೆ ಬರೆಯುವ, ಸಂಗತಿಯು ತಿಳಿಯಬಂದು ಇಧೆ :—"ಒಂದುದಿವಸ ರೆಸಿಡೆಂಟನು ಸ್ನೇಹದಲ್ಲಿ ಬಾಬಾಸಾಹೇಬನನ್ನ ಈ ರೀತಿ, ವಿಚಾರಿಸಿದನು, 'ಮಹಾರಾಜ ! ನಾವು ಬಹುದಿವಸದಿಂದ ಒಂದು ಮಾತು ಕೇಳಿದ್ದೇವೆ. ತಮಗೆ ಸಿಟ್ಟು ಬರಬಾರದು. ಮಾಫ ಕೇಳಿಕೊಂಡು ವಿಚಾರಿಸುತ್ತೇವೆ.' ಇದನ್ನು ಕೇಳಿ ಬಾಬಾಸಾಹೇಬನು ಕಿಂಚಿತು ಹಾಸ್ಯಮಾಡಿ, ಹೇಳಿದನು, 'ತಾವು ಯೇನನ್ನು ಕೇಳಬೇಕೋ ಅದನ್ನು ಸಂತೋಷ ವಾಗಿ, ವಿಚಾರ ಮಾಡಬಹುದು. ನನಗೆ ತೋರಿದ್ದನ್ನ ಉತ್ತರ ಕೊಡುತ್ತೇನೆ.' ಅದರ

ಮಹಾರಾಜ ಗಂಗಾಧರರಾಯನ ಮನಸ್ಸಿನಲ್ಲಿ, ಪುತ್ರವಿಯೋಗವಾದಂದಿನಿಂದ ಅವನ ಪ್ರಕೃತಿಯು ಬದಲಾಯಿಸುತ್ತಾ ಹೋಯಿತು. 1852 ನೇ ಇಸವಿಯಲ್ಲಿ, ಆತನ ಪ್ರಕೃತಿಯು ಬಹಳ ಬದಲಾಯಿಸಿಯಿತ್ತು. ಆದರೆ ಔಷಧೋಪಚಾರಗಳ ಯೋಗದಿಂದ ಅದು ಸ್ವಲ್ಪ ಸುಧಾರಿಸಿತು. ಆದಾಗ್ಯೂ, ಅದರಿಂದ ಸಂಭವಿಸಿದ ಅಶಕ್ತತೆಯು ಸ್ಥಿರವಾಗಿ ನಿಂತಿತು.

---

ಮೇಲೆ ರೆಸಿಡೆಂಟ್ ಸಾಹೇಬನು ಹೀಗೆ ಹೇಳಿದನು, 'ಮಹಾರಾಜ, ತಾವು ಸಂಸ್ಥಾನಕ್ಕೆ ದೊಡ್ಡಮನುಷ್ಯರಾಗಿದ್ದೀರಿ. ಇದು ಸಮಂಜಸವು. ಅದರಲ್ಲಿ, ತಮ್ಮ ಬ್ರಾಹ್ಮಣ ಧರ್ಮವು ಅದೆ. ಹೀಗೆ ಇರುತ್ತಾ ಕೇಳಿಕೆಯಿಂದ, ತಾವು ಸರ್ವಕಾಲದಲ್ಲಿಯೂ ಸ್ತ್ರೀವೇಷಧಾರಣೇ ಮಾಡಿಕೊಂಡು, ಕೈಯ್ಯಲ್ಲಿ ಬಳೇ ತೊಟ್ಟುಕೊಳ್ಳುತ್ತೀರಿಯೆಂತ ಅಪವಾದ ಇರುವದು ನಿಜವೇ?' ಅದಕ್ಕೆ ಬಾಬಾಸಾಹೇಬನು ಉತ್ತರಕೊಟ್ಟಿದ್ದೇನಂದರೆ, 'ನಾನಂತೂ, ಒಬ್ಬ ಸಣ್ಣ ರಾಜನಾಗಿದ್ಧೇನೆ. ಪರಂತು, ಇಂಗ್ರೇಜಿ ಬಹದ್ದೂರ್ ಮುಂದೆ, ಪೂರ್ವ, ಪಶ್ಚಿಮ, ದಕ್ಷಿಣ, ಉತ್ತರ, ದೇಶದಲ್ಲಿ, ದೊಡ್ಡ ಚಿಕ್ಕ ರಾಜರುಗಳು ಯಷ್ಟು ಇದ್ದಾರೋ, ಅವರೆಲ್ಲರೂ, ಕೈಯ್ಯಲ್ಲಿ ಬಳೇ ತೊಟ್ಟುಕೊಂಡೇ ಇದ್ಧಾರೆ. ನೋಡಿ! ನೀವು ಪರದ್ವೀಪದಿಂದ ನಮ್ಮ ದ್ವೀಪಕ್ಕೆ ಬಂದು, ನಮ್ಮನ್ನೆಲ್ಲಾ ನಿಸ್ಸಾರಮಾಡಿದ್ದೀರಿ; ಆದ್ದರಿಂದ ನಾವು ಕೈಯ್ಯಲ್ಲಿ ಬಳೇ ತೊಟ್ಟುಕೊಂಡಿದ್ದೇವೆಂತ ಯಾಕೆ ಹೇಳಬಾರದು? ಇದರಿಂದ ಬಾಬಾಸಾಹೇಬನ ಶಕ್ತಿ ಮತ್ತು ಸಮಯ ಸೂಚಿಕತೆ ಕುರಿತು, ರೆಸಿಡೆಂಟನಿಗೆ, ನಂಬಿಕೆ ಹುಟ್ಟಿತು."

ಈ ಸಮ್ಮಂಧದಲ್ಲಿ ನಿಜವಾದ ಸಂಗತಿ ಶ್ರೀಮಂತ ದಾಮೋದರರಾಯನ ತಿಳುವಳಿಕೆಯಲ್ಲಿ, ಬಂದಿರುವದೇನಂದರೆ:—"ದತ್ತಕ ತೆಗದುಕೊಳ್ಳುವ ವಿಷಯದಲ್ಲಿ, ಮಂಜೂರು ಆಗದೇ ಹೋದಮೇಲೆ, ಬಾಬಾ ಸಾಹೇಬನು ಅಸ್ವಸ್ಥವಾಗಿ, ಇರುವಾಗ, ರೆಸಿಡೆಂಟ್, ಮೇಜರ್ ಯೆಲ್ಲಿಸ್ ಮತ್ತು ಡಾಕ್ಟರ್, ಯರ್ಲ ಸಾಹೇಬರು ಭೇಟಿಗೆ ಬಂದರು. ಆವೇಳೆಗೆ ಸರಿಯಾದ ಕುಶಲವನ್ನ ವಿಚಾರಿಸಿದರು. ಅದಕ್ಕೆ ಉತ್ತರ ಕೊಟ್ಟದ್ದರಲ್ಲಿ, ಬಾಬಾ ಸಾಹೇಬನು ಈ ಪ್ರಕಾರ ತಿಳಿಸಿದನು. "ಈಗ ನಾವು, ಹೆಂಗಸರು (ಹತವೀರ್ಯ) ಆಗಿದ್ದೇವೆ. ನಮ್ಮ ಸ್ಥಿತಿ ವಿಚಾರಿಸುವದರಿಂದ ಪ್ರಯೋಜನವೇನು?' ಇಷ್ಟುಮಾತ್ರ ಸಂಗತಿ ನಡೆದದ್ದನ್ನ ಆಕಾಲದ ಜನಗಳು ತಿಳಿಸುತ್ತಾರೆ. ಬಾಬಾಸಾಹೇಬನಮೇಲೆ, ಇತರ ಲೋಕಾಪವಾದ ಸಮ್ಮಂಧವಾಗಿ ಶ್ರೀಮಂತ ದಾಮೊದರರಾವ್ ಇನ್ನೂ ಸ್ಪಷ್ಟವಾಗಿ ಬರೆದಿರುವದೇನಂದರೆ:—'ಗಂಗಾಧರರಾವ್, ಬಾಬಾ ಸಾಹೇಬನು ಅಂತಃಪುರದಲ್ಲಿ ಸ್ತ್ರೀಯಂತೆ ಇರುವದು, ಮತ್ತು ಸ್ತ್ರೀವೇಷಧಾರಣೆ ಮಾಡಿಕೊಂಡು, ತಾಬೂತುಗಳ ಮುಂದೆ ಕುಣಿಯುವದೂ, ಯೆಂತ ಹೇಳುವ ಸಂಗತಿ, ನಿಸ್ಸಂದೇಹವಾಗಿ ಸುಳ್ಳಾಗಿದೆ.

ಆದಕಾರಣ, ಸ್ವಲ್ಪ ಹೆಚ್ಚು ಕಡಮೆ ಆದಕೂಡಲೆ, ಪ್ರಕೃತಿಯಲ್ಲಿ ಅನೇಕ ಬದಲಾವಣೆಗಳು ಹುಟ್ಟುತ್ತಾಯಿತ್ತು. 1853 ನೇ ಇಸವಿ ಅಕ್ಟೋಬರ್ ತಿಂಗಳಲ್ಲಿ, ಝಾನ್ಸಿಯಲ್ಲಿ, ಮಹಾಲಕ್ಷ್ಮಿಯ ಶಾರದಾ ನವರಾತ್ರ ಸಮ್ಮಂಧವಾದ, ದೊಡ್ಡ ಸಮಾರಂಭವು ನಡೆಯಿತು. ಆ ವೇಳೆಯಲ್ಲಿ, ಮಹಾರಾಜನು ಯಂದಿನಂತೆ, ತನ್ನ ಕುಲಸ್ವಾಮಿನಿ ಅಂದರೆ ಕುಲದೇವತೆಯ ವಿಷಯದಲ್ಲಿ, ಭಕ್ತಿಯನ್ನು ತೋರಿಸಿದನು. ಅದರಿಂದ ಶರೀರಕ್ಕೆ ಹೆಚ್ಚು ಶ್ರಮವಾಗಿ, ಆತನಿಗೆ ಸ್ವಲ್ಪ ಅಶಕ್ತಿ ತೋರಿತು. ಆ ಸ್ಥಿತಿಯಲ್ಲಿರುವಾಗಲೇ ವಿಜಯ ದಶಮಿ ದಿವಸದಲ್ಲಿ, ಸೀಮೋಲಂಘನ ಸಮಾರಂಭವು ಮತ್ತು ದರ್ಬಾರ್ ಸಂಭ್ರಮವು ನಿಯಮವಾದ ಪ್ರಕಾರ ನಡೆಯಿತು. ಆ ವೇಳೆಯ ಪದ್ಧತಿ, ಝಾನ್ಸೀ ಪ್ರಜೆಗಳಿಗೆ, ತಾವು ರಾಮರಾಜ್ಯದಲ್ಲಿ ಸುಖಾನುಭವ ಮಾಡುತ್ತೇವೋ ಯಂಬಹಾಗೆ, ಕಂಡುಬಂತು. ಮಹಾರಾಜ ಗಂಗಾಧರರಾಯನು, ತನ್ನ ಸರ್ವ ಪ್ರಜೆಗಳನ್ನು ಸಂತುಷ್ಟಿ ಮಾಡುವದರಲ್ಲಿ, ವಿಶೇಷ ದೃಷ್ಟಿ ಕೊಟ್ಟದ್ದರಿಂದ, ಆತನ ಆಳ್ವಿಕೆಯಲ್ಲಿ ಸರ್ವರಿಗೂ ಸುಖವಾಗಿತ್ತು. ಅದು ಬಹಳದಿವಸ ನಡೆಯಬೇಕೆಂತ ಆತನಿಗೆ ಇಛ್ಛೆ ಇತ್ತು, ಯಂತ ಸ್ಪಷ್ಟವಾಗಿ ತೋರುತ್ತೆ. ಪರಂತು, ಈಶ್ವರೇಛ್ಛೆ ಬೇರೆ ಇದ್ದಕಾರಣ, ವಿಜಯದಶಮಿ ನಂತರ, ಈ ವೈಭವ ಸಂಪನ್ನ ರಾಜನ ಪ್ರಕೃತಿಯು, ಬದಲಾಯಿಸುವದಕ್ಕೆ ಪ್ರಾರಂಭಿಸಿ, ಅಸ್ವಸ್ಥತೆಯೂ, ದಿನೇದಿನೇ ಹೆಚ್ಚಾಗುತ್ತಾ ಹೋಯಿತು. ಝಾನ್ಸಿಯಲ್ಲಿದ್ದ, ಅನೇಕ ಹೆಸರುವಾಶಿ, ವೈದ್ಯರ ಔಷಧೋಪಚಾರ ಪ್ರಾರಂಭವಾಯಿತು. ಮಹಾರಾಜನ ಅಶಕ್ತತೆಯು ಝಾನ್ಸಿ ಅಸಿಸ್ಟೆಂಟ್ ಪೊಲಿಟಿಕಲ್ ಏಜೆಂಟ್, ಮೇಜರ್ ಯಲ್ಲಿಸ್‌ನಿಗೆ ತಿಳಿಯುತ್ತಲೇ, ಬುಂದೇಲಖಂಡದ ಯೇಜಂಟ್ ಮೇಜರ್ ಮಾಲ್ಕಂನಿಗೆ ಸರ್ವ ಸಂಗತಿಯನ್ನೂ ತಿಳಿಸಿ, ತಾನು ಸ್ವತಃ ಮಹಾರಾಜನ ಪ್ರಕೃತಿಯನ್ನು ಕುರಿತು ವಿಶೇಷ ಯೋಚನೆ ತೆಗದುಕೊಳ್ಳಲು ಪ್ರಾರಂಭಿಸಿದನು. ಝಾನ್ಸೀ ದರ್ಬಾರಿನಲ್ಲಿ, ಸರ್ವಜನಗಳೂ, ಅನೇಕ ಉಪಚಾರವನ್ನು ಮಾಡಲು, ಪ್ರಾರಂಭಿಸಿದರು. ಕೆಲವರು ಮಹಾಲಕ್ಷ್ಮೀ ಆರಾಧನೆಯನ್ನು ಮಾಡಿದರು. ಕೆಲವರು ಪ್ರಸಿದ್ಧವಾದ

---

ಆ ಪ್ರಕಾರವಾಗಿ, ಅಲ್ಲಿಯ ಜನಗಳು ಯಾವಾಗ್ಯೂ ನೋಡಿದ್ದಿಲ್ಲ. ಆ ಕಾಲದ ಜನಗಳು ಕೆಲವರು ಈಗಲೂ ನಮ್ಮ ಹತ್ತರ ಇದ್ದಾರೆ. ಮತ್ತು ಇತರ ಸ್ಥಳಗಳಲ್ಲಿ ವುದ್ಯೋಗದ ಮೇಲೆ ಇದ್ದಾರೆ. ಅವರು ಈ ವಿಷಯದಲ್ಲಿ ಹೇಳಬಹುದು. ಅಲ್ಲದೆ ಆತನ ಸರ್ವ ನಡವಳಿಕೆಯನ್ನು ಕುರಿತು, ಕಾಶೀ ಕಮಿಷನರ್ ಮಿ. ಸ್ಕ್ಯಾಡ್‌ರ್ಮನು 1848 ನೇ ಇಸವಿಯಲ್ಲಿ ಮಾಡಿರುವ ರಿಪೋರ್ಟನ್ನು ನೋಡಿದರೆ ತಿಳಿಯಬಹುದು.'

ರಾಣೀ ಸಾಹೇಬಳ ದತ್ತಕಪುತ್ರ, ಸ್ವತಃ ಮೇಲಿನ ಸಂಗತಿ, ಸ್ಪಷ್ಟವಾಗಿ ಹೇಳುವದಲ್ಲದೆ, ಆ ವಿಷಯವಾಗಿ ಯಾರಿಗಾದರೂ ಇನ್ನೂ ಹೆಚ್ಚಿಗೆ ಸಂಶಯಬಿದ್ದರೆ, ಅದರ ಸಮಾಧಾನವನ್ನ ಮಾಡಲು ಶಿದ್ಧನಾಗಿದ್ದಾನೆ. ಆದ್ದರಿಂದ, ಈ ವಿಷಯವನ್ನು ಕುರಿತು ವಿಶೇಷ, ಚರ್ಚೆ ಮಾಡಲು ನಮಗೆ ಅವಶ್ಯಕ ತೋರುವದಿಲ್ಲ.

ಯುನಾನಿ ವೈದ್ಯನನ್ನು ಕರಕೊಂಡುಬಂದು, ಆತನಿಂದ ಹೊಸ ಔಷಧವನ್ನು ಕೊಡಿಸಿದರು. ಆದಾಗ್ಯೂ ಆತನಿಗೆ ಸರಿಯಾಗಿ ವಾಸಿಯಾಗಲಿಲ್ಲ. ಮಹಾರಾಜನ ಪ್ರಕೃತಿಯು ದಿನೇದಿನೇ ಕ್ಷೀಣವಾಗುತ್ತಾ ಹೋಯಿತು. ಇದನ್ನು ನೋಡಿ ಲಕ್ಷ್ಮೀಬಾಯಿ ಸಾಹೇಬಳಿಗೆ, ಅತಿಶಯ ಚಿಂತೆ ಉತ್ಪನ್ನವಾಯಿತು. ಅವಳು ಕೇವಲ ಅನ್ನವನ್ನು ಬಿಟ್ಟು ಅಹೋರಾತ್ರಿ, ಪತಿಸನ್ನಿಧಿಯಲ್ಲಿದ್ದು, ಪರಮೇಶ್ವರನ ಪ್ರಸಾದವನ್ನು ಕೇಳುತ್ತಾ ಇದ್ದಳು. (ತಾತ್ಪರ್ಯ ವೇನಂದರೆ) ಮಹಾರಾಜನ ಅಶಕ್ತತೆಯಿಂದ, ಸರ್ವ ದರ್ಬಾರಿನ ಯೆಲ್ಲಾ ಜನಗಳ ಮುಖದಮೇಲಿನ ತೇಜಸ್ಸು ಹೋದಂತೆ ಕಾಣುತ್ತಾಯಿತ್ತು.

ನವಂಬರು ತಿಂಗಳಲ್ಲಿ ಯರಡುವಾರ ಕಳೆದು, ಮೂರನೇವಾರ ಪ್ರಾರಂಭವಾಗುತ್ತಲೇ, ಮಹಾರಾಜನ ಪ್ರಕೃತಿ ಸಮೀಪಕ್ಕೆ ಬಂದು, ಆತನ ಸರ್ವ ಚಿನ್ಹೆ ವಿಪರೀತವಾಗಿ ತೋರಿತು. ಆದಕಾರಣ ಸರ್ವರಿಗೂ ಚಿಂತೆ ಹೆಚ್ಚು ಹೆಚ್ಚಾಗಿ ಉತ್ಪನ್ನವಾಯಿತು. ಸಂಸ್ಥಾನದ ದಿವಾನ್ ನರಸಿಂಹರಾವ್ ಮತ್ತು ಮಹಾರಾಜನ ಮಾಮ ಮೋರೋಪಂತ ತಾಂಬೆ, ಈ ಉಭಯತರೂ, ಮಹಾರಾಜನ ಸಮೀಪದಲ್ಲಿ, ಸಂಸ್ಥಾನದ ವ್ಯವಸ್ಥೆಯನ್ನು ಕುರಿತು ಪ್ರಸ್ತಾಪವನ್ನು ತೆಗದರು. ಆ ವೇಳೆಯಲ್ಲಿ ಆತನು ಹೇಳಿದ್ದು, "ನನ್ನ ಪ್ರಕೃತಿಯನ್ನು ಕುರಿತು ಇನ್ನೂ ನನಗೆ ನಿರಾಶೆಯಾಗಿಲ್ಲ. ಆದಾಗ್ಯೂ, ಹಿಂದೂ ಧರ್ಮಪ್ರಕಾರ, ದತ್ತ ತೆಗದುಕೊಳ್ಳುವದು ನನಗೆ ಬಹಳ ಯಿಷ್ಟವಾಗಿದೆ. ಇದಕ್ಕಾಗಿ ನಮ್ಮ ಮನೆತನದಲ್ಲಿ, ವಾಸುದೇವರಾವ್ ನೇವಾಳಕರ್‌ನ ಪುತ್ರ ಆನಂದರಾಯನನ್ನು ದತ್ತ ವಿಧಾನಮಾಡಬೇಕು." ಆ ವೇಳೆಯಲ್ಲಿ, ಆನಂದರಾಯನಿಗೆ ಸುಮಾರು ಐದುವರುಷದವಳಗೆ ವಯಸ್ಸಿತ್ತು. ಆದಾಗ್ಯೂ ಅವನು ಬಹಳ ಚುರುಕು ಮತ್ತು ತೇಜಸ್ವಿಯಾಗಿದ್ದಕಾರಣ, ಮಹಾರಾಣಿ ಲಕ್ಷ್ಮೀಬಾಯಿ ಸಾಹೇಬ್ ಮತ್ತು ಮಹಾರಾಜಾ, ಬಾಬಾಸಾಹೇಬ್ ಸಹ ಆತನನ್ನೇ ದತ್ತಕನನ್ನಾಗಿ ತೆಗದುಕೊಳ್ಳುವದಕ್ಕೆ ನಿಶ್ಚಯಮಾಡಿದರು. ಝಾಂಸಿ ದರ್ಬಾರಿನ ಮುಖ್ಯ ಉದ್ಯೋಗಸ್ಥರು, ನರಸಿಂಹರಾವ್, ಮಾಮಾಸಾಹೇಬ್, ತಾಂಬೆ, ಲಾಹೋರಿ ಮಲ್ಲಾ, ಮತ್ತು ತಟ್ಟಚಂದ್ ಸಹಾ, ದತ್ತ ವಿಧಾನದ ವಳ್ಳೇ ಸಮಾರಂಭವನ್ನು ಮಾಡಿದರು. ಝಾಂಸಿ ಪಂಡಿತ ವಿನಾಯಕರಾಯನು ಶಾಸ್ತ್ರರೀತ್ಯಾದತ್ತ ವಿಧಾನದ ವಿಧಿಯನ್ನು ಮಾಡಿದನು. ಆ ವೇಳೆಯಲ್ಲಿ, ಝಾಂಸಿಯಲ್ಲಿದ್ದ ಸಕಲ ಪ್ರಮುಖ ಜನಗಳನ್ನು ಕರಸಿದ್ದರು. ಬುಂದೇಲ್ ಖಂಡದ ಪೊಲಿಟಕಲ್ ಅಸಿಸ್ಟೆಂಟ್ ಮೇಜರ್ ಯೆಲ್ಲಿಸ್ ಮತ್ತು ಸೈನ್ಯದ ಅಧಿಕಾರಿ ಕ್ಯಾಪ್ಟನ್ ಮಾರ್ಟಿನ್ ಸಹ ಅರಮನೆಗೆ ಬಂದಿದ್ದರು. ಈ ಸರ್ವಜನಗಳ ಸಮಕ್ಷಮ ದತ್ತ ವಿಧಾನ ನಡೆದು, ಆನಂದರಾಯನಿಗೆ ದಾಮೋದರರಾವ್ ಗಂಗಾಧರರಾವ್ ಯಂತ ಹೆಸರು ಯಿಡಲ್ಪಟ್ಟಿತು. ಮಹಾರಾಜನು, ಬಹಳ ಹರುಷದಿಂದ ತನ್ನ ಸ್ವಹಸ್ತದಿಂದ ದಾಮೋದರರಾಯನ ಬಾಯಿಯಲ್ಲಿ ಸಕ್ಕರೇ ಹಾಕಿದನು. ಪದ್ಧತಿ ಪ್ರಕಾರವಾಗಿ ಉಡುಗರೆ ಮತ್ತು ಯಲೆ ಅಡಿಕೆಯನ್ನು ಸಹ ಹಂಚಿದರು. ಹಿಂದೂ ಧರ್ಮಶಾಸ್ತ್ರ ಪ್ರಕಾರ ತನಗೆ ಪುತ್ರನು ಪ್ರಾಪ್ತನಾದನೆಂಬುವದನ್ನು ನೋಡಿ ಮಹಾರಾಜನಿಗೆ, ಬಹಳ ಸಮಾಧಾನ ತೋರಿತು. ಶ್ರೀಧರಕವಿ ಹೇಳುವದೇನಂದರೆ :—

ಓಂವೀ ॥ ಕೀಂಫಲೆ ವೀಣ ತರುವರ, ಕೀಂನಾಮಸ್ಮರಣ ವಾಚೂನ ಮಂದಿರಃ ;
ತೈಸಾ ಪುತ್ರ ವೀಣಾ ವಂಶಪವಿತ್ರ, ಸರ್ವಥಾ ಪಾವನ ನಹ್ವೇಚಿ.

ಇದು ಹಾಗೆ ಇರಲಿ, ದತ್ತ ವಿಧಾನದ ಸಮಾರಂಭವು ನಡೆದನಂತರ, ಮಹಾರಾಜನು ದಿವಾನ್ ನರಸಿಂಹರಾವ್ ಮತ್ತು ಮೋರೋಪಂತ್ ಮಾಮಾಸಾಹೇಬ್‌ರನ್ನ ಸಮೀಪಕ್ಕೆ ಕರಸಿಕೊಂಡು ಒಂದು ಖಲೀತ (ಸನದು) ಬರೆಯುವದಕ್ಕೆ ಹೇಳಿದನು. ಆ ವೇಳೆಯಲ್ಲಿ, ಪೊಲಿಟಿಕಲ್ ಅಸಿಸ್ಟೆಂಟನು ಮಹಾರಾಜನ ಸಮೀಪದಲ್ಲಿ ಕೂತಿದ್ದನು. ಖಲೀತ ಬರೆದು ಸಿದ್ಧವಾಗುತ್ತಲೇ, ಮಹಾರಾಜನು ತನ್ನ ಕೈಯಿಂದ ಅದನ್ನು ಯೆಲ್ಲಿಸ್ ಸಾಹೇಬನ ವಶಕ್ಕೆ ಕೊಟ್ಟನು. ಆದರಲ್ಲಿ, ಕೆಳಗೆ ತೋರಿಸುವಂತೆ ಬರೆದಿತ್ತು :—

“ಬ್ರಿಟಿಷ್ ಸರ್ಕಾರದ ರಾಜ್ಯ ಸತ್ವವು, ಬುಂದೇಲಖಂಡದ ಮಧ್ಯದಲ್ಲಿ ಸ್ಥಾಪಿತ “ವಾಗುವದಕ್ಕೆ, ಪೂರ್ವದಿಂದಲೂ ನಮ್ಮ ಹಿರಿಯರು ಅವರಿಗೆ ಯಾವರೀತಿಯಲ್ಲಿ ಸಹಾ “ಯಮಾಡುತ್ತಾ ಹೋದರೂ ಯೆಂಬುವದು ಯುರೋಪ್ ಖಂಡದಲ್ಲಿ ಸಹ ಪ್ರಸಿದ್ಧಿ “ಯಾಗಿಧೆ. ಮತ್ತು ನಾನು ಅವರನ್ನೇ ಅನುಸರಿಸಿ, ಆಜ್ಞಾಧಾರಕನಾಗಿ, ಬ್ರಿಟಿಷ್ “ಸರ್ಕಾರದವರ ಸಂಗಡ ನಡಕೊಳ್ಳುತ್ತಾ ಬಂದಿದ್ದೇನೆ. ಈ ಸಂಗತಿಯು ಇಲ್ಲಿಗೆ “ಬಂದು ಹೋದ ಯೆಲ್ಲಾ ಪೊಲಿಟಿಕಲ್ ಯೇಜಂಟರಿಗೆ ಸಂಪೂರ್ಣವಾಗಿ ತಿಳಿದು ಇಧೆ.

“ಈಗ ನಾನು ರೋಗಿಷ್ಟನಾಗಿದ್ದೇನೆ. ಮತ್ತು ನನಗೆ ಬಹಳ ದುಃಖವು ಪ್ರಾ “ಪ್ತವಾಗಿದೆ. ಯಾಕಂದರೆ, ನಾನು ಬ್ರಿಟಿಷ್ ಸರ್ಕಾರದವರ ಸಂಗಡ, ಬಹಳ ಪ್ರಾಮಾ “ಣಿಕತೆಯಿಂದ ನಡಕೊಳ್ಳುತ್ತಾ ಬಂದು, ಬ್ರಿಟಿಷ್ ಸರ್ಕಾರದವರು, ನನಗೆ ಬಹಳ ದಯೆ “ಯಿಂದ ನಡೆಸಿಕೊಡುತ್ತಾ ಬಂದಿರುತ್ತಾ, ಮುಂದೆ ನನ್ನ ಕಾಲಾನಂತರ, ನಮ್ಮ ಮನೆ “ತನದ ವಂಶವು ನಷ್ಟವಾಗುವ ಸಂಭವವು ಬಂದು ಇಧೆ! ಆ ರೀತಿ ಆಗ ಬಾರದೆಂದು, “ನಾನು ಬ್ರಿಟಿಷ್ ಸರ್ಕಾರದವರ ಸಂಗಡ ಮಾಡಿಕೊಂಡ, ತಹನಾಮೆ ಯರಡನೇ “ಕಲಂ ಅನುಸರಿಸಿ, ಆನಂದರಾವ್ ಯೆಂಬ ಹೆಸರುಳ್ಳ ಐದುವರುಷದ ಬಾಲಕನನ್ನ, “ದತ್ತನಾಗಿ ತೆಗದುಕೊಂಡು, ಆತನ ಹೆಸರು ಗಂಗಾಧರರಾವ್ ಯೆಂತ ಇಟ್ಟಿದ್ದೇನೆ. “ಈ ಹುಡುಗನು ನಮ್ಮ ವಂಶದವನೇ ಆಗಿದ್ದಾನೆ. ನನಗೆ ಆತನು ಸಂಬಂಧದಲ್ಲಿ “ಮೊಮ್ಮಗನಾಗುತ್ತಾನೆ.”

“ಈಶ್ವರನ ಕೃಪೆಯಿಂದ ಮತ್ತು ಸರ್ಕಾರದ ದಯದಿಂದ, ನಾನು ದುಃಖದಿಂದ “ಯೇಳಬಹುದೆಂತ ಇನ್ನೂ ನನಗೆ ಆಸೆಯಿಧೆ. ನನಗೆ ಸುಮುಖವಾಗುವ ಪಕ್ಷಕ್ಕೆ, “ನನಗೆ ಸಂತತಿಯಾಗುವ ಸಂಭವವೂ ಇದೆ. ಹಾಗೆ ಆಗುವ ಪಕ್ಷಕ್ಕೆ ಹ್ಯಾಗೆ “ಯುಕ್ತ ತೋರುತ್ತೋ, ಹಾಗೆ ವ್ಯವಸ್ಥೆ ಮಾಡಲಾದೀತು. ಆದರೆ ದೇಹಾವಸಾನ “ವಾದರೆ, ಈವರಿಗೂ ನಾನು ಸರ್ಕಾರದವರ ಸಂಗಡ ಪ್ರಾಮಾಣಿಕತೆಯಿಂದ, ನಡೆಕೊ ಳ್ಳುತಾ ಇದ್ದ ಸಂಗತಿಯನ್ನ ವಿಚಾರಮಾಡಿ, ಈ ಹುಡುಗನಮೇಲೆ ಸರ್ಕಾರವು

“ ಕೃಪೆಯಿಂದ ದೃಷ್ಟಿ ಯಿಡಬೇಕು. ಈ ಹುಡುಗನಿಗೆ, ಪ್ರಾಪ್ತ ವಯಸ್ಸು ಬರುವ
“ ಪರಿಯಂತರ ಸಂಸ್ಥಾನದ ಸ್ವಾಮಿತ್ವಕ್ಕೂ ಮತ್ತು ಅದರ ವ್ಯವಸ್ಥೆಗೂ ಸಹ, ಈ
“ ದತ್ತಮಗನ ತಾಯಿ, ನನ್ನ ಹೆಂಡತಿಯೇ ಆಗಿದ್ದಾಳೆಂತ ಯೋಚಿಸಿ, ಆಕೆಯ ಕಡೆ
“ ವಹಿಸಬೇಕು. ಆಕೆಗೆ, ಯಾವ ಬಗೆಯಿಂದಲೂ, ಮನಸ್ಸು ನೋಯಿಸಬಾರದು.”*

ಈ ಸನ್ನದನ್ನ ಕೊಡುವ ವೇಳೆಯಲ್ಲಿ, ಮಹಾರಾಜನು ಅತ್ಯಂತ ಗದ್ಗದಕಂಠನಾಗಿ, ಮೇಜರ್ ಯೆಲ್ಲಿಸ್ ಸಾಹೇಬನ ಕೈಯಲ್ಲಿ, ಖಲೀತಾ ಕೊಟ್ಟು, ತನ್ನ ಇಚ್ಛೆಯನ್ನ, ಪರಿಪೂರ್ಣ ಮಾಡಿ ಕೊಡಬೇಕೆಂತ ಆತನಿಗೆ ಅಂತಃಕರುಣ ಪೂರ್ವಕ ವಿನಂತೀ ಮಾಡಿಕೊಂಡ ಸಮಯದಲ್ಲಿ, ಮೇಜರ್ ಯೆಲ್ಲಿಸ್‌ನ ಅಂತಃಕರುಣವೂ ದ್ರವಿಶಿ ಹೋಗಿ, ಆತನು, “ಬ್ರಿಟಿಷ್ ಸರ್ಕಾರದವರ ಮುಂದೆ ತಮ್ಮ ಖಲೀತಾವನ್ನು ಕಳುಹಿಸಿ ಕೊಡುತ್ತೇನೆ. ಮತ್ತು ನನ್ನಿಂದ ಸಾಧ್ಯವಾದ ಮಟ್ಟಿಗೂ ಪ್ರಯತ್ನ ಮಾಡುತ್ತೇನೆ,” ಯೆಂತ ವಾಗ್ದಾನಮಾಡಿದನು. ಇಷ್ಟರಲ್ಲಿ, ಮಹಾರಾಜನಿಗೆ ಬಹಳ ಆಯಾಸವಾದಕಾರಣ, ಸ್ವಲ್ಪ ನಿಸ್ತೂಕವಾದ್ದನ್ನ ನೋಡಿ, ಮೇಜರ್ ಯೆಲ್ಲಿಸ್ ಮತ್ತು ಕ್ಯಾಪ್ಟನ್ ಮಾರ್ಟಿನ್ ಸಾಹೇಬರು, ಆತನಿಗೆ ಔಷಧಕೊಡಿಸಿ, ತಾವು ಬಂಗಲೇ ಕಡೆಗೆ ಹೊರಟು ಹೋದರು. ಮಹಾರಾಣಿ ಲಕ್ಷ್ಮೀಬಾಯಿ ಸಾಹೇಬಳು, ಮಹಾರಾಜನ ಸಮೀಪದ ಘರದೇಮಧ್ಯದಲ್ಲಿ ಕೂತಿದ್ದಳು. ಸಾಹೇಬ್‌ಜನಗಳು ಹೊರಟು ಹೋದನಂತರ ಮಹಾರಾಜನ ಹತ್ತರಕ್ಕೆ ಬಂದಳು. ಆ ವೇಳೆಯಲ್ಲಿ, ಆಕೆಯ ಸ್ಥಿತಿಯು ಯೇನಾಗಿದ್ದೀತು ಯೆಂಬುವದನ್ನ ಹೇಳುವದು ಕಠಿಣವಾಗಿದೆ!

ಮೇಜರ್ ಯೆಲ್ಲಿಸ್ ಸಾಹೇಬನು ಬಂಗಲೇಗೆ ಹೋದನಂತರ, ಆ ದಿವಸ ಬೆಳಗ್ಗೆ ನಡೆದ, ವಿಶಿಷ್ಟ ಸಮಾಚಾರವನ್ನೂ ಬುಂದೇಲ್ ಖಂಡದ, ಪೊಲಿಟಿಕಲ್ ಯೇಜಂಟ್ ಮೇಜರ್ ಮಾಲ್ಕಂ ಸಾಹೇಬನಿಗೆ, ಬರಹ ಮೂಲಕ ತಿಳಿಸಿದನು. ಅದರಲ್ಲಿ ಈ ಪ್ರಕಾರ ಬರೆದಿತ್ತು,—ಈ ದಿವಸ † ಬೆಳಗ್ಗೆ, ನಾವು ಮಹಾರಾಜನ ವಿನಂತೀ ಪ್ರಕಾರ ಅರಮನೆಗೆ ಹೋಗಿದ್ದೆವು. ನಾನು ಮತ್ತು ಕ್ಯಾಪ್ಟನ್ ಮಾರ್ಟಿನ್ ಸಹ ಮಹಾರಾಜನ ದರ್ಶನವನ್ನು ತೆಗದುಕೊಂಡೆವು. ಪರಂತು, ಮಹಾರಾಜನ ಪ್ರಕೃತಿ ಕೇವಲ ಕ್ಷೀಣವಾಗಿ

---

* Translation of a Khareeta from Maharaja Gangadhar Rao of Jhansi to the address of Major Ellis, Political Assistant in Bundelkhand and Rewah: dated 19th November 1853.

*Vide Papers on the Annexation of Jhansi.*

† Letter to Major Malcolm—20th November 1853.

ಹೋಗಿ, ಅಪಾಯ ಸ್ಥಿತಿಯಲ್ಲಿರುವದನ್ನ ತಿಳಿಸುವದಕ್ಕೆ ಬಹಳ ವ್ಯಸನಪಡುತ್ತೇನೆ. ಇದರಲ್ಲಿಟ್ಟಿರುವ ಖಲೀತಾವು ನಮ್ಮ ಸಮಕ್ಷಮ ಓದಿ ಹೇಳಲ್ಪಟ್ಟಿತು. ಖಲೀತ ಮುಗಿಯುವ ಸಮಯದಲ್ಲಿ, ಮಹಾರಾಜನಿಗೆ ಮೂರ್ಛೆ ಬಂದಕಾರಣ ನಾವು, ಅರ ಮನೆ ಬಿಟ್ಟು ಹೊರಗೆ ಬಂದು, ಹಾಗೇನೇ ಹೊರಟು ಬಂಗಲೆಗೆ ಬಂದು ಸೇರಿದೆವು.''

ಯಲ್ಲಿಸ್ ಸಾಹೇಬನು, ಹಿಂದಕ್ಕೆ ಹೋದನಂತರ, ಮಹಾರಾಜನ ಪ್ರಕೃತಿಯು, ಔಷಧೋಪಚಾರಗಳಿಂದ, ಸ್ವಲ್ಪ ಸುದಾರಿಸಿದಂತೆ ತೋರಿತು. ಆದರೆ, ರಾಣೀ ಸಾಹೇಬ ಳಿಗೆ ಆ ವಿಷಯದಲ್ಲಿ ಅತಿಶಯ ಚಿಂತೆ ಉತ್ಪನ್ನವಾಗಿ, ಆಕೆಯ ನಾಲಿಗೇಮೇಲಿನ ನೀರೆಲ್ಲಾ ವೊಣಗಿಹೋಯಿತು. ಮಹಾರಾಜನಿಗೆ, ಸ್ವಲ್ಪ ನಿದ್ರೆ ಬಂದರೇ ಆಗಲಿ, ಅಥವ ಸ್ವಲ್ಪ ಉಪಶಮನ ತೋರಿದರೇ ಆಗಲಿ, ಬಾಯಿ ಸಾಹೇಬಳಿಗೆ ನಿಮಿಷ ಮಾತ್ರ ಧೈರ್ಯ ವಾಗುತ್ತಾ ಇತ್ತು. ಪುನಃ ಸ್ವಲ್ಪ ಹೆಚ್ಚು ಕಡಮೆ ಆದ ಕೂಡಲೆ, ಆಕೆಗೆ ಚಿಂತೆ ಉತ್ಪನ್ನವಾಗಿ ಮನಸ್ಸೆಲ್ಲಾ ಚಂಚಲವಾಗುತ್ತಾ ಇತ್ತು. ಈ ರೀತಿ ಆಗುತ್ತಾ ಆಗುತ್ತಾ ಮಧ್ಯಾಹ್ನ, ನಾಲ್ಕು ಘಂಟೆ ಹೊಡೆಯುತ್ತಲು (ತಾ. 20, ನವಂಬರ್) ಅರಮನೆ ಮುಂದೆ, ಸಾವಿರಾರು ಜನಗಳ ಗದ್ದಲವು ಯೆದ್ದಿತು. ಪ್ರತಿ ಒಬ್ಬ ಮನುಷ್ಯನ ಬಾಯಿಯಲ್ಲೂ, 'ಮಹಾರಾಜನ ಪ್ರಕೃತಿ ಯಾವರೀತಿ ಅದೆ?' ಇದೇ ಪ್ರಶ್ನೆಯೇ, ಕಿವಿಗೆ ಬೀಳುತ್ತಾಯಿತ್ತು. ಇಷ್ಟರಲ್ಲಿ ಮೇಜರ್ ಯೆಲ್ಲಿಸ್ ಸಾಹೇಬನು ರಾಜನ ಭೇಟಿಗೆ ಹೊರಟಿದ್ದಾನೆಂತ, ವರ್ತಮಾನ ಹೇಳುವದಕ್ಕೋಸ್ಕರ, ರೆಸಿಡೆನ್ಸಿ ಯಿಂದ, ಒಬ್ಬ ಸವಾ ರನು ಅರಮನೆಗೆ ಬಂದನು. ಆ ಸಮಯದಲ್ಲಿ ರಾಜನ ದೇಹಸ್ಥಿತಿ ಬಹಳ ಖದಲಾ ಯಿಸಿ ಹೋಗಿ, ಇದ್ದಕಿದ್ದಹಾಗೆ, ಮೂರ್ಛೆಬಂದು, ಮಾತು ನಿಂತುಹೋಗಿತ್ತು. ಇದನ್ನು ನೋಡಿ ಅರಮನೆಯಲ್ಲಿದ್ದ ಮಂಡಲಿಯವರು ಮೇಜರ್ ಸಾಹೇಬನಿಗೆ, ಈಗ ಮಹಾರಾಜನ ಭೇಟಿಯಾಗುವ ಆಶೆಯಿಲ್ಲವೆಂತ ಸವಾರನ ಸಂಗಡ ನಿರೂಪ ಕಳು ಹಿಸಿದರು.

ಮಹಾರಾಜನಿಗೆ ಮಾತುನಿಂತು, ಜ್ಞಾನತಪ್ಪಿತು ಯೆಂಬುವದನ್ನು ನೋಡಿದ ಕೂಡಲೆ, ಮಹಾರಾಣಿ ಸಾಹೇಬಳಿಗೆ ಕರುಣ ರಸದಿಂದ ಭರಿತವಾಗಿ, ಮಾತನಾಡಲಾರದೇ ಕುತ್ತಿಗೆ ಹಿಡುಕೊಂಡಿದ್ದಲ್ಲದೆ, ನೇತ್ರಗಳಲ್ಲಿ ಯೇಕಪ್ರಕಾರವಾಗಿ ನೀರುಹರಿಯಲು ಪ್ರಾರಂಭಿಸಿತು, ಆಕೆಯು ತಕ್ಷಣವೇ ಬಹಳದುಃಖ ಸ್ವರದಿಂದ ತನ್ನ ಕುಲದೇವತೆ ಯಾದ, ಮಹಾಲಕ್ಷ್ಮಿಯ ಸಮೀಪದಲ್ಲಿ ನಿಂತು, "ಜಗಜ್ಜನನಿ! ಮೊದಲುನನ್ನ ಕುತ್ತಿಗೆ ಕೊಯ್ಯಿ" ಈ ರೀತಿ ಕೂಗಿಕೊಂಡಳು. ಅದನ್ನು ಕೇಳಿ ಮಾಮಾಸಾಹೇಬ್ ಮುಂತಾದ ಸಮೂಹವು ರಾಣಿಸಾಹೇಬಳ ಹತ್ತರಕ್ಕೆ ಓಡಿಬಂದು, ಆಕೆಗೆ ಸಮಾಧಾನ ಮಾಡಿ, ಸ್ವಲ್ಪಧೈರ್ಯ ಕೊಟ್ಟರು. ಮತ್ತು ಮಹಾರಾಜನಿಗೆ ಅಮೌಲ್ಯವಾದ ಮಾತ್ರೆ ನೆಕ್ಕಿಸಿದರು. ಅದರ ಶಕ್ತಿಯಿಂದ, ಆತನಿಗೆ ಸ್ವಲ್ಪ ಯೆಚ್ಚರ ಹುಟ್ಟಿ, ಕಣ್ಣುತೆರೆದು, "ಯೇಜಂಟು ಸಾಹೇಬ್ ಯಲ್ಲಿದ್ದಾನೆ?" ಯೆಂತ ವಿಚಾರಿಸಿದನು. ಆಗ ಹತ್ತಿರಿದ್ದ ಮಂಡಲಿಯವರು, ಯಲ್ಲಿಸ್ ಸಾಹೇಬನಕಡೆಗೆ ಕುದುರೇ ಸವಾರರನ್ನ ಕಳುಹಿಸಿದರ

ಮೊದಲನೇ ಸವಾರ ಬಂಗಲೇಗೆ ಹೋಗಿ ಮುಟ್ಟಿದನೋ ಇಲ್ಲವೋ ಯಂಬಷ್ಟ ರಲ್ಲಿಯೇ, ಯರಡನೇ ಸವಾರ, ಅಲ್ಲಿಗೆ ತಲ್ಪಿ ಸಾಹೇಬ್ ಬಹದ್ದೂರ್ರನ್ನ, ಅರಮನೆಯಲ್ಲಿ ಅಪೇಕ್ಷಿಸುತ್ತಾರೆಯಂತ ಹೇಳಿದನು. ಆಪ್ರಕಾರ ಯೆಲ್ಲಿಸ್ ಸಾಹೇಬನು ಡಾಕ್ಟರ್ ಅರ್ಲ ಸಾಹೇಬನನ್ನ ತನ್ನ ಸಂಗಡ ಕರಕೊಂಡು, ಅರಮನೆಗೆ ಬಂದನು. ಆ ವೇಳೆಯಲ್ಲಿ ಮಹಾರಾಜನನ್ನ ಮಹಡೀಮೇಲಿನ ದಿರ್ವಾಖಾನೆಯಿಂದ ಕೆಳಗಿನ ಅಂತಸ್ತಿನಲ್ಲಿ, ಜನಾನಾ ಹತ್ತರ ಬಂದು ಮಹಲಿನಲ್ಲಿ, ಕರಕೊಂಡುಬಂದು ಇಟ್ಟಿದ್ದರು. ಯಲ್ಲಿಸ್ ಸಾಹೇಬನು ಸಮೀಪಕ್ಕೆ ಬರುತ್ತಲೆ, ಮಹಾರಾಜನಿಗೆ ಬಹಳ ಆನಂದವಾಗಿ, ಪ್ರೇಮಭಾವದಿಂದ ಆತನ ಸಂಗಡ ಮಾತನಾಡುವದಕ್ಕೆ ಪ್ರಯತ್ನ ಮಾಡಿದನು. ಆದರೆ, ಆತನ ಸ್ವಭಾವ, ಮತ್ತು ಎಚ್ಚರಿಕೆ, ಕ್ಷಣಿಕವಾಗಿದ್ದ ಕಾರಣ, ಸಾಹೇಬನು ಆತನಿಗೆ ವಿಶೇಷ ಶ್ರಮ ಕೊಡದೆ, ದೇಹಸ್ಥಿತಿಯ ವಿಷಯವನ್ನು ಕುರಿತು ಡಾಕ್ಟರ್ ಅರ್ಲ ಸಾಹೇಬನಿಗೆ ಹೇಳಿ, ಆತನಿಂದ ರೋಗಿಯನ್ನು ಪರೀಕ್ಷೆ ಮಾಡಿಸಿದನು. ಮತ್ತು ಅರ್ಲ ಸಾಹೇಬನ ಔಷಧವನ್ನ ಅವಶ್ಯಕ ತೆಗದುಕೊಳ್ಳಬೇಕೆಂತ, ಮಹಾರಾಜನಿಗೆ ಆಗ್ರಹಪೂರ್ವಕವಾಗಿ ವಿಜ್ಞಾಪಿಸಿದನು. ಮಹಾರಾಜನು ಅತ್ಯಂತ ಧರ್ಮಿಷ್ಟನಾಗಿದ್ದಕಾರಣ ಇಂಗ್ರೇಜಿ ಔಷಧಿಯನ್ನ ತೆಗದುಕೊಳ್ಳುವದಕ್ಕೆ ಸಮ್ಮತಿಸಲಿಕ್ಕಿಲ್ಲವೆಂತ ಯೋಚಿಸಿ, ಗಂಗೋದಕವನ್ನು ಹಾಕಿ, ಬ್ರಾಹ್ಮಣರಿಂದ ಔಷಧಮಾಡಿ ಹಾಕುತ್ತೇವೆಯಂತ ಯೆಲ್ಲಿಸ್ ಸಾಹೇಬನು ಹೇಳಿದ್ದರಮೇಲೆ, ರಾಜನು ಅದಕ್ಕೆ ತನ್ನ ಅನುಮತಿಯನ್ನು ತೋರಿಸಿದನು. ಕೂಡ್ಲೆ ತನ್ನ ಬಂಗಲೆಗೆ ಹೋಗಿ, ಡಾಕ್ಟರ್ ಅರ್ಲ ಸಾಹೇಬನು ಉತ್ತಮ ಔಷಧಮಾಡಿ, ಒಬ್ಬ ಬ್ರಾಹ್ಮಣನ ಸಂಗಡ ಅರಮನೆಗೆ ಕಳುಹಿಸಿದನು. ಮೇಜರ್ ಯೆಲ್ಲಿಸ್ ಸಾಹೇಬನು ಸಹ ಕೂಡಲೇ ಹಿಂದಕ್ಕೆ ಹೋದನು. ಇಂಗ್ರೇಜಿ ಔಷಧಿ ಕಣ್ಣಿಗೆ ಬಿದ್ದಕೂಡಲೇ ಮಹಾರಾಜನು, ಇದನ್ನು ನಾನು ಎಂದಿಗೂ ತೆಗದುಕೊಳ್ಳತಕ್ಕವನಲ್ಲವೆಂತ ಹೇಳಿದನು; ಆದಕಾರಣ ಡಾಕ್ಟರನ ಪ್ರಯತ್ನವೇನೂ ಸಾಗಲಿಲ್ಲ. ! ! *

---

* ಮಹಾರಾಜ ಗಂಗಾಧರರಾಯನು, ಇಂಗ್ರೇಜಿ ಔಷಧಿ ತೆಗದುಕೊಂಡಿದ್ದರೆ, ಬದುಕುತಿದ್ದನು. ಮತ್ತು ಆತನಿಗೆ ಸಂತತಿಯಾಗಿ, ಝಾಂಸೀಸಂಸ್ಥಾನಕ್ಕೆ ಬಾಧ್ಯಸ್ಥನು ಜನಿಸುತ್ತಾ ಇದ್ದನು ಯಂತ ಒಬ್ಬ ಗ್ರಂಥಕರ್ತನು ಅಭಿಪ್ರಾಯ ಪಟ್ಟಿರುತ್ತಾನೆ. ಅದು ಈರೀತಿ:—

" He (Maharaja Gangadhar Rao) might have lived to have male heirs, and perpetuate a Hindoo throne at Jhansi; but although complaisant in politics he was orthodox and would not taste the medicines of the English Doctor." *Edwin Arnold* (*Sir*) *M. A.*

ಮಹಾರಾಜ ಗಂಗಾಧರರಾಯನು ತನ್ನ ಮರಣಕ್ಕೆ ಪೂರ್ವ, ಬುಂದೇಲ್ ಖಂಡದ ಪೊಲಿಟಕಲ್ ಯೇಜಂಟ್ ಮೇಜರ್ ಮಾಲ್ಕಾಂನಿಗೆ, ಇನ್ನೊಂದು ಖಲೀತಾ ಕಳುಹಿಸಿ ಕೊಡ ಬೇಕೆಂತ ಅಪ್ಪಣೆಮಾಡಿದನು. ಅದರಲ್ಲಿ 1817 ನೇ ಇಸವಿಯಲ್ಲಿ, ಬ್ರಿಟಿಷ್ ಸರ್ಕಾರದ ವರು ರಾಮಚಂದ್ರರಾಯನ ಸಂಗಡ ಮಾಡಿಕೊಂಡ ತಹಾನಾಮೆಯಲ್ಲಿ ಇದ್ದ ಈ ಕೆಳ ಗಿನ ತಾತ್ಪರ್ಯಮಾತ್ರ ಹೆಚ್ಚಿಗೆ ಶೇರಿಸಿತ್ತು. ವುಳದದ್ದೆಲ್ಲಾ, ಯೆಲ್ಲಿಸ್ ಸಾಹೇಬನಕಡೆಗೆ ಕೊಟ್ಟಿದ್ದ ಖಲೀತಾದಂತೆಯೇ ಬರದಿತ್ತು:—"ಝಾಸೀ ಸರ್ಕಾರದ ಮತ್ತು ಬ್ರಿಟಿಷ್ ಸರ್ಕಾರದ ಸ್ನೇಹ ವಿರಬೇಕು. ಮತ್ತು ಅದು ಸ್ಥಿರವಾಗಿರಬೇಕೆಂಬ ವುದ್ದೇಶ್ಯದಿಂದ, ಬ್ರಿಟಿಷ್ ಸರ್ಕಾರದ ಆಡಳತವು, ಬುಂದೇಲ್‌ಖಂಡದಲ್ಲಿ ಪ್ರಾರಂಭ ವಾಗುವ ವೇಳೆಯಲ್ಲಿ, ಕೈ, ಶಿವರಾವ್ ಭಾವೂನ ಆಧೀನದಲ್ಲಿದ್ದ ಮತ್ತು ಈಗ ಝಾಸೀ ಸಂಸ್ಥಾನದ ಕೈಕೆಳಗೆ ಇರುವ ಸರ್ವಪ್ರಾಂತ್ಯವನ್ನ ರಾಮಚಂದ್ರ ರಾಯನಿಗೆ, ಆತನ ವಾರಸುದಾರರಿಗೆ ಮತ್ತು ಅವನ ವಾರಸುದಾರರ ಸ್ಥಾನದಲ್ಲಿ, ಸ್ಥಾಪಿತವಾಗುವವರಿಗೆ, ಬ್ರಿಟಿಷ್‌ಸರ್ಕಾರ ದವರು ವಂಶಪಾರಂಪರ್ಯವಾಗಿ ಹಕ್ಕುದಾರರಾಗಿ ನೇಮಕಮಾಡಿ, ಅವರು ಆಪ್ರಾಂತ್ಯದ ಸಂಸ್ಥಾನೀಕರಾಗಿದ್ದಾರೆಯೆಂತ ವಪ್ಪಿಕೊಂಡಿರುತ್ತಾರೆ." ಇಷ್ಟುಸಂಗತಿಸೇರಿಸಿ ಮುಂದೆ ಬರೆದದ್ದು ಯೇನಂದರೆ, "ನನ್ನ ವಿನಂತೀ ಪ್ರಕಾರ, ಮೇಜರ್ ಯೆಲ್ಲಿಸ್ ಮತ್ತು ಝಾಸೀ ಸೈನ್ಯದ ಅಧಿಪತಿ ಕ್ಯಾಪ್ಟನ್ ಮಾರ್ಟಿನ್ ಸಹ, ಅರಮನೆಗೆ ದಯಮಾಡಿಸಿ ದ್ದರು. ಈ ಖಲೀತಾದಲ್ಲಿ ಬರೆದಿರುವ, ಸರ್ವಸಂಗತಿಯನ್ನೂ ಅವರ ಸಮಕ್ಷಮ ಸ್ಪಷ್ಟ ವಾಗಿ ಹೇಳಿರುತ್ತೇನೆ. ನನ್ನ ಮಮ್ಮಗನಾದ (Nabeera-i-Khurd) ಆನಂದ ರಾಯನನ್ನ ದತ್ತು ತೆಗದುಕೊಂಡು ಇರುವ ಸಂಗತೀ ಕುರಿತು, ಖಲೀತಾವನ್ನು ಅವರ ಸ್ವಾಧೀನಕ್ಕೆ ಕೊಟ್ಟಿದ್ದೇನೆ. ಅದನ್ನು ಅವರು ತಮ್ಮ ಕಡೆಗೆ ಕಳುಹಿಸಿ ಕೊಟ್ಟಿರ ಬಹುದೆಂತ ಸಂಪೂರ್ಣ ನಂಬಿದ್ದೇನೆ," ಯೆಂತ ಮುಂತಾಗಿ.

ಮಹಾರಾಜಾ ಗಂಗಾಧರರಾಯನು, ಈ ಪ್ರಕಾರ ವ್ಯವಸ್ಥೆಮಾಡಿದ್ದನ್ನ, ಕೃಪಾ ಳುವಾದ ಬ್ರಿಟಿಷ್ ಸರ್ಕಾರದವರು ಪೂರ್ವದಂತೆ ಝಾಸೀ ಸಂಸ್ಥಾನವನ್ನ ತನ್ನ ಮಗನ ಕಡೆಗೆ ನಡಶಿಕೊಡುತ್ತಾ ಬರುತ್ತಾರೆ; ಮತ್ತು ಝಾಸೀ ಮನೆತನದ ಹೆಸರು ನಿರಂತರವಾಗಿ ಇರಬಹುದೆಂತ, ತುಂಬಾ ಆಶೆಯಿಟ್ಟುಕೊಂಡಿದ್ದನು. ಆ ಸಮಯದಲ್ಲಿ, ಆತನ ಪ್ರಕೃತಿಯು ಕೇವಲ ಅಂತ್ಯಾವಸ್ಥೆ ಆಗಿತ್ತು. ಆದಾಗ್ಯೂ ಆತನಿಗೆ ಮಹಾ ರಾಣೀ ಲಕ್ಷ್ಮೀಬಾಯಿ ಸಾಹೇಬಳ ವಿಷಯವಾಗಿ ಸ್ವಲ್ಪವೂ ಯೋಚನೆ ಯಿರಲಿಲ್ಲ. ಯಾಕಂದರೆ, ಬ್ರಿಟಿಷ್ ಸರ್ಕಾರದವರು ತನ್ನ ವಿನಂತಿಯನ್ನ ಎಂದಿಗೂ ಮನ್ನಿಸದೇ ಇರಲಾರರು ಯಂತ ವಿಶ್ವಾಸವಿತ್ತು. *

* ಮಹಾರಾಜ ಗಂಗಾಧರರಾಯನು ಬ್ರಿಟಿಷ್ ಸರ್ಕಾರದಮೇಲೆ ವಿಶ್ವಾಸವಿಟ್ಟು, ಕಳುಹಿಸಿಕೊಟ್ಟ ಖಲೀತೆ ವಿಷಯವನ್ನು ಕುರಿತು, ಒಬ್ಬ ಯುರೋಪಿಯನ್ ಗ್ರಹ ಸ್ಥನು, ಈ ಪ್ರಕಾರ ಟೀಕಾಮಾಡಿದ್ದಾನೆ:—

ಇದು ಹಾಗೆ ಇರಲಿ. ಈ ಪ್ರಕಾರವಾಗಿ ಮಹಾರಾಜ ಗಂಗಾಧರರಾಯನು ತನ್ನ ಪ್ರಪಂಚ ಸಂಬಂಧವಾದ ವ್ಯವಸ್ಥೆಯನ್ನ ಸಮಾಧಾನದಿಂದಲೂ, ಅಂತಃಕರಣದಿಂದಲೂ, ಸರಿಪಡಿಸಿಟ್ಟನು. "ಮರಣಂ ಪ್ರಕೃತಿಃ ಶರೀರಿಣಾಂ," ಯೆಂಬ ಕವಿಕುಲ ಗುರುವಿನ ವಾಕ್ಯವನ್ನ ಅನುಸರಿಸಿ, ಮರಣವನ್ನ ಯಾರಿಗೂ ತಪ್ಪಿಸಿಕೊಳ್ಳಲು ಆಗುವದಿಲ್ಲ. ಧನಿಕನಿಂದ ಹಿಡಿದು ದರಿದ್ರನ ಪರಿಯಂತರ ಮೃತ್ಯುವಶ ಆಗಲೇಬೇಕು. ಮಹಾರಾಜ ಗಂಗಾಧರತಾಯನು ಸಂಸ್ಥಾನಾಧೀಶನಾಗಿದ್ದ ಕಾರಣ, ಆತನ ತಲೆದೆಶೆ ಮತ್ತು ಕಾಲು ಕಡೆಗೆ ಸಹ ಧನ್ವಂತರಿಗೆ ಸದೃಶವಾದ, ರಾಜವೈದ್ಯರು ಕೂತಿದ್ದರು. ಮತ್ತು ಸಾವಿರಾರು ಸೇವಕರು ಆತನ ಪ್ರಕೃತಿಗೋಸ್ಕರ ಬಹಳ ಆಸಕ್ತಿ ತೆಗದುಕೊಳ್ಳುತ್ತಾ ಇದ್ದರು. ಆದರೆ, ಆತನ ಮೃತ್ಯು ಸಮಯ ಸಮೀಪಿಸಿದಾಗ, ಯಾರ ಉಪಾಯವೂ ನಡೆಯಲಿಲ್ಲ. ಡಿಸೆಂಬರು ತಾರೀಖು 21 ನೇ ದಿವಸ ಬೆಳಗಾಗುತ್ತಲೇ ಮಹಾರಾಜನ ಪ್ರಕೃತಿಯ ಚಿನ್ಹೆಗಳೆಲ್ಲಾ ಭಯಂಕರವಾಗಿ ತೋರುತ್ತಾ ಬಂತು. ಮಹಾರಾಣೀ ಲಕ್ಷ್ಮೀಬಾಯಿಸಾಹೇಬಳು ನಿರಾಶಳಾಗಿ, ದುಃಖದಲ್ಲಿ ವ್ಯಾಕುಲಳಾದಳು. ಪ್ರಾತಃಕಾಲದಿಂದ ಹಿಡಿದು, ಸಾವಿರಾರುಬ್ರಾಹ್ಮಣರಿಗೆ ದಾನ ಧರ್ಮ ಪ್ರಾರಂಭವಾಗಿ, ವಿಷ್ಣು ಸಹಸ್ರನಾಮ ಮುಂತಾದ ಸ್ತೋತ್ರದ, ಪಾರಾಯಣ ನಡೆಯುತ್ತಾ ಇತ್ತು. ಇಷ್ಟರಲ್ಲಿ ಮಧ್ಯಾಹ್ನ ತಿರಗಿ ಹೋಗಿ ಮಹಾರಾಜನ ನಾಡಿಯ ಚಲನೆಯು ನಿಂತು ಹೋಯಿತು.

---

"The Rajah wrote to the Governor-General respectfully commending his youthful choice to his consideration and care, and asking for the recognition of his widow as Regent during the minority. He appealed to the second article of the subsisting treaty, which guaranteed the territory to heirs of his family in perpetual succession, whether heirs by descent, consanguinity, or adoption, and he trusted that, "in consideration of the fidelity he had always evinced towards Government, favour might be shown to this child." *He was allowed to die in the delusion that native fidelity would be remembered.* The Empire was grown so strong that the auto-crat of Fort William thought it could afford to forget fidelity."

*W. M. Torrens M. P.*

ಮತ್ತು "ಅಂತ್ಯಕಾಲ ಬರುತ್ತಾ ಬರುತ್ತಾ ಅಲ್ಲೇ ನಿಲ್ಲುವದಿಲ್ಲ" ಯೆಂಬ ವಾಕ್ಯವನ್ನನುಸರಿಸಿ, ಮಹಾರಾಜ ಗಂಗಾಧರರಾವ್ ಬಾಬಾಸಾಹೇಬನಿಗೆ, ಪ್ರಾಣೋತ್ಕ್ರಮಣವಾಗಿ, ಆತನು ಕೈಲಾಸವಾಸವನ್ನ ಸ್ವೀಕರಿಶಿದನು !!

ಈಮೃತ್ಯು ವರ್ತಮಾನವು ಪಟ್ಟಣವಲ್ಲೆಲ್ಲಾ ಕೂಡಲೆ ಹರಡಿತು. ಎಲ್ಲೆಲ್ಲಿ ನೋಡಿದರೂ, ಆ, ಅನ್ನುತ್ತಾ ಇದ್ದರು. ಅರಮನೆಯಲ್ಲಂತೂ, ರೋದನ ಶಬ್ದವೇ ಕೇಳುತ್ತಾ ಇತ್ತು. ಮಹಾರಾಣೀ ಲಕ್ಷ್ಮೀಬಾಯೀ ಸಾಹೇಬಳು ಅತ್ಯಂತ ಶೋಕಾಕ್ರಾಂತಳಾಗಿ, ದೊಡ್ಡ ದೊಡ್ಡ ಧ್ವನಿಯಿಂದ ಕೂಗಿಕೊಳ್ಳುತ್ತಾ ಯಿದ್ದಳು. ಪ್ರಿಯ ಪತಿವಿಯೋಗದಿಂದ ಆಕೆಯ ಹೃದಯದಲ್ಲಿ, ಶೋಕಾಗ್ನಿಯ ಜ್ವಾಲೆಯು ತುಂಬಿ ಹೋಗಿ, ಆಕೆಗೆ ತನ್ನ ದೇಹದಮೇಲಿನ ಜ್ಞಾನವೇ ತಪ್ಪಿ ಹೋಗಿತ್ತು ! ಆ ಸಮಯ-ದಲ್ಲಿ, ಆಕೆಯ ಸ್ಥಿತಿಯು ಯಾವರೀತಿಯಲ್ಲಿ ಇತ್ತೆಂಬುವದನ್ನ, ವರ್ಣನೆ ಮಾಡಲು, ಅಸಾಧ್ಯವಾಗಿ ಇದೆ.

ಮಹಾರಾಜನು ಪರಲೋಕವಾಸಿಯಾದ ನಂತರ, ಪದ್ಧತಿ ಪ್ರಕಾರ, ರಾಜಮನೆತನದವರ ಮರ್ಯಾದೆ ಅನುಸರಿಸಿ, ಆತನ ಪ್ರೇತ ಸಂಸ್ಕಾರ ವಿಧಿಗಳು ನಡೆಯಿತು. ಮಹಾರಾಜನ ಸ್ಮಶಾನ ಯಾತ್ರೆಗೆ, ಝಾಸೀ ನಗರ ವಾಸಿಗಳಾದ ಸರ್ವ ಪ್ರಜೆಗಳೂ ಹೊರಟದ್ದರು. ಸ್ವತಃ ಪೊಲಿಟಿಕಲ್ ಯೇಜಂಟ್, ಮೇಜರ್ ಯೆಲ್ಲಿಸ್ ಮತ್ತು ಝಾಸೀ ಇತರ ದೊಡ್ಡ ದೊಡ್ಡ ಯುರೋಪಿಯರ್ನ ಅಧಿಕಾರಿಗಳೂ ಸಹ, ತಮ್ಮ ಅಶುಭಸೂಚಕವಾದ ಉಡುಪುಗಳನ್ನು ಹಾಕಿಕೊಂಡು ಹೋಗಿದ್ದರು. ಸ್ಮಶಾನ ಯಾತ್ರಾ ಮುಗಿದನಂತರ, ಮೇಜರ್ ಯೆಲ್ಲಿಸ್ ಮತ್ತು ಕ್ಯಾಪ್ಟನ್ ಮಾರ್ಟಿನ್ ಸಹ, ಇರ್ರೆಗ್ಯುಲರ್ ಕ್ಯಾವಲ್‌ರೀ ಸೇನೆಯ ಕೆಲವು ಸವಾರರನ್ನ ಸಂಗಡ ತೆಗದುಕೊಂಡು, ಮಹಾರಾಣಿ ಲಕ್ಷ್ಮೀಬಾಯಿ ಸಾಹೇಬಳಿಗೆ, ದುಃಖಕರವಾದ ದರ್ಶನ ಕೊಡುವಗೋಸ್ಕರ, ಅರಮನೆಗೆ ಹೋದರು. ಅಲ್ಲಿಗೆ ಹೋದನಂತರ ಯೆಲ್ಲಿಸ್ ಸಾಹೇಬನು ಬಾಯಿಸಾಹೇಬಳಿಗೆ ಸಾಮೋಪಚಾರಗಳಿಂದ ಸಮಾಧಾನ ಹೇಳಿ, ಶೋಕ ಮಾಡಬಾರದೆಂತ ವಿಜ್ಞಾಪಿಸಿಕೊಂಡನು. ಆ ಕಾಲದಲ್ಲಿ ಬಾಯಿಸಾ ಸಾಹೇಬಳು ಶೋಕಸಾಗರ ಮಧ್ಯದಲ್ಲಿ ಕೇವಲ ಮುಳಿಗಿಹೋಗಿದ್ದಳಾದ್ದರಿಂದ, ಆಕೆಯ ಸ್ಥಿತಿಯು ಎಷ್ಟುರಮಟ್ಟಿಗೆ ಕರುಣಾಸ್ಪದವಾಗಿತ್ತು ಅಂದರೆ ಅದನ್ನು ನೋಡಿ, ಕಲ್ಲು ಕೂಡ ಕರಗುತ್ತಾ ಇತ್ತು. ಹೀಗೆ ಇರುವಾಗ, ಯಲ್ಲಿಸ್ ಸಾಹೇಬನದು ಯೇನು ದೊಡ್ಡದು ? ಅವನು ಅಂತಃಕರುಣದಿಂದ, ನಿಮ್ಮ ಆಸೆಯ ಪ್ರಕಾರ ಯೆಲ್ಲಾ ನಡಸುತ್ತೇನೆಂತ ವಾಗ್ದಾನ ಕೊಟ್ಟು, ರಾಣೀ ಸಾಹೇಬಳಿಗೆ, ದುಃಖ ಪಡಬಾರದೆಂತ ಪುನಃ ಪುನಃ ಹೇಳಿ, ಅರಮನೆಯಿಂದ, ಖಜಾನೆಯ ಬಂದೋಬಸ್ತು ಮಾಡುವಗೋಸ್ಕರ, ಕಿಲ್ಲೇ ವಳಗೆ ಹೋದನು.

ಝಾಸೀ ಕೋಟೆಯು ಬಹು ಪ್ರಚಂಡವಾಗಿದ್ದು ಅದರಲ್ಲಿ, ಸಂಸ್ಥಾನದ ಕೈದಿಗಳೂ ಮತ್ತು ಬಕ್ಕಸ ಸಹಾ ಇಡಲ್ಪಟ್ಟಿದ್ದವು. ಭಂಡಾರದಲ್ಲಿ ಸುಮಾರು 245,738 ಭಂಗಾರ ಬೆಳ್ಳಿ ನಾಣ್ಯಗಳು ಇದ್ದವು. ಖಜಾನೆಯ ಎಲ್ಲಾ ಬಾಗಿಲುಗಳಿಗೂ ಯಲ್ಲಿಸ್

ಸಾಹೇಬನು ಕಿಲೇದಾರ್ ಮತ್ತು ಜ್ವಾಲಾನಾಥಪಂಡಿತ, ಇವರ ಸಮಕ್ಷಮ ಬೀಗವನ್ನು ಹಾಕಿಸಿ, ಮೊಹರುಮಾಡಿಸಿ ಕಿಲ್ಲೆಯ ಸಂರಕ್ಷಣೆಗೋಸ್ಕರ ಶಿಂಧ್ಯಾನ ಕಂಟಿಂಜೆಂಟ್ ಸೇನೆಯ ಪೈಕಿ, 6 ನೇ ಪಟಾಲಂನ, ನೂರು ನೂರಿಪ್ಪತ್ತೈದು ಜನಗಳ ಒಂದು ತುಕಡಿ ನೇಮಿಸಿದನು. ಮಹಾರಾಜನ ಮರಣಾಂತರ, ಗಡಬಿಡಿ ಯೇನೂ ಹುಟ್ಟಬಾರದೆಂತ, ಆತನು ಪ್ರಮುಖ ಕಾರಭಾರೀ ಮಂಡಲಿ ಭೇಟಿ ತೆಗದುಕೊಂಡು ಅವರ ವಶೀಕರಣ ದಿಂದ, ಯೆಲ್ಲಾ ವ್ಯವಸ್ಥೆಯನ್ನೂ ಸರಿಪಡಿಸಿದನು. ಇದಲ್ಲದೆ ಕ್ಯಾಪ್ಟರ್ ಮಾರ್ಟಿನನು ಸೈನ್ಯದ ಬಂದೋಬಸ್ತನ್ನು ಚೆನ್ನಾಗಿ ಇಟ್ಟಿದ್ದನು. ಮಹಾರಾಜನ ಮರಣ ಸಮಾ ಚಾರವು, ಝಾಂಸೀ ಅಸಿಸ್ಟೆಂಟ್ ಪೊಲಿಟಿಕಲ್ ಯೇಜಂಟ್ ಮೇಜರ್ ಯೆಲ್ಲಿಸ್ * ನಿಂದಾ ಬುಂದೇಲ್ ಖಂಡದ ಪೊಲಿಟಿಕಲ್ ಯೇಜಂಟ್, ಮೇಜರ್ ಮಾಲ್ಕಾಂನಿಗೆ ತಿಳಿ ಯುತ್ತಲೇ ಆತನು ನವಂಬರು ತಾರೀಖು 25 ನೇ ದಿವಸ, ಹಿಂದುಸ್ಥಾನದ ಸರ್ಕಾರದ ಪರ ರಾಜ್ಯದ ಸಮ್ಮಂಧ ಸೆಕ್ರೆಟರಿಗೆ, ಒಂದು ಯಾದಿಯನ್ನು ಕಳುಹಿಸಿದನು. ಅದು ಈ ಪ್ರಕಾರ:—

ಗ್ವಾಲಿಯರ್, ಬುಂದೇಲಖಂಡ, ಮತ್ತು ರೀವಾ, ಸಂಸ್ಥಾನದ ಪೊಲಿಟಿಕಲ್ ಯೇ ಜಂಟ್ ಮೇಜರ್ ಡಿ. ಯೆ. ಮಾಲ್ಕಾಂ ಕಡೆಯಿಂದ, ಹಿಂದೂಸ್ಥಾರ್ನ ಸರ್ಕಾರದ ಸೆಕ್ರೆ ಟರಿ, ಫಾರಿನ್ ಡಿಪಾರ್ಟಮೆಂಟ್, ಫೋರ್ಟರ್ ವಿಲ್ಲಿಯಂ, ಯವರಿಗೆ :—†

ಮಹಾರಾಜ,

1. ಝಾಂಸೀ ಮಹಾರಾಜ ಗಂಗಾಧರರಾಯನಿಗೆ ತಾರೀಖು 21 ನೇ ದಿವಸ ಝಾಂಸಿಯಲ್ಲಿ, ದೇವಾಜ್ಞಾ ಆಯಿತು ಯೆಂಬುವದನ್ನ, ಘನತೆಯನ್ನು ಹೊಂದಿದ ಗವ ರ್ನರ್ ಜನರಲ್–ಇನ್–ಕೌನ್ಸಿಲ್‌ರಿಗೆ ತಿಳಿಸಲು ಬಹಳ ವ್ಯಸನಪಡುತ್ತೇನೆ.

2. ಮಹಾರಾಜನು ಸಾಯುವದಕ್ಕಿಂತ ಒಂದು ದಿವಸ ಹಿಂದೆ ದಾಮೋದರರಾವ್ ಗಂಗಾಧರರಾವ್ ಯಾನೆ ಆನಂದರಾವ್ ಯೆಂಬ ಒಬ್ಬ ಹುಡುಗನನ್ನು ದತ್ತು ತೆಗದು ಕೊಂಡು ಯಿರುವದಲ್ಲದೆ, ಆ ಹುಡುಗನು ತನಗೆ ಮೊಮ್ಮಗನಾಗಿದ್ದಾನೆಂತ ಹೇಳಿರು ತ್ತಾನೆ. ಪರಂತು, ನಿಜವಾಗಿ ನನಗೆ ತೋರುವದೇನಂದರೆ, ಆ ಹುಡುಗನು ಮಹಾರಾ ಜನ ಮೂಲಪುರುಷ ರಘುನಾಥರಾಯನ, ಐದನೇ ವಂಶಜನಾಗಿ ಇಂಗ್ರೀಜಿ ರೀತಿ ಪ್ರಕಾರ ಅವನು ಮಹಾರಾಜನ ದಾಯಾದಿ (ಕಕ್ಕನ ಮಗನು) ಯಾಗಿದ್ದಾನೆಂತ ಯೋ ಚಿಸತಕ್ಕದ್ದಾಗಿಧೆ.

---

* Letter to Major D. A, Malcolm. dated 21 November 1853.

† Letter from Major D. A, Malcolm. No, 24 of 1853—*Papers on the Annexation of Jhansi.*

3. ತಾರೀಖು 20 ನೇ ದಿವಸ ಮೇಜರ್ ಯೆಲ್ಲಿಸ್ ಸಾಹೇಬನು, ಮಹಾರಾಜನ ಭೇಟೀ ತೆಗದುಕೊಂಡಿದ್ದನ್ನು ಕುರಿತು ಮತ್ತು ಆತನ ಮರಣವನ್ನು ಕುರಿತು, ಬರೆದಿರುವ ಪತ್ರವನ್ನು ಘನ ಹೊಂದಿದ ಲಾರ್ಡ್ ಸಾಹೇಬರ ತಿಳುವಳಿಕೆ ಬಗ್ಗೆ ಕಳುಹಿಸಿಕೊಟ್ಟಿದ್ದೇನೆ. ಅದೇಪ್ರಕಾರ ಮಹಾರಾಜನು ಆನಂದರಾವ್ ಯೆಂಬ ಹುಡುಗನನ್ನು ದತ್ತು ತೆಗದುಕೊಂಡಿದ್ದನ್ನ ಕುರಿತು ವಿಸ್ತಾರವಾಗಿ ಬರೆದಿರತಕ್ಕಂಥ, ಒಂದು ಖಲೀತವನ್ನ ಅದೇ ತಾರೀಖಿನಲ್ಲಿ, ನನ್ನಲ್ಲಿಗೆ ಕಳುಹಿಸಿದ್ದನ್ನ ಸಹ ಮಲಫೂಪು ಕಾಗದಗಳ ಸಂಗಡ ಕಳುಹಿಸಿರುತ್ತೇನೆ.

4. ಝಾಁಸೀ ಸಂಸ್ಥಾನೀಕನು, ಯೇಕಾಯೇಕಿ ಮರಣ ಸಮಯದಲ್ಲಿ, ದತ್ತ ತೆಗದುಕೊಳ್ಳುವ ವಿಚಾರ ಮಾಡಿದ್ದರಿಂದ, ಝಾಁಸೀ ದರ್ಬಾರಿನಲ್ಲಿ ಪ್ರತಿಬಬ್ಬ ಮನುಷ್ಯನಿಗೂ ಆಶ್ಚರ್ಯ ತೋರುತ್ತಾ ಯಿರಬಹುದೆಂತ ನನಗೆ ಕಾಣುತ್ತದೆ. ಕಾರಣವೇನಂದರೆ, ಬಹಳ ಮಾಡಿ ಸಂಸ್ಥಾನದ ಸರ್ವ ಜಿಂದಿಗೆ ಜಿತರವುಗಳನ್ನು, ರಾಣಿ ಜೀವಂತಳಾಗಿರುವ ಪರ್ಯಂತರ, ಆಕೆಯುಕಡೆ ಬಿಡಬೇಕೆಂತ ಇಂಗ್ರೇಜಿ ಸರ್ಕಾರದವರಿಗೆ ವಿನಂತಿ ಮಾಡಿಕೊಂಡಾನೂ ಯೆಂತ ಯಲ್ಲರ ತಿಳುವಳಿಕೆಯಾಗಿತ್ತು. ಪರಂತು, ಬ್ರಿಟಿಷ್ ಸರ್ಕಾರದವರಿಗೂ ಮತ್ತು ಝಾಁಸೀ ಶುಭೇದಾರ್ ಶಿವರಾಮಭಾವೂನಿಗೂ ನಡೆದ ಪ್ರಥಮ ತಹಾದಲ್ಲಿ, ಝಾಁಸೀ ಸಂಸ್ಥಾನದವರ ವಂಶದಲ್ಲಿ, ಯಾರೂ ವಾರಸು ಪುರುಷ ಮತ್ತು ಸಮೀಪದ ವಾರಸುದಾರರು ಸಹ ಇರದೇ ಹೋಗಲಾರದಂಥ ಸಂಭವ ಉಂಟಾಗಲಾರದು ಯೆಂಬುವದ್ದರಿಂದ, ದತ್ತ ವಿಚಾರವನ್ನು ಸೇರಿಸಿರಬಹುದೆಂತ ತೋರುತ್ತದೆ.

5. ಹಿಂದೂಸ್ಥಾನ ಸರ್ಕಾರದ ತಿಳುವಳಿಕೆಗೋಸ್ಕರ, ಝಾಁಸೀ ಸಂಸ್ಥಾನದವರ ಸಾಧಾರಣವಾದ ಒಂದು ವಂಶ ವೃಕ್ಷವನ್ನ ಇದರ ಸಂಗಡ ಕಳುಹಿಸಿರುತ್ತೇನೆ. ಅದು ಸರಿಯಾಗಿರಬಹುದೆಂತ ನನಗೆ ನಂಬಿಕೆ ಇದೆ. ಈ ವಂಶ ವೃಕ್ಷದಿಂದ, ಈಗ ದತ್ತು ತೆಗದುಕೊಂಡಿರುವ ಹುಡುಗನು, ಮಹಾರಾಜ ಗಂಗಾಧರರಾಯನ ಪೂರ್ವಜ, ರಘುನಾಥರಾವ್ (1ನೇ) ನ, ವಂಶದವನಾಗಿದ್ದಾನೆ.

6. ತಾರೀಖು 2 ನೇ ದಿವಸ ಮೇಜರ್‌ಯೆಲ್ಲಿಸ್‌ನು ನನಗೆ ಒಂದು ಸೂಚನಾಪತ್ರವನ್ನು ಕಳುಹಿಸಿಕೊಟ್ಟಿದ್ದರ ನಕಲನ್ನು ಹಿಂದೂಸ್ಥಾನ ಸರ್ಕಾರದ ಕಡೆಗೆ 3 ನೇ ತಾರೀಖಿನಲ್ಲಿ ಕಳುಹಿಸಿ ಕೊಟ್ಟಿದ್ದೇನೆ. ಅದರಲ್ಲಿ ಸೂಚಿಸಿರುವ ಪ್ರಕಾರ ಮೇಜರ್ ಯೆಲ್ಲಿಸ್ ಸಾಹೇಬನು ನಡಕೊಳ್ಳುತ್ತಾ ಇದ್ದಾನೆ. ಮತ್ತು ಸರ್ಕಾರದ ಮತ್ತು ಝಾಁಸೀ ಸಂಸ್ಥಾನದ ವ್ಯವಸ್ಥೆಯು ವಿಷಯವಾಗಿ ಮುಂದೆ ಹುಕ್ಕುಂ ಬರುವವರೆಗೂ, ಮಹಾರಾಜನು ಮಾಡಿರುವ ದತ್ತ ವಿಧಾನದ ಕಡೆಗೆ ಸರ್ವಥಾ, ಲಕ್ಷ್ಯ ಕೊಡತಕ್ಕವನಾಗಿಲ್ಲ.

7. ಝಾಁಸೀ ಸಂಸ್ಥಾನದವರ ಸಂಗಡ ಬ್ರಿಟಿಷ್ ಸರ್ಕಾರದ ಸಂಬಂಧ, ಹ್ಯಾಗೆ ಇದೆ ಯೆಂಬುವದನ್ನ ಸಂಕ್ಷೇಪವಾಗಿ, ಇಲ್ಲಿ ತಿಳುವಳಿಕೆ ಕೊಟ್ಟಿರೋಣದ್ದರಿಂದ, ಅದು

ಸರ್ಕಾರಕ್ಕೆ ಮಾನ್ಯವಾಗಬಹುದು. ಮತ್ತು ಅದರಿಂದ ಝಾನ್ಸೀ ಸಂಸ್ಥಾನದ ರಾಜನಿಗೆ, ತನ್ನ ಸಂಸ್ಥಾನಕ್ಕೆ ಮಾಲೀಕನನ್ನ ಮಾಡುವಗೋಸ್ಕರ, ದತ್ತು ತೆಗದುಕೊಳ್ಳುವದಕ್ಕೆ ಅಧಿಕಾರವಿದೆಯೇ ಇಲ್ಲವೇ ಯಂಬುವದನ್ನು ಕುರಿತು, ನನಗೆ ಬಹಳ ಸಂಶಯ ತೋರುವದು. ಆ ವಿಷಯವಾಗಿ, ಖಂಡಿತವಾದ ಅಭಿಪ್ರಾಯ ಕೊಡುವದು ಉತ್ತಮವಾಗಿದೆ.

8. 1804 ನೇ ಇಸವಿಯಲ್ಲಿ, ಬುಂದೇಲ್ ಖಂಡದ ಸಂಗಡ ನಮ್ಮ ಸಮ್ಮಂಧ ಹುಟ್ಟಿದ ಕೂಡಲೆ, ನಾವು ಶಿವರಾಂಭಾವು ಸಂಗಡ, ಪೇಷ್ವೆಯರ ನೌಕರ ಮತ್ತು ಮಂಡಲಿಯವರ ಮೂಲಕ ತಹಾ ಮಾಡಿಕೊಂಡೆವು. 1817 ನೇ ಇಸವಿಯಲ್ಲಿ ಪೇಷ್ವೇ ಸರ್ಕಾರದವರು ಝಾನ್ಸೀ ಸಂಸ್ಥಾನದ ಮೇಲಿನ ಸರ್ವ ಹಕ್ಕನ್ನ ಬ್ರಿಟಿಷ್ ಸರ್ಕಾರಕ್ಕೆ ಕೊಟ್ಟರು. ಆವೇಳೆಯಲ್ಲಿ, ಶಿವರಾಂಭಾವೂನ ಮೊಮ್ಮಗನಾದ ರಾಮಚಂದ್ರರಾಯನಿಗೆ ಝಾನ್ಸೀ ಸಂಸ್ಥಾನದ ವಂಶ ಪಾರಂಪರ್ಯವಾಗಿ ಸ್ವಾಮಿತ್ವದ ಹಕ್ಕನ್ನು ನಾವು ಒಪ್ಪಿಕೊಂಡಿದ್ದೇವೆ ; ಮತ್ತು ಅದೇ ಪ್ರಕಾರ 1832 ನೇ ಇಸವಿಯಲ್ಲಿ ಆತನಿಗೆ ಶುಭೇದಾರ್‌ನೆಂಬುವದಕ್ಕೆ ಬದಲಾಗಿ, ರಾಜ ಯೆಂಬ ಬಿರುದಾವಳಿಯನ್ನು ಸಮರ್ಪಣೆ ಮಾಡಿದ್ದೇವೆ.

9. ರಾಮಚಂದ್ರರಾಯನು 1835 ನೇ ಇಸವಿಯಲ್ಲಿ ಮೃತನಾದನು. ಅವನಿಗೆ ಪುತ್ರಸಂತಾನ ವಿಲ್ಲದ್ದರಿಂದ ಮುಂದೆ ಸಂಸ್ಥಾನವನ್ನ ಸರ್ಕಾರಕ್ಕೆ ಸೇರಿಸಿಕೊಳ್ಳಬೇಕೆ, ಅಥವ ಇಲ್ಲವೇ, ಯಂಬ ಪ್ರಶ್ನೆಗೆ, ಉಂಟು ಅಥವ ಇಲ್ಲ ಯೆಂತ ಇತ್ತು ಯೆಂಬ ಹಾಗೆ ನನಗೆ ತೋರುತ್ತೆ. ಆವೇಳೆಯಲ್ಲಿ ಶಿವರಾಂಭಾವೂಗೆ, ರಘುನಾಥರಾವ್ ಮತ್ತು ಗಂಗಾಧರರಾವ್ ಯೆಂತ ಇಬ್ಬರು ಔರಸ ಪುತ್ರರು ಜೀವಂತರಾಗಿದ್ದಾರೆಂಬದಾಗಿ ಕಂಡು ಬಂದದ್ದರಿಂದ, ಅವರಕಡೆಗೆ ಸಂಸ್ಥಾನ ನಡೆಯಬೇಕೆಂತ ನಿಶ್ಚಯಮಾಡಲ್ಪಟ್ಟಿತು. ಪರಂತು, ಈಗ ಗಂಗಾಧರರಾಯನ ಮರಣದಿಂದ, ಅವನ ವಂಶವು ನಿಂತುಹೋಗಿದೆ.

10. ಇಲ್ಲಿ ನನಗೆ ಇನ್ನೂ ಹೇಳಬೇಕಾದ ಅವಶ್ಯಕ ತೋರುವ ದೇನಂದರೆ, 1835 ನೇ ಇಸವಿಯಲ್ಲಿ, ರಾಮಚಂದ್ರರಾವ್ ತೀರಿಹೋದಾಗ, ಆತನ ದತ್ತಕ ನೊಬ್ಬ ಮತ್ತು ಆತನ ಹೆಂಡತಿ ದತ್ತಕನೊಬ್ಬ, ಈ ರೀತಿ ಇಬ್ಬರು ತಮ್ಮ ಹಕ್ಕನ್ನು ಹೇಳಿಕೊಳ್ಳಲು ಉದ್ಯುಕ್ತರಾದರು. ಪರಂತು, ಆ ವೇಳೆಯಲ್ಲಿ ಅವರ ಹಕ್ಕನ್ನ ಮನ್ನಿಸಲಿಲ್ಲ. ಆ ಸಮಯದ ಕಾಗದ ಪತ್ರಗಳೂ ಈಗ ನನ್ನ ಹತ್ತರ ಇಲ್ಲ. ಪರಂತು, ಆ ಕಾಲದಲ್ಲಿ ನಡೆದ ಪತ್ರ ವ್ಯವಹಾರಗಳು ತಮ್ಮ ದಃಫ್ತರದಲ್ಲಿ ಶಿಕ್ಕಬಹುದು. ಅದರಿಂದ ಯಾವ ತಹಾದಮೇಲೆ, ಝಾನ್ಸೀ ಸಂಸ್ಥಾನ, ಇಂಗ್ರೇಜಿ ಸರ್ಕಾರದವರ ಅಧೀನದಲ್ಲಿ ನಡೆಯುತ್ತಾ ಇದೆಯೋ, ಅದೇ ಕರಾರು ಅನುಸರಿಸಿ, ರಾಜನಿಗೇ ಆಗಲಿ ಅಥವ ಆತನ ವಿಧವೆಯಾದ ರಾಣಿಗೇ ಆಗಲಿ ಸಾರ್ವಭೌಮ ಸರ್ಕಾರದ, ಅಪ್ಪಣೇ ಶಿವಾಯಿ ದತ್ತು ತೆಗದುಕೊಳ್ಳುವ ಹಕ್ಕು ಬರುವದಿಲ್ಲವೆಂತ ಕಂಡು ಬರಬಹುದು.

11. ಮಹಾರಾಜ ಗಂಗಾಧರರಾಯನು ತನ್ನ ನಂತರ ಸರ್ವ ರಾಜ್ಯದ ವ್ಯವಸ್ಥೆಯನ್ನ ತನ್ನ ಸ್ತ್ರೀಯು ಕೈಯ್ಯಲ್ಲಿ ಕೊಡುವದನ್ನು ಕುರಿತು, ಅಭಿಪ್ರಾಯ ಕೊಟ್ಟಿರುತ್ತಾನೆ. ಆ ಸ್ತ್ರೀಯು ಬಹಳ ಗೌರವಸ್ಥಳಾಗಿಯೂ, ಲೋಕಪ್ರಿಯಳಾಗಿಯೂ ಇರೋಣದ್ದರಿಂದ ಸಂಸ್ಥಾನದ ಆಳ್ವಿಕೆಯನ್ನ ಉತ್ತಮ ಪ್ರಕಾರದಲ್ಲಿ ನಡಿಸಲು ಪೂರ್ಣ ಸಮರ್ಥಳಾಗಿದ್ದಾಳೆ. ಪರಂತು, ಈಗಿನ ಸ್ಥಿತಿಯಿಂದ ಸರ್ಕಾರವು ಈ ಸಂಸ್ಥಾನವನ್ನ ಬ್ರಿಟಿಷ್ ರಾಜ್ಯಕ್ಕೆ ಸೇರಿಸಿಕೊಳ್ಳುವ ತಮ್ಮ ಹಕ್ಕನ್ನು ತಾತ್ಸಾರ ಮಾಡ್ಯಾರು ಯಂತ ನನಗೆ ತೋರುವದಿಲ್ಲ. ಅದೇ ಪ್ರಕಾರವಾಗಿ, ಸರ್ಕಾರದವರು ರಾಣೀ ಸಾಹೇಬಳಿಗೆ, ಆಕೆಯ ಮೃತಪತಿಯ ಸರ್ವ ಸ್ವಂತ ಸೊತ್ತುಗಳು ಮತ್ತು ಝಾಂಸಿಯಲ್ಲಿರತಕ್ಕ ಅರಮನೇ ಸಹ ಕೊಟ್ಟು, ಆಕೆಯ ಅಟ್ಟಹಾಸಕ್ಕೂ ಮತ್ತು ಅವಳ ಹೊಸಕುಟುಂಬಿಯ ಮನುಷ್ಯರ ಜೀವನಾಂಶಕ್ಕೂ ಗೌರವವಾಗಿ, ಸುಖದಲ್ಲಿರುವದಕ್ಕೆ ಸಾಕಾದಷ್ಟು ಒಂದು ವಿಧವಾದ ನೇಮಕಮಾಡಿಸೋಣಾಗಿ ಅದರಂತೆ ಆಚರಣೆಯಲ್ಲಿ ತರಲು ನನಗೆ ಅಪ್ಪಣೆ ಬಂದೀತು ಯಂತ ನಂಬುತ್ತೇನೆ.

12. ರಾಣೀಸಾಹೇಬಳಿಗೆ ಸಾಕಾಗುವಷ್ಟು ಖರ್ಚಿಗೆ ನೇಮಕ ಮಾಡುವದು ಬಹಳಕಠಿಣವಾಗಿದೆ. ತಥಾಪಿ, ಬುಂದೇಲ್ ಖಂಡದ ಮಧ್ಯದಲ್ಲಿ ಹ್ಯಾಗೆ ಸ್ಥಾಪಿತವಾಗಿರುವ ಮರಾಟೆಯವರ ಈ ಚಿನ ಮನೆತನವು ಹ್ಯಾಗೆ ಇದೆಯೊ, ಮತ್ತು ಹ್ಯಾಗೆ ಪೇಷ್ವೇ ಸರ್ಕಾರದವರಿಂದಲೂ ಮತ್ತು ವಿನಾಯಕರಾಯನ ಕಡೆಯಿಂದಲೂ, ಧರ್ಮಾರ್ಥ ದ್ರವ್ಯ ಶಿಕ್ಕುವ ಆಸೆ ಈಗ ನಿಲ್ಲಲಿಲ್ಲವೊ, ಅದೇ ಪ್ರಕಾರ, ಈ ರಾಜನ ಆಶ್ರಿತ ಜನಗಳು ಹೊಟ್ಟೆ ತುಂಬಿಕೊಳ್ಳುವ ಗೋಸ್ಕರ, ರಾಣಿಸಾಹೇಬಳ ಕಡೆಗೆ ಬಂದು ಸೇರಬಹುದು. ಆದ್ದರಿಂದ ಸರ್ಕಾರದವರು, ಈ ಸರ್ವಸಂಗತಿಯನ್ನೂ ಮನಸ್ಸಿನಲ್ಲಿ ತೆಗದುಕೊಂಡು, ರಾಣಿಸಾಹೇಬಳಿಗೆ ಸರಿಯವಾಗಿ, ಹುಟ್ಟುವಳಿಯಲ್ಲಿ ದ್ರವ್ಯವನ್ನು ಕ್ಲುಪ್ತ ಮಾಡಿಕೊಡುವ ಇಚ್ಛೆಯನ್ನು ಬಹಳಮಾಡಿ ತೋರಿಸುವ ರೆಂತಲೂ ಮತ್ತು ಹಾಗೆ ನೇಮಕ ಮಾಡುವ ಮೊಬಲಗು ತಿಂಗಳುವಂದರ 5000 ರೂಪಾಯಿಗಳಿಗೆ ಕಮ್ಮಿಯಾಗಿ ಇರಕೂಡ ದೆಂತಲೂ ನಾನು ವಿನಯಪೂರ್ವಕವಾಗಿ ಸೂಚಿಸುತ್ತೇನೆ.

13. ಯಾವಪ್ರಕಾರ ಝಾಂಸೀ ಸಂಸ್ಥಾನವು ಬಹುದಿವಸ, ತಮ್ಮ ಆಧೀನದಲ್ಲಿ ಇತ್ತೋ ಮತ್ತು ಮೇಜರ್ ರಾಸ್ ಸಾಹೇಬನು ಮಾಡಿದ್ದ ವ್ಯವಸ್ಥೆಯು ಸರಿಯಾಗಿ ನಡಕೊಳ್ಳುತ್ತಾ ಬಂತೋ, ಅದೇಪ್ರಕಾರವಾಗಿ ನನಗೆ ತೋರುವದೇನಂದರೆ:—ಸರ್ಕಾರದವರಿಗೆ ಈ ಸಂಸ್ಥಾನವನ್ನ ಸರ್ಕಾರಕ್ಕೆ ಸೇರಿಸಿಕೊಳ್ಳುವ ಅಭಿಪ್ರಾಯ ಹುಟ್ಟಿದರೆ, ಅದರ ವ್ಯವಸ್ಥೆಯನ್ನ, ಅದರ ನೆರೆಯಲ್ಲಿರುವ ಶಿಂಧ್ಯಾಸರ್ಕಾರದ ಪ್ರಾಂತ್ಯದಂತೆ ಮಾಡುವವಿಷಯದಲ್ಲಿ ತಮಗೆ ಯಾವ ಅಡಿಚಣೆಯೂ ಶುದ್ಧಾಂಗ ಬರಲಾರದು.

14. ಸರ್ಕಾರದವರಿಗೆ, ಈ ಸಂಸ್ಥಾನವನ್ನ ನಾನು ಸ್ವಾಧೀನಕ್ಕೆ ತೆಗೆದುಕೊಳ್ಳ ಬೇಕೂಬೆಂತ ಯುಕ್ತ ಕಂಡು ಬಂದರೆ, ನಾನು ಹಾಗೆ ನಡೆಸಲು ಶಿದ್ಧನಾಗಿ

ದ್ದೇನೆ. ಆದರೆ, ನನಗೆ ಮತ್ತು ನನ್ನ ಸಹಾಯಕನಾದ ಮೇಜರ್ ಯೆಲ್ಲಿಸ್‌ಗೆ ಸಹ, ವಸೂಲಿ ವಿಷಯವಾಗಿ ಶುದ್ಧಾಂಗ ತಿಳುವಳಿಕೆಯಿಲ್ಲ. ಮತ್ತು ನಮಗೆ ಗ್ವಾಲಿಯರ್ ಮತ್ತು ಬುಂದೇಲ್ ಖಂಡದಲ್ಲಿ ರಾಜಕೀಯ ಕಾರ್ಯಗಳು ಬಹಳವಾಗಿರೋಣದ್ದರಿಂದ, ಆಗಾಗ್ಯೆ ದೂರಪ್ರಾಂತ್ಯಕ್ಕೆ ಹೋಗುವ ಸಂಭವ ಬೀಳಬಹುದಾಗಿದೆ. ಆದ್ದರಿಂದ ವಿನಯಪೂರ್ವಕವಾಗಿ ನಾನು ಅರಿಕೆ ಮಾಡುವದೇನಂದರೆ, ಬುಂದೇಲ್ ಖಂಡದಲ್ಲಿ ಯಾವ ಜಿಲ್ಲೆಯು ಜಬ್ಬಲ್ಪುರದ ಕಮಿಷನರ್ ಕ್ಯಾಪ್ಟನ್ ಅರ್ಸ್ಕಿನ್ ಕಡೆ ಕೊಟ್ಟದೆಯೋ ಅದರಲ್ಲಿ ಈ ಸಂಸ್ಥಾನವನ್ನು ಶೇರಿಸಿಕೊಡೋಣವಾಗಬೇಕು.

ಪೊಲಿಟಿಕಲ್ ಯೇಜನ್ಸಿ ಆಫೀಸ್,<br>ಪನ್ನಾ ಮೊಕ್ಕಾಂ<br>25, ನವಂಬರು, 1853.

ಪೊಲಿಟಿಕಲ್ ಯೇಜಂಟ್, ಡಿ, ಯೆ, ಮಾಲ್ಕಾಂ,<br>(ಸಹಿ ಇಂಗ್ರೀಜಿಯಲ್ಲಿದೆ,) ಗ್ವಾಲಿಯರ್,<br>ಬುಂದೇಲ್‌ಖಂಡ ಮತ್ತು ರೀವ.

ಪೊಲಿಟಿಕಲ್ ಯೇಜಂಟ್ ಸಾಹೇಬನ, ಈ ವಿಧವಾದ ರಿಪೋರ್ಟು ಸರ್ಕಾರಕ್ಕೆ ತಲ್ಪಿತು. ಅದರಿಂದ, ಝಾಂಸೀ ಸಂಸ್ಥಾನದ, ಮುಂದಿನ ವ್ಯವಸ್ಥೆ ಯೇನಾಗಬಹುದು ಯಂಬ ಭವಿಷ್ಯವು ಕಂಡುಬಂತು. ಝಾಂಸೀ ಸಂಸ್ಥಾನವನ್ನು, ಬ್ರಿಟಿಷ್ ಸರ್ಕಾರದ ಅರಮನೆಯಲ್ಲಿ ತಳ್ಳ ಬೇಕೆಂಬ ಅಭಿಪ್ರಾಯವನ್ನು, ಸ್ವತಃ ಪೊಲಿಟಿಕಲ್ ಯೇಜಂಟ್ ಸಾಹೇಬನು ಸ್ಪಷ್ಟವಾಗಿ ತೋರಿಸಿ ಇರುವಾಗ, ಇತರ ಆಶೆ ಉಪಯೋಗ ಯೇನು ಇಥೆ? ಲಾರ್ಡ್ ಡೆಲ್ಹೂಜಿ ಸಾಹೇಬನ ಅನುಜ್ಞೆ ಪ್ರಕಾರ, ಸತಾರ, ನಾಗಪುರ ಮತ್ತು ತಂಜಾವೂರ್, ಈ ಮೂರು ದೊಡ್ಡ ಸಂಸ್ಥಾನಗಳಲ್ಲಿ, ವಾರಸುದಾರರು ಇಲ್ಲವೆಂತ ನಿಶ್ಚಯಿಸಿ, ಅಲ್ಲಿನ ರೆಸಿಡೆಂಟನು ಅವುಗಳನ್ನು ಕಂಪನಿ ಸರ್ಕಾರದ ರಾಜ್ಯಕ್ಕೆ ಶೇರಿಸಿಕೊಂಡುಬಿಟ್ಟನು. ಆದ್ದರಿಂಥ ಅದೇಮಾರ್ಗವನ್ನನುಸರಿಸಿ ನಡಿಯಬೇಕಾದದ್ದು, ಸರ್ಕಾರಕ್ಕೆ ವಿಶ್ವಾಸಪಾತ್ರನಾದ, ಕರ್ತವ್ಯದಕ್ಷ ಮೇಜರ್ ಮಾಲ್ಕಾಂನಂಥ ಶೇವಕನಲ್ಲಿ ಅವಶ್ಯಕವಾಗಿರಬೇಕು ಯೆಂಬುವದು ಸಹಜವಾಗಿದೆ. ಮಾಲ್ಕಾಂ ಸಾಹೇಬನ ರಿಪೋರ್ಟು ಸರ್ಕಾರಕ್ಕೆ ತಲ್ಪಿದ ಕೂಡಲೆ, ಝಾಂಸಿ ರಕ್ಷಣೆಗೆ ಅವಶ್ಯಕವಾದ್ದನ್ನೆಲ್ಲಾ ಶಿದ್ಧಪಡಿಸಿದರು. ಝಾಂಸಿಯಲ್ಲಿ ಸಿಂಧ್ಯಾ ಸರ್ಕಾರದ, ಕಂಟಿಂಜೆಂಟ್ ಫೌಜು ಪೈಕಿ, 6 ನೇ ಪಟಾಲಂನ ಒಂದು ಭಾಗ ಮತ್ತು ಬಂಗಾಳ ನೇಟಿವ್ ಪಾಯದಳದ ವಂದು ಪಟಾಲಂ ಸಹ ಇಡುವ ವಿಚಾರ ನಡೆದು, ಝಾಂಸಿ ಮತ್ತು ಕರೇರ, ಈ ಯೆರಡು ಕೋಟೆಗಳ ರಕ್ಷಣೆಗೋಸ್ಕರ ಬ್ರಿಗೇಡಿಯರ್ ಪಾರ್ಸನ್ಸ್ ಕಡೆಯಿಂದ ಇನ್ನೂ ನಾಲ್ಕು ಪಟಾಲಂ ಬರಬೇಕು ಯೆಂತ ವ್ಯವಸ್ಥೆ ಮಾಡಲ್ಪಟ್ಟಿತು.

ಇತ್ತ ಕಡೆ, ಝಾಂಸೀಸಂಸ್ಥಾನವು ದಾಮೋದರರಾಯನ ಹೆಸರಿನಮೇಲೆ ನಡೆಯುವದು ಯೆಂತ ಬಾಯೀಸಾಹೇಬಳಿಗೂ ಮತ್ತು ದರ್ಬಾರಿನ ಸರ್ವಮಂಡಲಿಗೂ ನಂಬಿಕೆಯಿತ್ತು. ಕಾರಣವೇನಂದರೆ, ಮಹಾರಾಜ ಗಂಗಾಧರರಾಯನು, ತನ್ನ ಮರಣಕ್ಕೆ ಪೂರ್ವ ಪೊಲಿಟಿಕಲ್ ಯೇಜಂಟನಿಗೆ ಕೊಟ್ಟ ಖಲೀತಾ ಪ್ರಕಾರ ಬ್ರಿಟಿಷ್ ಸರ್ಕಾರದ

ವರು ಯಲ್ಲಾ ವ್ಯವಸ್ಥೆಯನ್ನು ಮಾಡ್ಯಾರು ಯೆಂತ ಪ್ರತಿ ಒಬ್ಬನು ಯೋಚಿಸಿ ಯಿದ್ದನು. 1817 ನೇ ಯಿಸವಿಯಲ್ಲಿ ರಾಮಚಂದ್ರರಾಯನ ಸಂಗಡ ಮಾಡಿದ ತಹಾದಲ್ಲಿ, ಝಾರ್ಸೀ ಸಂಸ್ಥಾನವನ್ನ ವಂಶಪಾರಂಪರ್ಯವಾಗಿ ನಡಸಿಕೊಡುವದನ್ನು ಕುರಿತು, ಕೊಟ್ಟವಾಗ್ದಾನ ಮತ್ತು ಝಾರ್ಸೀಸಂಸ್ಥಾನದವರು ತೋರಿಸಿದ ಕೃತಜ್ಞತೆ ಸಹ, ಬ್ರಿಟಿಷ್ ಸರ್ಕಾರದವರು ಯೆಂದಿಗೂ ಮರೆಯಲಾರರು ಯೆಂತ ತಿಳುಕೊಂಡಿದ್ದರು. ಪರಂತು, ರಾಜ್ಯಲೋಭದಿಂದ ಅಂಧರಾದ ಅವರ ಮುಖ್ಯ ಪ್ರತಿನಿಧಿಗಳಿಗೆ ಪೂರ್ವದ ತಹ ಮತ್ತು ಪೂರ್ವದ ವಾಗ್ದಾನ ಸಹ ಕಣ್ಣಿಗೆಕಾಣುವ ಸಂಭವವು ಮೂಲತಃ ಯಿರಲಿಲ್ಲ. ಆದ್ದರಿಂದ ಅವರಿಗೆ ಹ್ಯಾಗೆ ತಿಳಿಯಬೇಕು? ಮಾಲ್ಕಂ ಸಾಹೇಬನ ರಿಪೋರ್ಟು, ಕೌನ್ಸಿಲ್ ಆಫ್ ಇಂಡಿಯಾದ ಕೈಗೆ ಹೋಗುತ್ತಲೆ, ಪ್ರೆಸಿಡೆಂಟ್ ಆನರಬಲ್ ಜೆ. ಡೋರ್ರೆ ಮತ್ತು ಆತನ ಕೌನ್ಸಿಲರ್ ಜೆ. ಲೋವಫ್ರೆಡ್ರಿಕ್. ಜೆ. ಹಾಲಿಡೆಯವರು ನಿಶ್ಚಯಿಸಿದ್ದೇನಂದರೆ, ಗೌರ್ನರ್ ಜನರಲ್ ಕಲ್ಕತ್ತೆಗೆ ಬರುವ ಪರಿಯಂತರ (ಈ ವೇಳೆಯಲ್ಲಿ ಲಾರ್ಡ್ ಡೆಲ್ಹೂಜಿ ಸಾಹೇಬನು ಅಯೋಧ್ಯಾ ಸಂಸ್ಥಾನಕ್ಕೆ ಹೋಗಿದ್ದನು.) ಝಾರ್ಸೀ ದತ್ತಕನ ವಿಷಯವನ್ನ ಹಾಗೇ ಇಡಬೇಕು. ರಾಜ್ಯ ಕಾರಭಾರಿನಲ್ಲಿ, ಯಾವ ಬದಲಾವಣೆಯೂ ಮಾಡಬಾರದು. ಪೊಲಿಟಿಕಲ್ ಯೇಜಂಟನು, ಸಂಸ್ಥಾನದಲ್ಲಿ ಸಮಾಧಾನ ಯಿಡುವದನ್ನು ಕುರಿತು, ವಿಶೇಷ ಆಸಕ್ತಿ ತೆಗದುಕೊಳ್ಳಬೇಕು. ಸೈನ್ಯದ ಸಹಾಯ ಅವಶ್ಯ ಬಿದ್ದರೆ, ಬ್ರಿಗೇಡಿಯರ್ ಪಾರ್ಸನಿಸ್ ಕಡೆಯಿಂದ ಅವಶ್ಯವಾಗಿ ತರಿಸಿಕೊಳ್ಳಬೇಕು. ಈ ಪ್ರಕಾರವಾಗಿ ಝಾರ್ಸೀ ಪೊಲಿಟಿಕಲ್ ಯೇಜಂಟನಿಗೆ ತಿಳುವಳಿಕೆ ಕೊಟ್ಟದ್ದು ಕೂಡಲೆ, ಅಲ್ಲಿ * ಯಿಲ್ಲಿ ಕಾರ್ಯಕ್ಕೆ ಪ್ರವರ್ತಿಶಿದರು.

* Letter No. 5305 (Foreign Department) from J. W. Dalymple Esqr.—officiating Under-Secretary to the Government of India, to Major D. A. Malcolm.





# ೪ನೇ ಪ್ರಕರಣ.

## ಝೂರ್ಸಿ ಸಂಸ್ಥಾನವನ್ನು ಸರ್ಕಾರಕ್ಕೆ ಸೇರಿಸಿಕೊಂಡ ವೃತ್ತಾಂತ.

" ನೀಚೈರ್ಗಚ್ಛತ್ಯುಪರಿಚ ದಶಾ ಚಕ್ರನೇಮಿಕ್ರಮೇಣ. "

ಮನುಷ್ಯನಿಗೆ ಅಥವ ರಾಷ್ಟ್ರಕ್ಕೆ ಉನ್ನತಾವಸ್ಥೆ ಅಥವ ಆಪತ್ತು ಯಾವಾಗ ಮತ್ತು ಹ್ಯಾಗೆ ಪ್ರಾಪ್ತವಾಗುವದೋ ಯೆಂಬುವದಕ್ಕೆ ನೇಮವಿಲ್ಲ. ಕಾಲಚಕ್ರನ ವಿಚಿತ್ರಗತಿಯಿಂದ ಯಾವರಾಷ್ಟ್ರವು ವೈಭವದ ಶಿಖರದ ಕೊನೆಗೆ ಹೋಗಿದ್ದದ್ದು ಅಲ್ಪ ಕಾಲದಲ್ಲಿಯೇ ನಷ್ಟಪ್ರಾಯ ವಾಗುವದು ಮತ್ತು ಯಾವದು ದುರ್ದೈವದ ಕಾಲದಲ್ಲಿರುವದೋ ಅದು ಕ್ಷಣಾರ್ಧದಲ್ಲಿ, ಉನ್ನತ ಸ್ಥಿತಿಯನ್ನು ಐದುವದು ; ಈ ಪ್ರಕಾರವಾಗಿ, ಈ ಜಗತ್ತಿನಲ್ಲಿ ಬಂದೇ ರೀತಿಯಾದ ಬದಲಾವಣೆಗಳು ನಡೆಯುತ್ತಾ ಇವೆ. ಇದರ ಪ್ರತ್ಯಕ್ಷ ಅನುಭವವು, ಬ್ರಿಟಿಷಸರ್ಕಾರದ ರಾಜ್ಯವಿಸ್ತಾರದಿಂದ ಸಹಜವಾಗಿ ತಿಳಿಯ ಬರುತ್ತದೆ. ಸನ್ 1712 ನೇ ಇಸವಿಯಲ್ಲಿ ಡಿಲ್ಲಿಯ ಬಾದಶಹನ ಹತ್ತರ ಸಂಧಾನ ಇಟ್ಟು, ಬಹಳ ನಮ್ರತೆಯಿಂದ ಹಿಂದೂಸ್ಥಾನದಲ್ಲಿ ವ್ಯಾಪಾರ ಮಾಡುವದಕ್ಕೆ ನಿರೂಪವನ್ನು ಸಂಪಾದಿಸಿ ಕೊಳ್ಳುವದು ಯಾರಿಗೆ ಭಗೀರಥ ಪ್ರಯತ್ನ ವಾಯಿತೋ * ಮತ್ತು 1752 ನೇ ಇಸವಿಯಲ್ಲಿ ಯಾರ ಆಧೀನದಲ್ಲಿ 3 ಭಂಡಸಾಲೆಗಳು (ವ್ಯಾಪಾರದ ಮಳಿಗೆ

---

* ಆ ವೇಳೆಯಲ್ಲಿ ಬಂಗಾಲೆಯ ಗೌರ್ನರನು ಡಿಲ್ಲೀ ಬಾದಷಹನಿಗೆ ಬರೆದಿದ್ದ ಬಂದು ಪತ್ರವನ್ನು, ಬಂದು ಸ್ಥಳದಲ್ಲಿ ನಾವು, ಓದಿದ್ದೇವೆ. ಅದು ಈ ರೀತಿ :—

" The supplication of John Russell, who is as the minutest grain of sand, and whose forehead is the tip of his footstool, who is the absolute monarch and prop of the universe, whose throne may be compared to that of Soloman's. and whose renown is equal to that of cyrus....The Englishmen, having traded hitherto in Bengal, Orissa and Behar, custom free (except in Surat,) are your Majesty's most obedient slaves, always intent upon your commands. We have readily observed

ಗಳು) ಮತ್ತು 20 ಚದರ ಮೈಲಿಗಳುಳ್ಳ ದೇಶವು ಮಾತ್ರ ಇತ್ತು, ಅವರ ರಾಜ್ಯದ ಛತ್ರಿಯು ಈಗ (1857), 650,000 ಚದರ ಮೈಲಿಗಳಮೇಲೆ ಪಸರಿಸಿಕೊಂಡು ಯಿರುವದು ಯೆಷ್ಟು ಸುದೈವದ ಮಾತಾಗಿದೆ? ರೋಮನ್ ಜನಗಳು ಯುರೋಪ್ ಖಂಡವನ್ನು ಅಧೀನಪಡಿಶಿಕೊಳ್ಳುವದಕ್ಕೆ 300 ವರುಷಗಳು ಸಾಕಾಗಲಿಲ್ಲ. ಆದರೆ, ಅದರ ಅರ್ಧಕಾಲದಲ್ಲಿಯೇ ಬ್ರಿಟಿಷ್ ಜನಗಳು ಸರ್ವ ಹಿಂದುಸ್ಥಾನವನ್ನು ಅಧೀನ ಪಡಿಶಿಕೊಂಡರು. ವಸ್ತುತಃ ಹಿಂದುಸ್ಥಾನದ ಮಧ್ಯದಲ್ಲಿ ಸರ್ವತ್ರ ತಮ್ಮ ರಾಜ್ಯಸತ್ವವು ಆಗಬೇಕುಯೆಂದು ಅವರಿಗೆ ಮೊದಲು ಉದ್ದೇಶವಿರಲಿಲ್ಲ! ಸನ್ 1782 ನೆ ಇಸವಿಯಲ್ಲಿ ವಾರನ್ ಹೇಸ್ಟಿಂಗ್ಸ್ ಸಾಹೇಬನು ಹಿಂದುಸ್ಥಾನದಲ್ಲಿ ಧೂಮ ಚಕ್ರವನ್ನು ಹರವಿಯಿದ್ದದ್ದನ್ನು ಕುರಿತು ಆಗಿನ ಹೌಸ್ ಆಫ್ ಕಾಮನ್ಸ್ ಮುಂದೆ ಚರ್ಚೆ ನಡದು, ಆಗ ಇತ್ಯರ್ಥವಾದ್ದೇನಂದರೆ, "ಹಿಂದುಸ್ಥಾನದ ಮಧ್ಯದಲ್ಲಿ ನಮ್ಮರಾಜ್ಯ ವಿಸ್ತಾರ ಮಾಡುವದಕ್ಕಾಗಲಿ, ಅಥವ ದೇಶ ಸಂಪಾದನೆ ಮಾಡುವದಕ್ಕಾಗಲಿ ಪ್ರಯತ್ನ ಮಾಡುವದು ಬ್ರಿಟಿಷ್ ರಾಜ್ಯದ ರಾಜನೀತಿಗೂ, ಉದಾರತೆಗೂ ಮತ್ತು ಇಛ್ಛೆಗೂ ಕೇವಲ ವಿರುದ್ಧವಾಗಿದೆ." ಆದರೆ, ಈ ಸಿದ್ಧಾಂತವು 6 ವರುಷಕ್ಕೆ ಮೇಲ್ಪಟ್ಟಕಾಲ ನಿಲ್ಲಲಿಲ್ಲ. 1790 ನೆ ಇಸವಿಯಲ್ಲಿ, ಟೀಪು ಸುಲ್ತಾನನು, ಇಂಗ್ರೀಜಿಯವರಿಗೆ ಮಿತ್ರನಾದ ಟ್ರಾವೆಂಕೂರ್‌ನ ರಾಜನ ಮೇಲೆ ದಂಡೆತ್ತಿ ಹೋದನು ಯೆಂಬ ಸಮಯವನ್ನು ನೋಡಿ ಲಾರ್ಡ್ ಕಾರ್ನವಾಲಿಸ್ ಸಾಹೇಬನು ಟೀಪೂಸುಲ್ತಾನನ ಮೇಲೆ ಬಿದ್ದು, ಆತನ ಅರ್ಧರಾಜ್ಯವನ್ನು ಸಂಪಾದಿಸಿಕೊಂಡನು! ಆ ಸಮಯದಲ್ಲಿ "ರಾಜನೀತಿ, ಔದಾರ್ಯ, ಮತ್ತು ಇಛ್ಛೆ" ಇವುಗಳನ್ನು ಕಾಪಾಡಿಕೊಳ್ಳುವಗೋಸ್ಕರ ಆದ ಇತ್ಯರ್ಥವನ್ನ ದಫ್ತರ ಮಧ್ಯದಲ್ಲಿ ಸುತ್ತಿಯಿಟ್ಟು, ಹೌಸ್ ಆಫ್ ಕಾಮನ್ಸ್ ಮತ್ತು ಹೌಸ್ ಅಫ್ ಲಾರ್ಡಸ್‌ನವರು, ಈ ನ್ಯಾಯ ಯುದ್ಧದಗೋಸ್ಕರ ಕೃತಜ್ಞತೆಯನ್ನು ತೋರಿಸಿದರು!! ಮುಂದೆ 1799ನೆ ಇಸವಿಯಲ್ಲಿ, ವೆಲ್ಲೆಸ್ಲಿ ಸಾಹೇಬನು, ಆ ಯುದ್ಧವನ್ನು ಸಮಾಪ್ತಿಮಾಡಿ, ಟೀಪೂಸುಲ್ತಾನನ ಸರ್ವಪ್ರಾಂತ್ಯವನ್ನು ಸರ್ಕಾರಕ್ಕೆ ಸೇರಿಸಿಕೊಂಡನು! ಮತ್ತು ಸ್ವಲ್ಪ ಕಾಲದಲ್ಲಿಯೇ ಕರ್ನಾಟಕ ಪ್ರಾಂತ್ಯವು ಕೈಕೆಳಗೆ ಬಂದನಂತರ ದುವಾಬ್ ಮತ್ತು ಅಯೋಧ್ಯೆಯ ನವಾಬನ ಕಡೆಯಿಂದ ಸಂಪಾದಿಸಿಕೊಂಡ ಪ್ರಾಂತ್ಯವನ್ನು ಬಂದೇ ಕಡೆಗೆಮಾಡಿ,

---

your most sacred orders, and have found favour; we have, as becomes servants, a diligent regard to your part of the sea....We crave to have your Majesty's permission in the above-mentioned places, as before, and to follow our business without molestation."

ಹಿಂದುಸ್ಥಾನದಲ್ಲಿ ಆತನು ಬ್ರಿಟಿಷ್ ರಾಜ್ಯವನ್ನು ಎರಡರಷ್ಟಾಗಿ ಮಾಡಿಕೊಂಡಿದ್ದನ್ನು ನೋಡಿ ಕೋರ್ಟ್ ಆಫ್ ಡೈರೆಕ್ಟರ್ಸರಿಗೆ ಬಹಳ ಸಮಾಧಾನವಾಯಿತು. ಮತ್ತು ಅವರು ಆಗ ನಿಶ್ಚಯಮಾಡಿದ್ದೇನಂದರೆ :—ಇನ್ನು ಮೇಲೆ ಮಾತ್ರ ಪುನಃ ಹೆಚ್ಚಿಗೆ ದೇಶವನ್ನು ತೆಗದುಕೊಳ್ಳುವದಿಲ್ಲ.* ಪರಂತು, ಪುನಃ ಉಪಾಯವಿಲ್ಲದ ಸಂದರ್ಭ ಬಂತು ! ಅರ್ಲ ಆಫ್ ಮೋಯಿರ ಗವರ್ನರ ಜನರಲ್ ಆಗಿರುವಾಗ ನೇಪಾಲ ಲಡಾಯಿ ಪ್ರಾರಂಭವಾಗಿ ಅದರಲ್ಲಿ ಬಹಳ ದೇಶವನ್ನು ಸಂಪಾದಿಸಿಕೊಂಡನು. ಮುಂದೆ ಯರಡು ವರುಷದಲ್ಲಿ ಪಿಂಡಾರಿ ಜನಗಳ ಯುದ್ಧವು ನಡಿಯಿತು. ಮತ್ತು ಪೂನಾ, ನಾಗಪುರ, ಇಂದೂರ್ ಮತ್ತು ಗ್ವಾಲಿಯರ್, ಈ ನಾಲ್ಕು ಸ್ಥಳದ ಮರಾಟೆರಾಜರ ಸಂಗಡ ಯುದ್ಧ ನಡದು ಪುಷ್ಕಳ ರಾಜ್ಯವು ಬ್ರಿಟಿಷ್ ಸರ್ಕಾರದವರ ಅಧೀನಕ್ಕೆ ಬಂತು ! ಆ ವೇಳೆಯಲ್ಲಿ ಗವರ್ನರ ಜನರಲ್ ಸಾಹೇಬನು ನಿಶ್ಚಯಮಾಡಿದ್ದೇನಂದರೆ :—ಇನ್ನು ಮುಂದೆ ಮಾತ್ರ ಸಿಂಧೂ ನದಿಯ ಆಚೇಕಡೆಗೆ ನಮ್ಮ ರಾಜ್ಯದ ಹದ್ದನ್ನು ತೆಗದುಕೊಳ್ಳತಕ್ಕದ್ದಿಲ್ಲ ! ಅವನ ಹಿಂದೆ ಲಾರ್ಡ ಆಮ್ಹರಸ್ಟನು ಗವರ್ನರ ಜನರಲ್ ಅಧಿಕಾರದಮೇಲೆ ಹಿಂದುಸ್ಥಾನದ ಬದಿಯಲ್ಲಿ ಕಾಲಿಟ್ಟನು. ತಕ್ಷಣವೇ ಬರ್ಮಾದೇಶದ ಯುದ್ಧಕ್ಕೆ ಪ್ರಾರಂಭವಾಯಿತು. ಮತ್ತು ಆಸಾಮ್, ತೆನಾಸರೀಮ್, ಮತ್ತು ಅರಕಾರ್ನ ಈ ಪ್ರಾಂತ್ಯಗಳು ಬ್ರಿಟಿಷ್ ಆಳ್ವಿಕೆಯ ಸುಖ ಭೋಗವನ್ನು ಅನುಭವಿಸಬೇಕೆಂತ ಅವರ ಕಡೆಗೆ ಬಂದವು ! ! ಮುಂದೆ ಲಾರ್ಡ ಬೆಂಟಿಕ್ ಸಾಹೇಬನ ಆಡಳಿತವು ಪ್ರಾರಂಭವಾಯಿತು. ಮತ್ತು ಅವನಿಗೂ ಮನಸ್ಸು ಇಲ್ಲದೆ ಇದ್ದಾಗ್ಯೂ, ಕುರ್ಗದ ಪ್ರಾಂತ್ಯವನ್ನು ತೆಗದುಕೊಳ್ಳಬೇಕಾದ ಸಂಭವ ಬಿತ್ತು ! ತದನಂತರ ಲಾರ್ಡ ಆಕ್ಲೆಂಡ್ ಸಾಹೇಬನು ಸಿಂಧೂ ನದಿಯ ಆಚೆಗೆ ಸೈನ್ಯವನ್ನು ತೆಗದುಕೊಂಡು ಹೋಗಿ, ರಷ್ಯಾದೇಶದ ರಾಕ್ಷಸರ ಪ್ರೀತ್ಯರ್ಥವಾಗಿ ಹದಿಮೂರು ಸಹಸ್ರ ಜನಗಳನ್ನು ಆಫ್ಗಾನಿಸ್ತಾನದಲ್ಲಿ ಬರಫಾ ಮಧ್ಯದಲ್ಲಿ ಬಲಿಯಾಗಿ ಕೊಟ್ಟನು. ಮತ್ತು ಅವನ ಹಿಂದೆ ಲಾರ್ಡ ಯೆಲೆಂಬರೋ ಅಧಿಕಾರಕ್ಕೆ

---

* "The territories which we have lately acquired under these treaties, under others of a similar kind, and by conquest, are of so vast and extensive a nature, that we cannot take a view of our situation without being seriously impressed with the wisdom and necessity of that solemn declaration of the Legislature, that to pursue schemes of conquest and extention of dominion in India, are measures repugnant to the '*wish*, *honour*, and *policy*' of the nation."

ಬಂದನು. ಅವನು " ಸಿಂಧೂನದಿಯ ಯರಡು ಥಡಗಳಲ್ಲಿಯೂ ಸಮಾಧಾನವನ್ನುಂಟು ಮಾಡುವಗೋಸ್ಕರ, ಬಹುಶ, ಆಸ್ಯಾಖಂಡವನ್ನು ಅಭಿವೃದ್ಧಿಗೆ ತರುವಗೋಸ್ಕರ ಮತ್ತು ಮೊಗಲ್ ಬಾದಶಹನ ಔದಾರ್ಯ ಗುಣದಮೇಲೆ ಜನಗಳನ್ನ ಸುದಾರಣೆಯಲ್ಲಿ ತರುವಗೋಸ್ಕರ, " ಹಿಂದುಸ್ಥಾನದಲ್ಲಿ ಪ್ರವೇಶಮಾಡಿದನು. ಪರಂತು ಆತನಿಗೆ ಸಿಂಧೂ ಪ್ರಾಂತ್ಯವನ್ನ ಸರ್ಕಾರಕ್ಕೆ ಶೇರಿಸಿಕೊಳ್ಳದೆಯೂ ಮತ್ತು ಶಿಂಧ್ಯಾನ ಅಧಿಕಾರಕ್ಕೆ ಗೌರವವನ್ನು ಕೊಡದೆಯೂ, ಹಿಂದುಸ್ಥಾನದಲ್ಲಿ ಶಾಂತತೆಯನ್ನುಂಟುಮಾಡುವದಕ್ಕೆ ಆಗಲಿಲ್ಲ ! ! ಆದ್ದರಿಂದ ಆತನ ಬಳಿಕ ಬಂದ ಸರ್ ಹೆನ್ರಿ ಹಾರ್ಡಿಂಜ್ ಸಾಹೇಬನು ಯೋಚನೆ ಮಾಡಿ, ಇನ್ನುಮೇಲೆ ಯುದ್ಧಮಾಡುವದು ಮತ್ತು ಹೊಸಪ್ರಾಂತ್ಯವನ್ನ ನಮ್ಮ ರಾಜ್ಯಕ್ಕೆ ಶೇರಿಸಿಕೊಳ್ಳುವದು ಸರ್ವಥಾ ಸರಿಯಾದದ್ದಲ್ಲ. ಆಪ್ರಕಾರ ಮಾಡಬಾರದೆಂತ ಖಂಡಿತವಾದ ಅಪ್ಪಣೆ ಮಾಡಿದನು. ಆದರೆ ಅವನಿಗೆ 16 ತಿಂಗಳಿಗೆ ಹೆಚ್ಚಾದ ಕಾಲದಮೇಲೆ ತನ್ನ ಶಸ್ತ್ರಕ್ಕೆ ವಿಶ್ರಾಂತಿ ಕೊಡಲು ಆಗಲಿಲ್ಲ ! ಆಚೆಗೆ ಪಂಜಾಬ್ ದೇಶದಲ್ಲಿ 60,000 ಶಿಕ್ಕರ ಯೋಧರು ಸಟ್ಲೇಜ್ ನದಿಯಬಳಿ ಬಂದು ನಿಂತುಕೊಂಡರು. ಆಗ ಅವರ ಸಂಗಡ ನಾಲ್ಕು ಸಲ ಯುದ್ಧಮಾಡಿ, ಸಟ್ಲೇಜ್ ನದಿಯ ದಕ್ಷಿಣ ದಿಕ್ಕಿನ ಜಲಂದರದೇಶ ಸಹಿತ ಸರ್ವ ಪ್ರಾಂತ್ಯವನ್ನ ತೆಗದುಕೊಳ್ಳಬೇಕಾಯಿತು !! ತಥಾಪಿ ಆಗ ಮುಂದೆ ಯೆಲ್ಲಾ ಕಡೆಯಲ್ಲಿಯೂ ಶಾಂತವಾಯಿತು, ಯೆಂಬ ಆಶೆ ಬಹಳವಾಗಿತ್ತು. 1848 ನೆ ಇಸವಿಯಲ್ಲಿ ಲಾರ್ಡ್ ಡಾಲ್ಹೂಜಿ ಸಾಹೇಬನು ಕಲ್ಕತ್ತೆಗೆ ಬಂದು, ಹಿಂದುಸ್ಥಾನದ ಪ್ರತಿನಿಧಿ ಪದವಿಯನ್ನು ಧಾರಣಮಾಡಿದನು. ಅನಂತರ 3 ತಿಂಗಳ ವಳಗಾಗಿಯೇ, ಪಂಜಾಬ್ ಪ್ರಾಂತ್ಯದಲ್ಲಿ ಯುದ್ಧ ಪ್ರಾರಂಭವಾಗಿ ಸ್ವಲ್ಪಕಾಲದಲ್ಲಿಯೇ ಆ ಸರ್ವ ದೇಶವೂ, ಬ್ರಿಟಿಷ ಸರ್ಕಾರದವರ ಆಧೀನಕ್ಕೆ ಬಂತು ! ತಾತ್ಪರ್ಯವೇನಂದರೆ, ಈ ಪ್ರಕಾರವಾಗಿ ಮೆಲ್ಲ ಮೆಲ್ಲಗೆ, ಹಿಂದುಸ್ಥಾನದ ಸರ್ವ ದೇಶವು ಬ್ರಿಟಿಷ ಸರ್ಕಾರದವರ ಆಳುವಿಕೆಗೆ ಬಂದು, ಅವರ ವಿಜಯಧ್ವಜವು ನಾಲ್ಕು ಕಡೆಗೂ ಮಿಂಚಲು ಪ್ರಾರಂಭಿಸಿತು ! !

ಲಾರ್ಡ್ ಡೆಲ್ಹೂಜಿ ಸಾಹೇಬನು ಹಿಂದುಸ್ಥಾನದ ವಿಶಿಷ್ಟ ಸ್ಥಿತಿಯನ್ನು ಮನಸ್ಸಿನಲ್ಲಿ ತೆಗದುಕೊಂಡು, ತನ್ನ ಸೂಕ್ಷ್ಮ ದೃಷ್ಟಿಯಿಂದ ನಿರೀಕ್ಷಣೆ ಮಾಡಿದ್ದರಲ್ಲಿ, ಆತನಿಗೆ ಹಿಂದೂಸ್ಥಾನದಲ್ಲಿ ಆ ದೇಶಕ್ಕೆ ಸಮ್ಮಂಧಪಟ್ಟ ರಾಜ್ಯಗಳು, ತದ್ದೇಶೀಯವಾದ ಸಂಸ್ಥಾನಗಳು ಮತ್ತು ಜಹಗೀರಿಗಳು ಸಹ ಅದ್ಯಾಪಿ ಇನ್ನೂ ಪುಷ್ಕಳವಾಗಿ ಉಳಿದಿವೆಯೆಂದು ಕಾಣಬಂತು. ಯಾವ ರಾಷ್ಟ್ರದ ಆಧೀನದಲ್ಲಿ ಪೂರ್ವಕ್ಕೆ ಮೂರು ಭಂಡಸಾಲೆಗಳಿದ್ದವೋ, ಅವರ ಆಧೀನಕ್ಕೆ ಸರ್ವ ಹಿಂದು ಸ್ಥಾನವೂ ಬಂತು. ಆದರೆ, ಅಷ್ಟರಲ್ಲಿಯೆ, ಅವರಿಗೆ ತೃಪ್ತಿಯಾಗದೆ ಪುನಃ ಅವರು ರಾಜ್ಯಲೋಭವನ್ನ ಧಾರಣೆಮಾಡಿಕೊಂಡು ಅದಕ್ಕೆ ಸಮ್ಮಂಧಪಟ್ಟ ಸಂಸ್ಥಾನಗಳನ್ನೂ ಸರಕಾರಕ್ಕೆ ಶೇರಿಸಿಕೊಳ್ಳುವದಕ್ಕೆ ನಿಶ್ಚಯ ಮಾಡಿದರು ! ! ಈ ದೇಶಕ್ಕೆ ಸಮ್ಮಂಧಪಟ್ಟ ಸಂಸ್ಥಾನಗಳನ್ನು ಸರ್ಕಾ

ರಕ್ಕೆ ಶೇರಿಸಿಕೊಂಡರೆ ಅದರಿಂದ ಬ್ರಿಟಿಷ್ ರಾಜ್ಯ ಸತ್ವದ ಕಾಲುಗಳು ಅಲಿಗಾಡಿ ಹೋಗಿ ಸಂಸ್ಥಾನಿಕರ ಸಂಗಡ ಮಾಡಿಕೊಂಡಿರುವ ತಹ ಮತ್ತು ಕರಾರು ನಾಮೆಗಳು ನಾವಾಗಿಯೇ ಮುರಿದುಹಾಕಿದ ಹಾಗೆ ಆದೀತು. ಮತ್ತು ಬ್ರಿಟಿಷ್ ರಾಷ್ಟ್ರದ ನಿಷ್ಕಳಂಕವಾದ ಕೀರ್ತಿಗೆ ವಚನ ಭಂಗದ ಮಹಾ ಪಾತಕವು ಹತ್ತೀತು, ಯಂತ * ಡ್ಯೂಕ್ ಆಫ್ ವೆಲ್ಲಿಂಗ್ಟನ್, ಸರ್ ಥಾಮಸ್ ಮನ್ರೋ, ಸರ್ ಜಾರ್ಜ ಮಾಲ್ಕಾಂ ಮತ್ತು ಮೌಂಟ್ ಸ್ಟ್ಯುವರ್ಟ್ ಯೆಲ್ಫಿನ್‌ಸ್ಟನ್ ಮುಂತಾದ ನಿಪುಣ ರಾಜ್ಯ ಕಾರಭಾರಿಗಳು ಮತ್ತು ವಿಚಾರಶೀಲರು ಅನೇಕ ವೇಳೆಯಲ್ಲಿ ತೀವರ್ಣನಿಸಿದ್ದರು. ಆದರೆ ಅದನ್ನು ದುರ್ಲಕ್ಷ್ಯಮಾಡಿ, ಲಾರ್ಡ್ ಡೆಲ್ಹೂಜಿ ಸಾಹೇಬನು ತನ್ನ ರಾಜನೀತಿಗೆ ಪ್ರತ್ಯೇಕ ಮಾರ್ಗವನ್ನು ಹಿಡಕೊಂಡನು. ಆತನ ಮತವೇನಂದರೆ :—ಬ್ರಿಟಿಷ್ ದೇಶದ ಸಮೀಪದಲ್ಲಿ ಇರತಕ್ಕ ಸಣ್ಣ ಸಣ್ಣ ಸಂಸ್ಥಾನಗಳನ್ನು ಸ್ಥಿರವಾಗಿಡುವದರಲ್ಲಿ ಯೇನೂ ಪ್ರಯೋಜನವಿಲ್ಲ. ಮತ್ತು ಅವುಗಳಿಂದ ದೂರವಾಗಲೂ ಉಪಯೋಗವಾಗಬಹುದಾದ ಆಶೆಯೂ ಇಲ್ಲ. ಆದರೆ, ಅದರ ಉಪದ್ರ ಯಾತಕ್ಕೆ ಬೇಕು ? ಆದಕಾರಣ ಅವುಗಳನ್ನ ಬ್ರಿಟಿಷ್ ಸರ್ಕಾರಕ್ಕೆ ಶೇರಿಸಿಕೊಂಡು ಬಿಟ್ಟರೆ, ಬ್ರಿಟಿಷ್ ರಾಜ್ಯರೀತಿ ಫಲವು ಅವುಗಳಿಗೆ ಬಹಳ ಹಿತವಾದೀತು. ಈ ಪ್ರಕಾರವಾಗಿ, ಆತನು ನಿಶ್ಚಯಮಾಡಿದ್ದೇನಂದರೆ, ಯಾವ ಸಂಸ್ಥಾನದಲ್ಲಿ ಔರಸ ಅಥವ ಇನ್ನ್ಯಾವ ಪ್ರಕಾರದ ಹಕ್ಕುದಾರರು ಇಲ್ಲದೇ ಹೋಗಿ, ಹಿಂದೂ ಶಾಸ್ತ್ರಪ್ರಕಾರ ದತ್ತ ತೆಗದುಕೊಳ್ಳುವದಕ್ಕೆ ಸರ್ಕಾರದ ಅನುಮತಿ ಪಡಿಯಬೇಕಾಗಿರುತ್ತದೆಯೋ, ಅಂಥಾ ಸಂಸ್ಥಾನವನ್ನ ವಾರಸುದಾರರು ಇಲ್ಲವೆಂತ ನಿಶ್ಚಯಿಸಿ ಸರ್ಕಾರಕ್ಕೆ ಶೇರಿಸಿಕೊಳ್ಳುವ ಸಮಯ ಬಂದಾಗ ಎಂದಿಗೂ ಬಿಟ್ಟು ಕೊಡಬಾರದು. †

---

* ಈ ಸಮ್ಮಂಧವಾಗಿ "Are we bound by our treaties"? ಯೆಂಬ ಹೆಸರುಳ್ಳ ಒಂದು ಪುಸ್ತಕ 1853ನೆ ಇಸವಿಯಲ್ಲಿ ಲಂಡನನಲ್ಲಿ ಪ್ರಸಿದ್ಧಿಯಾಗಿದೆ. ಅದರಲ್ಲಿ ಆ ಗೃಹಸ್ತನ ಮತ ವಿವರಿಸಿದೆ.

† ಈ ಸಮ್ಮಂಧದಲ್ಲಿ ಲಾರ್ಡ್ ಡೆಲ್ಹೂಜಿ ಸಾಹೇಬನು ಈ ಪ್ರಕಾರ ಹೇಳಿದ್ದಾನೆ :—

"I cannot conceive it possible for any one to dispute the policy of seizing the advantage of any just opportunity for consolidating the territories that already belong to us, by taking possessions of states which may lapse in the midst of them ; for thus getting rid of these petty intervening principalities, which may be a means of annoyance, but which can never, I venture to think, be a source of strength ; for adding

ಲಾರ್ಡ್ ಡೆಲ್ಹೌಜಿ ಸಾಹೇಬನು ಈ ಪ್ರಕಾರ ನಿಶ್ಚಯ ಮಾಡುತ್ತಲೆ, ನಮ್ಮ ದುರಾದೃಷ್ಟದಿಂದ ಸಾತಾರ, ನಾಗಪುರ, ಝಾನ್ಸಿ, ತಂಜಾವೂರ್, ಮುಂತಾದ ಮಹಾರಾಷ್ಟ್ರ ರಾಜ್ಯದ ಅಧಿಪತಿಗಳು, ಬಂದೇಕಾಲದಲ್ಲಿ ಮೃತ್ಯುವಿನ ಮುಖದಲ್ಲಿ ಬಿದ್ದರು. ಮತ್ತು ಅವರುಗಳಿಗೆ ಔರಸ ಪುತ್ರರು ಇಲ್ಲದೇ ಇದ್ದದ್ದರಿಂದ ಅವರ ಸಂಸ್ಥಾನವು ಒಂದೊಂದಾಗಿ ಸರ್ಕಾರಕ್ಕೆ ಸೇರಿಸಿ ಕೊಳ್ಳಲು ಆರಂಭವಾಯಿತು. ಹಿಂದೂರಾಜ್ಯ ಪದವಿಗೆ ಆದಿಸ್ಥಾನವಾದ ಸಾತಾರವನ್ನೆ ಪ್ರಥಮದಲ್ಲಿ ಸರ್ಕಾರಕ್ಕೆ ಶೇರಿಸಿಕೊಳ್ಳಬೇಕೆಂಬ ಇತ್ಯರ್ಥವಾಯಿತು. ಸತಾರೆಯ ಈಚಿಗಿನ ಛತ್ರಪತಿ ಶಹಾಜಿ ಮಹಾರಾಜ ಉರಫ್ ಅಪ್ಪಾಸಾಹೇಬನು ಕೈಲಾಸ ವಾಸಿಯಾದನು. ಅವನಿಗೆ ಔರಸ ಸಂತತಿಯಿಲ್ಲದೆ ಇದ್ದದ್ದರಿಂದ, ಆತನು ತನ್ನ ಮರಣಕ್ಕೆ ಮುಂಚೆ ಒಂದು ಹುಡುಗನನ್ನು ದತ್ತು ತೆಗದುಕೊಂಡು ಯಿದ್ದನು. ಪರಂತು, ಅದನ್ನು ಲಾರ್ಡ್ ಡಾಲ್ಹೌಜಿ ಸಾಹೇಬನು ಒಪ್ಪದೆ ಛತ್ರಪತಿಯ ಸಿಂಹಾಸನವನ್ನ ನಾಶಪಡಿಸಿದನು ! ನಾಗಪುರ ಮತ್ತು ತಂಜಾವುರ ಇವುಗಳ ಸ್ಥಿತಿಯು ಅದೇರೀತಿ ಆಯಿತು. ಮತ್ತು ಬುಂದೇಲ್ ಖಂಡದಲ್ಲಿ ಸಣ್ಣ ಝಾನ್ಸಿಸಂಸ್ಥಾನದ ಮೇಲೆಯೂ ಲಾರ್ಡ್ ಡೆಲ್ಹೌಜಿಯ ಗದಾ ಬಂದು ಬಿತ್ತು ! ಆ ಗದೆಯ ತೀಕ್ಷ್ಣ ಪ್ರಹಾರದಿಂದ ಆ ಸಂಸ್ಥಾನವು ಕೇವಲ ಪುಡಿಪುಡಿಯಾಗಿ ಹೋಯಿತು. ಇದು ಬಹಳ ವ್ಯಸನಕರವಾದ ಮಾತಾಗಿದೆ !!

3 ನೇ ಪ್ರಕರಣದಲ್ಲಿ ಹೇಳಿರುವ ಪ್ರಕಾರ ಬುಂದೇಲ್ ಖಂಡದ ಪೊಲಿಟಿಕಲ್ ಯೇಜಂಟ್ ಮೇಜರ್ ಮಾಲ್ಕಂನ ರಿಪೋರ್ಟು ಹಿಂದುಸ್ಥಾನದ ಸರ್ಕಾರದ ಕಡೆಗೆ ಕಳುಹಿಸ

---

to the resources of the public treasury and for extending the universal application of our system of Government to those whose best interests, I sincerely believe will be promoted thereby." "It is my strong and deliberate opinion that, in the exercise of a wise and sound policy, the British Government is bound not to put aside or neglect such rightful opportunities of acquiring territory or revenue as may from time to time present themselves, whether they arise from the lapse of subordinate states by the failure of all heirs of every description whatever, or from the failure of heirs natural, when the succession can be sustained only by the sanction of Government being given to the ceremony of adoption according to Hindu Law."

ಲ್ಪಟ್ಟಿತು. ಪರಂತು, ಆ ಸಮಯದಲ್ಲಿ ಲಾರ್ಡ್ ಡಾಲ್ಹೂಜಿಯು, (ಗವರ್ನರ್ ಜನರಲ್) ಅಯೋಧ್ಯಾ ಸಂಸ್ಥಾನದಲ್ಲಿ ತಿರುಗಲಿಕ್ಕೆ ಹೋಗಿದ್ದನಾದ್ದರಿಂದ ಅದನ್ನ ಕುರಿತು ಯಾವ ವಿಚಾರವೂ ನಡೆಯದೆ, 6 ತಿಂಗಳ ವರಿಗೆ ಆ ಕೆಲಸವು ಆಲಸ್ಯವಾಗಿ ಬಿದ್ದಿತ್ತು. ಮತ್ತು ಪೊಲಿಟಿಕಲ್ ಯೇಜಂಟನಿಗೆ ಬರದು ಬಂದ ಪ್ರಕಾರ ಝಾನ್ಸೀ ರಾಜ್ಯದ ವ್ಯವಸ್ಥೆ ನಡೆಯುತ್ತಾ ಇತ್ತು. ಮಹಾರಾಣಿ ಲಕ್ಷ್ಮೀಬಾಯಿ ಸಾಹೇಬಳಿಗೆ ಶ್ರೀಮಂತ ದಾಮೋದರರಾಯನ ದತ್ತ ವಿಧಾನವನ್ನ ಕೃಪಾಳುಗಳಾದ ಬ್ರಿಟಿಷ್ ಸರ್ಕಾರದವರು ಒಪ್ಪಿಕೊಂಡು ಆತನನ್ನ ಝಾನ್ಸೀ ಸಿಂಹಾಸನದ ಮೇಲೆ ಸ್ಥಾಪನೆ ಮಾಡ್ಯಾರು ಯೆಂತ ಬಹಳ ಬಹಳ ಆಶೆಯಿತ್ತು. ಆದ್ದರಿಂದ ಆಕೆಯು ಸ್ವತಃ ಲಾರ್ಡ್ ಡ್ಯಾಲ್ಹೂಜಿ ಸಾಹೇಬನ ಹೆಸರಿಗೆ ಒಂದು ಖಲೀತವನ್ನು ಝಾನ್ಸೀ ಸಂಸ್ಥಾನದ ಪೊಲಿಟಿಕಲ್ ಯೇಜಂಟು ಮೇಜರ್ ಯೆಲ್ಲಿಸ್ ಸಾಹೇಬನ ಮೂಲಕ ಕಳುಹಿಸಿಕೊಟ್ಟಳು. ಅದನ್ನ ಲಾರ್ಡ್ ಡೆಲ್ಹೂಜಿ ಸಾಹೇಬನು ನ್ಯಾಯವಾಗಿ ವಿಚಾರ ಮಾಡ್ಯಾನು ಯೆಂತ ಆಕೆಯು ಸಂಪೂರ್ಣವಾಗಿ ನಂಬಿದ್ದಳು. ಆ ಖಲೀತೆಯ ಸಾರಾಂಶವು ಈ ಪ್ರಕಾರ :—" ನಮ್ಮ ಮಾವಂದಿರು, ಶಿವರಾವ್‌ಭಾವುನು, ಈ ಪ್ರಾಂತ್ಯದಲ್ಲಿ ಬ್ರಿಟಿಷ್ ಸರ್ಕಾರದ ಆಡಳತ ಪ್ರಾರಂಭವಾಗುವದಕ್ಕೆ ಮೊದಲು, ಅವರಿಗೆ ಯಂಥಾ ಸಹಾಯವನ್ನು ಮಾಡಿದ್ದಾರೆಂಬುವದು ಸಂಸ್ಥಾನದ ಕಾಗದ ಪತ್ರಗಳಲ್ಲಿ ತೋರಿಸಲ್ಪಟ್ಟದೆ. ಆ ಸಹಾಯಕ್ಕೋಸ್ಕರ ಪ್ರಬಲರಾದ ಬ್ರಿಟಿಷ್ ಸರ್ಕಾರದವರು ನಮ್ಮ ಮನೆತನದಮೇಲೆ ತೋರಿಸಿದ ಕೃಪೆಯಿಂದಲೂ ಮತ್ತು ನಮಗೆ ಕೊಟ್ಟ ಆಶ್ರಯಗಳಿಂದಲೂ ನಮಗೆ ನಿರಂತರವಾಗಿ ಸಾಖ್ಯವಾಗಿದೆ."

" ಕರ್ನಲ್ ಸ್ಲಿಮರ್ ಸಾಹೇಬನು 1842 ನೆ ಇಸವಿಯಲ್ಲಿ, ನಮ್ಮ ಗಂಡ, ಮಹಾರಾಜ ಗಂಗಾಧರರಾಯನ, ಸಂಗಡ ಮಾಡಿಕೊಂಡಿರುವ ತಹನಾಮೆಯಿಂದ, ಪೂರ್ವದಲ್ಲಿ 1817 ನೆ ಇಸವಿಯಲ್ಲಿ ರಾಮಚಂದ್ರರಾಯನು ಮಾಡಿಕೊಂಡ ತಹಾದಲ್ಲಿ ಇರತಕ್ಕ ಎಲ್ಲಾ ಕಲಂಗಳೂ ರದ್ದಾಗದೆ ಅದು ಪೂರ್ವದಂತೆ ಇಟ್ಟುಕೊಳ್ಳುತ್ತಾ ಬಂದು, ಅದರ ದೆಶೆಯಿಂದ ಪ್ರಾಪ್ತಿಯಾಗತಕ್ಕಂಥ ಎಲ್ಲಾ ಫಲವನ್ನು ಝಾನ್ಸಿ ಸರ್ಕಾರಕ್ಕೆ ಕೊಡುತ್ತಾ ಬಂದೀತು ಯಂತ ವಾಗ್ದಾನ ಶಿಕ್ಕಿಯಿಥೆ."

" ಶಿವರಾವ್‌ಭಾವೂನ ಉತ್ತಮ ನಡವಳತೆಯು ಮತ್ತು ಬ್ರಿಟಿಷ್ ಸರ್ಕಾರದ ವಿಷಯದಲ್ಲಿ ಅಂತಃಕರುಣ ಪೂರ್ವಕವಾದ ಆತನ ಅಚಲ ಪ್ರೇಮದಕಡೆ ಲಕ್ಷಕೊಟ್ಟು, ಮತ್ತು ಆತನು, ಮರಣಕ್ಕೆ ಪೂರ್ವದಲ್ಲಿ ಝಾನ್ಸೀ ಸಂಸ್ಥಾನವನ್ನ ವಂಶ ಪಾರಂಪರ್ಯವಾಗಿ ರಾಮಚಂದ್ರರಾಯನ ಕಡೆಗೆ ನಡಸಿಕೊಂಡು ಬರಬೇಕೆಂತ ತೋರಿಸಿದ ಇಛ್ಛೆಯನ್ನ ಮನ್ನಿಸಿ ಆ ತಹಾ ಮಾಡಲ್ಪಟ್ಟದೆ. ಝಾನ್ಸೀ ಸರ್ಕಾರದ ಪ್ರೇಮಭಾವ ಮತ್ತು ವಿಶ್ವಾಸವನ್ನ ದೃಢಪಡಿಸುವಗೋಸ್ಕರ ಆ ತಹಾದಿಂದ ನಿಶ್ಚಯಿಸಿರುವದೇನಂದರೆ,—ರಾವ್ ರಾಮಚಂದ್ರ, ಅವನ ವಾರಸು, ಇವರು, ಈ ಗಾದಿಗೆ ಸಮ್ಮಂಧಪಟ್ಟ

ಶಿವರಾವ್ ಭಾವೂನ ಪ್ರಾಂತ್ಯಕ್ಕೆ ವಂಶ ಪಾರಂಪರ್ಯವಾಗಿ ಮಾಲಿಕರಾಗಿದ್ದಾರೆ. ಇದರಿಂದ ಯೇನು ಅರ್ಥವಾಗುತ್ತೆಂದರೆ, ಉತ್ತಮಗತಿಯಾಗುವದಕ್ಕೋಸ್ಕರ ತನ್ನ ನಂತರ ಉತ್ತರ ಕ್ರಿಯಾದಿಗಳನ್ನು ಮಾಡುವದಕ್ಕಾಗಿ ತೆಗದುಕೊಳ್ಳುವ ದತ್ತಕನನ್ನ ಬ್ರಿಟಿಷ್ ಸರ್ಕಾರದವರು ಮನ್ನಿಸುವರು ಮತ್ತು ಆತನಿಂದ ಮುಂದೆ ಮನೆತನದ ಹೆಸರು ನಡಿಯುತ್ತಾ ಇದ್ದೀತು."

"ಹಿಂದೂಶಾಸ್ತ್ರದಲ್ಲಿ ಹೇಳಿರುವ ಪ್ರಕಾರ ಮೃತಪಿತನಿಗೆ ಪಿಂಡದಾನವನ್ನ ಕೊಡುವದಕ್ಕೂ ಮತ್ತು ಆತನ ಶ್ರಾದ್ಧ ಸಂಸ್ಕಾರ ಮುಂತಾದ ವಿಧಿಗಳನ್ನು ಮಾಡುವದಕ್ಕೂ ಔರಸ ಪುತ್ರನಂತೆಯೇ ದತ್ತಕ ಮಗನಿಗೂ ಸಹಾ ತುಂಬಾ ಅಧಿಕಾರಯಿದ್ದು ಅದರದಶೆಯಿಂದ ಮೃತನ ಆತ್ಮಕ್ಕೆ ಒಂದೇ ವಿಧವಾದ ಸಮಾಧಾನ ಪ್ರಾಪ್ತವಾಗುತ್ತದೆ ಯೆಂಬುವದ್ದರಿಂದ, ಈ ದತ್ತು ವಿಧಾನದ ನಡವಳತೆಯು ಸರ್ವ ಹಿಂದೂಸ್ಥಾನದಲ್ಲಿಯೂ ಆಚರಣೆಗೆ ಬಂದು ಇದೆ. ಆ ನಡವಳತೆ ಪ್ರಕಾರ ನಮ್ಮ ಗಂಡನು ತಾರೀಖು 19ನೇ ನವಂಬರು ದಿವಸ ಸಾಯಂಕಾಲದಲ್ಲಿ, ದಿವಾನ್ ನರಶಿಂಹರಾವ್ ಆಪ್ಪಾ, ಲಾಲಾ ಲಾಹೋರಿಮಲ್ಲ, ಮತ್ತು ಲಾಲಾ ತಟೀಚಂದ, ಪ್ರಭೃತಿ ಮುಖ್ಯಮುಖ್ಯ ಉದ್ಯೋಗಸ್ಥರ ಸಮೂಹವನ್ನ ಮತ್ತು ನನ್ನನ್ನ ಸಹ ಹತ್ತರಕ್ಕೆ ಕರಸಿಕೊಂಡು ಹೇಳಿದ್ದೇನಂದರೆ :—ನನ್ನ ಪ್ರಕೃತಿಯು ಈಗ ಕೇವಲ ಅಸ್ವಸ್ಥವಾಗಿದೆ. ಮತ್ತು ಔಷಧದಿಂದ ಯೇನೂ ಗುಣಬರುವದಿಲ್ಲ. ಆದಕಾರಣ, ಹಿಂದೂ ಶಾಸ್ತ್ರಪ್ರಕಾರ ಗದ್ದಿಗೆಗೆ ವಾರಸುದಾರನಾಗುವದಕ್ಕೆ ಯೋಗ್ಯನಾದ ನಮ್ಮ ಗೋತ್ರದಲ್ಲಿರತಕ್ಕ ಒಬ್ಬ ಕುಶಲನಾದ ಹುಡುಗನಿಗೆ ನನ್ನ ತೊಡೆಯಮೇಲೆ, ದತ್ತುಮಾಡಬೇಕು."

"ಆಪ್ರಕಾರವಾಗಿ ರಾಮಚಂದ್ರ ಬಾಬಾನನ್ನ ಕರಶಿಕೊಂಡು, ನಮ್ಮಗೋತ್ರದಲ್ಲಿರತಕ್ಕ ಅನೇಕ ಹುಡುಗರ ಪೈಕಿ ವಾಸುದೇವರಾಯನ ಆನಂದರಾವ್‌ಯೆಂಬ ಹೆಸರುಳ್ಳ 5 ವರುಷದ ಹುಡುಗನನ್ನ ಆತನ ಹೇಳಿಕೆ ಮೇಲೆ, ನಿಶ್ಚಯ ಮಾಡಲಾಯಿತು. ಅನಂತರ ನಮ್ಮ ಗಂಡನು ಶಾಸ್ತ್ರಜ್ಞರನ್ನು ಕರಸಿಕೊಂಡು, ಅವರಕೈಯ್ಯಿಂದ ದತ್ತುವಿಧಾನ ಮಾಡಿಸಿದರು. ಎರಡನೆದಿವಸ ಬೆಳಿಗ್ಗೆ ಪಂಡಿತ ವಿನಾಯಕ ರಾಯನು ಸಂಕಲ್ಪವನ್ನು ಹೇಳಿದನು. ಮತ್ತು ಆನಂದರಾಯನ ಹಿರಿಯ ವಾಸುದೇವ ರಾಯನು ವಿಧಿಪೂರ್ವಕವಾಗಿ ಪುತ್ರದಾನ ಮಾಡಿದನು. ಈ ಹುಡುಗನ ಹೆಸರು ದಾಮೋದರರಾವ್ ಗಂಗಾಧರ ಯೆಂತ ಇಟ್ಟು, ದತ್ತುವಿಧಾನ ವಿಧಿ ಸಮಾಪ್ತಿ ಮಾಡಲಾಯಿತು."

"ಸಂಸ್ಥಾನದ ಉದ್ಯೋಗಸ್ಥರು ಮಹಾರಾಜನ ಆಜ್ಞೆಯ ಮೇಲೆ, ಮೇಜರ್ ಯೆಲ್ಲಿಸ್ ಮತ್ತು ಕ್ಯಾಪ್ಟನ್ ಮಾರ್ಟಿನ್ ಸಾಹೇಬರುಗಳನ್ನು ದತ್ತವಿಧಾನ ಸಮಾರಂಭಕ್ಕೆ ಬರಬೇಕೆಂತ ಲಗ್ನಪತ್ರಿಕೆ ಗಳನ್ನು ಕಳುಹಿಸಿದ್ದರು. ಆ ಪ್ರಕಾರವಾಗಿ, ಆ ಯಿಬ್ಬರು ಅಧಿಕಾರಿಗಳು, ತಾರೀಖು 20ನೇ ದಿವಸ 10 ಘಂಟೆ ಹೊಡೆಯುತ್ತಲೆ, ಅರಮನೆಗೆ

ಬಂದುಯಿದ್ದರು. ಆ ವೇಳೆಯಲ್ಲಿ ನಮ್ಮ ಗಂಡನು ದತ್ತವಿಧಾನಕ್ಕೆ ಸರ್ಕಾರದವರ ಸಮ್ಮತಿ ಪಡಕೊಳ್ಳುವ ಗೋಸ್ಕರ ಒಂದು ಖಲೀತವನ್ನು ಕೊಟ್ಟನು. ಇಷ್ಟೇ ಅಲ್ಲದೆ, ಆ ಖಲೀತೆಯನ್ನ ಮಹಾರಾಜನ ಸಮಕ್ಷಮ ಅವರಿಗೆ ಓದಿಹೇಳಿ ತೋರಿಸಲಾಯಿತು. ಆಗ್ಗೆ ಮೇಜರ್ ಯೆಲ್ಲಿಸ್ ಸಾಹೇಬನು ನಿಮ್ಮ ಇಚ್ಛೆಪ್ರಕಾರ ಸರ್ವ ಸಂಗತಿಯನ್ನು ಘನಹೊಂದಿದ ಸಾಹೇಬರಿಗೆ ತಿಳಿಸುತ್ತೇನೆ ಯೆಂತ ವಾಗ್ದಾನ ಕೊಟ್ಟಿದ್ದಾನೆ."

"ಎರಡನೆಯ ದಿವಸ ಅಂದರೆ ನವೆಂಬರು ತಾರೀಖು 21 ನೆ ಸೋಮವಾರದ ದಿವಸ ನಮ್ಮ ಪತಿಗೆ ದೈವಾಜ್ಞೆಯಾಯಿತು. ಆತನ ಸರ್ವ ಉತ್ತರ ಕ್ರಿಯಾದಿಗಳನ್ನು ಔರಸ ಪುತ್ರನಂತೆ ದಾಮೋದರರಾವ್ ಗಂಗಾಧರನು ಮಾಡಿರುತ್ತಾನೆ."

"ಮರಣಕ್ಕೆ ಪೂರ್ವ, ನಮ್ಮ ಪತಿಯು ಈ ಹುಡುಗನನ್ನು ಬ್ರಿಟಿಷ್ ಸರ್ಕಾರ ದವರ ಮಡಲಿನಲ್ಲಿ ಹಾಕಿರುತ್ತಾನೆ. ಈಗ ಆತನ ಸಂರಕ್ಷಣೆ ಮಾಡತಕ್ಕದ್ದು ಮತ್ತು ಆತನ ಮೇಲೆ ಕೃಪೆ ಇಡತಕ್ಕದ್ದು ಸಹ ಅವರದ್ದಾಗಿದೆ. ಮುಂದೆ, ನಮ್ಮ ವಿನಂತಿ ಯೇನಂದರೆ ದತ್ತಿಯ ಸಂಸ್ಥಾನದ ಪೂರ್ವದ ರಾಜ ಪರೀಕ್ಷಿತ, ಅಥವ ಝಾಲವಾಣದ ಸಂಸ್ಥಾನಿಕ ಬಾಳಾರಾವ್, ಅಥವ ಓರ್ಛಾ ಸಂಸ್ಥಾನದ ರಾಜ ತೇಜಸಿಂಗ್ ಇವರು ತೆಗದುಕೊಂಡ ದತ್ತನ್ನ ಸರ್ಕಾರದವರು ಹೇಗೆ ಮನಿಸಿದ್ದರೋ, ಅದೇ ಪ್ರಕಾರವೇ ಪ್ರಕೃತ ನಮ್ಮ ದತ್ತು ವಿಧಾನವನ್ನ ಮನ್ನಿಸೋಣ ವಾಗಬೇಕು. ಕಾರಣ ವೇನಂದರೆ, ಝಾನ್ಸೀ ತಹಾದಲ್ಲಿ ಯಾವ ಪ್ರಕಾರ (Dawana) "ಸತತ" ಯಂತ ಶಬ್ದವನ್ನು ಹಾಕಿದ್ದಾರೆಯೋ, ಆ ಪ್ರಕಾರವಾಗಿ ಆ ಸಂಸ್ಥಾನಿಕರ ತಹಾದಲ್ಲಿಲ್ಲ. ಇದರಿಂದ ಅವರಿ ಗಿಂತಲೂ, ಈ ಸಂಸ್ಥಾನಕ್ಕೆ ದತ್ತು ತೆಗದುಕೊಳ್ಳುವ ಹಕ್ಕು ಅಧಿಕವಾಗಿ ಇದೆ."

ರಾಣೀ ಸಾಹೇಬಳ ಈ ಖಲೀತವು ಗವರ್ನರ್ ಜನರಲ್ ಸಾಹೇಬನಿಗೆ ರವಾನೆ ಆಯಿತು. ಝಾನ್ಸಿ ಗದ್ದಿಗೆ ಖರಿದಾಯಿತು ಯೆಂಬುವದನ್ನು ನೋಡಿ, ಖಾನ್ ದೇಶ ದಲ್ಲಿ ಪಾರೋಳ ಯಂಬ ಊರಿನಲ್ಲಿರುತ್ತಿದ್ದ ಮಹಾರಾಜ ಗಂಗಾಧರ ರಾಯನ ದಾಯಾದಿ ಗಳ ಪೈಕಿ ಸದಾಶಿವರಾವ್ ನಾರಾಯಣ ಯಂಬ ಹೆಸರುಳ್ಳ ಯಾರೋ ಒಬ್ಬನು ಝಾನ್ ಸಿಗೆ ಬಂದು ಪೊಲಿಟಕಲ್ ಯೇಜಂಟ್ ಮೇಜರ್ ಮಾಲ್ಕಾಂ ಸಾಹೇಬನ ಕಡೆಗೆ, ತನಗೆ ಸಂಸ್ಥಾನದ ಗದ್ದಿಗೆ ಹಕ್ಕನ್ನು ಕೊಡಿಸಿ ಕೊಡಬೇಕೆಂತ ವಿಜ್ಞಾಪಿಸಿಕೊಂಡನು. * ಅದೇ

---

* ಈ ವಿಜ್ಞಾಪನೆಯನ್ನು ಗೌರ್ನರ್ ಜನರಲ್ ಕಡೆಗೆ ಕಳುಹಿಸಿಕೊಡುವ ವೇಳೆಯಲ್ಲಿ ಕರ್ನಲ್ ಮಾಲ್ಕಾಂನು, ತನ್ನ ರಿಪೋರ್ಟಿನಲ್ಲಿ ಈ ಪ್ರಕಾರ ಬರದಿರುತ್ತಾನೆ:—

"The second individual is a person called Sadashiw Narain, now in the Deccan. It will be seen,

ಪ್ರಕಾರವಾಗಿ, ರಾಮಚಂದ್ರರಾಯನು ತಿರಸ್ಕರಿಸಿದ ದತ್ತ ಪುತ್ರ ಕ್ರಿಷ್ಣರಾಯನು ಸಹ ತನ್ನ ಹಕ್ಕನ್ನ ಸ್ಥಾಪನೆ ಮಾಡಿಕೊಳ್ಳುವ ನಿಮಿತ್ತ, ಹಿಂದುಸ್ಥಾನದ ಸರ್ಕಾರಕ್ಕೆ ಅಪೀಲು ಮಾಡಿದನು. ಝಾಸೀ ಸಂಸ್ಥಾನದ ಗದ್ದಿಗೆಗೆ ಯಿವರಿಬ್ಬರಿಗೂ ಯಾವ ಹಕ್ಕೂ ಇರಲಿಲ್ಲ. ಪರಂತು, ರಾಜ್ಯ ಲೋಭವು ಯಾರಿಗೆ ತಪ್ಪಿದೆ ?

ಮಹಾರಾಣಿ ಲಕ್ಷ್ಮೀಬಾಯಿ ಸಾಹೇಬಳ ವಿನಂತಿಯನ್ನು ಮನ್ನಿಸಬೇಕಾದ್ದನ್ನು ಕುರಿತು, ಝಾಸಿ ಪೊಲಿಟಿಕಲ್ ಯೇಜಂಟ್, ಮೇಜರ್ ಯೆಲ್ಲಿಸ್ ಸಾಹೇಬನು 1853 ನೆ ಇಸವಿ ಡಿಸೆಂಬರು ತಾರೀಖು 24ರಲ್ಲಿ, ಒಂದು ಪತ್ರವನ್ನು ಕಳುಹಿಸಿದ್ದನು. ಅದರಲ್ಲಿ, ಆತನು ಸ್ಪಷ್ಟವಾಗಿ ಹೇಳಿರುವದೇನಂದರೆ, "ಓರ್ಛಾ ಸಂಸ್ಥಾನದ ಪ್ರಕಾರ, ಝಾಸೀ ಸಂಸ್ಥಾನದ ಸಂಗಡ ನಮ್ಮ ಸಖ್ಯ ಮತ್ತು ಸ್ನೇಹದ ತಹ ನಡದು ಇದೆ. ಮತ್ತು ಆ ಎರಡು ತಹಾದಲ್ಲಿಯೂ ಕಲಮುಗಳು ಯೆಲ್ಲಾ ಒಂದೇ ವಿಧವಾಗಿ ಇವೆ. ಆದ್ದರಿಂದ ಒಂದು ಸಂಸ್ಥಾನಕ್ಕೆ ದತ್ತಕನ ಹಕ್ಕು ಶಿಕ್ಕುವದು, ಮತ್ತೊಂದಕ್ಕೆ ಶಿಕ್ಕದೇ ಇರುವದು ಈ ರೀತಿ ವರ್ತನ ಭೇದ ತೋರಿಸುವದಕ್ಕೆ ಯೇನೂ ಕಾರಣವಿಲ್ಲ. ಕೋರ್ಟ್ ಆಫ್ ಡೈರೆಕ್ಟರ್ಸ್, 1839 ನೆ ಇಸವಿ ಮಾರ್ಚಿ ತಾರೀಖು 27ರಲ್ಲಿ ಕಳುಹಿಸಿದ ಯಾದಿಯು 16 ಮತ್ತು 17 ನೆ ಕಲಂನಲ್ಲಿ, ಈ ದೇಶದ ಸಂಸ್ಥಾನಿಕರಿಗೆ, ದತ್ತ ತೆಗದು ಕೊಳ್ಳುವ ಪೂರ್ಣ ಹಕ್ಕು ಇದೆ ಯಂತ ಒಪ್ಪಿಕೊಂಡಿದ್ದಾರೆ. ಹೀಗೆ ಇರುವಾಗ ಯಾವ ಮನೆತನವನ್ನ, ಅವರು ಪೂರ್ವದಲ್ಲಿ ಮಾಡಿದ ಸಹಾಯದಗೋಸ್ಕರ ಬ್ರಿಟಿಷ್ ಸರ್ಕಾರದವರು ಸಂಸ್ಥಾನಿಕರನ್ನಾಗಿ ಮಾಡಿದಾರೆಯೋ, ಆ ಮನೆತನವು ಇತರರಂತೆ ಪ್ರಾಚೀನವಾದ್ದಾಗಿಲ್ಲ ಯೆಂಬ ನೆಪ ಹೇಳಿ, ಅವರ ಹಕ್ಕನ್ನ ಮನ್ನಿಸದೆ ಇರುವದು, ಡೈರೆಕ್ಟರುಗಳ ಹುಕ್ಕುಂಗೆ ವಿರುದ್ಧವಾಗಿರುವದಲ್ಲದೆ, ಅದರಿಂದ ಅವರ ಔದಾರ್ಯ ಭಂಗ ಮಾಡಿದಂತೆ ಆದೀತು ಯೆಂತ ನನ್ನ ಅಭಿಪ್ರಾಯವಾಗಿದೆ." ಈ ಪತ್ರ ತಪ್ಪಿಹೋಗಿ ಬುಂದೇಲ್ ಖಂಡದ ಪೊಲಿಟಿಕಲ್ ಯೇಜಂಟಿನ ದಫ್ತರದಲ್ಲಿ ಹಾಂಗೆಯೆ ಬಿದ್ದು ಹೋಗಿತ್ತು. ಮುಂದೆ ಕೆಲವು ದಿವಸದಲ್ಲಿ ಅದು ಕಲ್ಕತ್ತೆಗೆ ಕಳುಹಿಸಲ್ಪಟ್ಟಿತು. ಆದರೆ ಅದರ

---

from the enclosed letter from Major Ellis, that he considers this man's claims also inadmissible, but on an examination of the genealogical tree herewith enclosed, it will be seen, that if the claims of heirs male of the ancestors of the late Raja are admitted, this individual is actually the nearest relative left to claim the Gaddi on these grounds." *Letter from Major D. A. Malcolm No.* 34 *of* 1853 *dated* 31*st December* 1853.

ವಿಷಯುವು ಗವರ್ನರ್ ಜನರಲ್‌ನ ಅಥವ ಆತನ ಸೆಕ್ರಟರಿಯು ಬರವಣಿಗೆಯಲ್ಲಿ ಎಲ್ಲಿಯೂ ತೋರುವದಿಲ್ಲ !!

ಇದು ಹಾಗೆ ಇರಲಿ. ಸನ 1854 ನೆ ಇಸವಿ ಫೆಬ್ರುವರಿ ತಿಂಗಳಲ್ಲಿ, ಲಾರ್ಡ ಡೆಲ್ಹೌಜಿಯು ಕಲ್ಕತ್ತೆಗೆ ತಿರಿಗಿ ಬಂದು, ಝೂರ್ಸೀ ಸಂಸ್ಥಾನದ ಕೆಲಸಕ್ಕೆ ಪ್ರಾರಂಭಿಸಿದನು. ಹಿಂದುಸ್ಥಾನ್ ಸರ್ಕಾರದ ಪರ ರಾಜ್ಯ ಸಮ್ಮಂಧ ಸೆಕ್ರೆಟರಿ, ಜೆ. ಪಿ. ಗ್ರಾಂಟ್ ಸಾಹೇಬನು ಝೂರ್ಸಿ ಸಂಸ್ಥಾನದ ವಿಷಯುವಾಗಿ ತಿಳುವಳಿಕೆಗೋಸ್ಕರ ಒಂದು ಮುಸೂದೆಯನ್ನು ಬರೆದು ಅದರಲ್ಲಿ ಝೂರ್ಸಿ ಸಂಸ್ಥಾನದ ಮತ್ತು ಬ್ರಿಟಿಷ್ ಸರ್ಕಾರದ ಸಮ್ಮಂಧವು ಹ್ಯಾಗೆ ಇದೆ ಯಂಬುವದನ್ನ, ಸಂಕ್ಷಿಪ್ತವಾಗಿ ಇತಿಹಾಸ ಬರದು ಇದ್ದನು. ಆ ಬರವಣಿಗೆಯು ಅಭಿಪ್ರಾಯುವು, ಝೂರ್ಸಿ ಸಂಸ್ಥಾನವನ್ನ ಸರ್ಕಾರಕ್ಕೆ ಸೇರಿಸಿಕೊಳ್ಳಬೇಕೆಂಬದೇ ಮುಖ್ಯವಾಗಿತ್ತು ಯಂತ ಹೇಳಬಹುದಾಗಿದೆ. ಈ ರೀತಿ ಕೊಟ್ಟ ಅಭಿಪ್ರಾಯು ಮತ್ತು ತಿಳುವಳಿಕೆ ಮೇಲೆ ಲಾರ್ಡ ಡೆಲ್ಹೌಜಿ ಮತ್ತು ಆತನ ಕೌನ್ಸಿಲರ್ ಸಹ ಮಾಡಿದ ಸಿದ್ಧಾಂತವು, ಈ ಕೆಳಗೆ ಬರೆಯಲ್ಪಟ್ಟಿದೆ.

---

## ಹಿಂದುಸ್ಥಾನದ, ಗೌರ್ನರ್ ಜನರಲ್, ಲಾರ್ಡ ಡೆಲಹೌಜಿಯುವರ ಶಿದ್ಧಾಂತ.

1. ಝೂರ್ಸಿ ಮಹಾರಾಜ ಗಂಗಾಧರರಾಯನು, ಸನ 1853 ನೆ ಇಸವಿ ನವಂಬರು ತಿಂಗಳು ಕೊನೆಯು ಭಾಗದಲ್ಲಿ ಪರಲೋಕವಾಸಿಯಾದನು ; ಆತನಿಗೆ ಪುತ್ರ ಸಂತಾನವು ಇಲ್ಲದೆ ಇದ್ದ ಕಾರಣ, ಆತನು ತನ್ನ ಮರಣಕ್ಕೆ ಮುಂಚಿನ ದಿವಸ ಒಬ್ಬ ಹುಡುಗನನ್ನ ದತ್ತು ತೆಗದುಕೊಂಡನು. ಆ ಹುಡುಗನನ್ನ ಹಿಂದುಸ್ಥಾನದ ಸರ್ಕಾರದವರು ಝೂರ್ಸಿ ಸಂಸ್ಥಾನಕ್ಕೆ ಹಕ್ಕುದಾರನನ್ನಾಗಿ ಒಪ್ಪಿಕೊಳ್ಳಬೇಕೂ ಯೆಂತ ಕೈ. ಮಹಾರಾಜನ ರಾಣಿ, ಲಕ್ಷ್ಮೀಬಾಯಿ ಸಾಹೇಬಳು ವಿಜ್ಞಾಪಿಸಿಕೊಳ್ಳುತ್ತಾ ಇದ್ದಾಳೆ.

2. ಸೆಕ್ರೆಟರಿಯು ಸಿದ್ಧಮಾಡಿಕೊಟ್ಟಿರುವ ಝೂರ್ಸೀ ಸಂಸ್ಥಾನದ ಸಂಕ್ಷಿಪ್ತ ಅನುಭವ ಪತ್ರದಿಂದ, ಬ್ರಿಟಿಷ್ ಸರ್ಕಾರಕ್ಕೂ ಮತ್ತು ಝೂರ್ಸಿ ಸಂಸ್ಥಾನಕ್ಕೂ ಯಾವ ಪ್ರಕಾರವಾದ ಸಮ್ಮಂಧ ಇದೆ ಯೆಂಬುವದು ಸ್ಪಷ್ಟವಾಗಿ ತಿಳಿಯುಬರುತ್ತದೆ. ಈ ವಿಷಯುವನ್ನ, ಲಕ್ಷ ಪೂರ್ವಕ ವಿಚಾರಮಾಡಿ ಮತ್ತು ಝೂರ್ಸಿ ಸಂಸ್ಥಾನದವರ ಸಂಗಡ, ಮೊದಲಿನಿಂದಲೂ ನಾವು ನಡಿಸಿದ ಪತ್ರ ವ್ಯವಹಾರಗಳನ್ನ ಆಲೋಚನೆ ಮಾಡಿದ್ದರಲ್ಲಿ, ಝೂರ್ಸಿ ರಾಜಾಸಾಹೇಬನ ವಂಶದಲ್ಲಿದ್ದ ಪ್ರಾಂತ್ಯದ ವಿಷಯುವಾಗಿ, ಯಾವರೀತಿಯಾಗಿ ವ್ಯವಸ್ಥೆ ಮಾಡಬೇಕು ಯಂಬದನ್ನು ಕುರಿತು, ನನ್ನ ಅಭಿಪ್ರಾಯುವನ್ನ ಇಲ್ಲಿ ಬರೆಯುತ್ತೇನೆ.

3. ಈ ಪ್ರಾಂತ್ಯದ ಹಕ್ಕು, ಬ್ರಿಟಿಷ್ ಸರ್ಕಾರದ ಕಡೆಗೆ ಬಂದಿದೆ ಯಂತ ನನ್ನ ಮತವಾಗಿ ಇದೆ. ಆ ಹಕ್ಕಿನಿಂದಲೂ ಮತ್ತು ರಾಜನೀತಿಯಿಂದಲೂ, ಅದನ್ನು ಸರ್ಕಾರದ ಕಡೆಗೆ ಇಟ್ಟುಕೊಳ್ಳುವದು ಯೋಗ್ಯವಾಗಿದೆ.

4. ಯಾವ ನ್ಯಾಯದ ಮೇಲೆ, ಝಾನ್ಸೀ ಸಂಸ್ಥಾನದ ವ್ಯವಸ್ಥೆ ಮಾಡ ಬೇಕೋ ಅದೇ ನ್ಯಾಯದ ಮೇಲೆ, ನಾಗಪುರ ಮತ್ತು ತೆಹೇರಿ ಸಂಸ್ಥಾನಗಳ ವಿಷಯ ವಾಗಿ ಚರ್ಚೆ ನಡದು, ಸಂಪೂರ್ಣ ವಿಚಾರವಾಗಿದೆ. ಲೆ. ಗವರ್ನರ್, ಸರ್ ಚಾರ್ಲಸ್ ಮೆಟ್‍ಕಾಫ್ ಸಾಹೇಬನು, ಬುಂದೇಲ್ ಖಂಡದ ಚಿಕ್ಕ ಸಂಸ್ಥಾನಿಕರ ಸಮ್ಮಂಧವಾಗಿ, ಅನುಸರಿಸಿದ ವಿಶೇಷ ನೀತಿಯನ್ನು ಮುಖ್ಯ ಸರ್ಕಾರದವರು 1837 ನೆ ಇಸವಿಯಲ್ಲಿ ಮನ್ನಿಶಿರುವದನ್ನೂ ಮತ್ತು ಮಾಂಡಲಿಕ ಸಂಸ್ಥಾನದ ಸಮ್ಮಂಧವಾಗಿ ಸರ್ 1849 ನೆ ಇಸವಿಯಲ್ಲಿ ಆನರಬಲ್ ಕೋರ್ಟಿನವರು ಸರ್ವ ಸಾಧಾರಣವಾದ ನೀತಿಯನ್ನ ಅನುಸರಿ ಸಿರುವದನ್ನೂ ಸಹ ಯೋಚಿಸಲಾಗಿ ಝಾನ್ಸೀ ಸಂಸ್ಥಾನದ ರಾಜ ವಂಶವು ನಷ್ಟವಾ ಯಿತೆಂದು ತಿಳದು, ಅದನ್ನ ಬ್ರಿಟಿಷ್ ಸರ್ಕಾರದವರು ತಮ್ಮ ಸ್ವಾಧೀನಕ್ಕೆ ತೆಗದುಕೊ ಳ್ಳಲು ಸಂಪೂರ್ಣವಾಗಿ ಅಧಿಕಾರ ಇದೆಯಂತ ಹೇಳುವದಕ್ಕೆ ಯೇನೂ ಅಡ್ಡಿಯಿಲ್ಲ.

5. ಮೇಲೆ ಹೇಳಿರುವ ಅಭಿಪ್ರಾಯವನ್ನ ಸ್ಪಷ್ಟಪಡಿಸುವಗೋಸ್ಕರ ಪುನಃ ವಿವರವಾಗಿ ತಿಳಿಸುತ್ತೇನೆ.

ಆನರಬಲ್ ಕೋರ್ಟ್ ಆಫ್ ಡೈರೆಕ್ಟರುಗಳು ಸ್ಪಷ್ಟವಾಗಿ ಹೇಳಿರುವದೇನಂದರೆ, "ಹಿಂದುಸ್ಥಾನದಲ್ಲಿ ಸರ್ವ ಸಾಧಾರಣವಾದ ಕಾಯದೇ ಪ್ರಕಾರ ಮತ್ತು ರೂಢಿ ಪ್ರಕಾರ, ಸ್ವತಂತ್ರವಲ್ಲದ ಸರಕಾರೆ ಹಾಗೆ ಇರುವ ಸಂಸ್ಥಾನದವರು ಸಾರ್ವಭೌಮ ಸರ್ಕಾರದ ಅನುಮತಿಯ ಹೊರ್ತು ತೆಗದುಕೊಂಡ ದತ್ತಕನಿಗೆ, ಸ್ವಾಮಿತ್ವದ ಹಕ್ಕು ಎಂದಿಗೂ ಬರುವದಿಲ್ಲ. ಮತ್ತು ಅಂಥ ಅನುಮತಿ ಕೊಡುವದಕ್ಕೆ ನಾವು ಸಾಕ್ಷಾತ್ ಅಥವ ಪರೋಕ್ಷವಾಗಿ ಯಾವ ವಿಧವಾಗಿಯೂ ವಾಗ್ದಾನದಿಂದ ಬದ್ಧರಾಗಿಲ್ಲ; ಅಲ್ಲದೆ, ಅಂಥ ಅನುಮತಿಯನ್ನು ಕೊಡದೇ ಇದ್ದರೇನೇ, ನಮ್ಮ ಸ್ವಾಧೀನಕ್ಕೆ ಬಂದ ಪ್ರಾಂತ್ಯ ಗಳ ಹಿತದ ಕಡೆಗೆ ನಾವು ಯೋಗ್ಯವಾದ ದೃಷ್ಟಿ ಕೊಟ್ಟಂತೆ ಆಗುತ್ತದೆ." *

ಬುಂದೇಲ್ ಖಂಡದಲ್ಲಿರತಕ್ಕ ಸಂಸ್ಥಾನಿಕರ ಸಮ್ಮಂಧವಾಗಿ ಸರ್ ಚಾರ್ಲಸ್ ಮೆಟ್ಕಾಫ್ ಈ ಪ್ರಕಾರ ಬರೆಯುತ್ತಾನೆ:—"ಯಾವ ಸಂಸ್ಥಾನಿಕರೇ ಆಗಲಿ ಅಥವ ರಾಜರೇ ಆಗಲಿ ಔರಸ ಸಂತತಿ ಅಥವ ಸಮೀಪದ ಬಾಧ್ಯಸ್ಥರು ಇಲ್ಲದೇ ಇರುವಾಗ,

---

* Court of Directors to Government of India No. 4, 24th January 1849, para 8.

ದತ್ತ ತೆಗೆದುಕೊಳ್ಳುವ ಮೂಲಕ, ಸಾರ್ವಭೌಮ ಸರ್ಕಾರಕ್ಕೆ ಸೇರತಕ್ಕಂಥಾ ಹಕ್ಕನ್ನ ಮುಳಿಗಿಸಬಹುದೇ ಹ್ಯಾಗೆ? ಮತ್ತು ಆ ದತ್ತ ವಿಧಾನವನ್ನ ಒಪ್ಪಿಕೊಳ್ಳಲು ಸರ್ಕಾರದವರು ಬದ್ಧರಾಗಿದ್ದಾರೆಯೋ ಹೇಗೆ? ಈ ಪ್ರಕಾರ ಪ್ರಶ್ನೆಯಿದೆ."

"ಈ ಪ್ರಶ್ನೆಗಳನ್ನು ಇತ್ಯರ್ಥ ಮಾಡುವಾಗ ವಂಶ ಪಾರಂಪರ್ಯವಾಗಿ ಗಾದಿಯನ್ನ ಹಕ್ಕುದಾರರಾಗಿ ಸಂಪಾದಿಸಿಕೊಂಡ ರಾಜರಿಗೂ ಮತ್ತು ಅಂಥಾ ರಾಜರ ಕಡೆಯಿಂದ ಅಥವ ಸಾರ್ವಭೌಮ ಸರ್ಕಾರದ ಕಡೆಯಿಂದ, ಜಹಗೀರಿ ಅಥವ ಇನಾಮು ಸಂಪಾದಿಸಿಕೊಂಡ ಜಹಗೀರುದಾರರಿಗೂ, ಮಧ್ಯೆ ಇರತಕ್ಕ ವ್ಯತ್ಯಾಸದ ಕಡೆಗೆ, ಯೆಸ್, ಫ್ರೇಜರಿನ ಲಕ್ಷವು ಹೋಗಲಿಲ್ಲ." * * * *

"ಆದಕಾರಣ ನಾನು ಹೇಳುವದೇನಂದರೆ, ಹಿಂದುಸ್ಥಾನದ ರಾಜರಿಗೆ, ಔರಸ ಸಂತತಿ ಇಲ್ಲದೇ ಇರುವಾಗ, ಸರಿಯಾದ ವಾರಸುದಾರರನ್ನ ಬಂದು ಕಡೆಯಾಗಲಿಟ್ಟು ದತ್ತ ತೆಗೆದುಕೊಳ್ಳುವದಕ್ಕೆ ಅವರಿಗೆ ಅಧಿಕಾರವಿದೆ ಮತ್ತು ಅಂಥ ದತ್ತ ವಿಧಾನವು ಹಿಂದೂ ಧರ್ಮಶಾಸ್ತ್ರ ಸಮ್ಮತವಾಗಿಯೂ ಮತ್ತು ಕಾನೂನಿಗೆ ಅನುಸರಿಸಿಯೂ ಇದ್ದ ಪಕ್ಷದಲ್ಲಿ ಒಪ್ಪಿಕೊಳ್ಳ ತಕ್ಕದ್ದಾಗಿದೆ.

"ಈಗ ಮೇಲೆ ಹೇಳಿರುವ ಪ್ರಕಾರ ಯಾರಿಗೆ ಜಹಗೀರಿ ಅಥವ ಇನಾಮು, ರಾಜರ ಕಡೆಯಿಂದ ಕೊಡಲ್ಪಟ್ಟಿದೆಯೋ, ಅಂಥ ಜಹಗೀರುದಾರರ ಸಮ್ಮಂಧದಲ್ಲಿ ವಾರಸಿ ಹಕ್ಕು ವ್ಯವಸ್ಥೆ ಮಾಡುವದಕ್ಕೆ ಯಾವ ರಾಜನು ಅವರಿಗೆ ಜಹಗೀರಿ ಕೊಟ್ಟಿರುತ್ತಾನೊ, ಅಥವ ಆ ಜಹಗೀರುದಾರರ ಹಕ್ಕು ಯಾರಿಗೆ ಯುದ್ಧದಲ್ಲೇ ಆಗಲಿ ಅಥವ ಇತರ ಪ್ರಕಾರವೇ ಆಗಲಿ ಸಂಪಾದನೆಯಾಗಿರುತ್ತೋ, ಅವರಿಗೆ ಆ ಸೊತ್ತಿನಮೇಲೆ ಇರತಕ್ಕ ಸ್ವಾತಂತ್ರವು ಎಂಥಾದ್ದು ಎನ್ನುವದು ಕರಾರಿನ ಪ್ರಕಾರ ನಿಸ್ಸಂಶಯವಾಗಿದೆ; ಮತ್ತು ಅದರಲ್ಲಿ ಬಹಳವಾಗಿ ಔರಸ ಸಂತತಿಯವರಿಗೆ ವಾರಸೀ ಶಿಕ್ಕಬೇಕು; ಮತ್ತು ದತ್ತು ವಿಧಾನ ನಡಸಕೂಡದು ಯೆಂಬ ಉದ್ದೇಶವಿರುತ್ತೆ ಎನ್ನುವದರಿಂದ ಇಂಥಾ ಸಂಗತಿಯಲ್ಲಿ, ಯಾವ ರಾಜನು ಜಹಗೀರಿ ಕೊಟ್ಟಿರುತ್ತಾನೊ, ಅವನಿಗೂ ಮತ್ತು ಆತನ ಸ್ಥಾನಕ್ಕೆ ಬಂದ, ಯರಡನೆಯ ಅಧಿಕಾರಿಗೂ, ಆ ಜಹಗೀರಿಯು ಔರಸ ಸಂತತಿ ನಷ್ಟವಾದಲ್ಲಿ ಅದನ್ನು ಹಿಂದಕ್ಕೆ ತೆಗೆದುಕೊಳ್ಳುವ ಅಧಿಕಾರವಿದೆ."

6\. ಸತಾರ ಸಂಸ್ಥಾನದಂತೆ. (ಬಹಳ ಮಾಡಿ ಅದಕ್ಕಿಂತಲೂ ಸ್ವಲ್ಪ ಕಮ್ಮಿ) ಝಾಂಸೀ ಸಂಸ್ಥಾನವು ಚಿಕ್ಕ ಸಂಸ್ಥಾನವಾಗಿದೆ; ಮತ್ತು ಸಾರ್ವಭೌಮತ್ವದ ಸ್ಥಾನದಲ್ಲಿದ್ದವರಿಂದ ಕೊಡಲ್ಪಟ್ಟ ಜಹಗೀರಿ ಯೆಂದು ತಿಳಿದು, ಬ್ರಿಟಿಷ್ ಸರ್ಕಾರದವರು, ಒಬ್ಬ ಸಂಸ್ಥಾನಿಕನ ಕಡೆ ನಡಸಿ ಕೊಟ್ಟಿದ್ದರು. ಆದ್ದರಿಂದ ಅಲ್ಲಿ ಔರಸ ಸಂತತಿ ನಷ್ಟಾಂಶವಾದ್ದರಿಂದ, ಬ್ರಿಟಿಷ್ ಸರ್ಕಾರದವರಿಗೆ ಅದನ್ನು ತಿರಿಗಿ ತೆಗೆದುಕೊಳ್ಳುವ ಸ್ವಾತಂತ್ರವಿರುತ್ತದೆ.

7. ಝಾನ್ಸಿ ಸಂಸ್ಥಾನವು ಒಂದು ಮಾಂಡಲಿಕ ಸಂಸ್ಥಾನವಾಗಿದೆ ಯಂಬುವದಕ್ಕೆ ನಿರ್ವಿವಾದವಾಗಿದೆ. ಅದು ಯಾವಾಗ್ಯೂ ಸ್ವತಂತ್ರ ಸಂಸ್ಥಾನವಾಗಿರಲಿಲ್ಲ. ಅಲ್ಲದೆ, ತೆಹೇರಿ ಸಂಸ್ಥಾನವು ಎಷ್ಟರಮಟ್ಟಿಗೆ ಸ್ವತಂತ್ರವಾದ್ದು ಯಂತ ಮನ್ನಿಸೋಣಾಗಿದೆಯೋ, ಅಷ್ಟರಮಟ್ಟಿಗೂ ಇದು ಸ್ವತಂತ್ರದ್ದಾಗಿಲ್ಲ. ವಸ್ತುತಃ, ಝಾನ್ಸಿಯು ತೆಹೇರಿಯ ಒಂದು ಭಾಗವಾಗಿದ್ದು, ಆ ತೆಹೇರಿ ಮುಖ್ಯ ಮಾಲೀಕನಾಗಿದ್ದ ಪೇಷ್ವೆಯು, ಇನ್ನೊಬ್ಬ ಶುಬೇದಾರನ ಮೇಲ್ ತನಖೆ ಕೆಳಗೆ ಇದನ್ನು ಕೊಟ್ಟಿದ್ದನು.

1804 ನೆ ಇಸವಿಯಲ್ಲಿ ಶಿವರಾವ್‌ಭಾವು ಸಂಗಡ ಬ್ರಿಟಿಷ್ ಸರ್ಕಾರದವರು ಮಾಡಿಕೊಂಡ ತಹಾದಲ್ಲಿಯೂ “ಝಾನ್ಸೀ ಶುಬೇದಾರನು ಪೇಷ್ವೆಯರ ಮಾಂಡಲೀಕ ಸಂಸ್ಥಾನಕ್ಕೆ ಅಧಿಕಾರಿಯಾಗಿ ಇದ್ದಾನೆ” ಯಂತಲೇ ಹೇಳಿ ಇದೆ. ಮುಂದೆ ಒಂದು ಸಂದರ್ಭದಲ್ಲಿ ಬ್ರಿಟಿಷ್ ಸರ್ಕಾರದವರು, ಈ ತಹಾದ ವಿಷಯವಾಗಿ ಹೇಳಿರುವದೇನಂದರೆ :—ಯಾರಿಗೆ, 1803 ನೆ ಇಸವಿಯಲ್ಲಿ, ಕಮ್ಯಾಂಡರ್ ಇನ್ ಚೀಫ್ ಲಾರ್ಡ್ ಲೇಕ್ ಸಾಹೇಬನು ‘ವಜೀಬ-ಉಲ್ಲ-ಅರ್ಜ’ ಎಂಬ ಬಹುಮಾನವನ್ನ ಕೊಟ್ಟಿದಾನೆಯೋ ಮತ್ತು ಯಾರು ಈಗಿನ ತಹಾದ ಮೂಲಕಾರಣನಾಗಿದ್ದಾನೆಯೋ—ಆ ಶಿವರಾವ್‌ಭಾವು ಸ್ವತಃ ಸ್ಪಷ್ಟವಾಗಿ ಒಪ್ಪಿಕೊಂಡಿರುವದೇನಂದರೆ, “ಪೇಷ್ವೆಯವರ ಅಪ್ಪಣೇ ಪ್ರಕಾರ ತಾನು ಆ ಪ್ರಾಂತ್ಯದ ಕಾರಭಾರ ನೋಡುತ್ತಾ ಇದೇನೆ.” ಮತ್ತು ಆತನ ಸಂಗಡ ಬ್ರಿಟಿಷ್ ಸರ್ಕಾರದವರು ಮಾಡಿಕೊಂಡ ತಹಾಮೇಲೆ ವಪ್ಪಿಕೊಂಡ ಪ್ರಕಾರ ಪೇಷ್ವೆಯವರ ಸ್ಥಾನದಲ್ಲಿಯೇ ಮಾಡಿಕೊಂಡಿದ್ದಾಗಿದೆ.

ಅದೇ ಪ್ರಕಾರ, ಶಿವರಾವ್‌ಭಾವೂನು ಹಿಂದುಸ್ಥಾನದ ಸರ್ಕಾರಕ್ಕೆ ಹಿಂದಿನ ತಹಾ ಪ್ರಕಾರ ತನಗೆ ಸಂಸ್ಥಾನವನ್ನು ನಡಶಿಕೊಡಬೇಕೆಂತ ಕೇಳಿಕೊಂಡದ್ದಕ್ಕೆ ಉತ್ತರವನ್ನು ಕೊಡುವಾಗ ಅವರೂನೂ ಹೇಳಿರುವದೇನಂದರೆ, “ನಮಗೆ, ಪೇಷ್ವೆಯವರ ಸಮ್ಮತಿ ವಿನಹ, ಝಾನ್ಸೀ ಸಂಸ್ಥಾನವನ್ನ ವಂಶಪಾರಂಪರ್ಯವಾಗಿ, ನಡಸಿಕೊಡುತ್ತೇವೆಂತ ಹೇಳಲು ಅಧಿಕಾರವಿಲ್ಲ.”

ಈ ಪ್ರಕಾರ ಪತ್ರ ವ್ಯವಹಾರವು ನಡೆದು ಇರುವಾಗ, ಝಾನ್ಸೀ ಶುಬೇದಾರನು ನಿಜವಾಗಿ ಯಾವ ತರಗತಿಗೆ ಸೇರಿದವನು ಎಂಬುವದು ಸ್ಪಷ್ಟವಾಗಿ ನಿಶ್ಚಯಿಸಿದಂತೆ ಆಗಿ ಇದೆ.

ಬುಂದೇಲ್ ಖಂಡದಲ್ಲಿನ ಗೌರ್ನರ್ ಜನರಲ್ ಕಡೆ ಯೇಜಂಟ್ ಹೇಳಿರುವ ದೇನಂದರೆ :—“ಕಾಗದ ಪತ್ರಗಳಿಂದ ತಿಳಿಯಬರುವದೇನಂದರೆ, ಭಾವೂನು ಝಾನ್ಸೀ ಪ್ರಾಂತ್ಯದ ಕಾರಭಾರವನ್ನು ನೋಡುವದು ಝಾನ್ಸೀ ಶುಬೇದಾರಿಯ ಸ್ವತಂತ್ರ ಮಾಲೀಕನಾಗಿ ನೋಡುವದಿಲ್ಲ ; ಆಮಿಲ್ ಅಥವ ಶುಬೇದಾರನಾಗಿ ನೋಡುತ್ತಾ ಇದ್ದಾನೆ. ಮತ್ತು ಆತನ ಕಾರಭಾರತನವನ್ನು ಅಥವ ಶುಬೇದಾರಿಯನ್ನು ಮುಂದೆ ನಿರಂತರವಾಗಿ ಡತಕ್ಕ ಅಧಿಕಾರವು ಪುನೇ ದರ್ಬಾರಿನ ಅನುಮತಿಮೇಲೆ ಆನರಿಸಿನೆ.”

ಗೌರ್ನರ್ ಜನರಲ್ ಇನ್‌ಕೌನ್ಸಿಲರು, ಮೇಲೆ ಹೇಳಿರುವದು, 'ಬುಂದೇಲ್ ಖಂಡದ ಪರಿಚಯದಿಂದ' ಕೇವಲ ಯುಕ್ತವಾಗಿದೆಯಂತ ನೋಡಿ, ಝಾನ್ಸೀ ಶುಬೇದಾರನ ತರಗತಿಯ ವಿಷಯವಾಗಿ ಪೊಲಿಟಿಕಲ್ ಯೇಜಂಟನು ಮಾಡಿರುವ ಅರ್ಥವನ್ನು ಇಲ್ಲಿ ಕಾಣಿಸಿರುತ್ತಾರೆ. "ಶಿವರಾವ್‌ಭಾವು ಕೊಟ್ಟಿರುವ ಪುಷ್ಕಳ ಕಾಗದ ಪತ್ರಗಳಲ್ಲಿ ಝಾನ್ಸಿ ಪ್ರಾಂತ್ಯದ ಕಾರಭಾರವನ್ನು ನೋಡುವವನಿಗೆ 'ಕಲೆಕ್ಟರ್' ಯೆಂತ ಸಾಜ್ಞೆ ಕೊಟ್ಟಿರುತ್ತದೆ. ಮತ್ತು ಅವನು ಕಳುಹಿಸಿಕೊಟ್ಟಿರತಕ್ಕ ಆದಾಯ ವೆಚ್ಚಗಳ ಪಟ್ಟಿಗಳಿಂದಲೂ, ಅದೇ ರೀತಿಯಾಗಿ ಕಂಡುಬರುತ್ತದೆ."

ಈ ಸರ್ವ ಕಾಗದ ಪತ್ರಗಳಿಂದ ಝಾನ್ಸಿ ಶುಭೇದಾರಿಯು ಪೇಷ್ವೆಯವರ ಅಧೀನದಲ್ಲಿ ಬಂದು ಮಾಂಡಲಿಕ ಜಹಗೀರಿ ಆಗಿದೆಯಂತ ಅಂಗೀಕರಿಸಿ ಭಾವೂನ ವಂಶದಕಡೆ ನಡಿಸಿಕೊಡತಕ್ಕ ಎಲ್ಲಾ ಅಧಿಕಾರವು ಪೇಷ್ವೆಯವರಕಡೆ ಅದೆಯಂತ ಕಂಡು ಬರುತ್ತದೆ. ಇದೇ ಅರ್ಥವನ್ನೇ ಅನ್ವಯಿಸಿಕೊಂಡು ಇಂಗ್ರೇಜಿ ಸರ್ಕಾರದವರು 1815ನೆ ಇಸವಿಯಲ್ಲಿ ರಾಮಚಂದ್ರರಾಯನಿಗೆ ಶುಬೇದಾರಿ ಭೂಷಣವನ್ನು ಕೊಡಲು ನಿರಾಕರಿಸಿದರು. ಇದರ ಕಾರಣವು ಬಹುಶಃ "ನಾವು ಅವನನ್ನ ಗಾದಿಯಮೇಲೆ ಕೂಡಿಸಿದರೆ ಪೇಷ್ವೇಯವರಿಗೆ ಅದರಮೇಲೆ ಇರತಕ್ಕ ಸ್ವಾಮಿತ್ವವು ನಮ್ಮ ಕಡೆ ತೆಗದುಕೊಂಡಂತೆ ಆಗಿ ಪೇಷ್ವೆಯವರ ಮನಸ್ಸು ನೋಯಿಸಿದಂತೆ ಆದೀತು ; ಮತ್ತು ರಾಮಚಂದ್ರರಾಯನ ಹಕ್ಕನ್ನು ಬ್ರಿಟಿಷ್ ಸರ್ಕಾರದವರು ಒಪ್ಪಿಕೊಂಡಂತೆ ಆದೀತು."

ಸನ್ 1817ನೆ ಇಸವಿಯಲ್ಲಿ ಝಾನ್ಸೀ ಸಂಸ್ಥಾನದಮೇಲೆ ಪೇಷ್ವೆಯವರಿಗೆ ಇದ್ದ ಸರ್ವಸ್ವಾಮಿತ್ವದ ಹಕ್ಕು, ತಹಾವನ್ನು ಅನುಸರಿಸಿ, ಬ್ರಿಟಿಷ್ ಸರ್ಕಾರದವರ ಕಡೆಗೆ ಬಂತು. ತಥಾಪಿ ಸರ್ಕಾರದವರು ಶುಬೇದಾರ್ ರಾಮಚಂದ್ರರಾಯನಿಗೆ ಝಾನ್ಸೀ ಸಂಸ್ಥಾನದಮೇಲೆ ವಂಶಪಾರಂಪರ್ಯವಾದ ಹಕ್ಕು ಇದೆಯಂತ ಒಪ್ಪಿಕೊಳ್ಳಲಿಲ್ಲ. ಪರಂತು, ಬ್ರಿಟಿಷ್ ಸರ್ಕಾರದವರ ಸಂಗಡ ಕೈ. ಶಿವರಾವ್‌ಭಾವೂನ ವಳ್ಳೇ ಸ್ನೇಹವಿದ್ದದ್ದರಿಂದ ಆತನ ಇಚ್ಛೆಪ್ರಕಾರ ಯೇನೋ ಸಂದರ್ಭದಲ್ಲಿ ಬುಂದೇಲ್ ಖಂಡದಲ್ಲಿ ಬ್ರಿಟಿಷ್ ಅಡಳತವು ಪ್ರಾರಂಭವಾಗುವಾಗ ಶಿವರಾವ್‌ಭಾವು ಕಡೆಗೆ ಯಾವ ಪ್ರಾಂತ್ಯವು ಇತ್ತೋ, ಮತ್ತು ಈಗ ಅದು ಝಾನ್ಸೀ ಸರ್ಕಾರದ ಅಧೀನದಲ್ಲಿ ಇದೆಯೋ, ಅದರ ಸ್ವಾಮಿತ್ವವನ್ನ ರಾಮಚಂದ್ರರಾಯನಿಗೆ ವಂಶಪಾರಂಪರ್ಯವಾಗಿ ಕೊಟ್ಟರು. ಆದ್ದರಿಂದ 1817ನೆ ಇಸವಿ ತಹಾದಲ್ಲಿನ ಯೆರಡನೆ ಕಲಂನ ಪ್ರಕಾರ "ರಾಮಚಂದ್ರರಾವ್ ಮತ್ತು ಆತನ ವಾರಿಸು ಮತ್ತು ಗಾದಿಗೆ ಸಮ್ಮಂಧಪಟ್ಟ ಶಿವರಾವ್‌ಭಾವೂ, ಯಿವರು ಯಾವ ಪ್ರಾಂತ್ಯವನ್ನು ಅನುಭವಿಸುತ್ತಿದ್ದಾರೋ ಅವರು ವಂಶಪಾರಂಪರ್ಯವಾಗಿ ಆ ಪ್ರಾಂತ್ಯದ ಮಾಲೀಕರಾಗಿದ್ದಾರೆ."

ಆ ಪ್ರಕಾರ ಝಾನ್ಸೀ ಶುಭೇದಾರಿಗೆ ವಂಶಪಾರಂಪರ್ಯವಾಗಿ ಗಾದಿ ಶಿಕ್ಕಿದ್ದರೆ ಅವರ ಕೆಳ ತರಗತಿ ಸ್ಥಿರವಾಗಿ ಇರುತ್ತಾ ಇತ್ತು. ಮತ್ತು ಅವರಿಗೆ 1832ನೆ ಇಸವಿವರೆಗೂ ರಾಜಾಯೆಂಬ ಬಿರುದು ಶಿಕ್ಕುತ್ತಾ ಇರಲಿಲ್ಲ.

1835ನೆ ಇಸವಿಯಲ್ಲಿ, ರಾಮಚಂದ್ರರಾಯನು ತೀರಿಹೋದನು. ಅವನ ರಣವಕ್ಕೆ ಬಂದು ದಿವಸ ಮುಂಚೆ ಗಾದಿಗೆ ವಾರಸಿಯನ್ನು ಮಾಡುವಗೋಸ್ಕರ ಒಬ್ಬ ಹುಡುಗನನ್ನು ದತ್ತು ತೆಗೆದುಕೊಂಡನು. ಆದರೆ ಅದನ್ನು ಸರ್ಕಾರದವರು ಮನ್ನಿಸಲಿಲ್ಲ. ಮತ್ತು ಆತನ ದಾಯಾದಿ ರಘುನಾಥರಾಯನಿಗೆ ಗಾದಿಯು ಹಕ್ಕು ಶಿಕ್ಕಿತು. 1838ನೆ ಇಸವಿಯಲ್ಲಿ ರಘುನಾಥರಾಯನು ತೀರಿಹೋದನು. ಮತ್ತು ಆತನ ಗಾದಿಯು ಆತನ ಬಂಧುವಾದ ಗಂಗಾಧರರಾಯನಿಗೆ ಕೊಡಲ್ಪಟ್ಟಿತು. ಆ ಗಂಗಾಧರರಾಯನು ಅಪುತ್ರವಂತನಾಗಿ ತೀರಿಹೋಗಿದ್ದಾನೆ.

8. ಗಂಗಾಧರರಾಯನಿಗೆ ಔರಸ ಸಂತತಿಯಿಲ್ಲ. ಹಾಗೇನೇ ಯಾರಿಗೆ ಝಾನ್ಸೀ ಸಂಸ್ಥಾನದ ಗದ್ದಿಗೆಯು ವಂಶಪಾರಂಪರ್ಯವಾಗಿ ಕೊಡಲ್ಪಟ್ಟಿತೋ, ಆ ರಾಮಚಂದ್ರರಾಯನಿಗೂ ಔರಸ ಪುತ್ರನಿಲ್ಲ. ಝಾನ್ಸೀ ಸಂಸ್ಥಾನದ ಸಂಗಡ, ಬ್ರಿಟಿಷ್ ಸರ್ಕಾರದವರ ಸಮ್ಮಂಧವು ಉಂಟಾದಾರಭ್ಯ ಯಾವ ಶುಭೇದಾರರು ಅಥವ ರಾಜರು ಅಲ್ಲಿ ಆಳಿದರೋ, ಅವರ ಪೈಕಿ ಯಾರಿಗೂ ಔರಸ ಪುತ್ರರಿಲ್ಲ, ಎನ್ನುವದರಿಂದ ವಂಶಪಾರಂಪರ್ಯವಾಗಿ ನಡಕೊಳ್ಳತಕ್ಕ ಝಾನ್ಸೀ ಸಂಸ್ಥಾನಿಕರ ಗಾದಿಗೆ ಯಾರೂ ಹಕ್ಕುದಾರರು ಉಳಿಯಲಿಲ್ಲ.

9. ನಿಸ್ಸಂತತಿಯಾಗಿ ತೀರಿಹೋದ ಗಂಗಾಧರರಾಯನು ತನ್ನ ಮರಣದ ಹಿಂದಿನ ದಿವಸ ಯಾವ ಹುಡುಗನನ್ನು ದತ್ತು ತೆಗೆದುಕೊಂಡಿದ್ದಾನೋ, ಆ ಹುಡುಗನನ್ನು ಅವರ ವಂಶವೃಕ್ಷದಿಂದ ನೋಡಿದಲ್ಲಿ ಬಹಳ ದೂರದ ಸಮ್ಮಂಧಿಯಾಗಿದ್ದಾನೆಯಂತ ತೋರಿಬರುತ್ತದೆ. ಬಹಳ ಆಸನ್ನ ಸ್ಥಿತಿಯಲ್ಲಿದ್ದ ಮನುಷ್ಯನು ಮಾಡಿಕೊಂಡ ದತ್ತ ವಿಧಾನವು ಸಂಶಯಾಸ್ಪದವಾಗಿರುತ್ತದೆ. ಮತ್ತು ಪ್ರಕೃತ ಸಂದರ್ಭದಲ್ಲಿ ವಿಶೇಷ ಸಂಶಯಕ್ಕೆ ಮಾರ್ಗವಿದೆ. ಯಾಕಂದರೆ, ತೀರಿಹೋದ ರಾಜಾ ಸಾಹೇಬನು ಪೂರ್ವದಲ್ಲಿ ಯಾವಾಗ್ಯೂ ದತ್ತು ತೆಗೆದುಕೊಳ್ಳುವ ವಿಚಾರವನ್ನು ಮನಸ್ಸಿನಲ್ಲಿಯೂ ತಂದಿರಲಿಲ್ಲವೆಂಬ ಸಂಗತಿಯು ಯಲ್ಲರಿಗೂ ಪ್ರಸಿದ್ಧಿಯಾಗಿದೆ. ಪೊಲಿಟಿಕಲ್ ಯೇಜಂಟನು ರಾಜಾಸಾಹೇಬನ ಮರಣ ವಿಷಯವನ್ನು ಮತ್ತು ದತ್ತಿನ ವಿಷಯವನ್ನು ಕುರಿತು ಮಾಡಿರುವ ರಿಪೋರ್ಟಿನಿಂದ ಸೂಚಿಸುವದೇನಂದರೆ, "ಝಾನ್ಸೀ ಸಂಸ್ಥಾನಿಕನು ಮರಣ ಸಮಯದಲ್ಲಿ ಇದ್ದಕ್ಕಿದ್ದಹಾಗೆ ದತ್ತ ತೆಗೆದುಕೊಳ್ಳುವ ವಿಚಾರ ಮಾಡಿದ್ದರಿಂದ, ಝಾನ್ಸೀ ದರ್ಬಾರಿನಲ್ಲಿರತಕ್ಕ ಪ್ರತಿವೊಬ್ಬ ಮನುಷ್ಯನಿಗೂ ಆಶ್ಚರ್ಯ ತೋರುತ್ತಾ ಇರಬಹುದು, ಯಂತ ನನಗೆ ಕಾಣಬರುತ್ತೆ. ಯಾಕಂದರೆ, ಸರ್ವರು ಝಾನ್ಸೀ ಸಂಸ್ಥಾನದ ಸ್ವಾಮಿತ್ವವನ್ನೆಲ್ಲಾ ಆತನ ರಾಣಿಯು ಜೀವಂತಳಾಗಿರುವವರೆಗೂ, ಆಕೆಯ ಕಡೆಗೆ ನಿಲ್ಲಿಸಿ ಕೊಡಬೇಕೆಂತ ಇಂಗ್ರೇಜಿ ಸರ್ಕಾರಕ್ಕೆ ವಿಜ್ಞಾಪಿಸಿಕೊಂಡಾನೂ ಯೆಂತ ತಿಳಕೊಂಡಿದ್ದರು. ಪರಂತು, ಬ್ರಿಟಿಷ್ ಸರ್ಕಾರದವರು ಯಾರ ಸಂಗಡ ಪ್ರಥಮದಲ್ಲಿ ತಹಾ ಮಾಡಿಕೊಂಡಿದ್ದರೋ ಆ ಝಾನ್ಸೀ ಶುಭೇದಾರ

ಶಿವರಾವ್‌ಭಾವೂನ ವಂಶ ಪರಂಪರೆಯಲ್ಲಿ ಯಾರೂ ಹಕ್ಕುದಾರರಿಲ್ಲ; ಮತ್ತು ಸಮೀಪದ ಮೊಮ್ಮಕ್ಕಳೂನೂ ಇಲ್ಲವೆಂಬ ಸಂದರ್ಭವು ಬರಲಾರದು ಯೆಂಬುವದ್ದರಿಂದ ದತ್ತಕನ ವಿಷಯ ವಿಚಾರದಲ್ಲಿ ಬರದಿರಬೇಕು ಯಂತ ಕಾಣುತ್ತದೆ.”

10. ಮಹಾರಾಣಿ ಲಕ್ಷ್ಮೀಬಾಯಿ ಸಾಹೇಬಳು ಗವರ್ನರ್ ಜನರಲ್ ಸಾಹೇಬನಿಗೆ ಕಳುಹಿಸಿರುವ ಖಲೀತಾದಲ್ಲಿ ಬುಂದೇಲ್ ಖಂಡದಲ್ಲಿ, ತೆಹೇರಿ, ದತ್ತಿಯ, ಮತ್ತು ಜಾಲವಣ, ಈ ಸಂಸ್ಥಾನದವರಿಗೆ ದತ್ತ ತೆಗದುಕೊಳ್ಳುವ ಅಧಿಕಾರವನ್ನ ಹ್ಯಾಗೆ ಅನುಮೋದಿಸಿರುವರೋ ಹಾಗೆಯೇ ಝಾಂಸೀ ಸಂಸ್ಥಾನದ ದತ್ತ ವಿಧಾನವನ್ನ ಸರ್ಕಾರದವರು ಮನ್ನಿಸೋಣವಾಗಬೇಕೆಂತ ವಿನಂತಿ ಮಾಡಿಕೊಂಡಿದ್ದಾಳೆ.

ತೆಹೇರಿ ಮತ್ತು ದತ್ತಿಯ ಸ್ವತಂತ್ರ ಸಂಸ್ಥಾನಗಳಾಗಿವೆ. ಆದ್ದರಿಂದ ಅವುಗಳ ವಾರಿಸಿ ಕ್ರಮವನ್ನ ಝಾಂಸಿಯಂಥಾ ಮಾಂಡಲಿಕ ಸಂಸ್ಥಾನಕ್ಕೆ ಅನ್ವಯಿಸುವದಕ್ಕೆ ಆಗುವದಿಲ್ಲ. ಆದರೆ ಜಾಲವಣ ಸಂಸ್ಥಾನವು ಮಾಂಡಲೀಕವಾಗಿದ್ದಾಗ್ಯೂ ಅದಕ್ಕೆ ದತ್ತ ತೆಗದುಕೊಳ್ಳುವ ಹಕ್ಕನ್ನ ಕೊಟ್ಟು ಇತ್ತು. ತಥಾಪಿ ಈ ಸಂಗತಿಯನ್ನು ಲಕ್ಷ್ಯದಲ್ಲಿಡತಕ್ಕದ್ದಾಗಿದೆ. ಹ್ಯಾಗಂದರೆ, ಬ್ರಿಟಿಷ್ ಸರ್ಕಾರದವರು ಯಾವದಾದರೂ ವಂದು ಸಂದರ್ಭದಲ್ಲಿ ಸ್ನೇಹ ಸಂಬಂಧದಿಂದ ಅಥವಾ ರಾಜ ಧೋರಣೆಯಿಂದ, ಯಾವದಾದರೂ ಒಂದು ಸಂಸ್ಥಾನಿಕನಿಗೆ ದತ್ತು ತೆಗದುಕೊಳ್ಳುವದಕ್ಕೆ ಅನುಮತಿಕೊಟ್ಟ ಮಾತ್ರದಿಂದ ಅದೇ ರೀತಿಯಲ್ಲಿರುವ ಇತರ ಸಂಸ್ಥಾನಿಕರಿಗೆ ದತ್ತು ತೆಗದುಕೊಳ್ಳುವ ಹಕ್ಕು ಇದೆಯಂತ ವಪ್ಪಿಕೊಂಡಹಾಗೆ ಆಗುವದಿಲ್ಲ. ಪ್ರಕೃತ ಜಾಲವಾಣ ಸಂಸ್ಥಾನದವರ ಸಮ್ಮಂಧವನ್ನ ನೋಡಿದರೂ ಕೂಡ, ಅಂಥ ಹಕ್ಕು ಕೊಟ್ಟಿದೆಯಂತ ತಿಳಿಯುವದಕ್ಕೆ ಯೇನೂ ಆಧಾರವಿಲ್ಲ. ಕಾರಣವೇನಂದರೆ, ಆ ದತ್ತ ವಿಧಾನವು ನಡೆದಾರಭ್ಯ ಜಾಲವಾಣ ಸಂಸ್ಥಾನವನ್ನ ಸರ್ಕಾರಕ್ಕೆ ಶೇರಿಸಿಕೊಂಡಂತೆಯೇ ತಿಳುಕೊಳ್ಳುತ್ತಾ ಬಂದಿದೆ.

11. ಈಗಿನ ದತ್ತನ್ನ ಒಪ್ಪಿಕೊಳ್ಳಬೇಕು ಯೆಂತ ರಾಣೀಸಾಹೇಬಳ ಕಡೆಯಿಂದ ಇನ್ನೊಂದು ಕಾರಣವು ತೋರಿಸಲ್ಪಟ್ಟಿದೆ. ಯಾವದಂದರೆ, 1817ನೆ ಇಸವಿ ತಹಾದಲ್ಲಿ, ಎರಡನೇ ಕಲಂ ಪ್ರಕಾರ, ರಾವ್ ರಾಮಚಂದ್ರ, ಆತನ ಸಂತತಿಯವರು ಮತ್ತು ಆತನ ಹಿಂದೆ ಗಾದಿಯಮೇಲೆ ಕೂತುಕೊಳ್ಳತಕ್ಕವರೂ ಸಹ, ಝಾಂಸಿಯ ವಂಶ ಪಾರಂಪರ್ಯ ಜಹಗೀರುದಾರರಾಗಿದ್ದಾರೆಂತ ಬ್ರಿಟಿಷ್ ಸರ್ಕಾರದವರು ವಪ್ಪಿಕೊಂಡಿದ್ದಾರೆ. ಇದರಿಂದ “ಅವರು ಯಾವದಾದರೂ ಹುಡುಗನನ್ನು ದತ್ತು ತೆಗದುಕೊಂಡರೆ, ಆತನನ್ನ ಬ್ರಿಟಿಷ ಸರ್ಕಾರದವರು ವಾರಸುದಾರನಾಗಿ ಮಾಡ್ಯಾರು,” ಯೆಂತ ಅದರ ಅರ್ಥವಾಗಿದೆ. ಈ ಮಾತನ್ನು ಕೂಡ ವಪ್ಪಿಕೊಳ್ಳಲು ಆಗುವದಿಲ್ಲ.

ಈ ವಿವಾದಾಂಶದ ಸಮ್ಮಂಧದಲ್ಲಿ, ಹೆಚ್ಚಿಗೆ ವಾದ ನಡಿಸಲು ಮಾರ್ಗವಿಲ್ಲ; ಮತ್ತು ಅವಶ್ಯಕತೆಯೂ ಇಲ್ಲ. ರಾಣೀಸಾಹೇಬಳ ಹೇಳಿಕೆಯ ಇತ್ಯರ್ಥವು ಕಾಗದ ಪತ್ರಗಳಲ್ಲಿರತಕ್ಕ ಇತಿಹಾಸದ ದೃಷ್ಟಾಂತರಗಳಿಂದ ಸಂಪೂರ್ಣವಾಗಿ ತೀರ್ಮಾನವಾಗುತ್ತದೆ. ಕಾರಣವೇನಂಪರೆ, ಹಿಂದೆ ರಾಮಚಂದ್ರರಾಯನು ದತ್ತು ತೆಗದುಕೊಂಡಿದ್ದನು. ಪರಂತು ಅದನ್ನ ಸರ್ಕಾರದವರು ಮಪ್ಪಿಕೊಳ್ಳದೇ, ಎರಡನೇ ಮನುಷ್ಯನಿಗೆ ರಾಜಪದವಿಯನ್ನ ಕೊಟ್ಟರು ಯೆಂಬುವದು ಪ್ರಸಿದ್ಧವಾಗಿದೆ.

12. ಮೇಲಿನ ಕಲಂನಲ್ಲಿ ತೋರಿಸಿರುವ ಪ್ರಕಾರ ಝೂರ್ನಿಸಿಯು ಒಂದು ಮೊಂಡಲೀಕ ಸಂಸ್ಥಾನಯೆಂಬುವದು ಸ್ಪಷ್ಟವಾಗಿದೆ. ಮತ್ತು ಅಲ್ಲಿನ ಅಧಿಕಾರಿಯು, (ಸಾರ್ವಭೌಮ ಸರ್ಕಾರದವರು ಪ್ರಜೆಗಳಿಗೆ ಕೊಟ್ಟ ಸನದನ್ನು ಅನುಸರಿಸಿ ಜಹಗೀರಿ ಅಥವ ಇನಾಮು ಸಂಪಾದಿಸಿಕೊಂಡು ಇದ್ದ) ಬುಂದೇಲ್ ಖಂಡದಲ್ಲಿ ಇರತಕ್ಕ ಇತರ ಮೊಂಡಲೀಕ ಜಹಗೀರುದಾರರುಗಳ ಪೈಕಿ ಒಬ್ಬನಾಗಿದ್ದಾನೆ ಯನ್ನುವದ್ದರಿಂದ, "ಯಾರು ಇನಾಮನ್ನ ಕೊಟ್ಟರೋ ಅಥವ ಇನಾಮನ್ನ ಕೊಟ್ಟವರ ಹಕ್ಕನ್ನ ಯುದ್ಧದಲ್ಲಿ ಅಥವ ಇತರ ಉಪಾಯದಲ್ಲಿ ಸಂಪಾದನೆ ಮಾಡಿದರೋ, ಅವರಿಗೆ ಕೊಡುವಾಗ ಮಾಡಿಕೊಂಡ ತಹಾ ಪ್ರಕಾರವಾಗಿ ಅವರ ವಿಷಯದಲ್ಲಿ ಇತ್ಯರ್ಥ ಮಾಡುವ ಹಕ್ಕು ಸಂಪೂರ್ಣವಿರುತ್ತದೆ; ಮತ್ತು ಅದರಲ್ಲಿ ಬಹಳವಾಗಿ ಔರಸ ಸಂತತಿಗೆ ವಾರಸಿ ಹಕ್ಕು ಸಿಕ್ಕಬೇಕು; ಮತ್ತು ದತ್ತು ವಿಧಾನವು ನಡಿಯಕೂಡದು ಯೆಂಬ ಉದ್ದೇಶವಿರುತ್ತೆ." ಅದೇ ಪ್ರಕಾರವಾಗಿ ಈಗ ಸ್ಪಷ್ಟವಾಗಿರುವದೇನಂದರೆ, ಮೃತನಾದ ರಾಜನಿಗೆ ಔರಸ ಸಂತತಿಯಿಲ್ಲ; ಮತ್ತು ಕೆಲವು ಕಾಲವಾದರೂ ಬ್ರಿಟಿಷ್ ಸರ್ಕಾರದವರಿಗೆ ಯಾರ ಸಮ್ಮಂಧವಿತ್ತೋ ಅಂಥವರ ಪೈಕಿ ಝೂರ್ನಿಸಿ ಯಾವ ಶುಭೇದಾರನಿಗೆ ಆಗಲಿ, ಅಥವ ರಾಜನಿಗೆ ಆಗಲಿ, ಸಂತತಿಯು ನಿಲ್ಲಲಿಲ್ಲ. ಮತ್ತು ಮುಂದೆ ಇನ್ನೂ ಸ್ಪಷ್ಟವಾಗುವದೇನಂದರೆ, ಮಹಾರಾಜ ಗಂಗಾಧರರಾಯನು ದತ್ತು ತೆಗದುಕೊಳ್ಳುವನಾಗಿದ್ದನು ಯಂಬ ಮಾತು ಆತನ ಪ್ರಜೆಗಳಿಗೆ ಸ್ವಪ್ನದಲ್ಲಿಯೂ ಕೂಡ ತಿಳದಿರಲಿಲ್ಲ; ಮತ್ತು ಹಿಂದೆ ಯಾವ ರಾಜನಿಗೆ ಬ್ರಿಟಿಷ್ ಸರ್ಕಾರದವರ ಕಡೆಯಿಂದ, ಝೂರ್ನಿಸಿ ಸಂಸ್ಥಾನದ ವಂಶ ಪಾರಂಪರ್ಯವಾಗಿ ಮಾಲೀಕಿಯ ಹಕ್ಕು ಸಿಕ್ಕಿತೋ ಆತನು ತೆಗದುಕೊಂಡು ಇದ್ದ ದತ್ತನ್ನ ಬ್ರಿಟಿಷ್ ಸರ್ಕಾರದವರು ಮಪ್ಪಿಕೊಳ್ಳಲಿಲ್ಲ.

ಎಲ್ಲಾ ಸಂಗತಿಯಿಂದ, ಮೃತನಾದ ರಾಜ ಗಂಗಾಧರರಾಯನು ಈಗ ತೆಗದುಕೊಂಡ ದತ್ತನ್ನ ಮಪ್ಪಿಕೊಳ್ಳದೆ ತಿರಸ್ಕರಿಸುವದಕ್ಕೆ ಸರ್ಕಾರದವರಿಗೆ, ನಿರ್ವಿವಾದವಾಗಿ ಹಕ್ಕು ಇದೆಯಂತ ಸ್ಪಷ್ಟವಾಗುತ್ತದೆ. ಈ ಮಾತು ಪೂರ್ವದ ಉದಾಹರಣೆಯಿಂದಲೂ ಮತ್ತು ಕೋರ್ಟ್ ಆಫ್ ಡೈರೆಕ್ಟರುಗಳು ಮಾಡಿರುವ ಸಾಮಾನ್ಯವಾದ ನೇಮದಿಂದಲೂ, ಮತ್ತು ಹಿಂದುಸ್ಥಾನದ ರಾಜರುಗಳ ದತ್ತ ವಿಧಾನದ ಪ್ರಶ್ನೆಯ ಸಮ್ಮಂಧದಲ್ಲಿ, ಸರ್ ಚಾರ್ಲಸ್ ಮೆಟ್ಕಾಫ್ ಸಾಹೇಬನು ಬುಂದೇಲ್ ಖಂಡದಲ್ಲಿ ವಾರಸಿ ಸಮ್ಮಂಧ

ವಾಗಿ ಮಾಡಿದ ವಿಶೇಷ ಸಿದ್ಧಾಂತದಿಂದಲೂ ಮತ್ತು ಆತನು ತೋರಿಸಿರುವ ಅಭಿಪ್ರಾಯ ದಿಂದಲೂ ನಿಸ್ಸಂದೇಹವಾಗಿ, ಇತ್ಯರ್ಥವಾಗುತ್ತದೆ.

13. ಔರಸ ಸಂತತಿಯಿಲ್ಲದ ಕಾರಣ ಝಾಂಸಿ ಸಂಸ್ಥಾನವನ್ನ ಸರ್ಕಾರಕ್ಕೆ ಶೇರಿಸಿಕೊಳ್ಳುವ ಸರ್ಕಾರದ ಹಕ್ಕು ಮತ್ತು ಅಂಥ ವಾರಸುದಾರರು ಇಲ್ಲದೇ ಇದ್ದದ್ದ ರಿಂದ, ಆ ಸಂಸ್ಥಾನವನ್ನ ಸರ್ಕಾರಕ್ಕೆ ಶೇರಿಸಿಕೊಂಡಿದೆಯಂತ ಹೇಳೋಣವರಲ್ಲಿ, ಯೋಗ್ಯ, ರಾಜಧೋರಣ, ಈ ಯೆರಡು ಮಾತುಗಳು ಒಂದೇ ವಿಧವಾದವುಗಳು ಯಂತ ಸ್ಪಷ್ಟವಾಗುತ್ತದೆ.

ಈ ಪ್ರಾಂತ್ಯವು ಇಂಗ್ರೇಜಿ ಸರ್ಕಾರಕ್ಕೆ ಸಿಕ್ಕಿದ ಕಾಲಾರಭ್ಯ ಅವರಿಗೆ ನಿಜವಾಗಿ ಲಾಭವೇನೂ ಇಲ್ಲ. ಯಾಕಂದರೆ, ಅದು ಬಹಳ ವಿಸ್ತಾರವಾದ ಸಂಸ್ಥಾನವಲ್ಲ; ಮತ್ತು ಅದರ ಹುಟ್ಟುವಳಿಯು ಬಹಳ ಸ್ವಲ್ಪವಾಗಿದೆ. ಪರಂತು ಯಾವ ತಾತ್ಪರ್ಯ ದಿಂದ, ಅದು ಬ್ರಿಟಿಷ' ದೇಶದ ಮಧ್ಯದಲ್ಲಿ ಅದೆಯೋ ಆ ಅರ್ಥದಿಂದ ಅವರ ಆಡಳತ ವನ್ನು ಬ್ರಿಟಿಷ' ಸರ್ಕಾರಕ್ಕೆ ಶೇರಿಸಿಕೊಂಡರೇನೇ, ಬುಂದೇಲ ಖಂಡವಲ್ಲಿರತಕ್ಕ ನಮ್ಮ ಯೆಲ್ಲಾ ಪ್ರಾಂತ್ಯದೊಳಗೆ, ರಾಜ್ಯ ವ್ಯವಸ್ಥೆಯ ಸುದಾರಣೆಗೆ ಒಳ್ಳೇದಾದೀತು. ಝಾಂಸಿ ಸಂಸ್ಥಾನವು ನಮ್ಮ ಕೈಕೆಳಗೆ ಬಂದರೇನೆ, ಆ ಸಂಸ್ಥಾನದಲ್ಲಿ ಪ್ರಜೆಗಳಿಗೆ ಅತಿಶಯ ಕ್ಷೇಮವಾದೀತು. ಈ ಸಂಗತಿ ತೋರಿಸುವದಕ್ಕೆ, ಅನುಭವದಲ್ಲಿರತಕ್ಕ, ಕೆಲವು ವಿಷಯವನ್ನು ಹೇಳಿದರೆ ಸಾಕಾಗಿದೆ.

14. ರಾಮಚಂದ್ರರಾಯನಿಗೆ, ಝಾಂಸೀ ಸಂಸ್ಥಾನವು ವಂಶ ಪಾರಂಪರ್ಯವಾಗಿ ಸಿಕ್ಕಿದಾರಭ್ಯ, ಆತನ ಹಿಂದೆ ಇಬ್ಬರು ಗಾದಿಯ ಆಡಳತವನ್ನು ನಡೆಸಿದರು. ಒಂದನೆ ರಘುನಾಥರಾಯನಿಗೆ ಕುಷ್ಠರೋಗವಿತ್ತು. ಅದನು 1835 ನೆ ಇಸವಿಯಿಂದ 1838 ನೆ ಇಸವಿ ವರೆಗೆ ಮಾಡಿದ ಆಡಳತದಿಂದ ಆತನು ರಾಜ್ಯವಾಳುವದಕ್ಕೆ ಕೇವಲ ಅಯೋಗ್ಯನಾಗಿದ್ದಾನೆಂತ ನಿಶ್ಚಯವಾಯಿತು. ಝಾಂಸಿ ಹುಟ್ಟುವಳಿಯು ಒಂದು ಕಾಲದಲ್ಲಿ 18 ಲಕ್ಷ ರೂಪಾಯಿಗಳು ಇದ್ದದ್ದು, ರಾಮಚಂದ್ರರಾಯನ ಕಾಲದಲ್ಲಿ ಸ್ವಲ್ಪ ಕಮ್ಮಿಯಾಗಿ, ರಘುನಾಥರಾವ ಸತ್ತ ನಂತರ 3 ಲಕ್ಷ ರೂಪಾಯಿಗಳಿಗಿಂತಲೂ ಹೆಚ್ಚಿಗೆ ಆಗುತ್ತಲಿರಲಿಲ್ಲ. ಅನಂತರ ಬ್ರಿಟಿಷ' ಸರ್ಕಾರದವರು ಗಂಗಾಧರರಾಯನನ್ನು ಗದ್ದಿಗೇ ಮೇಲೆ ಕೂಡಿಸಿದರು. ಪರಂತು ಅವನು ರಾಜ್ಯವಾಳುವದಕ್ಕೆ ಕೇವಲ ಅಯೋಗ್ಯನಾಗಿದ್ದಕಾರಣ, ಕೆಲವು ವರುಷ ಪರ್ಯಂತರ, ರಾಜ್ಯ ಸೂತ್ರವನ್ನ ನಮ್ಮ ಕೈಯೊಳಗೆ ತೆಗದುಕೊಳ್ಳುವ ಅವಶ್ಯಕತೆ ಬಿದ್ದು, ಬಹಳ ವರುಷ ಅದನ್ನ ಆತನಿಗೆ ಕೊಡಲಿಕ್ಕೆ ಆಗಲಿಲ್ಲ.

15. ರಾಣೀ ಸಾಹೇಬಳು ಯಾವ ಸಂಸ್ಥಾನದ ಉದಾಹರಣೆ ತೋರಿಸಿ, ದತ್ತ ವಿಧಾನವನ್ನ ಒಪ್ಪಿಕೊಳ್ಳಬೇಕೆಂತ ವಿನಂತಿ ಮಾಡಿಕೊಳ್ಳುತ್ತಾಳೋ, ಆ ಜಾಲವಾಣ

ಸಂಸ್ಥಾನಕ್ಕೆ ದತ್ತು ತೆಗದುಕೊಳ್ಳುವ ಹಕ್ಕು ಅಂಗೀಕರಿಸಿದ ಆರಂಭಿಸಿಕೊಂಡು ನಮಗೆ ಬಂದಿರುವ ಅನುಭವವು ವಿಶೇಷ ಅನುಕೂಲವಾಗಿಲ್ಲ. ಸನ್ 1832 ನೆ ಇಸವಿಯಲ್ಲಿ, ಆ ಸಂಸ್ಥಾನಕ್ಕೆ ದತ್ತ ತೆಗದುಕೊಳ್ಳಲು ನಾವು ಅಪ್ಪಣೆ ಕೊಟ್ಟಾಗ ಅದರ ಹುಟ್ಟುವಳಿ ಹದಿನೈದು ಲಕ್ಷ ರೂಪಾಯಿಗಳಾಗಿತ್ತು. ಮುಂದೆ 8 ವರುಷದಲ್ಲಿ ಅದು ಅರ್ಧಕ್ಕಿಂತಲೂ ಕಮ್ಮಿಯಾಯಿತು. ಆಗ ಇದ್ದ ಗವರ್ನರ್ ಜನರಲ್ ಸಾಹೇಬನು, ಆ ಸಂಸ್ಥಾನದ ಸ್ಥಿತಿಯು ಯಾವರೀತಿ ಇತ್ತು ಎಂಬುವದಕ್ಕೆ ಮಾಡಿರುವ ವರ್ಣನೆಯನ್ನು ಸೆಕ್ರೆಟರಿ ಸಾಹೇಬನು ತಯಾರ್ಮಾಡಿರುವ ಟಿಪ್ಪಣಿಯಲ್ಲಿ, ಮುಂದೆ ಬರೆಯುವ ಪ್ರಕಾರ ಹೇಳಿರುತ್ತಾನೆ. ಆ ಸಂಸ್ಥಾನದ ರಾಜನು ಹನ್ನೊಂದು ವರುಷದ ವಯಸ್ಸಿನವನಾಗಿದ್ದು, ಆತನ ಸಂರಕ್ಷಣೆಯೂ, ಆತನ ಸಹೋದರಿ ಮತ್ತು ಆತನ ಕಾರಭಾರೀ ಕಡೆಗೆ ಇತ್ತು. ಒಂಭತ್ತು, ಹತ್ತು ವರುಷಗಳಲ್ಲಿ ರಾಜ್ಯದ ಯಲ್ಲಾ ಹುಟ್ಟುವಳಿಯೂ ಹಾಯುವಾಗಿಹೋಗಿ, ಮುವತ್ತು ಲಕ್ಷ ರೂಪಾಯಿಗಳು ಸಾಲವಾಯಿತು. ಅದನ್ನು ಸುದಾರಿಸಿಕೊಳ್ಳುವಗೋಸ್ಕರ ಸರ್ವ ಉತ್ಪನ್ನವೂ ಖರ್ಚಾಯಿತು. ಅಲ್ಲಿ ಇಲ್ಲಿ ಮನೆ ಮಠ ವಿಲ್ಲದ ಸಂಸ್ಥಾನಗಳು ಹುಟ್ಟಿದವು. ಊರು ಊರಲ್ಲಿ ಸುಲಕೊಳ್ಳತಕ್ಕ ಜನಗಳು ದಂಗೇ ಮಾಡಲು ಪ್ರಾರಂಭಿಸಿದರು. ವ್ಯವಸಾಯವು ನಿಂತುಹೋಯಿತು. ಜಮೀನುಗಳು ಹಾಳುಬಿದ್ದವು ; ಮತ್ತು ಕೊನೆಗೆ ಯಾವದಾದರೂ ಪ್ರದೇಶದಲ್ಲಿ, ಒಂದು ಕಾಲದಲ್ಲಿ ಪೈರಾಗಿ ಸರಿಯಾಗಿದ್ದದ್ದು ಇದ್ದರೆ, ಅದೂ ಕೂಡ ಮೆಲ್ಲ ಮೆಲ್ಲಗೆ ನಾಶವಾಗುತ್ತಾ ಹೋಯಿತು.

16. ಝೂರ್ಸಿ ಮತ್ತು ಜಾಲವಾಣ ಸಂಸ್ಥಾನಗಳಲ್ಲಿ, ದತ್ತ ಮತ್ತು ಕಾನೂನು ವಿರುದ್ಧವಾದ ವಾರಸನ್ನ ಒಪ್ಪಿಕೊಂಡ ಕಾರಣ ಈ ಪ್ರಕಾರವಾಗಿ ಪರಿಣಾಮ ಸಂಭವಿಸಿತು. ಈ ಕಾರಣಗಳಿಂದ ನಾನು ಸಮಾಧಾನವಾಗಿ ಯೋಚಿಸಿ, ಇತ್ಯರ್ಥ ಪಡಿಸುವದೇನಂದರೆ, ಬ್ರಿಟಿಷ್ ಸರ್ಕಾರದವರು ರಾಜನೀತಿಯು ಮತ್ತು ಕರ್ತವ್ಯ ಕರ್ಮಗಳ ಕಡೆ ದೃಷ್ಟಿ ಕೊಟ್ಟು, ಝೂರ್ಸೀ ಸಂಸ್ಥಾನದ ಸಮ್ಮಂಧವಾಗಿ ತಮ್ಮ ಹಕ್ಕನ್ನ ಸಂಪೂರ್ಣವಾಗಿ ನಡವಳಿತೆಯಲ್ಲಿ ತರಬೇಕು ; ಮತ್ತು ಗಂಗಾಧರರಾಯನು ತೆಗದುಕೊಂಡ ದತ್ತನ್ನ ತಿರಸ್ಕಾರಮಾಡಿ, ಝೂರ್ಸಿ ಸಂಸ್ಥಾನವು ಹಕ್ಕುದಾರರಿಲ್ಲದ್ದಾಗಿದೆ ಯಂತ ತಿಳಿದು ಸರ್ಕಾರಕ್ಕೆ ಸೇರಿಸಿಕೊಳ್ಳಬೇಕು. ಪೊಲಿಟಿಕಲ್ ಯೇಜಂಟನು ಸೂಚಿಸಿರುವ ಪ್ರಕಾರ ರಾಣೀ ಸಾಹೇಬಳಿಗೆ ತುಂಬಾ ಮಾಸಾಶನವನ್ನ ಕೊಡಬೇಕು ; ಮತ್ತು ಆ ಪ್ರಾಂತ್ಯದ ರಾಜ್ಯ ವ್ಯವಸ್ಥೆಯು, ಇತರ ಪ್ರಾಂತ್ಯದಂತೆ ಲೆಫ್ಟಿನೆಂಟ್ ಗವರ್ನರ್ ಕಡೆಗೆ ವಹಿಸಬೇಕು. *

---

* Minute by the Most noble the Governor General of India 27th February 1854.

ಈ ಪ್ರಕಾರ ಲಾರ್ಡ್ ಡೆಲ್ಹೌಜಿ ಸಾಹೇಬನು, ಝಾನ್ಸಿ ಸಂಸ್ಥಾನವನ್ನ ಸರ್ಕಾರಕ್ಕೆ ಸೇರಿಸಿಕೊಳ್ಳಬೇಕೆಂತ ತೀರ್ಮಾನ ಮಾಡಿದ್ದಕ್ಕೆ, ಆತನ ಕೌನ್ಸಿಲರ್‌ಗಳು ಘನಹೊಂದಿದ ಡೋರಿನ್, ಕರ್ನಲ್ ಲೋ, ಮತ್ತು ಹಾಲಿಡೆ, ಈ ಮೂರು ಜನಗಳು ಸಂಪೂರ್ಣವಾಗಿ ಅನುಮೋದಿಸಿದರು. ಘನಹೊಂದಿದ ಡೋರಿನ್ ಸಾಹೇಬನು, ಗವರ್ನರ್ ಜನರಲ್ ಸಾಹೇಬನ ತೀರ್ಮಾನವು ತುಂಬಾ ಯೋಗ್ಯವಾಗಿದ್ದಾಗಿದೆ ; ಆ ಪ್ರಕಾರವಾಗಿ ಝಾನ್ಸಿ ಸಂಸ್ಥಾನವನ್ನು ಸರ್ಕಾರಕ್ಕೆ ಸೇರಿಸಿಕೊಳ್ಳುವದು ತುಂಬಾ ನ್ಯಾಯವಾಗಿದೆಯಂತ ಅಭಿಪ್ರಾಯ ಪಟ್ಟನು. † ಎರಡನೇ ಕೌನ್ಸಲರು, ಘನಹೊಂದಿದ ಲೋ ಮತ್ತು ಹಾಲಿಡೆ ಸಾಹೇಬರು ಪ್ರಥಮತಃ ಅಭಿಪ್ರಾಯ ಪಟ್ಟದ್ದೇನಂದರೆ, ‡ ಬುಂದೇಲ್‌ಖಂಡದಲ್ಲಿ ಝಾನ್ಸಿ, ಚಿತ್ರಕೋಟ ಮುಂತಾದ ಸಣ್ಣ ಸಂಸ್ಥಾನಗಳ ಮತ್ತು ರಾಜಪುತಾನದಲ್ಲಿ ಕಿರವಲಿ ಮತ್ತು ಸಿರೋಯಿ ಮುಂತಾದ ಸಂಸ್ಥಾನಗಳ ಹಕ್ಕು ಒಂದೇ ರೀತಿಯಾದ್ದಾಗಿದೆ. ಆದ್ದರಿಂದ ಝಾನ್ಸೀ ಸಂಸ್ಥಾನದ ರಾಜ್ಯವ್ಯವಸ್ಥೆ ಸುಲಭವಾಗಿ ನಡೆಯಲಿಕ್ಕೆ, ತಹನಾಮೆಯಲ್ಲಿ ಸ್ವಲ್ಪ ಹೆಚ್ಚು ಕಡಮೆ ಮಾಡಿ, ಆ ಸಂಸ್ಥಾನವನ್ನು ಕಿರುವಳಿ ಮತ್ತು ಚಿತ್ರಕೋಟ ಸಂಸ್ಥಾನಗಳಂತೆ ಕಾಯಂ ಇಟ್ಟದ್ದರೆ ಒಳ್ಳೇದಾಗಿತ್ತು! ತಥಾಪಿ, ಗವರ್ನರ್ ಜನರಲ್ ಸಾಹೇಬನ ಇತ್ಯರ್ಥವನ್ನ ಓದಿಕೊಂಡು, ಪುನಃ ಅಭಿಪ್ರಾಯ ಪಟ್ಟದ್ದೇನಂದರೆ, ಝಾನ್ಸಿ ಸಂಸ್ಥಾನಿಕರು ಯಾವಾಗ್ಯೂ ಸ್ವತಂತ್ರರಾಗಿರಲಿಲ್ಲ. ಅವರು ಪೇಷ್ವೇ ಸರ್ಕಾರದ ಅನಂತರ ಬ್ರಿಟಿಷ್ ಸರ್ಕಾರದ ನೌಕರರಾಗಿದ್ದರು. ಆದ್ದರಿಂದ ಆ ಸಂಸ್ಥಾನವನ್ನ ಸರ್ಕಾರಕ್ಕೆ ಸೇರಿಸಿಕೊಳ್ಳುವದಕ್ಕೆ ಸರ್ಕಾರದವರಿಗೆ ತುಂಬಾ ಅಧಿಕಾರವಿದೆ. ಆ ಅಧಿಕಾರವನ್ನ ನಡವಳಿತೆಯಲ್ಲಿ ತರುವದಾದರೆ, ಆ ವಿಷಯದಲ್ಲಿ ನಾವುಗಳು ಹೇಳತಕ್ಕದ್ದೇನೂ ಇಲ್ಲ. ಇದು ಹಾಗಿರಲಿ. ಗವರ್ನರ್ ಜನರಲ್ ಸಾಹೇಬನ ತೀರ್ಮಾನಕ್ಕೆ ಆತನ ಮೂರು ಜನ ಕೌನ್ಸಿಲರುಗಳು ಈ ವಿಧವಾದ ಸಮ್ಮತಿಯನ್ನು ಸೇರಿಸಿಕೊಂಡು, ಝಾನ್ಸಿ ಸಂಸ್ಥಾನವನ್ನ ಬ್ರಿಟಿಷ್ ರಾಜ್ಯಕ್ಕೆ ಕೂಡಿಸಿಕೊಂಡಿದ್ದಾಯಿತು. ಮತ್ತು ಆ ಸಂಸ್ಥಾನದ ಸ್ನೇಹ, ಆಪ್ತವಾಳಿಕೆ, ಪ್ರೇಮಭಾವ ಮತ್ತು ಉಪಕಾರ ಸಹ ಕೊನೆಗೆ ಈ ವಿಧವಾಗಿ ಸಮಾಪ್ತಿಯಾಯಿತು.

ಲಾರ್ಡ್ ಡೆಲ್ಹೌಜಿ ಸಾಹೇಬನು ಝಾನ್ಸೀ ಸಂಸ್ಥಾನವನ್ನು ಬ್ರಿಟಿಷ್ ಸರ್ಕಾರಕ್ಕೆ ಸೇರಿಸಿಕೊಳ್ಳುವದಕ್ಕಾಗಿ ಕೊಟ್ಟಿರತಕ್ಕ ಕಾರಣಗಳು ಎಷ್ಟು ನ್ಯಾಯವಾಗಿಯೂ

---

† Minute by the Honourable J. A. Dorin, 28 February 1854.

‡ Minute by the Honourable Colonel J. Low C. B. concurred in by the Honourable F. J. Halliday, 1 March, 1854.

ಮತ್ತು ಸತ್ಯವಾಗಿಯೂ ಇದೆಯೆಂಬ ವಿಷಯದಲ್ಲಿ ಪ್ರತ್ಯೇಕವಾಗಿ ಸ್ಪಷ್ಟಪಡಿಸುವ ಅವಶ್ಯವಿಲ್ಲ.* ಮೈಸೂರು ಸಂಸ್ಥಾನಿಕರ ಮತ್ತು ಬ್ರಿಟಿಷ್ ಸರ್ಕಾರದವರ ಸಂಬಂಧವು ಹ್ಯಾಗೆ ಇತ್ತು; ಮತ್ತು ಅವರಲ್ಲಿ "ದೋಸ್ತ್ ಸರ್ಕಾರ," ಎಂಬ "ವಂಶಪಾರಂಪರ್ಯವು" ಸಹಿಯಾತಕ್ಕಂಥ ಎಷ್ಟು ಮಹತ್ವಯುಳ್ಳ ತಹನಾಮದಲ್ಲಿಟ್ಟಿತ್ತು ಎಂಬುವದು ಈ ಚಿಕ್ಕ ಇತಿಹಾಸದಿಂದ ವ್ಯಕ್ತವಾಗುತ್ತದೆ. ಈ ತಹಾದ ನಿಜವಾದ ಉದ್ದೇಶವನ್ನು ದೃಷ್ಟಿಗೆ ತರದೆ ಅದಕ್ಕೆ ತಪ್ಪು ಅರ್ಥವನ್ನು † ಕಲ್ಪಿಸಿ, ಸಂಸ್ಥಾನದ ಸರ್ವಸ್ವಾಮಿತ್ವದ ಹಕ್ಕನ್ನು ತಾವು ತೆಗದುಕೊಳ್ಳುವದು; ಹಿಂದೂಶಾಸ್ತ್ರ ಪ್ರಕಾರ, ಪ್ರತಿಬ್ಬ ಸಂಸ್ಥಾನಿಕನಿಗೂ ದತ್ತಕ ತೆಗದುಕೊಳ್ಳುವ ಅಧಿಕಾರವು ತುಂಬಾಯಿರುತ್ತಾ

---

* ಮೇಜರ್ ಎವಾನ್ಸ್ ಬೇಲ್ ಸಾಹೇಬನು "ಇಂಡಿಯನ್ ಎಂಪೈರ್" ಎಂಬ ಪುಸ್ತಕದಲ್ಲಿ ಮೈಸೂರು ಸಂಸ್ಥಾನದ ಸಮ್ಬಂಧವಾಗಿ, ಲಾರ್ಡ ಡಲಹೌಜಿ ಸಾಹೇಬನು ಮಾಡಿರುವ ತೀರ್ಮಾನದಮೇಲೆ ಮಾಡಿರುವ ಟೀಕನ್ನು ವಾಚಕರು ಅವಶ್ಯಕವಾಗಿ ಓದಬೇಕು.

† ಬ್ರಿಟಿಷ್ ಸರ್ಕಾರದವರು ಮಾಡಿಕೊಂಡಿದ್ದ ತಹಾದ ವಿಷಯದಲ್ಲಿ ಡಬ್ಲ್ಯೂ. ಯಮ್, ಟಾರೆನ್ಸ ಎಂ. ಪಿ. ಸಾಹೇಬನು ಈ ಕೆಳಗೆ ಹೇಳಿರುವಂತೆ ಬರೆದಿರುತ್ತಾನೆ:—

"Treaties have throughout all time been for the most part brief in language, general in the terms employed, and confessedly intended, not as exhaustive anticipations of all imaginable contingencies, but as laying down broadly, and in simple forms of speech the outlines of peace and amity; upon the implied condition that the application of these terms to any and every case that might thereafter arise should be such as the common understanding of both communities would admit, or the judgment of an impartial arbiter declare. Tested by this obvious rule of international right, the guarantee of perpetual inheritance was undoubtedly intended. and undoubtedly understood, to imply the devolution of title, dignity, and power to whatever heirs could from time to time establish their respective claims,—not according to the *lex loci* of the foreign and alien party to the compact, but according to the *lex loci* of the state whose autonomy the treaty had been confessedly framed to assure."

ಮತ್ತು ಅದರಲ್ಲಿ ತಾವು ಯಾವಾಗಲೂ ಕೈ ಹಾಕತಕ್ಕವರಲ್ಲವೆಂತ ವಾಗ್ದಾನ * ಕೊಟ್ಟಿರುತ್ತಾ, ದತ್ತಕವನ್ನ ತಿರಸ್ಕರಿಸುವದೂ, ದತ್ತಕ ವಿಧಾನ ಸಂಬಂಧದಲ್ಲಿ, ಸಂಸ್ಥಾನದ ಪ್ರಜೆಗಳ ಆಕ್ಷೇಪಣೆ ಇಲ್ಲದೇ ಯಿರುವಾಗ ಪೊಲಟಿಕಲ್ ಯೇಜಂಟನ ರಿಪೋರ್ಟಿನ ಮೇಲೇನೆ ದತ್ತು ಸಂಶಯಾಸ್ಪದ ವಾಗಿದೆಯಂತ ತಿಳಿಯುವದೂ, ಸಂಸ್ಥಾನದ ತರಗತಿ ಮತ್ತು ಅಧಿಕಾರ ಒಂದೇ ಸಮನಾಗಿರುವಾಗ, ಒಂದೇ ಉಸಿರಿನಲ್ಲಿ ಅದನ್ನ ಕಡೆಯ ತರಗತಿಯಲ್ಲಿ ಯೆಣಿಸುವದೂ, ಸಂಸ್ಥಾನದಲ್ಲಿನ ಹಳೇತೊಡಕು ಬಾದರಾಯಣ ಸಮ್ಮಂಧವನ್ನ ಹೊಸಪ್ರಸ್ತಾಪಿನಲ್ಲಿ ಸೇರಿಸಿ, ಅದರಮೇಲೆ ಉದ್ದೇಶವನ್ನ ಸಾಧಿಸುವದೂ, ಮತ್ತು ಮುಂದೆ ಇಷ್ಟು ಮಾಡಿದಮೇಲೆ ಸಂಸ್ಥಾನದಿಂದ ನಮಗೇನೂ ಲಾಭವಿಲ್ಲದೇ ಇದ್ದಾಗ್ಯೂ, ಅದರ ಹಿತಚಿಂತನೆ ಗೋಸ್ಕರ, ಅದನ್ನು ಸರ್ಕಾರಕ್ಕೆ ಸೇರಿಸಿಕೊಂಡೆವು ಯೆಂತ ವಾಗ್ಬಾಣವನ್ನು ಬಿಟ್ಟು, ಕನಿಕರವಾದ ಔದಾರ್ಯ ತೋರಿಸುವದು, ಇಂಥಾ ಅಸದೃಶವಾದ ರಾಜನೀತಿಯು ಲಾರ್ಡ್ ಡೆಲ್ಹೌಜಿ ಸಾಹೇಬನಹಾಗೆ, ಇತರರಿಗೆ ಬಹಳಮಟ್ಟಿಗೆ ಸಾಧನೆಯಾಗಲಾರದು ! ವಾಮನ ಪಂಡಿತನು ಕ್ಷುಲ್ಲಕ ರಾಜನೀತಿಯನ್ನು ಕುರಿತು ಮಾಡಿರುವ ವರ್ಣನೆಯು, ಈಗಿನ ಸಂದರ್ಭದಲ್ಲಿ ಯಥಾರ್ಥವಾಗಿ ಅನುಭವಕ್ಕೆ ಬರುತ್ತದೆ ಯಂಬುವದನ್ನ ಸುಜ್ಞರಾದ ವಾಚಕರಿಗೆ ಹೇಳಬೇಕಾದಿಲ್ಲ ;

ಶ್ಲೋಕ.

ಕೆಂಹ್ವಾ ಸತ್ಯ ವದೇ ವದೇ ಅನೃತಹಿ ಕೆಂಹ್ವಾ ವದೇ ಗೋಡಹಿ ।
ಕೆಂಹ್ವಾ ಅಪ್ರಿಯಯಿ ದಯಾಳುಹಿ ಅಸೆ ಕೆಂಹ್ವಾ ಕರೀಘಾತಹಿ ॥
ಜೋಡಿ ಅರ್ಥಹಿ ಜೆ ಯಥೇಷ್ಟ ಸಮಯಿ ಕೀಂವೇಂಚಹಿ ಆದರಿ ।
ಐಶಿ ಹೇ ನೃಪನೀತಿ ಭಾಸತ ಅಸೆ ವಾರಾಂಗನೇಚೆ ಪರಿ ॥ ೧ ॥

---

* ಈಸ್ಟ ಇಂಡಿಯಾ ಕಂಪನಿಗೆ ಮೂರನೇ ಜಾರ್ಜ್ ರಾಜನ ಕಡೆಯಿಂದ ಶಿಕ್ಕಿದ ಸನದನ್ನು ನೋಡು :—

"And in order that regard should be had to the civil and religious usages of the said natives, be it enacted, that the rights and authorities of fathers of families and masters of families, according as the same might have been exercised by Hindoo or Mahomedan Law, shall be preserved to them respectively within their said families &c."

33 *George III Cap.* 42. 52.

# ೫ನೇ ಪ್ರಕರಣ.

## ಝಾಸಿ ಸಂಸ್ಥಾನದಲ್ಲಿ ಬ್ರಿಟಿಷ್ ಸರ್ಕಾರದವರ ಅಡಳಿತ.

ಮಹಾರಾಜಾ ಗಂಗಾಧರರಾಯನು ತೀರಿಹೋದ ಕಾರಣ ಮಹಾರಾಣಿ ಲಕ್ಷ್ಮೀ ಬಾಯಿ ಸಾಹೇಬಳಿಗೆ, ಅತ್ಯಂತ ದುಃಖ ಪ್ರಾಪ್ತವಾದ್ದರಿಂದ ಆಕೆಯು ಬಹಳ ಶೋಕ ಯುಕ್ತಳಾಗಿ ಕಾಲಕ್ರಮಣ ಮಾಡುತ್ತಾ ಇರುವಾಗಲೇನೆ, ಝಾಸಿ ಸಂಸ್ಥಾನದ ಸಮ್ಮಂಧವಾಗಿ ಆಕೆಯು ಅತಿಶಯ ಚಿಂತೆಯನ್ನು ಹಚ್ಚಿಕೊಳ್ಳಬೇಕಾದ ಸಂಭವವು ಬಂತು. ಆದಾಗ್ಯೂ, ಆಕೆಯು "ದೇವರಮೇಲೆ ಭಾರವನ್ನಿಟ್ಟು ಬಂದದ್ದನ್ನೆಲ್ಲಾ ಅನುಭವಿಸೇ ತೀರಬೇಕು" ಎಂಬ ಸಾಧು ವಚನವನ್ನನುಸರಿಸಿ, ಪರಮೇಶ್ವರನ ಮೇಲೆ ವಿಶ್ವಾಸವಿಟ್ಟು, ವಿಶೇಷ ಧೈರ್ಯದಿಂದ ಪತಿವಿಯೋಗದ ಅತ್ಯಂತ ದುಃಖವನ್ನು ಸಹನ ಮಾಡಿಕೊಂಡು, ಝಾಸಿ ಸಂಸ್ಥಾನದ ವಿಷಯವಾಗಿ ಯೋಗ್ಯವಾದ ಪ್ರಯತ್ನವನ್ನು ನಡಿಸಿದಳು. ಕೈ. ಮಹಾರಾಜ ಗಂಗಾಧರರಾಯನು ತನ್ನ ಅನಂತರದಲ್ಲಿ, ಝಾಸಿ ಸಂಸ್ಥಾನವನ್ನ ಮುಂದೆ ನಿರಂತರವಾಗಿ ನಿಲ್ಲಿಸುವ ವಿಷಯವಾಗಿ, ಬ್ರಿಟಿಷ್ ಸರ್ಕಾರದವರ ಕಡೆಗೆ ಕಳುಹಿಸಿಕೊಟ್ಟ ಖಲೀತಾದಲ್ಲಿಯೂ ಮತ್ತು ಸ್ವತಃ ಪೊಲಿಟಿಕಲ್ ಏಜಂಟ್, ಮೇಜರ್ ಯಲ್ಲಿಸ ಸಾಹೇಬನ ಸಮಕ್ಷಮ ತೋರಿಶಿದ, ತನ್ನ ಇಚ್ಛೆಯಲ್ಲಿಯೂ ಇದ್ದ ಆಶಿಯು ಪರಿಪೂರ್ಣವಾಗತಕ್ಕಂಥಾ, ಚೆನ್ನು ಕಡಮೆಯಾಗಿ ತೋರಿದ್ದರಿಂದ ಝಾಸಿ ದರ್ಬಾರಿನ ಮುತ್ಸದ್ದಿ ಮತ್ತು ದಿವಾನ, ಇವರ ಸಲಹೆಯಿಂದ ರಾಣೀ ಸಾಹೇಬಳು ಡಿಶಂಬರು ತಾರೀಖು 3 ನೆ ದಿವಸ ಅತ್ಯಂತ ಉದಾರಶಾಲಿಯಾದ ಘನತೆ ಹೊಂದಿದ, ಗವರ್ನರ್ ಜನರಲ್ ಸಾಹೇಬನಿಗೆ ಒಂದು ಖಲೀತಾ ಕಳುಹಿಸಿದಳು, ಅದರ ತಾತ್ಪರ್ಯವನ್ನು ಹಿಂದಿನ ಪ್ರಕರಣದಲ್ಲಿಯೆ ಕೊಟ್ಟು ಇದೆ. ಆ, ಸಮ್ಮಂಧವಾಗಿ ಎರಡು ತಿಂಗಳವರಿಗೂ ಸರ್ಕಾರದವರ ಕಡೆಯಿಂದ ಯಾವ ಉತ್ತರವೂ ಬಾರದೆ ಹೋದಕಾರಣ ರಾಣೀ ಸಾಹೇಬಳು ಪುನಃ ವಿವರವಾಗಿ ಒಂದು ಖಲೀತಾವನ್ನು ಬರಸಿದಳು. ಅದರಲ್ಲಿ ಝಾಸಿ ಸಂಸ್ಥಾನಿಕರ ಮತ್ತು ಬ್ರಿಟಿಷ ಸರ್ಕಾರದವರ ಮಧ್ಯದಲ್ಲಿ, ಯಾವವಿಧವಾದ ಸಮ್ಮಂಧವಿದೆ, ಮತ್ತು ಅವರಿಂದ ಸರಕಾರದವರಿಗೆ, ಆಗಾಗ್ಯೆ ಹೇಗೆ ಸಹಾಯವಾಗಿದೆ, ಎಂಬ ಆದ್ಯಂತ ವೃತ್ತಾಂತವನ್ನ ಬರೆಸಿ ಇಂಥಾರಾಜನಿಷ್ಟ ಮತ್ತು ಹಿತಚಿಂತಕ. ಸಂಸ್ಥಾನದ ಇತ್ತಲಾಗಿನ ಪುರುಷ ಮಹಾರಾಜಾ ಗಂಗಾಧರರಾಯನು ತುಂಬಿದ ದರ್ಬಾರಿನಲ್ಲಿ ಬ್ರಿಟಿಷ ಸರ್ಕಾರದ ಕೃಪಾ ಛತ್ರದ ಕೆಳಗೆ ಸ್ವೀಕರಿಸಿದ ದತ್ತ ಪುತ್ರನನ್ನ ಸಂಸ್ಥಾನದ ಮಾಲೀಕನನ್ನಾಗಿ ಮಾಡುವದು ಎಷ್ಟು ಅವಶ್ಯಕವಿದೆ ಎಂಬುವದನ್ನು ಉತ್ತಮ ಪ್ರಕಾರದಲ್ಲಿ ತೋರಿಸಿ

ಇತ್ತು. ದತಿಯಾ ಸಂಸ್ಥಾನದ ಪರೀಕ್ಷಿತರಾಯನು ಬೀದಿಯಲ್ಲಿ ಸಿಕ್ಕಿದ ಅನ್ಯಜಾತಿ ಹುಡುಗನನ್ನು ದತ್ತು ತೆಗದುಕೊಂಡನು. ಅವನಿಗೆ ವಿಜಯ ಬಹದೂರ್ ಎಂದು ಹೆಸರು ಇಟ್ಟು, ಸಂಸ್ಥಾನದ ಅಧಿಪತಿಯನ್ನಾಗಿ ಮಾಡಿದನು. ಜಾಲವಾಣದ ಸಂಸ್ಥಾನಿಕ ಬಾಳಾರಾಯನ ವಿಧವಾಸ್ತ್ರೀಯು ತನ್ನ ಸಹೋದರನ ಮಗನನ್ನು ದತ್ತು ತೆಗದುಕೊಂಡು, ಅವನನ್ನು ಗಾದಿಯ ಮೇಲೆ ಕೂಡಿಸಿದಳು. ಓರ್ಛಾ ಸಂಸ್ಥಾನದ ರಾಜ ತೇಜಸ್ಸಿಂಗನು ಸುಜನಸ್ಸಿಂಗ ಎಂಬ ಹುಡುಗನನ್ನ ದತ್ತ ತೆಗದುಕೊಂಡು, ಆತನನ್ನ ಸಂಸ್ಥಾನಾಧಿಪತಿ ಯಾಗಿ ಮಾಡಿದನು, ಮತ್ತು ಈ ಎಲ್ಲಾ ದತ್ತಕರಿಗೆ ಬ್ರಿಟಿಷ್ ಸರ್ಕಾರದವರು ತಮ್ಮ ಸ ಮ್ಮತಿ ಕೊಟ್ಟಿರುತ್ತಾರೆ. ಇದೇ ರೀತಿಯಾಗಿ ಝಾಂಸಿ ಸಂಸ್ಥಾನದ ವಿಷಯದಲ್ಲಿಯೂ ಕೂಡಾ ಅವರು ನಡಿಸಿಕೊಡೋಣಾಗಬೇಕು ಎಂತ ರಾಣೀ ಸಾಹೇಬಳಿಗೆ ವಿಶೇಷವಾಗಿ ಆಶಾ ಯಿತ್ತು. ಇಷ್ಟೆ ಯಲ್ಲದೆ ಆಕೆಯು ಅತ್ಯಂತ ನಮ್ರತೆಯಿಂದ ಆ ಖಲೀತಾದಲ್ಲಿ ತನ್ನ ಈ ಪ್ರಕಾರವಾದ ವಿಶೇಷ ಆಶೆಯನ್ನ ತೋರಿಸಿ ಯಿದ್ದಳು :— "ಝಾಂಸಿ ಸಂಸ್ಥಾನಿಕರ ಸಮಾನೀಕ ರಾಜರೂ ಬ್ರಿಟಿಷ' ಸರ್ಕಾರದವರ ಪ್ರಾಮಾಣೀಕತನದಮೇಲೂ ಮತ್ತು ನ್ಯಾಯದಮೇಲೂ ಪೂರ್ಣ ವಿಶ್ವಾಸವಿಟ್ಟು ಸುಖದಿಂದಲೂ ಮತ್ತು ಶಾಂತತೆಯಿಂದಲೂ ಹ್ಯಾಗೆ ರಾಜ ಕಾರಭಾರವನ್ನ ನಡಿಸುತ್ತಾ ಇದ್ದಾರೆಯೋ ಮತ್ತು ಅವರಿಗೆ ಬ್ರಿಟಿಷ' ಸರ್ಕಾರದವರ ವಿಷಯದಲ್ಲಿ ತಮ್ಮ ರಾಜನಿಷ್ಠೆಯನ್ನು ಯಾವರೀತಿಯಿಂದ ತೋರಿಸ ಬೇಕು ಎಂಬುವದು ಹೊರ್ತು, ಎರಡನೆ ಯಾವಯೋಚನೆಯು ಇಲ್ಲವೊ, ಆ ರಾಜರುಗ ಳಂತೆಯೇ, ಶಿವರಾಮಭಾವೂನ ಸೊಸೆಯು ಬ್ರಿಟಿಷ' ಸರ್ಕಾರದ ಕೃಪೆ ಮತ್ತು ದಯೆಗೆ ಪೂರ್ಣಪಾತ್ರಳಾದಾಳು ಎಂಬುವದಕ್ಕೇನೂ ಸಂದೇಹವಿಲ್ಲ. *

ಈ ಖಲಿತವನ್ನು ಮತ್ತು ಮಹಾರಾಜ ಗಂಗಾಧರರಾಯನಿಗೆ ಬ್ರಿಟಿಷ್ ಸರಕಾ ರದ ಕಡೆಯಿಂದ ಬಂದಿದ ಕೃತಜ್ಞತಾ ಪ್ರದರ್ಶಕ ಪತ್ರವನ್ನು ಸಹಾ ರಾಣೀಸಾಹೇಬಳು 1854 ನೆ ಇಸವಿ ಫೆಬ್ರವರಿ ತಾರೀಕು 16 ರಲ್ಲು ಬುಂದೇಲ್ ಖಂಡದ ಪೊಲಿಟಿಕಲ್ ಏಜಂಟ್ ಮೇಜರ್ ಮಾಲಕಂ ಸಾಹೇಬನ ಮೂಲಕ ಲಾರ್ಡ ಡಲ್ಹೂಜಿ ಸಾಹೇಬನ ಕಡೆಗೆ ಕಳುಹಿಸಿ ಕೊಟ್ಟಳು. ಮೇಜರ್ ಮಾಲಕಂ ಸಾಹೇಬನು ಈ ವೇಳೆಯಲ್ಲಿ ರಾಣೀಸಾಹೇಬಳ ಖಲೀತಾದಮೇಲೆ ಕೃಪೆಯಿಂದ ತನ್ನ ಅನುಕೂಲವಾದ ಅಭಿಪ್ರಾಯ ವನ್ನ ಕೊಟ್ಟು, ಅದನ್ನ 1854 ನೆ ಇಸವಿ ಫೆಬ್ರವರಿ ತಾರೀಕು 28 ನೇ ದಿವಸ ಕಲ್ಕ ತ್ತೆಗೆ ಕಳುಹಿಸಿ ಕೊಟ್ಟನು.

ಈ, ಸುಹೃದಯವುಳ್ಳ ದಯಾಳುವಾದ ಪೊಲಿಟಿಕಲ್ ಏಜಂಟ್ ಸಾಹೇಬನು, ಪ್ರಥ ಮದಲ್ಲಿ ಮಾಡಿದ ರಿಪೋರ್ಟು ಝಾಂಸಿಸಂಸ್ಥಾನಕ್ಕೆ ಕೇವಲ ವಿರೋಧವಾಗಿ ಇದ್ದದ್ದಲ್ಲದೆ

---

* ಈ ಖಲೀತಾ ಬಹಳ ಮಹಾತ್ಮೆಯುಳ್ಳದ್ದಾಗಿರುವದರಿಂದ ಅದು ಹ್ಯಾಗಿ ಧೆಯೋ ಹಾಗೇನೆ ಈ ಪುಸ್ತಕದ ಅಂತ್ಯದಲ್ಲಿ ಕೊಟ್ಟು ಇಧೆ.

ಅದರಲ್ಲಿ ದಾಮೋದರರಾಯನ ದತ್ತ ವಿಧಾನವನ್ನ ಒಪ್ಪಿಕೊಳ್ಳದೆ ಸಂಸ್ಥಾನವನ್ನ ಸರಕಾರಕ್ಕೆ ಶೇರಿಸಿಕೊಳ್ಳಬೇಕೆಂತ ಸ್ಪಷ್ಟವಾಗಿ ಅಭಿಪ್ರಾಯಪಟ್ಟು ಇದ್ದನು. ಪರಂತು, ಪ್ರಕೃತ ಸಂದರ್ಭದಲ್ಲಿ ಆ ಸಾಹೇಬ ಬಹದ್ದೂರನಿಗೆ ಪುನಹ ಏನು ಸುವಿಚಾರ ಹುಟ್ಟಿರಬಹುದೋ ಹಾಗಿರಲಿ. ಆತನು ಗ್ವಾಲಿಯರ್ ಮೊಕ್ಕಾಮಿನಿಂದ 1854 ನೇ ಇಸವಿ ಫೆಬ್ರವರಿ ತಾರೀಖು 28 ರಲ್ಲಿ ಗವರ್ನರ್ ಜನರಲ್ ಸಾಹೇಬನಿಗೆ ಒಂದು ಪತ್ರವನ್ನು ಬರದನು. ಅದರಲ್ಲಿ ಈ ವರೆಗೆ ಝಾಸಿ ಸಂಸ್ಥಾನದವರು ತೋರಿಸಿಕೊಂಡ ಪ್ರಾಮಾಣೀಕತನ ಮತ್ತು ರಾಜನಿಷ್ಟೆಯಮೇಲೆ ಲಕ್ಷ್ಯಕೊಟ್ಟು ರಾಣೀ ಸಾಹೇಬಳ ವಿನಂತಿ ವಿಷಯದಲ್ಲಿ ಯೋಗ್ಯವಾದ ವಿಚಾರವಾಗಬೇಕು, ಎಂತ ತನ್ನ ಅನುಮತಿಯನ್ನು ತೋರಿಸಿದ್ದನು. ಪರಂತು ಝಾಸಿ ಸಂಸ್ಥಾನದ ದುರ್ದೈವದ ಪ್ರಭಾವವು ಏನೋ ವಿಚಿತ್ರವಾಗಿದ್ದದ್ದರಿಂದ ಆ ಸಂಸ್ಥಾನವನ್ನು ಸರ್ಕಾರಕ್ಕೆ ಶೇರಿಸಿಕೊಳ್ಳುವ ವಿಷಯದಲ್ಲಿ ಗವರ್ನರ್ ಜನರಲ್ ಲಾರ್ಡ ಡಲ್ಹೂಜಿ ಸಾಹೇಬನು ಪೊಲಿಟಿಕಲ್ ಏಜಂಟ್ ಸಾಹೇಬನ ಪತ್ರ ಕಳುಹಿಸುವದಕ್ಕೆ ಒಂದು ದಿವಸ ಮುಂಚೇನೆ ತನ್ನ ಠೀರ್ವಾನವನ್ನು ಬರದು ಯಿಟ್ಟಿದ್ದನು. ತಾರೀಖು 28 ನೇ ಫೆಬ್ರವರಿ ದಿವಸ ರಾಣೀ ಸಾಹೇಬಳ ಈ ಅತ್ಯಂತ ಮಹತ್ಮೆಯುಳ್ಳ ಖಲೀತಾ ಮತ್ತು ಮೇಜರ್ ಮಾಲಕಂ ಸಾಹೇಬನ ಸಯುಕ್ತವಾದ ಅನುಕೂಲ ಪತ್ರ * ಸಹಾ ಕಲ್ಕತ್ತೆಗೆ ಕಳುಹಿಸಲ್ಪಟ್ಟವು. ತಾರೀಖು 27 ನೆ ಫೆಬ್ರವರಿ ದಿವಸ ಲಾರ್ಡ

---

* ಯಾವ ಸದ್ಗೃಹಸ್ತನು 1853 ನೆ ಇಸವಿ ನವಂಬರು ತಾರೀಕು 5 ನೆ ದಿವಸ ಈ ಪುಸ್ತಕದ 3 ನೆ ಪ್ರಕರಣದಲ್ಲಿ ಕೊಟ್ಟಿರುವ ರಿಪೋರ್ಟನ್ನು ಬರೆದನೋ ಆತನ ಲೇಖಣಿಯಿಂದಲೆ ಪ್ರಕೃತ ಪತ್ರವು ಬರಿಯಲ್ಪಟ್ಟಿತು, ಎಂಬುವದನ್ನು ಕೇಳಿ ಅದನ್ನು ಓದುವದಕ್ಕೆ ಯಾರಿಗೆ ಆಶೆ ಹುಟ್ಟದೇ ಹೋದೀತು ? ಆ ಪತ್ರ ಕೆಳಗೆ ಬರೆದಿರುವ ಪ್ರಕಾರ :—

"Lutchmee Baee, it will be seen, advocates the right of her late husband to adopt an heir to the principality of Jhansi, on the grounds that by the treaty of 1817 the insertion of the term "joh nasheenan," or successors in general, as opposed to the term "Warrisan," or heirs of the body or collateral heirs, warranted his doing so, and also that the fidelity evinced by the Jhansi chiefs towards our Government in past years ought to be taken into consideration by us in coming to a final decision on the fate of the principality."

ಡಲ್ಹೌಜಿ ಸಾಹೇಬನು ಝಾಂಸಿ ಸಂಸ್ಥಾನವನ್ನು ಸರ್ಕಾರಕ್ಕೆ ಶೇರಿಸಿಕೊಳ್ಳತಕ್ಕ ಹುಕುಂನಾಮ್ಯನ್ನು ಬರದಿಟ್ಟನು. ತಾತ್ಪರ್ಯವೇನಂದರೆ ದೈವಗತಿಯು ಬಹಳ ವಿಚಿತ್ರವಾದ್ದಾಗಿದೆ. ಗವರ್ನರ್ ಜನರಲ್ ಸಾಹೇಬನು ಝಾಂಸಿ ಸಂಸ್ಥಾನವನ್ನ ಬ್ರಿಟಿಷ್ ಸರ್ಕಾರಕ್ಕೆ ಶೇರಿಸಿಕೊಂಡು ಇದೆ, ಎಂತ ಮಾಡಿದ ತೀರ್ಮಾನವು ಪೊಲಿಟಿಕಲ್ ಏಜಂಟನ ಕಡೆಗೆ ಬರದು ಬಂತು. ಆ ಪ್ರಕಾರವಾಗಿ ಆತನು 1854 ನೆ ಇಸವಿ ಮಾರ್ಚಿ ತಾರೀಖು 15 ನೆ ದಿವಸ ಝಾಂಸಿ ಅಸಿಸ್ಟೆಂಟ್ ಪೊಲಿಟಿಕಲ್ ಏಜಂಟ್ ಮೇಜರ್ ಎಲ್ಲಿಸ್ ಸಾಹೇಬನಿಗೆ ಹುಕ್ಕುಂ ಬರದು ಸಂಸ್ಥಾನವನ್ನು ಸರ್ಕಾರಕ್ಕೆ ಶೇರಿಸಿಕೊಂಡದ್ದನ್ನ ಕುರಿತು ಪ್ರಸಿದ್ಧ ಮಾಡತಕ್ಕ ಪತ್ರಕ್ಕೆ ತನ್ನ ರುಜು ಮತ್ತು ಮುದ್ರೆಯನ್ನು ಹಾಕಿ ಆತನ ಕಡೆಗೆ ಕಳುಹಿಸಿದನು. ಆ ಪ್ರಸಿದ್ಧಪತ್ರಿಕೆಯನ್ನ ಕೆಳಗೆ ತೋರಿಸಲ್ಪಟ್ಟದೆ.

ಪ್ರಸಿದ್ಧ ಪತ್ರಿಕಾ :—" ಗ್ವಾಲಿಯರ್, ಬುಂದೇಲ್‌ಖಂಡ ಮತ್ತು ರೀವಾ ಈ ರಾಜ್ಯಗಳ ಪೊಲಿಟಿಕಲ್ ಏಜಂಟ್ ಮೇಜರ್ ಡಿ. ಯೆ. ಮಾಲಕಂ ಕಡೆಯಿಂದ ಪ್ರಸಿದ್ಧ ಪಡಿಸುವದೇನಂದರೆ :—

ಝಾಂಸಿ ಸಂಸ್ಥಾನದ ಮಹಾರಾಜ ಗಂಗಾಧರರಾಯನು ಸನ್ 1853 ನೆ ಇಸವಿ ನವೆಂಬರು ತಾರೀಕು 21 ರಲ್ಲಿ ಕೈಲಾಸವಾಸಿಯಾದನು. ಆತನು ತನ್ನ ಮರಣಕ್ಕೆ

---

" The term above referred to by the Baee is to be found in the second article of the treaty of 1871, but in the preamble the words " nuslun baadn uslun " are used as laying down the terms on which the successor to the principality is to be acknowledged by our Government. The term " joh nasheenan " in subsequent part of the treaty, undoubtedly of itself implies successors in General; but as the term " bilirs " is used previous to the introduction of the words " Warrisan wo johnasheenan," it is a question for Government to decide whether the latter term conveys any permission on the part of our Government to the Raja to nominate whom he pleased to succeed him on the Gadi, or that the term " bilirs " restricted the succession to persons who were legal heirs to the same. "

ಪೂರ್ವ, ದಾಮೋದರರಾವ್ ಎಂಬುವನನ್ನು ದತ್ತ ತೆಗೆದುಕೊಂಡು ಇದ್ದಾನೆ. ಪರಂತು ಘನಹೊಂದಿದ ಗವರ್ನರ್ ಜನರಲ್ ಸಾಹೇಬನು ಆ ದತ್ತು ವಿಧಾನವನ್ನ ಒಪ್ಪಿಕೊಳ್ಳದೆ ಹೋದಕಾರಣ ಹಿಂದೂಸ್ಥಾನದ ಸರ್ಕಾರದ ಸೆಕ್ರೆಟರಿ ಕಡೆಯಿಂದ 1854 ನೆ ಇಸವಿ ಮಾರ್ಚಿ 7 ನೆ ತಾರೀಕಿನ ಹುಕ್ಕುಂ ಅನುಸರಿಸಿ ಝೂರ್ಸಿ ಸಂಸ್ಥಾನವನ್ನು ಬ್ರಿಟಿಷ್ ಸರ್ಕಾರದ ಆಳುವಿಕೆಯಲ್ಲಿ ಸೇರಿಸಿಕೊಳ್ಳಲ್ಪಟ್ಟಿಧೆ. ಆ ಪ್ರಕಾರವಾಗಿ ಈ ಪ್ರಸಿದ್ಧ ಪತ್ರದ ಮೂಲಕವಾಗಿ ಸರ್ವ ಜನಗಳಿಗೂ ತಿಳಿಯಪಡಿಸುವದೇನಂದರೆ, ಝೂರ್ಸಿ ಪ್ರಾಂತ್ಯವನ್ನ, ಸದ್ಯಕ್ಕೆ ಬುಂದೇಲ್ ಖಂಡದ ಪೊಲಿಟಿಕಲ್ ಏಜಂಟ್ ಮೇಜರ್ ಎಲ್ಲಿಸ್ ಸಾಹೇಬನ ಅಧೀನಕ್ಕೆ ಕೊಟ್ಟು ಇಧೆ. ಆದ್ದರಿಂದ ಝೂರ್ಸಿ ಪ್ರಾಂತ್ಯದಲ್ಲಿನ ಸರ್ವ ಪ್ರಜೆಗಳು ತಾವು ಬ್ರಿಟಿಷ' ಸರ್ಕಾರದ ಆಳುವಿಕೆಯ ಕೆಳಗೆ ಇದ್ದೇವೆ ಎಂತ ಭಾವಿಸಿಕೊಂಡು ಮೇಜರ್ ಎಲ್ಲಿಸ್ ಸಾಹೇಬನಿಗೆ ಕಂದಾಯ ಕೊಟ್ಟುಕೊಳ್ಳುತ್ತಾ ಹೋಗಬೇಕು ಮತ್ತು ಅವರು ಸೌಖ್ಯದಿಂದ ಸಂತುಷ್ಟರಾಗಿ ಇರಬೇಕು. ತಿಳಿದಿರುವುದು. ತಾರೀಖು 13 ನೆ ಮಾರ್ಚಿ 1854 ನೆ ಇಸವಿ. "

ಡಿ. ಯೆ. ಮಾಲಕಂ ಸಹಿ ಇದೆ.

ಈ ಪ್ರಸಿದ್ಧ ಪತ್ರವನ್ನ* ಬಹಿರಂಗಪಡಿಸುತ್ತಲೆ ಇತಿಹಾಸ ಪ್ರಶಿದ್ಧವಾದ ಝೂರ್ಸಿಯಲ್ಲಿನ ಶಿವರಾಮುಭಾವೂನ ಮನೆತನದ ರಾಜ್ಯಸತ್ವವು ನಷ್ಟವಾಗಿ ಹೋಗಿ ಆ ಪ್ರಸಿದ್ಧ ಮನೆತನವು, ಈಗ ಲಯವಾಗಿ ಹೋಯಿತು ಎಂಬುವದನ್ನನೋಡಿ ಝೂರ್ಸಿ ಸಂಸ್ಥಾನದಲ್ಲಿ ಸ್ವರಾಜ್ಯ ಸುಖಭೋಗವನ್ನ ಅನುಭವಿಸುತ್ತಿದ್ದ ಸರ್ವ ಪ್ರಜೆಗಳಿಗೂ ಬಹಳ ವಿಷಾದವು ತೋರಿತು. ಮತ್ತು ಸಂಸ್ಥಾನದ ಸೇವಾಮಾಡುವದರಲ್ಲಿ ತಮ್ಮ ಹೆಚ್ಚು ಆಯುಷ್ಯ

---

"The Baee in her khareeta does not I believe in the slightest degree overestimate the fidelity and loyalty all along evinced by the state of Jhansi towards our Government, under circumstances of considerable temptation before our power had arrived at that commanding position which it has since attained." —*Papers on the Annexation of Jhansi.*

* General Proclamation issued by Major D. A. Malcolm, for distribution in the Jhansi Territories, dated 13th March 1854.

ವನ್ನ ಕಳೆದ ಸ್ವಾಮಿನಿಷ್ಠ ಮತ್ತು ಸ್ವರಾಜ್ಯ ಹಿತಚಿಂತಕ ಮುತ್ಸದ್ದಿ ಮಂಡಲಿಗೆ ಈ ವರ್ತಮಾನವನ್ನು ಕೇಳಿ ಅತ್ಯಂತ ವ್ಯಸನವಾಯಿತು. ಕಾರಣವೇನಂದರೆ ಕೃಪಾಳುಗಳಾದ ಬ್ರಿಟಿಷ ಸರಕಾರದವರ ಸಂಗಡ ಬಹಳ ದಿವಸದಿಂದ ಯಾವ ಸಂಸ್ಥಾನದವರು ಅತ್ಯಂತ ಮಿತ್ರಭಾವದಿಂದ ನಡೆದುಕೊಳ್ಳುತ್ತಿದ್ದರೋ ಮತ್ತು ಅವರಿಗೆ ಆಗಾಗ್ಯೆ ಅಸದೃಶ್ಯವಾದ ಸಹಾಯ ಮಾಡಿದರೋ ಅವರಕಡೆಯಿಂದ ಈ ವಿಧವಾದ ಪ್ರತ್ಯುಪಕಾರವು ಶಿಕ್ಕೀತು ಎಂತ ಯಾರ ಸ್ವಪ್ನದಲ್ಲಿಯೂ ತೋರಿರಲಿಲ್ಲ. ಆದಕಾರಣ ಸ್ವರಾಜ್ಯ ಸುಖದ ಲಾಭವು ಇನ್ನುಮುಂದೆ ನಿಂತು ಹೋಯಿತು ಎಂಬ ಮಾತು ಸರ್ವ ಪ್ರಜೆಗಳಿಗೆ ದುಃಖದಾಯಕವಾಗಿ ತೋರುವದು ಕೇವಲ ಸಹಜವಾಗಿ ಇಧೆ. ತಥಾಪಿ, ಲಾರ್ಡ್ ಡಲ್ಹೂಜಿ ಸಾಹೇಬನು ಹೇಳಿದಹಾಗೆ "ಝಾಂಸಿಸಂಸ್ಥಾನದ ಜನಗಳ ಹಿತಕ್ಕೋಸ್ಕರ ವಾಗಿಯೇ ಆಸಂಸ್ಥಾನವನ್ನ ಸರಕಾರಕ್ಕೆ ಶೇರಿಸಿಕೊಂಡು ಇದೆ" ಎಂತ ಅಲ್ಲಿನ ಪ್ರಜೆಗಳು ತಿಳಿದುಕೊಂಡು ಇದ್ದರೆ ಅವರಿಗೆ ದುಃಖಪಡಬೇಕಾದ್ದಕ್ಕೆ ಏನೂ ಕಾರಣವಿರಲಿಲ್ಲ. ಆದರೆ ಆ ಕಾಲದ ಅಜ್ಞಾನಿಗಳಾದ ಪ್ರಜೆಗಳಿಗೆ ನ್ಯಾಯವಾದ ಬ್ರಿಟಿಷ ರಾಷ್ಟ್ರದ ರಾಜ್ಯರೀತಿಯ ಮಹಾತ್ಮೆಯು ಹ್ಯಾಗೆ ತಿಳಿಯಬೇಕು: ? ಹಾಗಿರಲಿ.

ಝಾಂಸಿಸಂಸ್ಥಾನವನ್ನ ಬ್ರಿಟಿಷ ಸರಕಾರಕ್ಕೆ ಶೇರಿಸಿಕೊಂಡಿದ್ದನ್ನ ಕುರಿತು ಪ್ರಸಿದ್ಧಪತ್ರವನ್ನು ಬಹಿರಂಗಪಡಿಸಿ ಮೇಜರ್ ಯಲ್ಲಿಸ ಸಾಹೇಬನು ಪೊಲಟಿಕಲ ಏಜಂಟನ ಖಲೀತವನ್ನು † ರಾಣೀಸಾಹೇಬಳಿಗೆ ಕೊಡುವಗೋಸ್ಕರ ಅರಮನೆಗೆಹೋದನು. ಅಲ್ಲಿಗೆ ಹೋದಮೇಲೆ ದೈವಸಂಕಲ್ಪದಿಂದ ದುಃಖಿತಳಾಗಿದ್ದ ಮಹಾರಾಣಿ ಲಕ್ಷ್ಮೀಬಾಯಿ ಸಾಹೇಬಳಿಗೂ ಮತ್ತು ಮೇಜರ್ ಎಲ್ಲಿಸ ಸಹೇಬನಿಗೂ ರೀತಿ ಪ್ರಕಾರವಾಗಿ ದರ್ಬಾರ ಮಹಲಮಧ್ಯದಲ್ಲಿ (ಫರ್ದೆಯಲ್ಲಿ ರಾಣಿಸಾಹೇಬಳು ಇದ್ದಳು,) ಭೇಟಿ ಆಯಿತು.

ಮೇಜರ್ ಎಲ್ಲೀಸ ಸಾಹೇಬನು ದತ್ತಿನ ಸಮ್ಮಂಧವಾಗಿ ಗವರ್ನರ ಜನರಲ ಸಾಹೇಬನು ಮಾಡಿದ ತೀರ್ಮಾನವನ್ನ ಕಾರಭಾರ ಮಂಡಲಿಯ ಮುಖಾಂತರ ರಾಣೀ ಸಾಹೇಬಳಿಗೆ ಓದಿಸಿ ಹೇಳಿಸಿದನು, ಮತ್ತು ಝಾಂಸಿ ಸಂಸ್ಥಾನವನ್ನ ಬ್ರಿಟಿಷ ಸರ್ಕಾರಕ್ಕೆ ಶೇರಿಸಿಕೊಂಡು ಇದೆ ಎಂತ ಬಹಿರಂಗ ಪಡಿಸಿದನು. ಮತ್ತು ಪೊಲಟಿಕಲ ಏಜಂಟನ ಅಪ್ಪಣೆಯನ್ನು * ಅನುಸರಿಸಿ "ತಮಗೆ ಸರಿಯಾದ ವರ್ಷಾಸನವನ್ನು ಕೊಡುವದಕ್ಕೆ ಏರ್ಪಾಟುಮಾಡಿ ತಮ್ಮ ಮಾನ ಮರ್ಯಾದೆಯನ್ನು ಯೋಗ್ಯರೀತಿಯಿಂದ ನಡಿಸಿ

---

† No. 67 of 1854. Letter from Major Malcolm to Major Ellis.

* "You will be so good as to assure the Ranee that a liberal provision will be made for her support

ಕೊಳ್ಳುತ್ತಾ ಬರಲಾದೀತು." ಎಂತ ವ್ಯಾಖ್ಯಾನ ಮಾಡಿದನು. ಝಾಸಿ ಸಂಸ್ಥಾನವನ್ನು ಸರ್ಕಾರಕ್ಕೆ ಶೇರಿಸಿಕೊಂಡ ದುಸ್ಸಹವಾದ ವರ್ತಮಾನವು ರಾಣೀ ಸಾಹೇಬಳ ಕಿವಿಯಲ್ಲಿ ಬಿದ್ದವಡನೆ ಅವಳಿಗೆ ಅತಿಶಯ ಶೋಕ ಉತ್ಪನ್ನವಾಗಿ ಆಕೆಯು ಅತ್ಯಂತ ದುಃಖಿತಳಾದಳು. ಅದನ್ನು ನೋಡಿ ಮೇಜರ್ ಎಲ್ಲಿಸ್ ಸಾಹೇಬನು ಆಕೆಗೆ ಅನೇಕ ಪ್ರಕಾರವಾದ ಸಮಾಧಾನ ಮಾಡುವದಕ್ಕೆ ಪ್ರಯತ್ನ ಮಾಡಿದನು. ನಂತರ ಹೊರಟು ಹೋಗುವದಕ್ಕೆ ಅಪ್ಪಣೆ ಕೇಳಿಕೊಂಡನು. ಆ ವೇಳೆಯಲ್ಲಿ ರಾಣೀ ಸಾಹೇಬಳ ಕುತ್ತಿಗೆಯು ಕಟ್ಟಿಕೊಂಡು ಬಂದು ಆಕೆಯ ಬಾಯಿಯಿಂದ "ಮೇರಾ ಝಾಸೀ ದೇಯಂಗಾನಹಿ" (ನನ್ನ ಝಾಸಿಯನ್ನು ಕೊಡತಕ್ಕವಳಲ್ಲ) ಕರುಣೋದ್ಗಾರವಾದ ಇಂಥಾ ಮಾತು ಹೊರಟಿತು !! †

ಆ ಶಬ್ದದ ಅರ್ಥವು ಇಷ್ಟೇ ಆಗಿತ್ತು. "ಝಾಸಿಸಂಸ್ಥಾನವನ್ನ ಬ್ರಿಟಿಷ್ ಸರ್ಕಾರಕ್ಕೆ ಕೊಡುವದು ನನಗೆ ಇಷ್ಟವಿಲ್ಲ" ಪರಂತು ಪರದೆಯಲ್ಲಿರತಕ್ಕ ಬ್ರಾಹ್ಮಣ ಅಬಲೆಯ ಈದೀನ ವಾಣಿಯನ್ನ ಕೇಳುವರ್‍ಯಾರು ? ಎಲ್ಲಿಸ್ ಸಾಹೇಬನು ಪುನಹ ಮತ್ತೊಂದಾವರ್ತಿ ಝಾಸಿ ಸಂಸ್ಥಾನವನ್ನ ಸರಕಾರಕ್ಕೆ ಶೇರಿಸಿಕೊಂಡು ಇದೆ, ಎಂತ ರಾಣೀಸಾಹೇಬಳಿಗೆ ತಿಳಿಸಿ ಆಕೆಯನಿರೂಪವನ್ನು ತೆಗದುಕೊಂಡನು. ಆಸಮಯದಲ್ಲಿ ರಾಣಿಸಾಹೇಬಳ ಕೋಮಲವಾದ ಮನಸ್ಸಿನ ಸ್ಥಿತಿಯು ಏನಾಗಿರಬಹುದು ? ಈಗ ದಾಮೋದರರಾಯನ ದತ್ತವಿಧಾನದ ಬಪ್ಪಿಗೆ ಬಂದೀತು, ಅನಂತರ ಆತನಿಗೆ ಸಂಸ್ಥಾನದ ವಸ್ತ್ರಭೂಷ

---

and that she will be treated with respect and consideration." *Abid.*

† ಈ ಸಮಯದ ವರ್ಣನೆಯನ್ನ ಒಂದು ಸ್ಥಳದಲ್ಲಿ ಕೆಳಗೆ ಬರೆದಿರುವ ಪ್ರಕಾರ ಮಾಡಿದೆ :—

"The notice of annexation was sent by this illustrious Lord to the Court of Regent; Ranee Luchmee Bai received the Agent of Lord Dalhousie most courteously, separated by a purdah. When the British representative informed her of this heart-rending news that Jhansi thenceforth ceased to belong to her, that it was incorporated with the domains of the mighty English; Lutchmee Bai, in a loud yet melodious voice, replied to the Agent of the English in these few significant

ಣವನ್ನು ತೊಡಿಸುವಗೋಸ್ಕರ ವಿಶೇಷ ಸಮಾರಂಭದ ಉತ್ಸವವು ನಡದೀತು. ಮತ್ತು ಆತನ ಹೆಸರಿನಿಂದ ತಾನು ರಾಜಛತ್ರವನ್ನ ನಡಿಸಿ ಬ್ರಿಟಿಷ್ ಸರಕಾರದ ವಿಷಯದಲ್ಲಿ ಪೂರ್ವದಿಂದ ನಡೆದುಬಂದ ಪ್ರೇಮಭಾವವನ್ನು ಉತ್ತಮರೀತಿಯಿಂದ ತಾನುತೋರಿಸುತ್ತಾ ಬಂದೇನು ಎಂಬ ಆಸೆಯು ಆಕೆಯ ಹೃದಯದಲ್ಲಿ ವಾಸವಾಗಿತ್ತು. ಅದು ಬಂದುಕ್ಷಣದಲ್ಲಿಯೇ ಸರ್ವವೂ ಲಯವಾದದ್ದಲ್ಲದೆ ಆಕೆಯುದುಃಖಸಾಗರದಲ್ಲಿ ಮುಳುಗಿ ಹೋದಳು.

ಬುಂದೇಲ್‌ಖಂಡದ ಪೊಲಟಿಕಲ್ ಏಜಂಟ್ ಮೆಜರ್ ಮಾಲ್ಕಂ ಸಾಹೇಬನು, ಝಾನ್ಸಿಸಂಸ್ಥಾನವನ್ನು ಸರಕಾರಕ್ಕೆ ಸೇರಿಸಿ, "ಝಾನ್ಸಿಯಲ್ಲಿ ಪ್ರತಿಬ್ಬ ಮನುಷ್ಯನಿಗೆ ಪೂಜ್ಯ ಮತ್ತು ಸುಶೀಲ" * ಎಂತ ಗೌರವಮಾಡಿ ರಾಣೀಸಾಹೇಬಳ ಸಮ್ಮಂಧವಾಗಿ ಕೆಳಗೆ ಬರದಂತೆ ಹಿಂದೂಸ್ಥಾನದ ಸರ್ಕಾರದ ಫಾರಿನ್ ಸೆಕ್ರಟರಿಗೆ ತಿಳಿಸಿದನು.

1. ರಾಣೀ ಸಾಹೇಬಳಿಗೆ ಝಾನ್ಸಿ ಸಂಸ್ಥಾನದ ಭಂಡಾರದಿಂದಲೇ ಆಗಲೀ ಅಥವಾ ಆಕೆಯು ಅಪೇಕ್ಷಿಸುವ ಪ್ರಕಾರ ಇತರೇ ಯಾವದರಿಂದಲೇ ಆಗಲೀ ಆಕೆಯು ಜೀವಂತಳಾಗಿರುವವರಿಗೆ ಪ್ರತಿ ತಿಂಗಳಿಗೆ 5000 ರೂಪಾಯಿಗಳಂತೆ ಕಂಪಿನಿಯವರಿಂದ ಮಾಶಾಸನವನ್ನು ಕೊಡಬೇಕು.

2. ಝಾನ್ಸಿಯಲ್ಲಿನ ಅರಮನೆಯನ್ನು ಆಕೆಯವಾಸಕ್ಕಾಗಿ ಆಕೆಯ ಸ್ವಾಧೀನ ಮಾಡಬೇಕು. ಮತ್ತು ಅದು ಆಕೆಯ ಸ್ವಂತಸೊತ್ತಾಗಿಧೆ ಎಂತ ತಿಳಿಯಬೇಕು.

3. ರಾಣೀ ಸಾಹೇಳು ಜೀವಂತಳಾಗಿರುವವರೆಗೂ ಆಕೆಯ ಮೇಲೆ ಅಥವ ಆಕೆಯ ಸೇವಕರಮೇಲೆ ಇಂಗ್ರೀಜಿ ಸರ್ಕಾರದ ಕೋರ್ಟಿನ ಅಧಿಕಾರವು ನಡೆಯ ಕೂಡದು.

---

words, "Mera Jhansi denga nahe" (I will not give up my Jhansi). *Dalhousie's Administration of British India*—Vain boast! Jhansi was annexed. The infant Anandrao's rights were denied !!"

* ಮೇಜರ್ ಮಾಲ್ಕಂ ಸಾಹೇಬನು ರಾಣೀ ಸಾಹೇಬಳ ಸಂಬಂಧದಲ್ಲಿ ತನ್ನ ರಿಪೋರ್ಟಿನಲ್ಲಿ ಈ ರೀತಿ ಬರೆದಿರುತ್ತಾನೆ:—

*"In regard to this Lady, who bears a very high character, and is much respected by everyone at Jhansi." Letter from Major D. A. Malcolm to the Secretary to the Government of India, Foreign Department. 16th March 1854.*

4. ಕೈ. ಮಹಾರಾಜಾ ಗಂಗಾಧರರಾಯನ ಇಚ್ಛೆಯ ಪ್ರಕಾರ ಸಂಸ್ಥಾನದ ವಿಶಿಷ್ಟ ಹರಳು ಕಲ್ಲಿನ ಆಭರಣಗಳು, ಮತ್ತು ಸ್ವಂತ ದ್ರವ್ಯ, ಮತ್ತು ಸಂಸ್ಥಾನದ ಲೆಖ್ಖವನ್ನು ಮಾಡಿದ ನಂತರ ಸರ್ಕಾರದ ಖಜಾನೆಯಲ್ಲಿ ಉಳಿಯುವ ದ್ರವ್ಯ ಸಹ ರಾಣೀ ಸಾಹೇಬಳಿಗೆ ಕೊಡಬೇಕು. ಮತ್ತು ಮುಂದೆ ಆಕೆಗೆ ಹತ್ತಿ ಹೊಂದಿದವರ ಒಂದು ಪಟ್ಟಿ ತಯಾರ್ಮಾಡಿ, ಅವರ ಜೀವನಾರ್ಥ ನಡೆಯುವದಕ್ಕೋಸ್ಕರ ಒಂದು ವಿಧವಾದ ಕ್ಲಿಪ್ತಗೊಳಿಸಿ ಅದನ್ನು ಹಿಂದೂಸ್ಥಾನದ ಸರ್ಕಾರದ ಕಡೆಗೆ ಕಳುಹಿಸಬೇಕು. *

ಲಾರ್ಡ್ ಡಲ್ಹೂಜಿ ಸಾಹೇಬನು ಪೊಲಟಿಕಲ್ ಏಜಂಟನ ಈ ಪತ್ರವನ್ನು ಮತ್ತು ಇತರ ಎಲ್ಲಾ ಸಂಗತಿಗಳನ್ನ ಪರಿಶೋಧನೆ ಮಾಡಿ, ಏಜಂಟ್ ಸಾಹೇಬನು ಸೂಚಿಸಿದ್ದನ್ನು ಒಪ್ಪಿಕೊಂಡು 1854 ನೆ ಇಸವಿ ಮಾರ್ಚಿ ತಾರೀಕು 25 ರಲ್ಲಿ ಒಂದು ಮಿನಿಟ್ಟು ಬರದು ಕಳುಹಿಸಿ ಕೊಟ್ಟನು.

ಆದರೆ ಅದರಲ್ಲಿ ಸಂಸ್ಥಾನದ ಆಭರಣಗಳು ಮತ್ತು ಸ್ವಂತ ಸೊತ್ತುಗಳು, ಇವುಗಳ ಮೇಲಿನ ಸ್ವಾಮಿತ್ವದ ಹಕ್ಕು ಕೈ—ಮಹಾರಾಜಾ ಗಂಗಾಧರರಾಯನು ತೆಗದುಕೊಂಡಿರುವ ದತ್ತು ಮಗನದ್ದಾಗಿರೋಣದರಿಂದ, ಅವುಗಳನ್ನ ರಾಣೀಸಾಹೇಬಳಿಗೆ ಕೊಡುವದಕ್ಕೆ ಆಗುವದಿಲ್ಲ. ಯಾಕಂದರೆ ಕಾಯಿದೆ ಪ್ರಕಾರ ಆ ದತ್ತವಿಧಾನವು ಸಂಸ್ಥಾನವನ್ನ ನಡಿಸುವದಕ್ಕೆ ಯೋಗ್ಯವಾದ್ದಲ್ಲದೆ ಇದ್ದಾಗ್ಯೂ, ಸ್ವಂತ ಸೊತ್ತುಗಳಮೇಲಿನ ಸ್ವಾಮಿತ್ವದ ಹಕ್ಕು ನಡಸುವದಕ್ಕೆ ಯೋಗ್ಯವಾಗಿಧೆ, ಎಂತ ತೀರ್ಮಾನಿಸಿಯಿತ್ತು. †

---

* ಶ್ರೀಮಂತ ದಾಮೋದರರಾಯನು ತಿಳಿಸಿರುವದರಲ್ಲಿ, ಮುಂದಿನ ಕಲಂ ಹೆಚ್ಚಾಗಿ ಸೇರಿಧೆ. (1) ಝಾನ್ಸಿಯಲ್ಲಿರತಕ್ಕ ತೋಟಗಳ ಪೈಕಿ ಕೆಲವು ರಾಣೀ ಸಾಹೇಬಳ ಕಡೆಗೆ ಇರಬೇಕು. (2) ಪೂನೆ ಮುಂತಾದ ಇತರ ಕಡೆ ಇರತಕ್ಕ ಅರಮನೆಗಳು ಮತ್ತು ಖಾನ್ದೇಶದಲ್ಲಿ ಪಾರವಳ ಮುಂತಾದ ಊರುಗಳಲ್ಲಿರತಕ್ಕ ಜಹಗೀರ್ ಮತ್ತು ಕೆಲವು ಊರುಗಳಲ್ಲಿರತಕ್ಕ ಉಂಬಳಿ ಮತ್ತು ಅಲ್ಲಿರತಕ್ಕ ಅರಮನೆ ಮುಂತಾದ ಸರ್ವವೂ ರಾಣೀ ಸಾಹೇಬಳ ಸ್ವಾಧೀನವಿರಬೇಕು.

ಇಂಡೂರ್ ಪ್ರತ್.

† "All the proposals of Major Malcolm regarding the Ranee, &c. at Jhansi were very proper, and may be approved subject to one exception, which is an important one. He proposes that all the property of the late Rajah should be given to the Ranee; but I apprehend that it is beyond the power of the Government

ಆಪ್ರಕಾರವಾಗಿ, ಝಾನ್ಸಿ ಪೊಲಟಿಕಲ್ ಏಜಂಟ್ ಸಾಹೇಬನು, ಝಾನ್ಸಿ ಭಂಡಾರದಲ್ಲಿದ್ದ ಒಂದು ಲಕ್ಷ ರೂಪಾಯನ್ನ ದತ್ತ ಮಗ ದಾಮೋಧರರಾಯನ ಹೆಸರಿನಲ್ಲಿ, ಇಂಗ್ರೇಜಿ ಭಂಡಾರದಲ್ಲಿಡಿಸಿ, ಅದನ್ನು ದಾಮೋದರರಾಯನು ಪ್ರಾಪ್ತವಯಸ್ಸಿನವನಾದ ನಂತರದಲ್ಲಿ ಬಡ್ಡಿಸಹಿತವಾಗಿ ಅವನಿಗೆ ಕೊಡಬೇಕೆಂತ ಇತ್ಯರ್ಥಪಡಿಸಿದನು. ಇದು ಹೊರ್ತು ಸಂಸ್ಥಾನದ ಬೆಲೆಯುಳ್ಳ ಎಲ್ಲಾ ಆಭರಣಗಳೂ ಮತ್ತು ಬೆಳ್ಳಿ ಭಂಗಾರದ ಸಾಮಾನುಗಳನ್ನ ಸಹ ದಾಮೋದರರಾಯನಿಗೋಸ್ಕರ ಪೆಂತ ಹೇಳಿ ಪೊಲಟಿಕಲ್ ಏಜಂಟನು ರಾಣೀ ಸಾಹೇಬಳ ಸ್ವಾಧೀನ ಕೊಡಿಸಿದನು. ಮತ್ತು ಪಟ್ಟಣದಲ್ಲಿರುವ ದೊಡ್ಡ ಅರಮನೆಯನ್ನ ಆಕೆಯ ಸ್ವಾಧೀನಕ್ಕೆ ಕೊಟ್ಟು, ಆಕೆಯು ಕೋಟೆಯಲ್ಲಿರತಕ್ಕ ತನ್ನ ಬಾಬತು ಎಲ್ಲಾ ಸಾಮಾನುಗಳನ್ನ, ಆ ಅರಮನೆಗೆ ತಂದುಕೊಳ್ಳಬೇಕೆಂತ ಅಪ್ಪಣೆ ಮಾಡಿದನು. ಮಹಾರಾಜ ರಾಮಚಂದ್ರರಾಯನು ತೀರಿಹೋದ ಆರಂಭಿಸಿಕೊಂಡು, ಝಾನ್ಸಿಯ ಎಲ್ಲಾ ರಾಜರುಗಳು ಕೋಟೆಯಲ್ಲಿರತಕ್ಕ ಅರಮನೆಯಲ್ಲಿ ವಾಸವಾಗಿರುತ್ತಿದ್ದ ಕಾರಣ ಸರ್ವರಾಜ ವೈಭವವೂ ಅಲ್ಲಿಯೇ ಇತ್ತು. ಪೊಲಟಿಕಲ್ ಏಜಂಟನ ಅಪ್ಪಣೆ ಪ್ರಕಾರ ರಾಣೀ ಸಾಹೇಬಳು ಅದನ್ನೆಲ್ಲಾ ಪಟ್ಟಣದಲ್ಲಿನ ಅರಮನೆಗೆ ತರಿಸಿಕೊಂಡು ಝಾನ್ಸಿ ಕೋಟೆಯನ್ನ ಇಂಗ್ರೇಜಿ ಸರಕಾರದವರ ಸ್ವಾಧೀನ ಪಡಿಸಿದಳು.

ಇಂಗ್ರೇಜಿ ಸರಕಾರದವರು, ಝಾನ್ಸಿಯು ತಮ್ಮ ಅಧೀನಕ್ಕೆ ಬಂದಕೂಡ್ಲೆ, ಸಂಸ್ಥಾನದ ಸೇನೆಗೆ ಆರುತಿಂಗಳ ಸಂಬಳವನ್ನು ಬಕ್ಷಿಸ್‌ಕೊಟ್ಟು, ಅದಕ್ಕೆ ನಿರಂತರ ವಿಶ್ರಾಂತಿಯನ್ನು ಕೊಟ್ಟರು. ಆ ಸೈನ್ಯಕ್ಕೆ ಬದಲಾಗಿ, ಇಂಗ್ರೇಜಿ ಸೈನ್ಯವನ್ನು ಸೇರಿಸಿಕೊಂಡರು. ಬಂಗಾಳ ನೇಟೀವ್ (ಶಿಪಾಯಿಯ) ಪಾಯದಳದ 12 ನೇ ಪಟಾಲಂನ್ನ ಅಲ್ಲಿಗೆ ತರಿಸಿ, ಕಿಲ್ಲೆಯ ಸಂರಕ್ಷಣೆಯನ್ನ ಭದ್ರಪಡಿಸಿದರು. ಇದು ಹೊರ್ತು ಇನ್ನೂ ಹೆಚ್ಚು ಕಡಿಮೆ ಸಹಾಯ ಬೇಕಾದರೆ ಅದನ್ನ ಸಿಪ್ರೀ. ಸ್ಥಳದಿಂದ, ಕ್ಯಾಪ್ಟರ್ನ ಹೇನ್ಸೀ ಅಥವ ಬ್ರಿಗೇಡಿಯರ್ ಇವರ ಕಡೆಯಿಂದ ತೆಗದುಕೊಳ್ಳಬೇಕೆಂತ ನಿಶ್ಚಯಿಸಿದರು. ಇದೇ ಸಮಯದಲ್ಲಿ ದಂಡಿನ ಅಧಿಕಾರಿಗಳು ಕೋಟೆಯಮೇಲಿನ ಪೂರ್ವದ ಯುದ್ಧ ಸಾಮಗ್ರಿಗಳನ್ನ ಬಹಳವಾಗಿ ನಾಶಪಡಿಸಿದರು. ಅಲ್ಲಿನ ಸರ್ವ ಮದ್ದು, ಗುಂಡುಗಳನ್ನ

---

so to dispose of the property of the Rajah, which by law will belong to the son whom he adopted. The adoption was good for the conveyance of private rights, though not for the transfer of the principality."
—*Minute by the Most Noble the Governor-General of India. 25th March* 1854.

ಕೆರೆಯಲ್ಲಿ ಬಗೆದು ಪೇಷ್ವೆಯವರ ಕಾಲದ ದೊಡ್ಡದೊಡ್ಡ ಹಳೇ ತೋಪುಗಳನ್ನ ಉಪಯೋಗಕ್ಕೆ ಬಾರದಂತೆ ಮಾಡಿ ಬಿಟ್ಟರು. ತಾತ್ಪರ್ಯ, ಅವರಿಗೆ ಪುನಹ ಅದರ ಉಪಯೋಗವಾದೀತು ಎಂಬ ಆಶೆ ಶುದ್ಧಾಂಗ ವಿರಲಿಲ್ಲ.

ಮಹಾರಾಣಿ ಲಕ್ಷ್ಮೀಬಾಯಿ ಸಾಹೇಬಳಿಗೆ, 5000 ರೂಪಾಯಿಗಳು ಮಾಸಾಶನ ಮತ್ತು ಹುಡುಗನಿಗೋಸ್ಕರ ಸ್ವಂತ ಸೊತ್ತುಗಳು ಸಹ ಕೊಡಬೇಕೆಂತ ಹಿಂದೂಸ್ಥಾನದ ಸರ್ಕಾರದ ಕಡೆಯಿಂದ ಬರದು ಬಂದಿದ್ದಾಗ್ಯೂ, ಬ್ರಿಟಿಷ್ ಸರಕಾರದ ನ್ಯಾಯತನದ ವಿಷಯವಾಗಿ ಆಕೆಗೆ ಇನ್ನೂ ವಿಶ್ವಾಸ ವಿದ ಕಾರಣ ಆ ಅಲ್ಪ ಕ್ಲಿಪ್ತ ದ್ರವ್ಯವನ್ನ ತಗದುಕೊಳ್ಳುವದಕ್ಕೆ ಒಪ್ಪದೆ ಪುನಹ ಝಾಂಸಿ ಸಂಸ್ಥಾನದ ಸಮ್ಮಂಧವಾಗಿ ವಿಲಾಯತೀ ಸರಕಾರದ ಕಡೆಗೆ ಪ್ರಯತ್ನವನ್ನು ನಡೆಸಿದಳು. ಕಾರಣವೇನಂದರೆ, ಆ ಸರಕಾರದವರು ತನ್ನ ನ್ಯಾಯವಾದ ಬಾಧ್ಯತೆಯನ್ನ ವಿಚಾರಮಾಡಿ ಝಾಂಸಿ ಸಂಸ್ಥಾನವನ್ನ, ಹಿಂದಕ್ಕೆ ಕೊಟ್ಟಾರು ಎಂತ ಅದ್ಯಾಪಿ ಆಕೆಗೆ ಆಶೆಯಿತ್ತು. ಆಕೆಯು ಉಮೇಶಚಂದ್ರ ಬಾನರ್ಜ ಎಂಬ ಬಂಗಾಳಿಬಾಬೂನಿಗೂ ಮತ್ತು ಇನ್ನೊಬ್ಬ ಯೂರೋಪಿಯರ್ನ ಗೃಹಸ್ತನಿಗೂ 60,000 ರೂಪಾಯಿಗಳನ್ನು ಕೊಟ್ಟು, ಅನ್ಯಾಯವಾಗಿ ಝಾಂಸಿಸಂಸ್ಥಾನವನ್ನ ಸರ್ಕಾರಕ್ಕೆ ಸೇರಿಸಿಕೊಳ್ಳಬಾರದಾಗಿ ಪ್ರಾರ್ಥನೆಯಿಂದ ಬರೆಯಲ್ಪಟ್ಟ ಒಂದು ವಿಜ್ಞಾಪನೇ ಪತ್ರಿಕೆಯನ್ನ ಅವರಕಡೆಗೆ ವಹಿಸಿ ಅವರನ್ನು ವಿಲಾಯತಿಯಲ್ಲಿನ ಕೋರ್ಟ ಆಫ್ ಡೈರೆಕ್ಟರ್ಸ್ ಕಡೆಗೆ ಕಳುಹಿಸಿಕೊಟ್ಟಳು. ಈ ಖಲೀತೆಯಲ್ಲಿ ಲಾರ್ಡ ಡಲ್ಹೌಜಿ ಸಾಹೇಬನ ತೀರ್ಮಾನದಲ್ಲಿನ ಮುಖ್ಯ ಮುಖ್ಯ ವಿವಾದಾಂಶದ ಅಸತ್ಯತೆಯನ್ನ ಸರಿಯಾದ ಕಾರಣಗಳಿಂದ ದೃಷ್ಟಾಂತರ ಸ್ಪಷ್ಟವಾಗಿ ತೋರ್ಪಡಿಸಿ ಕೊಟ್ಟಿದ್ದಳು. ಅದರಲ್ಲಿ ಮುಖ್ಯ ವಿವಾದಾಂಶವು ಈ ಪ್ರಕಾರವಾಗಿತ್ತು :— “ಪೂರ್ವದಲ್ಲಿ ರಾಮಚಂದ್ರರಾಯನು ತೆಗದುಕೊಂಡ ದತ್ತಕನನ್ನ ಇಂಗ್ರೇಜಿ ಸರಕಾರದವರು ಒಪ್ಪಿಕೊಳ್ಳಲಿಲ್ಲವಾದಕಾರಣ ಈ ಗಂಗಾಧರರಾಯನು ತೆಗದುಕೊಂಡಿರುವ ದತ್ತಕನನ್ನ ಒಪ್ಪಿಕೊಳ್ಳಲು ಇಂಗ್ರೇಜಿ ಸರಕಾರದವರಿಗೆ ಆಗುವದಿಲ್ಲವೆಂತ ಗವರ್ನರ್ ಜನರಲ್ ಸಾಹೇಬನು ಹೇಳುತ್ತಾನೆ. ಪರಂತು, ರಾಮಚಂದ್ರರಾಯನು ದತ್ತಕ ತೆಗದುಕೊಂಡ ಸಮಯದಲ್ಲಿ, ಆತನ ಸ್ವಂತ ಕಕ್ಕಂದಿರು, ರಘುನಾಥರಾವ್ ಮತ್ತು ಗಂಗಾಧರರಾವ್ ಜೀವಂತರಾಗಿ ಇದ್ದು, ಅವರ ಆಕ್ಷೇಪಣೆ ಇರುವಾಗ ರಾಮಚಂದ್ರರಾಯನು ಪರಗೋತ್ರದಿಂದ ಅಂದರೆ, ತನ್ನ ಕುಟುಂಬದ ಸಹೋದರೀ ಮಗನನ್ನ ದತ್ತಕನಾಗಿ ತೆಗದುಕೊಂಡಿದ್ದರಿಂದ ಇಂಗ್ರೇಜಿ ಸರಕಾರದವರು ಆಕಾಲದಲ್ಲಿ, ಒಪ್ಪಿಕೊಳ್ಳಲಿಲ್ಲ. ಪರಂತು, ಆ ಕಾರಣವು ಪ್ರಕೃತ ಗಂಗಾಧರರಾವ್ ತೆಗದುಕೊಂಡಿರುವ, ದತ್ತಕನಿಗೆ ಸಂಬಂಧಿಸುವದಿಲ್ಲ. ಹಿಂದೂ ಧರ್ಮಶಾಸ್ತ್ರಾನುಸಾರವಾಗಿ ಗಂಗಾಧರರಾಯನಿಗೆ, ದತ್ತಕ ತೆಗದುಕೊಳ್ಳುವ ಪೂರ್ಣ ಅಧಿಕಾರವಿದ್ದು, ಅವನು ತನ್ನ ಸ್ವಗೋತ್ರದಲ್ಲಿನ ಹುಡುಗನನ್ನು ದತ್ತು ತೆಗದುಕೊಂಡಿದ್ದಾನೆ. ಆದ್ದರಿಂದ ಏನೋ ಒಂದು ಕಾರಣವನ್ನು ತೋರಿಸಿ, ಹಿಂದೂಸ್ಥಾನದ

ಸರ್ಕಾರದವರು ಅನ್ಯಾಯವಾಗಿ ಸರ್ಕಾರಕ್ಕೆ ಸೇರಿಸಿಕೊಂಡಿರುವ ನಮ್ಮ ಸಂಸ್ಥಾನವನ್ನ ದತ್ತ ತೆಗದುಕೊಂಡ 'ಹುಡುಗನ ಹೆಸರಿನಲ್ಲಿ ಪೂರ್ವದಂತೆ ನಡಿಸಿ ಕೊಡೋಣವಾಗಬೇಕು. ಝಾನ್ಸಿ ಸಂಸ್ಥಾನವನ್ನ ನಮಗೆ ಇನಾಮಾಗಿ ಕೊಟ್ಟದ್ದೆಂತ ಹಿಂದೂಸ್ಥಾನದ ಸರ್ಕಾರದವರು ಹೇಳಿರುತ್ತಾರೆ; ಆದರೆ ಅದನ್ನ ನಮಗೆ ಇಂಗ್ರೇಜಿ ಸರಕಾರದವರೇ ಆಗಲಿ ಅಥವ ಇತರರಾಗಲಿ ಉಚಿತವಾಗಿ ಕೊಟ್ಟದ್ದಲ್ಲ. ಪೇಷ್ವೆ ಸರ್ಕಾರದವರ ಕಾಲದಲ್ಲಿ ನಮ್ಮ ಪೂರ್ವಜರು ದೊಡ್ಡ ದೊಡ್ಡ ಪರಾಕ್ರಮವಾದ ಕೆಲಸಗಳನ್ನು ಮಾಡಿದ್ದಕ್ಕೋಸ್ಕರ, ಅವರ ಶೂರತನಕ್ಕೆ ಈ ಸಂಸ್ಥಾನವು ಸಿಕ್ಕಿದ್ದಾಗಿದೆ. ಆದಕಾರಣ ಬ್ರಿಟಿಷ್ ಸರಕಾರಕ್ಕೆ ಇದನ್ನ ಸೇರಿಸಿಕೊಳ್ಳುವ ಅಧಿಕಾರವು ಬರುವದಿಲ್ಲ." * ಎಂತ ಮುಂತಾಗಿ......

ಈ ರೀತಿಯಾದ ಖಲೀತಾವನ್ನ ತೆಗದುಕೊಂಡು ಮೇಲೆ ಹೇಳಿದ, ಇಬ್ಬರು ವಕೀಲರು ಹಿಂದೂಸ್ಥಾನದಿಂದ ವಿಲಾಯತಿಗೆ ಹೋದರು, ಆದರೆ ಅವರು ಅಲ್ಲಿಗೆ ಹೋಗಿ ಏನು ಕೆಲಸವನ್ನು ಜರಗಿಶಿದರೂ ಎಂಬುವ, ಸಂಗತಿಯೂ ಸರ್ವಥ ಶಿಕ್ಕುವುದಿಲ್ಲ. ಪೇಷ್ವೆ ಶ್ರೀಮಂತ ನಾನಾಸಾಹೇಬನ, ವಕೀಲ ಅಜ್ಜಮುಲ್ಲಾ ಖಾನನು, ವಿಲಾಯಿತೀಗೆ ಹೋಗಿದ್ದವನು, ಅಲ್ಲಿ ಆನಂದದಲ್ಲಿ ನಿಮಗ್ನನಾಗಿ ಹೋದದ್ದಲ್ಲದೆ, ರಷ್ಯಾದೇಶದ ಸೈನ್ಯದ ಸಂಗಡ ಶೇರಿಕೊಂಡು, ಸಬಾಷ್ಟಪೂಲ್‌ದ ಲಡಾಯಿದಲ್ಲಿ, ಏನು ನಡೆಯುತ್ತದೆ ಎಂತ ಸಂತೋಷವಾಗಿ ಆಟ ನೋಡುತ್ತಾ ಇದ್ದ ಎಂಬಮಟ್ಟಿಗೆ ವರ್ತಮಾನ ಸಿಕ್ಕುತ್ತದೆ. ಪರಂತು ರಾಣೀಸಾಹೇಬಳು ಕಳುಹಿಸಿಕೊಟ್ಟದ್ದ ವಕೀಲರ ವಿಷಯವಾಗಿ ಏನೂ ತಿಳಿಯ ಬರಲಿಲ್ಲ. ಅವರು 60,000 ರೂಪಾಯಿ ತೆಗದುಕೊಂಡು ಹೋದವರು ಹಿಂತಿರಿಗಿ ಬರಲೇ ಇಲ್ಲ.

1854 ನೆ ಇಸವಿ ಅಗಸ್ಟ್ ತಾರೀಕು 2 ರಲ್ಲಿ ಹಿಂದೂಸ್ಥಾನದ ಸರಕಾರದವರು, ಕೋರ್ಟ್ ಆಫ್ ಡೈರೆಕ್ಟರ್‌ಗಳಿಗೆ, ಕಳುಹಿಸಿಕೊಟ್ಟ ಕಾಗದ ಪತ್ರಗಳು ಮತ್ತು ರಾಣೀಸಾಹೇಬಳ ಖಲೀತಾಗಳು ಸಹಾ ನೋಡಿ, ಅವರು ಝಾನ್ಸಿ ಸಂಸ್ಥಾನವನ್ನ ಸರಕಾರಕ್ಕೆ ಶೇರಿಸಿಕೊಂಡದ್ದು ಕೇವಲ ಯೋಗ್ಯವಾಗಿ ಇದೆ ಎಂತ ಇತ್ಯರ್ಥ † ಪಡಿಸಿ

---

* ಮೇಜರ್ ಯುಹರ್ಲ್ಸ್ ಬೇಲ್ ಸಾಹೇಬನು, ಲಾರ್ಡ್ ಡಲ್ಹೂಜಿ ತೀರ್ಮಾನದ ಮೇಲೆ, ಮಾಡಿರುವ ಟೀಕಾದಲ್ಲಿ, ಈ ಮಾತನ್ನು ಸ್ಪಷ್ಟವಾಗಿ ತೋರಿಸಿರುತ್ತಾನೆ. ಅದರಿಂದ ರಾಣೀ ಸಾಹೇಬಳ ಹೇಳಿಕೆ, ಇಂಗ್ರೇಜಿಯವರ ಮತ ಪ್ರಕಾರ ಕೂಡ ಸರಿಯಾದ್ದಲ್ಲವೆಂತ ಹೇಳುವದಕ್ಕೆ ಆಸ್ಪದವಿಲ್ಲ.

† Political letter to India, dated 2 August (No. 34) 1854.

ಅದನ್ನ ಹಿಂದೂಸ್ಥಾನದ ಸರಕಾರದವರಿಗೆ ಕಳುಹಿಸಿದರು. ಅದರಲ್ಲಿ ಪೂರ್ವದಲ್ಲಿ ಸರ್ 1804 ನೆ ಇಸವಿಯಲ್ಲಿ ಶಿವರಾವ್‌ಭಾವೂ ಸಂಗಡ ಮಾಡಿಕೊಂಡ ತಹ, ಆತನ ಮಟ್ಟಿಗೆ ಉಪಯೋಗಿಸತಕ್ಕದ್ದು, ಎಂತ ಸ್ಪಷ್ಟವಾಗಿ ತಿಳಿದುಕೊಂಡು ಪ್ರಕೃತ ನಷ್ಟ ವಂಶವಾಗಿರುವ ಝಾಂಸಿ ಸಂಸ್ಥಾನವನ್ನ ಸರಕಾರಕ್ಕೆ ಸೇರಿಸಿಕೊಳ್ಳಬೇಕು, ಅದಕ್ಕೆ ನಮ್ಮ ಅಡ್ಡಿ ಏನೂ ಇಲ್ಲ, ಎಂತ ತಿಳಿಸಿದರು. ಕೊರ್ಟು ಆಫ್ ಡೈರಕ್ಟರುಗಳು ಸಂಪೂರ್ಣವಾಗಿ, ಸಮ್ಮತಿಪಟ್ಟು ಈ ವಿಧವಾದ ತೀರ್ಮಾನವನ್ನ ಹಿಂದೂಸ್ಥಾನದ ಸರಕಾರಕ್ಕೆ ಕಳುಹಿಸಿ ಕೊಟ್ಟಮೇಲೆ, ಝಾಂಸಿ ಸಂಸ್ಥಾನವು ಹಿಂದಕ್ಕೆ ಸಿಕ್ಕತಕ್ಕದ್ದಲ್ಲ, ಎಂಬ ಭವಿಷ್ಯವು ವಜ್ರಲೇಪದಂತೆ ಸ್ಥಿರವಾಯಿತು. ಆದರೂ, ರಾಣೀಸಾಹೇಬಳಿಗೆ ಮಾತ್ರ ವಿಲಾಯತೀಗೆ ಹೋಗಿರುವ ತನ್ನ ಕಡೆ ವಕೀಲರು ಏನಾದರೂ ಪ್ರಯತ್ನ ಮಾಡ್ಯಾರು ಎಂತ, ಇನ್ನೂ ಆಸೆ ಇತ್ತು. ಇದರಮೇಲೆ ವ್ಯರ್ಥವಾಗಿ ಆಸೆಯಿಟ್ಟುಕೊಳುವದು ಏನೂ ಪ್ರಯೋಜನವಿಲ್ಲ, ಎಂಬುವದು ಅಂತಃಪುರದಲ್ಲಿ ವಾಸಮಾಡತಕ್ಕಂಥಾ ರಾಜಸ್ತ್ರೀಗೆ ನಿಜವಾಗಿ ಹೇಗೆ ತಿಳಿಯಬೇಕು. ‡

---

‡ ಇದನ್ನ ಕುರಿತು, ಸರ್ ಜಾರ್ಜ್ ಕೇ ಸಾಹೇಬನು, ಬಹಳ ಹೃದಯದ್ರಾವಕವಾದ ವ್ಯಾಖ್ಯಾನವನ್ನು ಬರೆದಿರುತ್ತಾನೆ. ಅವನು ಹೇಳುವದೇನಂದರೆ :—

"In vain the widow of the late Rajah, whom the Political Agent described "as a lady bearing a high character and much respected by every one at Jhansi," protested that her husband's house had ever been faithful to the British Government,—in vain she dwelt upon services rendered in former days to that Government, and the acknowledgments which they had elicited from our rulers—in vain she pointed to the terms of the treaty, which did not to her simple understanding, bar succession in accordance with the laws and usages of her country—in vain she quoted precedents to show that the grace and favour sought for Jhansi had been yielded to other states. The fiat was irrevocable. It had been ruled that the interests both of the Jhansi state and the British Government imperatively demanded annexation. "As it lies in the midst of

ಇದು ಹಾಗಿರಲಿ, ನಂತರ ಲಾರ್ಡ್ ಡಲ್ಹೌಜಿ ಸಾಹೇಬನ ಉದ್ದೇಶ್ಯ ಪ್ರಕಾರ, ಬುಂದೇಲ್ ಖಂಡದಲ್ಲಿ ಬಂದು ಭಂಗಾರದ ಘಟ್ಟಿಯ ಹಾಗೆ ತಿಳಕೊಂಡಿದ್ದ, ಝಾಁಸಿ ಸಂಸ್ಥಾನವು ಬ್ರಿಟಿಷ್ ಸರಕಾರದವರ ಆಧೀನಕ್ಕೆ ಬಂದು, ಬುಂದೇಲ್ ಖಂಡದ ಪೊಲಿಟಿಕಲ್ ಏಜಂಟ್, ಮೇಜರ್ ಮಾಲ್ಕಾಂ ಸಾಹೇಬನ, ಸೂಚನೆಯಂತೆ ಅದನ್ನು ವಾಯುವ್ಯ ಪ್ರಾಂತ್ಯದ ಗವರ್ನರ್ ಕಡೇಗೆ ವಹಿಸಲಾಯಿತು. ಸನ್ 1854 ನೇ ಇಸವಿ ಮೇ ತಿಂಗಳಲ್ಲಿ ಝಾಁಸಿ ಸಂಸ್ಥಾನವನ್ನ ಸರಕಾರಕ್ಕೆ ಶೇರಿಸುವ ಕಾರ್ಯದಲ್ಲಿ ಕೇವಲ ಶ್ರದ್ಧೆ ತೆಗದುಕೊಂಡ ಪೊಲಿಟಿಕಲ್ ಏಜಂಟ್ ಮೇಜರ್ ಮಾಲ್ಕಾಂ ಸಾಹೇಬನಿಗೆ, ಬಡೋದಾ ಸಂಸ್ಥಾನದ, ರೆಸಿಡೆಂಟ್ ಕರ್ನಲ್ ಅವುಟರಾಂ ಸಾಹೇಬನ ಸ್ಥಾನಕ್ಕೆ ನೇಮಕವಾಯಿತು.

ಆತನ ಸ್ಥಾನಕ್ಕೆ ಕ್ಯಾಪ್ಟನ್ ಮ್ಯಾಕ್ಫರ್ಸನ್ ಸಾಹೇಬನಿಗೆ ಗ್ವಾಲಿಯರ್ ಸಂಸ್ಥಾನದ ಪೊಲಿಟಿಕಲ್ ಏಜಂಟನಾಗಿ ನೇಮಿಶಿದರು. ಆತನಿಗೆ ಝಾಁಸಿ ಸಮ್ಮಂಧವೇನೂ ಉಳಿಯಲಿಲ್ಲ. ಝಾಁಸಿಯಲ್ಲಿ ಕೂಡ್ಲೆ ಕಮಿಶ್ನರ ಆಡಳತವು ಪ್ರಾರಂಭವಾಗಿ ಮೇಜರ್ ಸ್ಕೀನ್ ಸಾಹೇಬನೆಂಬುವನನ್ನ ಆ ಸ್ಥಾನದಲ್ಲಿ ನೇಮಿಸಿದರು. ಈ ರೀತಿಯಾಗಿ, ಬ್ರಿಟಿಷ್ ಸರಕಾರದವರ ಸಂಗಡ ಶಿವರಾಂಭಾವೂಗೆ ಇದ್ದ ಸ್ನೇಹವೂ ಸಮಾಪ್ತಿಯಾಯಿತು. ಲಾರ್ಡ್ ಡಲ್ಹೌಜಿಯು ರಾಜಕಾರ್ಯದಲ್ಲಿ ಕೇವಲ ನಿಪುಣನಾಗಿ ಇದ್ದನು. ಪರಂತು ಅದು, ಮನೂ ಹೇಳಿರುವ ಪ್ರಕಾರ:—

ಇದಮೇವ ನರೇಂದ್ರಾಣಾಂ ಸ್ವರ್ಗದ್ವಾರ ಮನರ್ಗಲಂ ।
ಯದಾತ್ಮನಃ ಪ್ರತಿಜ್ಞಾಚ ಪ್ರಜಾಚ ಪರಿಪಾಲ್ಯತೇ ॥ ೧ ॥

ಇಂಥಾ ರಾಜನೀತಿಯ ಮುಖ್ಯ ತತ್ವದಲ್ಲಿನ, ಪ್ರತಿಜ್ಞಾಪಾಲನಾ ಎಂಬದನ್ನು ಮಾತ್ರ ಆತನೂ ಅಂಗೀಕಾರ ಮಾಡಲಿಲ್ಲ. ಆದಕಾರಣ ಆತನ ಕಾರ್ಯದ, ಕಟುತರ

---

other British Districts" said Lord Dalhousie, "the possession of it as our own, will tend to the improvements of the general internal administration of our possessions in Bundlekhand. That its incorporation with the people of Jhansi, a reference to the result of experience will suffice to show!" The results of experience have since shown to what extent the people of Jhansi appreciated the benefits of that incorporation." *History of the Sepoy War. P. 92 Vol. 1.*

ಫಲವನ್ನ ಸರ್ವ ಬ್ರಿಟಿಷ್ ರಾಷ್ಟ್ರವೂ ಭೋಗಿಸಬೇಕಾಯಿತು. ಇದು ಅತ್ಯಂತ ದುಃಖಕರವಾದ ಮಾತಾಗಿಧೆ. *

ಝಾಂಸಿ ಸಂಸ್ಥಾನದ ವ್ಯವಸ್ಥೆಯು ಈರೀತಿ ಆದನಂತರ ರಾಣೀ ಸಾಹೇಬಳು "ಪೂಜಾಫಲವು ಪ್ರಾಪ್ತವಾಗುತ್ತೆ," ಎಂಬ ಶ್ರೀರಾಮದಾಸನ, ವಾಕ್ಯವನ್ನ ಅನುಸರಿಸಿ ಸಮಾಧಾನಪಟ್ಟುಕೊಂಡು ದೀನಳಾಗಿ ತನ್ನ ಆಯುಷ್ಯವನ್ನು ಈಶ್ವರ ಚಿಂತನೆಯಲ್ಲಿ ಕಳೆಯಲು ಪ್ರಾರಂಭಿಶಿದಳು. ಪತಿವಿಯೋಗವಾದನಂತರ ಕೆಲವುದಿವಸ ಆಕೆಯು ಕೇವಲ ಉದಾಸಿನತೆಯಿಂದ ಕಾಲವನ್ನು ಕಳೆಯುತ್ತಾ ಇದ್ದಳು. ಬೆಳಗಿನಝಾವ ನಾಲ್ಕುಘಂಟೆಗೆ ಎದ್ದು ಪ್ರಾತರ್ವಿಧಿ ತೀರಿಸಿಕೊಂಡು ಸ್ನಾನಮಾಡಿ ಎಂಟುಘಂಟೆ ಹೊಡೆಯುವ ಪರಿಯಂತರ ಪಾರ್ಥಿವೇಶ್ವರ ಪೂಜಾ ಮಾಡುತ್ತಾ ಇದ್ದಳು. ಆನಂತರ ವಸ್ತ್ರವನ್ನು ಧರಿಶಿಕೊಂಡು ಅರಮನೆಯ ಪ್ರಾಕಾರದಲ್ಲಿ ನಾಲ್ಕು ಐದು ಕುದುರೆಗಳನ್ನ ತಿರಗ್ಯಾಡಿಸಿಕೊಂಡು ಬಂದು, ಹನ್ನೊಂದು ಘಂಟೆ ಆದಕೂಡಲೆ ಪುನಃ ಸ್ನಾನಮಾಡಿ ನಿತ್ಯ

---

* ಝಾಂಸಿ ಸಂಸ್ಥಾನವನ್ನ ಸರಕಾರಕ್ಕೆ ಶೇರಿಸಿಕೊಂಡದ್ದನ್ನು ಕುರಿತು ಇತರ ಸಂಸ್ಥಾನೀಕರು ಯಾವರೀತಿ ತಿಳಕೊಂಡರು ಎಂಬ ವಿಷಯದಲ್ಲಿ ಮೇಜರ್ ಯುಹಾನ್ಸ ಸಾಹೇಬನು ಮುಂದೆ ಬರದಂತೆ ಅಭಿಪ್ರಾಯ ಪಟ್ಟಿರುತ್ತಾನೆ.

"The little Raj of Jhansi had been conspicuous in its loyal attachment and useful services to the British Government. Its absorption by the Suzerain, under the shallow pretence of a "lapse," was a proceeding not only most hateful and offensive in the eyes of all Native Princes and their ministers, but quite unintelligible to them, except on the supposition of bad faith &c. &c." *Retrospect and Prospect of Indian Policy.* *Page* 286.

ಝಾಂಸಿ ಸಂಸ್ಥಾನವನ್ನ ಸರಕಾರಕ್ಕೆ ಶೇರಿಸಿಕೊಂಡಮೇಲೆ ಇತರ ರಾಜರುಗಳ ಮನಸ್ಸು ಯಾವಸ್ಥಿತಿ ಆಗಿರಬಹುದು, ಮತ್ತು ಝಾಂಸಿ ಸಂಸ್ಥಾನದ ಪ್ರಜೆಗಳ ಸ್ಥಿತಿ ಹೇಗೆ ಇರಬಹುದು, ಎಂಬುವದನ್ನ ವಾಚಕರು ಸಹಜವಾಗಿ ಊಹಿಸಬಹುದು. ಸಂಸ್ಥಾನವನ್ನ ಜನಗಳ ಹಿತಕ್ಕೋಸ್ಕರ ಸರಕಾರಕ್ಕೆ ಶೇರಿಸಿಕೊಂಡಿದ್ದರೆ ಇಂಗ್ರೀಜಿ ಆಡಳತದಲ್ಲಿ ಅವರ ಸ್ಥಿತಿ ಯೇನಾಗಿತ್ತು, ಎಂಬ ವಿಷಯದಲ್ಲಿ ಒಬ್ಬ ಗ್ರಂಥಕಾರನು ಬರದಿರುವದೇನಂದರೆ:—

ದಾನವನ್ನು ಕೊಟ್ಟು ಭೋಜನಮಾಡಿ ಅನಂತರ ಮೂರುಘಂಟೆ ಹೊಡೆಯುವವರಿಗೂ ಅಷ್ಟಗಂಧದಿಂದ ಕಾಗದದಮೇಲೆ ಒಂದು ಸಾವಿರದ ನೂರು ರಾಮನಾಮವನ್ನ ಬರೆದು ಇಡುತ್ತಾ ಇದ್ದಳು. ಸಾಯಂಕಾಲ ಆರಂಭಿಸಿಕೊಂಡು ರಾತ್ರಿ ಎಂಟು ಹೊಡಿಯುವ ಪರಿಯಂತರ ಪುರಾಣ ಶ್ರವಣವನ್ನು ಮಾಡುತ್ತಾ ಅದೇಕಾಲದಲ್ಲಿಯೇ ಯಾರಾದರೂ ದರ್ಶನ ತೆಗದು ಕೊಳ್ಳುವವರು ಇದ್ದರೆ, ಅವರಿಗೆ ದರುಶನ ಕೊಡುತ್ತಾ ಇದ್ದಳು. ಪುರಾಣ ಮುಗಿದನಂತರ ಪುನಃ ಸ್ನಾನಮಾಡಿ ದೇವರಪೂಜೆಯನ್ನು ಮಾಡಿ ಬಳಿಕ ಭೋಜನವನ್ನು ಮುಗಿಶಿಕೊಂಡು ಶಯನ ಮಾಡುತ್ತಿದ್ದಳು. ಬಾಯಿ ಸಾಹೇಬಳಿಗೆ ಶ್ರೀಮಹಾಲಕ್ಷ್ಮಿಯಲ್ಲಿ ಅತಿಶಯ ಭಕ್ತಿ ಇದ್ದು, ಪ್ರತಿ ಶುಕ್ರವಾರದಿವಸ ಉಪವಾಸಮಾಡಿ ಆದಿವಸ ಅಸ್ತಮಾನ ಸಮಯದಲ್ಲಿ ಸರೋವರದಲ್ಲಿನ ಶ್ರೀಮಹಾಲಕ್ಷ್ಮೀ ದರ್ಶನಕ್ಕೆ ಹೋಗುತ್ತಿದ್ದಳು.

ಸಂಸ್ಥಾನವನ್ನು ಸರಕಾರಕ್ಕೆ ಸೇರಿಸಿಕೊಂಡ ಕಾರಣ ದರ್ಬಾರಿನ ಎಲ್ಲಾ ಜನಗಳಿಗೂ ನಿರಂತರ ವಿಶ್ರಾಂತಿ ಕೊಡಲ್ಪಟ್ಟಿತ್ತು. ಆದ್ದರಿಂದ ರಾಣೀಸಾಹೇಬಳ ಕಾರಭಾರನ್ನ ಆಕೆಯ ತಂದೆ ಮೋರೋಪಂತ್ ತಾಂಬೆ ಮತ್ತು ಲಕ್ಷ್ಮಣರಾವ್ ಬಾಂಡೆ ಈ ಇಬ್ಬರು ಗೃಹಸ್ತರು ನೋಡುತಿದ್ದರು. ಅರಮನೆಯಲ್ಲಿ ಎಲ್ಲಾ ವೈಭವಶೂನ್ಯತಾ

---

"Upon the extermination of a Native State, the Englishman takes the place of the sovereign, under the name of Commissioner; three or four of his associates displace as many dozen of the Native official aristocracy, while some hundreds of our troops take the place of the many thousands that every Native chief supports. The little court disappears—trade languishes—the capital decays—the people are impoverished—the Englishman flourishes, and acts like a sponge, drawing up riches from the banks of the Ganges, and squeezing them down upon the banks of the Thames." *A Plea for the Princes of India. P.* 67.

ಮದರಾಸ್, ಸರಕಾರದ ಮಾಜಿ ಕೌನ್ಸಲರ್ ಜಾರ್ಜ ಸಲುರ್ವೆ ಎಂಬ ಒಬ್ಬ ಯೂರೋಪಿಯನ್ ಗೃಹಸ್ತನು ಸನ್ 1853 ನೆ ಇಸವಿಯಲ್ಲಿ ಇದನ್ನು ಕುರಿತು ವರ್ಣನೆ ಮಾಡಿದ್ದಾನೆ. ಅದು ಝಾಶಿ ಸಂಸ್ಥಾನಕ್ಕೆ ಎಷ್ಟರಮಟ್ಟಿಗೆ ಸಮ್ಬಂಧಪಡುತ್ತೆ, ಎಂಬುವದನ್ನ ವಾಚಕರು ನೋಡತಕ್ಕದ್ದಾಗಿಧೆ.

ಉಂಟಾಗಿಹೋಗಿ, ರಾಣೀಸಾಹೇಬಳು ದೈನ್ಯಾವಸ್ಥೆಯಿಂದ ತನ್ನ ಕಾಲಕ್ರಮಣ ಮಾಡುತ್ತಾ ಇದ್ದಳು. ಇಂಥಾ ಸ್ಥಿತಿಯಲ್ಲಿರುವಾಗ ಆಕೆಯ ದುಃಖದಮೇಲೆ ಒಂದು ಬರೇಹಾಕುವ ಗೋಸ್ಕರವೋ ಏನೋ ತಿಳಿಯುವದಿಲ್ಲ, ಇಂಥಾ ಹೃದಯ ದ್ರಾವಕವಾದ ಒಂದುಸಂಭವವು ಒದಗಿತು. ಅದು ಈಪ್ರಕಾರ:—

ರಾಣೀಸಾಹೇಬಳಿಗೆ ತನ್ನ ದತ್ತ ಪುತ್ರನಾದ ದಾಮೋದರರಾವ್, ಉರ್ಫ್, ರಾವ್ ಸಾಹೇಬನ ಮೇಲೆ ಅತಿಶಯಪ್ರೀತಿ ಇತ್ತು. ಸನ್ 1855 ನೆ ಇಸವಿಯಲ್ಲಿ ದಾಮೋದರ ರಾಯನಿಗೆ, 7 ನೇ ವರುಷ ವಯಸ್ಸು ಬಂದದ್ದರಿಂದ ಮಾಘಮಾಸದಲ್ಲಿ, ಆತನ ವ್ರತಬಂಧವನ್ನು ಮಾಡುವವಿಚಾರ ಮಾಡಿದಳು. ಪರಂತು, ಆ ಸಮಯದಲ್ಲಿ ಬಾಯಿಸಾಹೇಬಳ ಹತ್ತರ ಸಾಕಾದಷ್ಟು ಖರ್ಚಿಗೆ ದ್ರವ್ಯವಿರಲಿಲ್ಲವಾದ್ದರಿಂದ, ಅವಳು ಮಹಾರಾಜ ಗಂಗಾಧರರಾಯನ ಶಿಲ್ಕು ಹಣದ ಪೈಕಿ ಆರು ಲಕ್ಷ ರೂಪಾಯಿಗಳನ್ನು ದಾಮೋದರರಾಯನ ಹೆಸರಿಗೆ ಸರಕಾರಿ ಖಜಾನೆಯಲ್ಲಿಟ್ಟದ್ದ ಹಣದಲ್ಲಿ, ಒಂದು ಲಕ್ಷ ರೂಪಾಯಿ ಉಪನಯನದ ವೆಚ್ಚದಗೋಸ್ಕರ ಕೊಡಿಸಿಕೊಡಬೇಕೆಂತ ಝಾಂಸಿ ಕಮಿಷ್ನರಿಗೆ, ಒಂದು ಯಾದಿಯನ್ನು ಕಳುಹಿಸಿಕೊಟ್ಟಳು. ಆತನು ಅದನ್ನು ಕುರಿತು ಸರಕಾರದವರಿಗೆ ವಿಚಾರಿಸಿದನು. ಅದರಮೇಲೆ ಸರಕಾರದವರು, ಆ ದ್ರವ್ಯ, ದತ್ತಕ ಹುಡುಗನ ಹೆಸರಿನಲ್ಲಿ ಇಟ್ಟಿರೋಣದರಿಂದ ನಿಮಗೆ ಸಿಕ್ಕಲಾರದು. ಕಾರಣವೇನಂದರೆ, ಮುಂದೆ ಹುಡುಗನು ಪ್ರಾಪ್ತವಯಸ್ಸಿಗೆ ಬಂದಮೇಲೆ, ಆತನು ಆ ದ್ರವ್ಯದಗೋಸ್ಕರ ಇಂಗ್ರೇಜಿ ಸರಕಾರದವರ ಮೇಲೆ ದಾವಾತರುವ ಪಕ್ಷಕ್ಕೆ, ಸರ್ಕಾರದವರು ಆ ಹಣವನ್ನ ಕೊಡಬೇಕಾಗಿ ಬಂದೀತು. ಆದಕಾರಣ ನಿಮಗೆ ಅವಶ್ಯವಿರುವ ಪಕ್ಷಕ್ಕೆ, ನಾಲ್ಕು ಜನ ಜಾಮೀನ್ದಾರರಿಂದ, ಆ ಹುಡುಗನು ದೊಡ್ಡವನಾದಮೇಲೆ ಆ ರೂಪಾಯಿಗಳನ್ನ ಕೇಳುವ ಪಕ್ಷಕ್ಕೆ ಅದನ್ನು ನಾವು ಸರ್ಕಾರಕ್ಕೆ ಕೊಡಲುಳ್ಳವರು, ಎಂತ ಬರೆಸಿ ಕೊಡಬೇಕು, ಎಂಬದಾಗಿ ಉತ್ತರ ಬಂತು. ಕಾಲಗತಿ ಎಷ್ಟು ವಿಚಿತ್ರವಾಗಿದೆ, ನೋಡು ! ಸ್ವತಃ ಝಾಂಸಿ ಸಂಸ್ಥಾನದ ಸ್ವಾಮಿನಿಗೆ ತನ್ನ ಪುತ್ರನ ಉಪನಯನ ಸಮಾರಂಭದ ವೆಚ್ಚದಗೋಸ್ಕರ ಬೇಕಾಗಿರುವ ತನ್ನ ಸ್ವಂತ ಹಣವನ್ನ ತೆಗದುಕೊಳ್ಳುವದಕ್ಕೆ ಹೊಣೆ ಕೊಡಬೇಕಾದ ಪ್ರಸಂಗ ಬರಬೇಕೆ ಹ್ಯಾಂಗೆ ? ಪರಂತು ಉಪಾಯವಿಲ್ಲ. " ಭವಿತವ್ಯಂ ಭವತ್ಯೇವ ಕರ್ಮಣಾ ಮೀದೃಶೀಗತಿಃ " ಈ ಸಾಧು ವಚನವು ಕೇವಲ ಸತ್ಯವಾಗಿಧೆ. ಇದು ಹಾಂಗಿರಲಿ. ರಾಣೀ ಸಾಹೇಬಳು ದೈವಗತಿಯ ಮೇಲೆ ದೃಷ್ಟಿಕೊಟ್ಟು, ಮೋರೋಪಂತ್ ತಾಂಬೆ, ಲಕ್ಷ್ಮೀಚಂದ್ ಸೇಟ್, ಇನ್ನೂ ಇಬ್ಬರು (ಸಾಹುಕಾರು) ಗೃಹಸ್ಥರನ್ನ ಸೇರಿಸಿ ನಾಲ್ಕು ಜನರನ್ನ ಹೊಣೆಕೊಟ್ಟು, ಇಂಗ್ರೇಜಿ ಸರ್ಕಾರದವರ ಕಡೆಯಿಂದ ಒಂದು ಲಕ್ಷ ರೂಪಾಯಿ ತೆಗದುಕೊಂಡು ದಾಮೋದರರಾಯನ ಮೌಂಜೀ ಬಂಧ ಸಮಾರಂಭವನ್ನ ಚೆನ್ನಾಗಿ ಮಾಡಿದಳು.

ಇದು ಹಾಂಗಿರಲಿ, ಈ ರೀತಿಯಾಗಿ ರಾಣೀ ಸಾಹೇಬಳ ಕಾಲಕ್ರಮಣ ನಡೆಯುತ್ತಾ ಇರುವಾಗ ಹಿಂದೂಸ್ಥಾನದ ಇತಿಹಾಸದಲ್ಲಿ (ಸ್ಥಿರವಾಗಿ) ಅಜರಾಮರವಾ

ಗಿರುವ, ಸನ್ 1857 ನೇ ಇಸ್ವಿಯು ಹುಟ್ಟಿ ರಾಣೀಸಾಹೇಬಳಿಗೆ ಅತಿಶಯ ದುಃಖದ ಪ್ರಸಂಗ ಬಂದು ಘಟಿಸಿತು. ಈ ಸಮ್ಬಂಧದಲ್ಲಿ, ಶ್ರೀಮಂತ ದಾಮೋದರರಾವ್ ಸಾಹೇಬನು, ಬರೆದಿಟ್ಟಿರುವ ಬರವಣಿಗೆಯು ಅತ್ಯಂತ ಹೃದಯದ್ರಾವಕವಾಗಿ ಇರೋಣದರಿಂದ ಅದನ್ನು ನಾವು ಇಲ್ಲಿ ಹೇಳದೆ ಬಿಡುವುದಕ್ಕೆ ಆಗುವದಿಲ್ಲ. ಆತನು ಹೇಳುವದೇನಂದರೆ * "ಈ ಪ್ರಕಾರವಾಗಿ ರಾಣೀ ಲಕ್ಷ್ಮೀಬಾಯಿಸಾಹೇಬಳು ಸರ್ವಸಂಗ ಪರಿತ್ಯಾಗಮಾಡಿ, ರಾಜ್ಯದ ಆಶೆಯನ್ನ ತೊರೆದು, ಈಶ್ವರ ಚಿಂತನೆಯಲ್ಲಿ ತನ್ನ ಆಯುಷ್ಯವನ್ನ ನಷ್ಟ ಚರ್ಯದಲ್ಲಿ ದಿವಸ ಕಳೆಯುತ್ತಾ ಇರುವಾಗ, ಆಕೆಯ ದುರ್ದೈವವು ಕಡಮೆಯಾಗದೆ ಕೈತೊಳೆದುಕೊಂಡು ಬೆನ್ನನ್ನು ಹತ್ತಿತು. ಆಕೆಯ ಧ್ಯಾನದಲ್ಲಿ, ಮನಸ್ಸಿನಲ್ಲಿ ಅಥವ ಸ್ವಪ್ನದಲ್ಲಿಕೂಡ ತೋರದೆ ಇದ್ದಂಥ ಮಹತ್ಸಂಕಟವು ಪ್ರಾಪ್ತವಾಗಿಹೋಗಿ ಆಕೆ, ಆಕೆಯ ಮತ್ತು ಆಕೆಯ ಸಂಗಡ ನಮ್ಮ ಸರ್ವಸ್ವವು, ಸುಖವೂ ನಾಶವಾಯಿತು, ಮತ್ತು ಕೊನೆಗೆ ಆಕೆಯ ದೇಹವನ್ನು ಆಹುತಿ ತೆಗದುಕೊಂಡು ನಮಗೆ ಅಜ್ಞಾನ ದೆಶೆಯಲ್ಲಿ ಈ ಜಗತ್ತಿನಮೇಲೆ ಯಾವ ಆಧಾರವನ್ನೂ ಇಡಲಿಲ್ಲ." ಇದು ಹಾಗಿರಲಿ,—ಈ ಬರವಣಿಗೆಯನ್ನ ಓದೋಣದರಿಂದ ಯಾರ ಹೃದಯವು ದ್ರವಿಸದೇ ಇರಲಾರದು ? ಮತ್ತು ಇಂಥಾ ವೃತ್ತಾಂತವನ್ನು ಬರಿಯುತ್ತಿರುವಾಗ ಯಾರ ನೇತ್ರದಲ್ಲಿ ನೀರು ಹರಿಯದೆ ಇದ್ದೀತು ? ಪರಂತು, ನಾವು ಹೃದಯವನ್ನು ಕಠೋರ ಮಾಡಿಕೊಂಡು ಮುಂದಿನ ವೃತ್ತಾಂತವನ್ನು ಬರೆಯಬೇಕಾದ, ಸಂಭವವು ಬಂದಿದೆ. ಅದಕ್ಕೆ ಉಪಾಯವಿಲ್ಲ.

---

* ರಾಣೀ ಸಾಹೇಬಳು ಈ ರೀತಿಯಾಗಿ ತನ್ನ ಕಾಲಕ್ರಮಣಮಾಡುತ್ತಾ ಇರುವಾಗ, ಇಂಗ್ರೇಜಿ ಇತಿಹಾಸಕಾರಕನು ಈ ಸಮ್ಬಂಧವಾಗಿ ಏನು ಬರಿಯುತ್ತಾನೆ ನೋಡು :—

"This (annexation) happened in 1854. The three years which had passed between that date and the period of which I am writing, had in no way reconciled the Rani to a policy which she regarded as unjust to herself, and insulting to the family of her late husband. On the contrary the year 1857 found her breeding over her grief and panting for revenge." *Malleson's History of the Indian Mutiny.*



# ೬ನೇ ಪ್ರಕರಣ.

## (ಜಾನ್ಸಿಯಲ್ಲಿನ ದಂಗೆ.)

(ಸನ 1857 ನೆ ಇಸ್ವಿ ಜೂನ್ ತಿಂಗಳು.)

ಲಾರ್ಡ್ ಡಾಲ್ಹೌಜಿ ಸಾಹೇಬನು, ಸತಾರ, ಜಾನ್ಸಿ ತಂಜಾವರ, ನಾಗಪುರ, ಅಯೋಧ್ಯಾ ಮುಂತಾದ ಅನೇಕ ಸಂಸ್ಥಾನಗಳನ್ನು, ಸರಕಾರಕ್ಕೆ, ಶೇರಿಸಿದ್ದಲ್ಲದೆ, ಉತ್ತರ ಹಿಂದೂಸ್ಥಾನದಲ್ಲಿ ತಾಲ್ಲೋಕುದಾರ್ರಗಳ, ದಕ್ಷಿಣದಲ್ಲಿ ಜಹಗಿರದಾರ್ರು ಮತ್ತು ಇನಾಂದಾರ್ರುಗಳ, ವುತ್ಪನ್ನದ ಮೇಲೂನೂ–ತನ್ನ ಗದಾಪ್ರಹಾರ, ಮಾಡಲು, ಪ್ರಯತ್ನ ಪಟ್ಟನು. ಆದಕಾರಣ, ಸ್ವರಾಜ್ಯ ಸುಖದ, ಉಪಭೋಗವನ್ನು ತೆಗದುಕೊಂಡ ಸರ್ವ ಜನಗಳಿಗೂ ಬಹಳ ವಿಷಾದವು ತೋರಿತ್ತು ಮತ್ತೂ ಹಿಂದೂ ಧರ್ಮಶಾಸ್ತ್ರ ಪ್ರಕಾರವಾಗಿ ದತ್ತ ತೆಗದುಕೊಂಡದ್ದನ್ನ, ಸರಕಾರದವರು ಅಪಾರ್ಥವನ್ನು ಮಾಡಿ ನಮ್ಮ ಧರ್ಮದಮೇಲೆ ಪ್ರವೇಶಪಟ್ಟು, ಮನ್ನಿಸುವದಿಲ್ಲವೆಂತ ತಿಳಕೊಂಡರು. *

ಈ ಕಾರಣದಿಂದ–ಸರ್ವದೇಶದಲ್ಲಿಯೂ ಬ್ರಿಟಿಷ್‌ರಾಜ್ಯದ ರೀತಿಯು ಅಸಮಾಧಾನ ಕಾರಕವಾಗಿ ಹೋಗಿ, ರಾಜಾ ಮತ್ತು ಪ್ರಜಾಮಧ್ಯದಲ್ಲಿನ, ಪ್ರೇಮಭಾವವು ಕಡಮೆ

---

* ಸತಾರ, ಜಾನ್ಸಿ ಮತ್ತು ನಾಗಪುರ ಈ ಸಂಸ್ಥಾನಗಳನ್ನು ಸರಕಾರಕ್ಕೆ ಶೇರಿಸಿಕೊಂಡದ್ದರಿಂದ, ಅದು ಹ್ಯಾಂಗೆ ಪರಿಣಮಿಸಿತು ಯಂಬ ವಿಷಯದಲ್ಲಿ ಒಬ್ಬ ಇಂಗ್ರೇಜಿ ಇತಿಹಾಸಕಾರಕನು ಬರದಿರುವದೇನಂದರೆ.

" In three of these instances, Satara, Nagapur and Jhansi, the Governor General not only terrified the native governing class throughout India with the Spectre of a resistless centralization, but struck at the root of Hindu religion and cut out of Hindu Law its highest and gentlest enactment.

*Dalhousie's Administration of British India. Vol. II. P.* 108.

ಆಗುತ್ತಾ ಹೋಯಿತು ; ಇಂಥಾ ಸ್ಥಿತಿಯಲ್ಲಿರುವಾಗ, ಲೋಕದೃಷ್ಟಿಯಿಂದ ಪೂಜ್ಯರಾಗಿ ಇರುತಿದ್ದ ರಾಜ ಮನೆತನದವರಿಗೆ ಅಮರ್ಯಾದ ಮತ್ತು ಅಪಮಾನವಾಗತಕ್ಕಂಥಾ ಅನೇಕ ಕಾರ್ಯಗಳು * ಸರ್ಕಾರದ ಅಧಿಕಾರಸ್ಥರಿಂದ ಆಕಸ್ಮಿಕವಾಗಿ ಮಾಡಲ್ಪಟ್ಟವು ಆದಕಾರಣ ಸರ್ವಜನಗಳ ಮನಸ್ಸು ನೊಯ್ಯುವದಕ್ಕೆ ಪ್ರಾರಂಭವಾಯಿತು. ಮತ್ತೂ ಆ ರಾಜ್ಯ ಪದ್ಧತಿಯಲ್ಲಿ ಇತರ ದೋಷಗಳು ಶೇರಿಕೊಂಡು ಆ ವ್ಯಾಕುಲವೂ ಗುಪ್ತವಾಗಿ, ತೋರುತ್ತಾಹೋಯಿತು ; ಸನ್ 1856 ನೆ ಇಸ್ವಿಯಲ್ಲಿ ಲಾರ್ಡ್ ಡಾಲ್ಹೌಜಿ ಸಾಹೇಬನು ಹಿಂದೂಸ್ತಾನದ ರಾಜ್ಯಸೂತ್ರವನ್ನ ಹೊಸ ಗೌವರ್ನರ್ ಜನರಲ್ ಲಾರ್ಡ್ ಕ್ಯಾನಿಂಗ್ ಸಾಹೇಬನ ಕೈಯಲ್ಲಿ ಕೊಟ್ಟು ತನ್ನ ಸ್ವದೇಶಕ್ಕೆ ಪ್ರಯಾಣಮಾಡಿದನು. ಆ ಸಮಯದಲ್ಲಿ ಸರ್ವತ್ರ ಸಮಾಧಾನವು ತೋರುತ್ತಾ ಇತ್ತು. ಯಾವದಿಕ್ಕಿನಲ್ಲಿ ಆಗಲಿ ಹೊಸ ಶತ್ರು ಹುಟ್ಟಿ ಯುದ್ಧದ ಪ್ರಸಂಗ ಬಂದೀತು ಎಂಬ ಯೋಚನೆ ಇರಲಿಲ್ಲ. ಆದರೆ ಲಾರ್ಡ್ ಡಾಲ್ಹೌಜಿ ಸಾಹೇಬನು ಹಿಂದೂಸ್ಥಾನದ ಮಧ್ಯದಲ್ಲಿ ನಡಿಸಿದ, ಪ್ರತಾಪದ ಫಲವು ಸುಖಕರವಾದೀತು ಎಂಬ ಆಶೆಯು ಲಾರ್ಡ್ ಕ್ಯಾನಿಂಗ್ ಸಾಹೇಬನಿಗೆ ಮಾತ್ರ ಹೆಚ್ಚಾಗಿ ಇರಲಿಲ್ಲ. ಹಿಂದೂಸ್ಥಾನದ ಪ್ರತಿನಿಧಿ ಪದವಿಯನ್ನ ಸ್ವೀಕಾರ ಮಾಡುವದಕ್ಕೆ ಕೋರ್ಟ್ ಆಫ್ ಡೈರೆಕ್ಟರುಗಳ ನಿರೂಪವನ್ನ ತೆಗದುಕೊಂಡ ವೇಳೆಯಲ್ಲಿಯೆ ಆತನು ಹೇಳಿರುವದೇನಂದರೆ ;—"ಹಿಂದೂಸ್ಥಾನದಲ್ಲಿ ನನ್ನ ಆಡಳತವು ಶಾಂತತೆಯಾಗಿರಬೇಕು ಎಂತ ನನ್ನ ಅಪೇಕ್ಷೆ ಇಧೆ. ಆದರೆ ಅಲ್ಲಿನ ನಿರ್ಮಲಾಕಾಶ ಮಧ್ಯದಲ್ಲಿ ಅಂಗೈ ಅಗಲದಷ್ಟು ಒಂದು ಸಣ್ಣ ಗ್ರಹವು ವುತ್ಪನ್ನವಾಗಿ, ಅದು ಇದ್ದಕ್ಕಿದ್ದಹಾಂಗೆ ಸರ್ವ ಆಕಾಶ ಮಂಡಲ

---

* ಈ ಮಾತು ಪ್ರಸಿದ್ಧವಾಗಿ ಇದೆ, ನಾಗಪುರದ ರಾಜ ಮನೆತನದಲ್ಲಿ ಮಹಾರಾಣಿ ವಾಂಕಿಬಾಯಿ ಮತ್ತು ಅನಪೂರ್ಣಾಬಾಯಿ, ಮುಂತಾದ ರಾಜಸ್ತ್ರಿಯರಿಗೆ ಅಲ್ಲಿನ ಇಂಗ್ರೇಜಿ ಅಧಿಕಾರಿಗಳು ಯಾವರೀತಿಯಾಗಿ ನಡಕೊಂಡರು, ಅಲ್ಲಿನ ರಾಜನ ಸ್ವತ್ತುಗಳನ್ನ ತುಂಬಿದ ಪ್ಯಾಟೆಯಲ್ಲಿ ಯಾವರೀತಿಯಾಗಿ ಮಾರಾಟಕ್ಕೆ ಇಟ್ಟರು ಮತ್ತು ಅಲ್ಲಿನ ಅಮೌಲ್ಯವಾದ ಆಭರಣಗಳನ್ನು ವಿಕ್ರಯ ಮಾಡುವದಕ್ಕೋಸ್ಕರ ಸರಕಾರದ ಅಪ್ಪಣೆ ಪ್ರಕಾರ, ಸನ್ 1855 ನೆ ಇಸ್ವಿ ಅಗಟೋಬರ್ ತಾರೀಖು 12 ರಲ್ಲಿ ಕಲ್ಕತ್ತಾದ ಹ್ಯಾಮಲ್‌ಟನ್ ಮತ್ತು ಕಂಪನೀ ಕಡೆಯವರು ಹ್ಯಾಂಗೆ ಪ್ರಶಿದ್ಧ ಪಡಿಸಿದರು ಎಂಬುವದನ್ನು ಹೊಸದಾಗಿ ಹೇಳಬೇಕಾದ್ದೇನೂ ಇಲ್ಲಾ. ತಂಜಾವರದ ರಾಜನ ಸ್ವತ್ತನ್ನ ತೀರ್ಮಾನ ಮಾಡುವಾಗ, ಅಲ್ಲಿನ ರಾಣಿಯಸಂಗಡ ಮದರಾಸು ಸರಕಾರದವರು ಯಾವರೀತಿ ನಡದುಕೊಂಡರೊ ಎಂಬುವದನ್ನು ಕುರಿತು ಮಿ. ಹಿಕಿ ಎಂಬುವನು ವರ್ಣನೆ ಮಾಡಿ ಇದ್ದಾನೆ. "The acts of the Madras Government on this occasion might be declared to use the mildest expression, shameful." ಅಯೋಧ್ಯಾ ಪ್ರಾಂತ್ಯವನ್ನ ಸರಕಾರಕ್ಕೆ ಶೇರಿಸಿಕೊಂಡಮೇಲೆ ಅಲ್ಲಿಗೆ ನೇಮಕ ಮಾಡಲ್ಪಟ್ಟ ಚೀಫ್‌ಕಮಿಷನರ್ ಕಾಹುರ್ಲೆ ಜಾಕ್ಸನ್ ಸಾಹೇಬನು ರಾಜ

ವನ್ನ ವ್ಯಾಪಿಸಬಹುದು ಮತ್ತೂ ಅದು ಒಂದೇ ಉಸರಿಗೆ ಒಡದು, ನಮ್ಮನ್ನ ನಿರಂತರ ವಾಗಿ ದುರ್ದೆಶೆಗೆ ತಂದು ಬಿಟ್ಟೀತು, ಎಂಬುವದನ್ನ ನಾನು ಲಕ್ಷ್ಯದಲ್ಲಿ ಇಟ್ಟು ಕೊಂಡು ಇರಬೇಕು." ಈ ಆತನ ಅಭಿಪ್ರಾಯವು ಸ್ವಲ್ಪ ಕಾಲದಲ್ಲಿಯೇ ಪ್ರತ್ಯಕ್ಷಕ್ಕೆ ಬಂದ ಪ್ರಸಂಗವು ಬಹಳ ದುಃಖಕರವಾಗಿ ಇಧೆ.

ಸನ್ 1857 ನೆ ಇಸ್ವಿಯು ಪ್ರಾರಂಭವಾಯಿತು. ಹಿಂದೂಸ್ಥಾನದಲ್ಲಿ ಹುಟ್ಟಿದ ಅಸಮಾಧಾನವು ಹೆಚ್ಚುತ್ತಾ ಹೆಚ್ಚುತ್ತಾ ಬಂತು. ಈ ಸ್ಥಿತಿಯಲ್ಲಿರುವಾಗಲೇ ಆಕಳ ಮತ್ತು ಹಂದಿಯ ಚರಬಿ ಹಚ್ಚಿ ಮಾಡಿದ ನೂತನವಾದ ಮದ್ದಿನ ತೋಟೆಗಳನ್ನು, ಉಪಯೋಗಿಸಬೇಕೆಂತ ಅಪ್ಪಣೆ ಆಗಿಧೆ ಎಂಬದಾಗಿ ಬ್ರಿಟಿಷ್ ಸೈನ್ಯದಲ್ಲಿ ವರ್ತಮಾನವು ಹರಡಿಕೊಂಡಿತು. ಈ ಮಾತು ಡಂ ಡಂ ಎಂಬ ಊರಿನಲ್ಲಿ ಪ್ರಥಮತಃ ಪ್ರಸಿದ್ಧವಾಯಿತು. ಆದಕಾರಣ ಬ್ರಿಟಿಷ್ ಸೈನ್ಯದಲ್ಲಿ ಹಿಂದು, ಮುಸಲ್ಮಾನ್ ಜನಗಳಿಗೆ ಮನಸ್ಸಿನಲ್ಲಿ ಸಂತಾಪ ಹುಟ್ಟಿ, ಇಂಗ್ರೇಜಿ ಸರ್ಕಾರದವರು ತಮ್ಮ ಧರ್ಮವನ್ನ ಕೆಡಿಸಲು ಪ್ರಯತ್ನ ಮಾಡುತ್ತಾ ಇದ್ದಾರೆ ಎಂಬುವದಾಗಿ ತಿಳಿದುಕೊಂಡರು. ಈ ತಿಳುವಳಿಕೆಯನ್ನು ತಪ್ಪಿಸುವಗೋಸ್ಕರ ಬ್ರಿಟಿಷ್ ಅಧಿಕಾರಿಗಳು ಮಾಡಿದ ಪ್ರಯತ್ನವು, ಏನೂ ಉಪಯೋಗವಾಗದೇ, ಪುನಃ, ಹಿಂದು ಮತ್ತು ಮುಸಲ್ಮಾನರ ಮನಸ್ಸಿನಲ್ಲಿ ಸರಕಾರದ ವಿಷಯವಾಗಿ ದ್ವೇಷ ಬುದ್ಧಿಯನ್ನ ಹೆಚ್ಚಾಗಿ ತೋರಿಸುವದಕ್ಕೆ ಕಾರಣವಾಯಿತು. ಅನೇಕ ಸಂಸ್ಥಾನಗಳೂ ಮತ್ತೂ ಜಹಗೀರಿಗಳನ್ನ ಸರ್ಕಾರಕ್ಕೆ ಸೇರಿಸಿಕೊಂಡಿದ್ದರಿಂದ ಅಲ್ಲಿನ ಜನಗಳ ಮನಸ್ಸು ಬಹಳ ಅಸಮಾಧಾನವಾಗಿ ಇತ್ತು. ಮತ್ತು ಅದೇ ಸಂಧಿಯಲ್ಲಿ ಎಲ್ಲಾ ಕಡೆ ಸೈನ್ಯ ಮಧ್ಯದಲ್ಲಿ ರಾಜ ದ್ರೋಹದ ಘೋಳಿಯು ಮೆಲ್ಲಮೆಲ್ಲನೆ ವ್ಯಾಪಿಸುತ್ತಾ ಹೋಗಿ, ಅವರು ಕ್ರೂರರೀತಿಯಿಂದ ದಂಗೆ ಮಾಡಲಿಕ್ಕೆ ಪ್ರವರ್ತರಾಗಿದ್ದಾರೆಂಬ ಸಂಗತಿಯು, ಅಧಿಕಾರಿಗಳಿಗೆ ಚನ್ನಾಗಿ ನಂಬಿಕೆ ಹುಟ್ಟಿತು. ಪ್ರಥಮತಃ ಬರಹಾಂಪುರದಲ್ಲಿ 19 ನೆ ಪಟಾಲಂ ನೇಟಿವ್ ಪಾಯದಳದವರು ತಮ್ಮ ನಿಜವಾದ ಸ್ವರೂಪವನ್ನು ತೋರಿಸಿಕೊಂಡರು. ಈ ವರ್ತಮಾನವು ನಾಲ್ಕು ಕಡೆಯಲ್ಲಿಯೂ ಪ್ರಸಿದ್ಧವಾದ ಕೂಡಲೆ ಸರ್ವ ಸ್ಥಳದಲ್ಲಿಯೂ ಹೊಗೆಯಾಡುತ್ತಿದ್ದ ದ್ವೇಷಾಗ್ನಿಯು ಒಂದೇಸಲ ಎದ್ದು ಅದರ ತೀಕ್ಷ್ಣದ ಜ್ವಾಲಾ ಪ್ರಕಾಶವಾಗುತ್ತಾ ಬಂತು. ಸನ್ 1857 ನೆ ಏಪ್ರಿಲ್ 24 ನೇ ದಿವಸ ಮಿರತ'ನಲ್ಲಿನ 3 ನೇ ನೇಟಿವ್ ಸವಾರರು ಸರ್ಕಾರಕ್ಕೆ ವಿರುದ್ಧವಾಗಿ ಹೋಗಿ ಮದ್ದಿನ ತೋಟೆಯನ್ನ ಉಪಯೋಗಿಸಲು ತಿರಸ್ಕರಿಸಿದರು. ಆದಕಾರಣ, ಅಲ್ಲಿ ಬಹಳ ಜಗಳವು ನಡೆದು, ಅಲ್ಲಿನ ಸರ್ವ ಸೈನ್ಯವೂ ಒಂದಾಗಿ ಹೋಗಿ, ಅದರಲ್ಲಿ ಮುಖ್ಯಸ್ಥರಾದ

---

ಮನೆತನದಲ್ಲಿ ಜನಗಳ ಸಂಗಡ ಯಾವ ವಿಧವಾದ ನಡತೆ ತೋರಿಸಿಕೊಂಡ ನೆಂಬುವದರ ಪ್ರತ್ಯಕ್ಷ ದೃಷ್ಟಾಂತರವು ಲಾರ್ಡ್ಡು ಕ್ಯಾನಿಂಗು ಸಾಹೇಬನು ಸನ್ 1857 ನೆ ಇಸ್ವಿ ಅಗಟೋಬರ್ ತಾರೀಖು 19 ರಲ್ಲಿ ಆತನಿಗೆ ಕೊಟ್ಟ ಹುಕುಂನಿಂದ ಸ್ಪಷ್ಟವಾಗುತ್ತದೆ.

ವರು ದಂಗೆಯ ನಿಶಾನೆಯನ್ನು ನಿಲ್ಲಿಸಿದರು. ಈ ಸೈನ್ಯವು ಮೀರತ್‌ನಲ್ಲಿ, ಮೇ ತಿಂಗಳಲ್ಲಿ ಭಯಂಕರವಾದ ಕೃತ್ಯವನ್ನು ಮಾಡಿ, ಬ್ರಿಟಿಷ್ ರಾಜ್ಯಸತ್ವವನ್ನು ತೂಗಾಡಿಸಿ ಬಿಟ್ಟು, ಡಿಳ್ಳಿ ಕಡೆಗೆ ಪ್ರಯಾಣ ಮಾಡಿದರು. ಅಲ್ಲಿಯೂ ಅವರಿಗೆ ಎಲ್ಲಾ ಅನುಕೂಲವಾಯಿತು.

ಮೀರತ್ ಮತ್ತು ಡಿಳ್ಳಿಯಲ್ಲಿನ ದಂಗೆಯ ವರ್ತಮಾನವು ಸರ್ವ ಸ್ಥಳದ ಸೈನ್ಯದ ಮಧ್ಯದಲ್ಲಿ ಹರವಿ ಹೋಗಿ, ಅಲ್ಲಲ್ಲಿ ಭಯಂಕರವಾದ ಚಿನ್ಹ ತೋರುತ್ತಾ ಬಂತು. ಆ ಕೂಡಲೆ, ಸರ್ವ ಸೈನ್ಯವೂ ವಿರುದ್ಧವಾಗಿ, ನಾಲ್ಕು ಕಡೆಗಳಿಂದಲೂ, ಯುದ್ಧ ವರ್ತಮಾನವು ಬರಲಿಕ್ಕೆ ಪ್ರಾರಂಭವಾಯಿತು. ಫಿರೋಜ್‌ಪುರ, ಬರೇಲಿ, ಮುರಾದಬಾದು, ಷಹಜಾನ್‌ಪುರ, ಕಾನ್‌ಪುರ, ಲಕ್ನೌ ಮುಂತಾದ ಸ್ಥಳಗಳಲ್ಲಿ ದಂಗೆ ಪ್ರಾರಂಭವಾಯಿತು. ಇಂಗ್ರೇಜಿ ಸರ್ಕಾರದವರ ನಿರ್ದಯದಿಂದ ಶ್ರೀಮಂತ ನಾನಾಸಾಹೇಬ ಪೇಶ್ವೆಯಂಥ ರಾಜಪುರುಷನು, ಡಿಳ್ಳಿ ಬಾದಷಹನು, ಅಯೋಧ್ಯೆಯ ನವಾಬನೂ ಮುಂತಾದ ಮಂಡಲಿಯವರು ಆಗಲೇನೇ ದಂಗೆ ಖೋರರಿಗೆ ಅನುಕೂಲರಾಗಿ ಹೋಗಿ ಅವರಿಗೆ ತಾವು ಮುಂದಾಳುಗಳಾಗಿ ನಿಲ್ಲಲು ಒಪ್ಪಿಕೊಂಡರು. ವಸ್ತುತಃ, ಇದು ಶಿಪಾಯಿಗಳ ದಂಗೆಯಾಗಿದ್ದದ್ದರಿಂದ ಅದಕ್ಕೆ ಅಷ್ಟು ಮಹತ್ವವು ಬಂದೀತು ಎಂತ ಯಾರ ಮನಸ್ಸಿನಲ್ಲಿಯೂ ತೋರಿರಲಿಲ್ಲ. ಪರಂತು ಅವರಿಗೆ ದೀನ ಸ್ಥಿತಿಗೆ ತರಲ್ಪಟ್ಟಿದ್ದ ರಾಜ ಮನೆತನದ ಅನೇಕ ಜನಗಳ ಸಹಾಯವು ಶಿಕ್ಕಿದ ಕಾರಣ, ಒಂದೇಸಲ ಶಿಪಾಯಿ ದಂಗೆಗೆ ರಾಜಕೀಯ ಸ್ವರೂಪ ಪ್ರಾಪ್ತವಾಗಿ ಅದು ಬಹಳ ಭಯಂಕರವಾಗಿ, ಇತಿಹಾಸ ಪ್ರಸಿದ್ಧವಾಯಿತು ಯೆಂತ ಹೇಳೋಣದರಿಂದ ಏನೂ ಬಾಧಕ ಬರಲಾರದು. *

ಅದು ಹಾಗಿರಲಿ. ಮೀರತ್ ಮತ್ತು ಡಿಳ್ಳಿಯಲ್ಲಿ ನಡೆದ ಭಯಂಕರ ವರ್ತಮಾನವು, ಝಾನ್ಸಿಗೆ ಬಂದು ತಲ್ಪಿತು. ಆವೇಳೆಯಲ್ಲಿ, ಝಾನ್ಸಿಯಲ್ಲಿ ಬಂಗಾಳ ನೇಟಿವ್ ಪಾಯದಳದ 12 ನೇ ಪಟಾಲಂ, 14 ನೇ ಇರ್ರೆ ಗ್ಯಾಲಿರ್ ಸವಾರರ ತುಕಡಿ, ಮತ್ತು

---

* ಸನ 1857 ನೆ ಇಸ್ವಿ ಅಕ್ಟೋಬರನಲ್ಲಿ ದಂಗೇ ವಿಷಯವಾಗಿ ಸರ್ ಹ್ಯೂ ರೋಜ್ ಸಾಹೇಬನು ಹೇಳಿರುವದೇನೆಂದರೆ :—

"The more events enroll themselves the more they seem to show that the revolt in India was not *purely* a Military one, but that the origin of the trouble was *in some degree* an out-come of a political conspiracy at the head of which were the king of Delhi, the king of Oudh, and Nana Saheb, all three candidates for kingdom."

ಒಂದು ತೋಪಖಾನೆ, ಇಷ್ಟುಮಾತ್ರ ಇತ್ತು. † ಈ ಸೈನ್ಯದಮೇಲೆ ಕ್ಯಾಪಟನ್ ಡನ್‌ಲಾಫ್ ಸಾಹೇಬನು ಮುಖ್ಯಾಧಿಕಾರಿಯಾಗಿದ್ದನು. ಝಾನ್ಸೀ ಕಮಿಷನರ್ ಮತ್ತು ಸರ್ವ ರಾಜಕೀಯ ವುದ್ಯೋಗದಲ್ಲಿ ಕ್ಯಾಪ್ಟನ್ ಅಲೆಕ್ಸಾಂಡರ್ ಕೀನ್ ಸಾಹೇಬನು ಅಧಿಕಾರಿಯಾಗಿದ್ದನು. ಮೇ ತಿಂಗಳಲ್ಲಿ ಝಾನ್ಸಿಯಲ್ಲಿನ ಸೈನ್ಯದಲ್ಲಿ ಗುಪ್ತ ರೀತಿಯಿಂದ ಏನೋ ಮಸಲತ್ತು ನಡದಿತ್ತು. ಪರಂತು ಅದರ ವಿಷಯವಾಗಿ ಹೊರಗೆ ಏನೂ ಕಾಣಿಸಿಕೊಂಡಿರಲಿಲ್ಲ. ಸರ್ವ ಸ್ಥಳದ ಸೈನ್ಯವು ವಿರುದ್ಧ ವಾಗಿದ್ದಾಗ್ಯೂ ಝಾನ್ಸಿಸೈನ್ಯವು ಎಂದಿಗೂ ವಿರೋಧ ವಾಗಲಾರದು ಎಂಬದಾಗಿ ಅಲ್ಲಿನ ಯುರೋಪಿಯನ್ ಅಧಿಕಾರಿಗಳಿಗೆ ಸಂಪೂರ್ಣ ನಂಬಿಕೆ ಇತ್ತು. ಝಾನ್ಸಿಗೆ ಸ್ವಲ್ಪ ದೂರದಲ್ಲಿ ನೌಗಾಂಗ್ ಎಂಬ, ಒಂದು ಲಷ್ಕರ್ ಇರತಕ್ಕ, ಸ್ಥಳವಿಧೆ. ಅಲ್ಲಿ ಸೈನ್ಯದ ಮಧ್ಯದಲ್ಲಿ ಬಂದೂಕಿನ ತೋಟೆಯ ಸಮ್ಮಂಧವಾದ ವರ್ತಮಾನವು ಪ್ರಸಿದ್ಧವಾಗಿ ಹೆಚ್ಚುಕಡಮೆ ನಡೆಯುವ ಸಂಭವವು ತೋರಿಬಂತು. ಆದ್ದರಿಂದ ಅಲ್ಲಿನ ಲಷ್ಕರ್ ಅಧಿಕಾರಿಗಳು ವಿಶೇಷವಾಗಿ ನಿರ್ಬಂಧ ಮಾಡಲು ವುದ್ಯುಕ್ತರಾದರು. ಇದನ್ನುನೋಡಿ ಝಾನಸಿ ಅಧಿಕಾರಿಗಳಿಗೆ ಬಹಳ ಆಶ್ಚರ್ಯವು ತೋರಿತು. ಇದಕ್ಕೆ ಕಾರಣಇಷ್ಟೆ. ಝಾನಸಿ ಸಂಸ್ಥಾನದ ಸಕಲಸೈನ್ಯವು ತಮ್ಮ ಅಪ್ಪಣೆಯಲ್ಲಿದ್ದಾರೆ. ಆದಕಾರಣ ಯಾವ ರೀತಿಯಾದ ವಿಶೇಷ ನಿರ್ಬಂಧವುಮಾಡತಕ್ಕ ಅವಶ್ಯಕವಿಲ್ಲವೆಂಬದಾಗಿ ಅವರ ಸಂಪೂರ್ಣ ತಿಳುವಳಿಕೆಯಾಗಿತ್ತು. ಝಾನ್ಸಿ ಕಮಿಷನರು, ಕ್ಯಾಪ್ಟನ್ ಸ್ಕೀನ್, ಡೆಪ್ಟಿ ಕಮಿಷನರ್ ಕ್ಯಾಪ್ಟನ್ ಗಾರ್ಡನ್, ಮತ್ತು ಸೈನ್ಯಾಧಿಪತಿ ಕ್ಯಾಪ್ಟನ್ ಡನ್ಲಾಪ್ ಈ ಮೂರು ಜನ ಅಧಿಕಾರಿಗಳೂನೂ ಏಕ ಮತದಲ್ಲಿ ನಡಿಯುತ್ತಿದ್ದರು. ಸೈನ್ಯವು ವಿರೋಧವಾಗಿ ತಮ್ಮಮೇಲೆ ತಿರುಗಿ ಬಿದ್ದೀತೆಂಬ ಸಂಶಯವು, ಅವರಿಗೆ ಸ್ವಲ್ಪವೂ ಹುಟ್ಟಲಿಲ್ಲ. ತಾರೀಖು 18ನೇ ದಿವಸ ಕ್ಯಾಪ್ಟನ್ ಸ್ಕೀನ್ ಸಾಹೇಬನು ಸರ್ಕಾರದವರಕಡೆಗೆ ಮಾಡಿದ ವಿಜ್ಞಾಪನಾ ಪತ್ರಿಕೆಯಲ್ಲಿ ಬರದಿರುವದೇನಂದರೆ ;—" ಝಾನಸಿ ಸಮ್ಮಂಧವಾಗಿ ಭಯಪಡುವದಕ್ಕೇನೂ ಕಾರಣ ತೋರುವದಿಲ್ಲ. ಇಲ್ಲಿನ ಸೈನ್ಯವು ಧೃಢ ಮನಸ್ಸಿನಲ್ಲಿಧೆ. ಅವರಿಗೆ ಮೀರತ್ ಮತ್ತು ಡಿಳ್ಳಿಯಲ್ಲಿನ ನಡದ ಭಯಂಕರವಾದ ಕೃತ್ಯದ ವಿಷಯದಲ್ಲಿ ಅಪರಿಮಿತವಾಗಿ ಶಿಟ್ಟು ಬಂದಿಧೆ. ಇಲ್ಲಿನ ಸೈನ್ಯದಮೇಲೆ ಕ್ಯಾ

---

† ಸೈನ್ಯದ ಸಂಖ್ಯೆ ಕೆಳಗೆ ಬರದಂತೆ ಇರುವದು :—

" Detail of Foot Artillery—Europeans none; Natives, 27. Wing of the 12th N. I.—Europeans, 6; Natives, 522. Headquarters and wing of the 14th Irregular Calvary—Europeans, 5; Natives, 332, In all—11 Europeans to 881 Natives."

*The Indian Empire II. Vol.* 304.

ಪ್ಟನ್ ಡನ್ ಲಾಪ್' ಸಾಹೇಬನು ಯೋಗ್ಯನಾದ ಅಧಿಕಾರಿಯಾಗಿರೋಣದ್ದರಿಂದ, ಅವನಿಗೆ ಶಿಪಾಯಿಗಳು ಯಾವ ರೀತಿಯಾಗಿ ಆಚರಿಸುತ್ತಾ ಇದ್ದಾರೆಂಬುವದು ಚನ್ನಾಗಿ ತಿಳಿಯುತ್ತಾ ಇಧೆ. ಆದಕಾರಣ, ಈ ಸೈನ್ಯದಲ್ಲಿ, ಏನಾದರೂ ಹೆಚ್ಚುಕಡಿಮೆ ಕೆಲಸವು ನಡಧೀತು ಎಂತ ನನಗೆ ಅನುಮಾನವು ಶುದ್ಧಾಂಗ ಕಾಣುವದಿಲ್ಲ. ಪ್ರಕೃತ ಬುಂದೇಲ ಖಂಡದಲ್ಲಿನ ಚಿಕ್ಕ ಚಿಕ್ಕ ರಾಜರು ಮತ್ತು ಸಂಸ್ಥಾನಿಕರ ವಿಷಯವಾಗಿ ಯೋಚನೆ ಮಾಡಿದರೆ, ಈಗ್ಯೆ 14 ವರುಷಗಳ ಹಿಂದೆ ನಡೆದ ದಂಗೆಯಲ್ಲಿ, ಅವರ ಚೇಷ್ಟೆಯನ್ನೆಲ್ಲಾ ನಿಲ್ಲಿಸಿಬಿಟ್ಟಿಧೆ. ಈಗ ದಂಗೆಯೆಂತ ಹೇಳಿದ ಕೂಡಲೆ ಅವರ ಮೈಮೇಲೆ ಮುಳ್ಳು ನಿಂತುಕೊಳ್ಳುತ್ತದೆ ಎಂಬುವದು ಕಂಡು ಬರಬಹುದು. ಓರ್ಛಾ, ಛತ್ರಪುರ, ಮತ್ತು ಅಜೇಗಡ ಸಂಸ್ಥಾನದ ರಾಜರುಗಳು, ಕೇವಲ ಚಿಕ್ಕಹುಡುಗರಾಗಿದ್ದಾರೆ. ದುಭಾ ಸಂಸ್ಥಾನದ ರಾಜನನ್ನ ಬಳ್ಳೇ ನಿರ್ಬಂಧದಿಂದ ಬ್ರಹ್ಮಾವರ್ತಕ್ಕೆ ಕಳುಹಿಸಿ ಕೊಟ್ಟಿಧೆ. ಶಿವಥರ್ ರಾಜನಿಗೆ ಹುಚ್ಚು ಹಿಡಿದು, ಅಲ್ಲಿನ ಕಿಲ್ಲೆಯಲ್ಲಿ, ಶೆರೆಮನೆಯಲ್ಲಿ ಬಿದ್ದಿದ್ದಾನೆ. ಉಳಿದ ಪನ್ನಾ ಮತ್ತು ಚರ್ಖಾರಿ ಸಂಸ್ಥಾನದ ರಾಜರುಗಳು ಸಾಧಾರಣವಾದ ಹೆಸರು ತೆಗೆದುಕೊಳ್ಳಬಹುದಾದವರಾಗಿದ್ದಾರೆ ; ಪರಂತು, ಅವರು ಇಂಥಾ ಸಂದರ್ಭದಲ್ಲಿ ಪ್ರತ್ಯೇಕವಾಗಿರತಕ್ಕವರಾಗಿದ್ದಾರೆ. ಈ ರೀತಿಯಾಗಿ, ಈ ಪ್ರಾಂತದಲ್ಲೆಲ್ಲಾ ಸುರಕ್ಷಿತವಾಗಿಧೆ ಎಂತ ನನಗೆ ಸಂಪೂರ್ಣ ನಂಬಿಕೆ ತೋರುತ್ತದೆ. ನಾನು ಇಲ್ಲಿಯ ಜನಗಳ ಮೇಲೆ, ವಿಶ್ವಾಸವಿಟ್ಟು ನಡಕೊಳ್ಳುವದರಿಂದ, ಅವರು ನನ್ನ ಸಂಗಡ ಸರಿಯಾಗಿದ್ದಾರೆಂತ, ನನ್ನ ತಿಳುವಳಿಕೆಯಾಗಿದೆ." ತಾರೀಖು 30ನೇ ಮೇ ದಿವಸ ಆತನು ಪುನಃ ನಂಬಿಕೆಯಿಂದ ಬರದ್ದೇನಂದರೆ ;— "ಇಲ್ಲಿ ಸರ್ವತ್ರ ಶಾಂತತೆ ಇಧೆ ; ಸೈನ್ಯವು ಕೇವಲ ಧೃಡ ಮನಸ್ಸಿನಲ್ಲಿಧೆ ; ಆದರೆ, ಯಾವಾಗ್ಯೂ ಸರ್ಕಾರದವರ ಸಂಗಡ ಬಳ್ಳೇ ರೀತಿಯಿಂದ ನಡೆದುಕೊಳ್ಳದೆ ಇದ್ದ ಕೆಲವು ದ್ರವ್ಯಸ್ತರಾದ ಠಾಕೂರ್ ಮುಂತಾದ ಜನಗಳು ಸಧ್ಯದಲ್ಲಿ ಅಸಂತುಷ್ಟರಾಗಿ, ಏನಾದರೂ ಗಡಿಬಿಡಿ ಮಾಡೋಣವೆಂತ ಕನವರಿಸುತ್ತಾ ಇದ್ದಾರೆ. ಆದರೆ, ಅತ್ತಕಡೆ ಜಯದ ವರ್ತಮಾನವು ಇತ್ತಲಾಗಿ ಬಂತು, ಅಂದರೆ ಅವರ ಕನವರಿಕೆಯಲ್ಲಾ ಶುದ್ಧಾಂಗ ನಿಂತುಹೋಯೀತು, ಎಂತ ನನಗೆ ತುಂಬಾ ನಂಬಿಕೆಇಧೆ." ಜೂನ್ ತಾರೀಖು 3 ನೇ ದಿವಸ ಆತನು ಪುನಃ ಬರದಿದ್ದೇನಂದರೆ ; "ಈ ವರಿಗೆ ನಾವು ಸರ್ವರೂ ಸುರಕ್ಷಿತವಾಗಿದ್ದೇವೆ. ಕುಂಚ ಊರಿನಮೇಲೆ ಪಾನ ಠಾಕುರ್ ಜನಗಳು, ಹಲ್ಲಾ ಮಾಡುವರಾಗಿದ್ದಾರೆಂತ ಸೋಮವಾರದ ದಿವಸ ರಾತ್ರೆ ನಾನು ಕೇಳಿದೆನು. ಆಗ ನಾನು ಮಧ್ಯರಾತ್ರಿ ಯಲ್ಲಿಯೇ. ಡನ್‌ಲಾಫ್' ಸಾಹೇಬನನ್ನ ಕರಿಶಿಕೊಂಡು, ಆ ಗ್ರಾಮದ ಸಂರಕ್ಷಣೆ ಗೋಸ್ಕರ, ಶಿಪಾಯಿಗಳ ಬಂದು ತುಕಡಿಯನ್ನು ಕಳುಹಿಸಿ ಕೊಡಬೇಕೆಂತ ಕೇಳಿದನು. ಆಪ್ರಕಾರ, ಬೆಳಿಗ್ಯೆ 8 ಘಂಟೆ ಹೊಡಿಯುತ್ತಲೆ, ಪಾಯದಳ ಮತ್ತು ಕುದುರೇ ಸವಾರರ ಬಂದು ತುಕಡಿಯನ್ನ ಬಹಳ ವುತ್ಸವದಿಂದ ಕಳುಹಿಸಿದ್ದಾಯಿತು. ಅವರು ರಾತ್ರೆ 7 ಘಂಟೆ ಹೊಡಿಯುತ್ತಲೆ ಅಲ್ಲಿಗೆ ತಲ್ಪಿದರು ; ಪರಂತು, ಈ ವರ್ತಮಾನವು ಅಲ್ಲಿನ ಠಾಕೂರು ಜನಗಳಿಗೆ ತಿಳಿದಕೂಡ್ಲೆ ಅವರ ಸುದ್ದಿಯೆ

ಇಲ್ಲದೆಹೋಯಿತು. ಸಧ್ಯ ಈ ದಂಗೆಯು ಸರ್ವತ್ರ ವ್ಯಾಪಿಸಿದೆ ಎಂತ ಲೋಕಮತವಾಗಿ ಇರೋಣದರ ವಿಷಯದಲ್ಲಿ ನಾನು ಹೇಳತಕ್ಕ ದ್ದಿಷ್ಟೆ. ಝಾನಸಿಯಲ್ಲಿ ಜನಗಳು ಸ್ಥಿರ ಮನಸ್ಸಿನವರಾಗಿದ್ದಾರೆ. ಅವರು ಎಂದಿಗೂ ವಿರೋಧವಾಗತಕ್ಕವರಾಗಿಲ್ಲ." ಸ್ಕೀನ್ ಸಾಹೇಬನ ಈ ಪತ್ರವನ್ನು * ಓದಿನೋಡಿದರೆ, ಝಾನಸಿಯಲ್ಲಿ ದಂಗೆಯು ಚಿನ್ಹೆ ಹುಟ್ಟಿತ್ತು ಎಂತ ಅನುಮಾನ ಪಡುವದಕ್ಕೂ ಸಹ ಕಾರಣವಿಲ್ಲ. ಇದಕ್ಕೆ ಕಾರಣ ಝಾನಸಿ ಸಂಸ್ಥಾನದ ರಾಣಿಯು 'ಅಬಲಳಾಗಿ,' ಆಕೆಯು ದುರ್ದೈವದ ಮಧ್ಯದಲ್ಲಿ ತನ್ನ ಕಾಲವನ್ನು ಕಳೆಯುತ್ತಾ ಇದ್ದಳು. ಝಾನಸಿ ಸಂಸ್ಥಾನವನ್ನ ಇಂಗ್ರೇಜಿ ಅಧಿಕಾರಿಗಳು ಸರಕಾರಕ್ಕೆ ಸೇರಿಸಿಕೊಂಡ ಸಮಯದಲ್ಲಿ ಆಕೆಯು ತನ್ನ ದುರಾಗ್ರಹವನ್ನು ಶುದ್ಧಾಂಗವಾಗಿ ಹಿಡಿಯಲಿಲ್ಲ ಅನಂತರ ಆಕೆಯು ತಿರಿಗಿ ಯಾವದಾದರೂ ರೀತಿಯಲ್ಲಿ ಅವಿಚಾರಮಾರ್ಗವನ್ನ ಅನುಸರಿಸ್ಯಾಳು ಎಂಬುವ ಸಂಭವವು ಶುದ್ಧಾಂಗ ತೋರುತ್ತಿರಲಿಲ್ಲ. ಅದರಲ್ಲಿಯೂ, ಬಾಯಿಸಾಹೇಬಳು ಬಹಳ ಸಹನ ಶೀಲಳಾಗಿಯೂ, ವುದಾರಬುದ್ಧಿ ವುಳ್ಳವಳಾಗಿಯೂ ಮತ್ತು ರಾಜನಿಷ್ಠೆ ವುಳ್ಳವಳಾಗಿಯೂ ಇದ್ದದ್ದರಿಂದ, ಸ್ಕೀನ್ ಸಾಹೇಬನಿಗೆ ಆಕೆಯ ವಿಷಯದಲ್ಲಿ ಸಂಪೂರ್ಣವಾಗಿ ವಿಶ್ವಾಸವಿತ್ತು. ಯಿದುಹಾಗಿರಲಿ.

ಝಾನಸಿಯ ಇಂಗ್ರೇಜಿ ಅಧಿಕಾರಿಗಳು ಕೇವಲ ಅಜಾಗ್ರತೆಯಲ್ಲಿರುವಾಗ, ಅಲ್ಲಿನ ಸೈನ್ಯದವರು ತಮ್ಮ ನಿಜವಾದ ಸ್ವರೂಪವನ್ನ ಜೂನ್ ತಾರೀಖು 1 ರಲ್ಲಿ ಬಹಿರಂಗ ಪಡಿಸಲು ಪ್ರಾರಂಭ ಮಾಡಿದರು. ಪ್ರಥಮತಃ ಆ ದಿವಸ ಒಂದು ಬಂಗಲೆಗೆ ಬೆಂಕಿ ಹತ್ತಿತ್ತು. ಆದರೆ, ಅದು ಆಕಸ್ಮಿಕವಾಗಿರಬಹುದೆಂತ ತೋರಿ, ವಿಶೇಷವಾದ ಚರ್ಚಾಸ್ಪದವಾಗಲಿಲ್ಲ. ಅನಂತರ 2–3 ದಿವಸ, ಅಲ್ಲಿ ಇಲ್ಲಿ ಅಸಮಾಧಾನ ತೋರುತ್ತಾ ಬಂತು. ಪರಂತು, ಪುನಃ ತಾರೀಖು 4 ನೇ ದಿವಸ ಕಪ್ಪು ಪಾಯದಳದ ಪಟಾಲಂನ 7 ನೆ ತುಕಡಿಯವರು ದಂಗೆಗೆ ಪ್ರಾರಂಭಮಾಡಿದರು. ಈ ಪಟಾಲಂನ ಹವಾಲ್ದಾರ್ ಗುರುಭಕ್ಷ' ಸೆಂಬುವನು ಕೆಲವು ಜನಗಳನ್ನ ತನ್ನ ಸಂಗಡ ತೆಗದುಕೊಂಡು, ಟಾರ್‌ಪೋರ್ಟ್, ಎಂಬ ದಿವ್ಯ ಭವನಕ್ಕೆ (ದೊಡ್ಡ ಮನೆಗೆ) ಪ್ರವೇಶಮಾಡಿದನು. ಈ ದಿವ್ಯ ಭವನವು ಸಣ್ಣದಾಗಿದ್ದು, ಅಲ್ಲಿ ಬಂದೂಕು, ಮದ್ದು, ಗುಂಡು, ಮತ್ತು ಭಂಡಾರ ಸಹ ಇಡಲ್ಪಟ್ಟಿದ್ದವು. ಅಲ್ಲಿಗೆ ಹೋದ ಕೂಡಲೆ, ಆತನು ಹಾ ಹಾ ಕಾರವನ್ನು ಎಬ್ಬಿಶಿದನು. ಈ ವರ್ತಮಾನವು ಕ್ಯಾಪ್ಟನ್ ಡನ್ ಲಾಪ' ಸಾಹೇಬನಿಗೆ ತಿಳಿದ ಕೂಡ್ಲೆ, ಆತನು 12 ನೇ ಪಟಾಲಂನ ಬಾಕಿ ಉಳಿದ ಜನಗಳನ್ನು ಮತ್ತು ಇರಸಾಲೆಯನ್ನ ಒಂದೇಕಡೆಗೆ ಕೂಡಿಸಿಕೊಂಡು, ಅವರಿಂದ ಕವಾಯತ' ತೆಗದುಕೊಂಡು ಸೇನೆಯ ನಿಯಮಕ್ಕೆ ವಳಪಡಿಸಿಕೊಳ್ಳಲು ಪ್ರಯತ್ನ ಮಾಡಿದನು. ಟಾರ ಪೋರ್ಟ್ ಮನೆಯಲ್ಲಿರತಕ್ಕ ರಕ್ಷಕ ಶಿಪಾಯಿಗಳು ವಿರೋಧವಾಗಿ, ಅವರು ಸ್ವತಃ ವಳಗಿನ ಮದ್ದು ಗುಂಡು ಮತ್ತು ಭಂಡಾರದ ದ್ರವ್ಯವನ್ನೂ

* Kayes Sepoy war.

ಸಹಾ ತೆಗೆದುಕೊಂಡು ಒಳಗಿನಿಂದ ಬಂದೂಕಿನ ಶಬ್ದವನ್ನು ಹೊರಡಿಸಲು ಆರಂಭಿಸಿದರು. ಈ ಭಯಂಕರವಾದ ಚಿನ್ಹೆಯನ್ನು ಕಾಣುತ್ತಲೆ ಸರ್ವ ಯುರೋಪಿಯನ್‌ರು, ಕಂಟೋನ್‌ಮೆಂಟಿನಿಂದ ಹೊರಟು, ಷಹರಿಗೆ ಬಂದರು. ಕ್ಯಾಪ್ಟನ್ ಸ್ಕೀನ್ ಮತ್ತು ಗಾರ್ಡನ್ ಸಾಹೇಬರು ಎಲ್ಲಾ ಯುರೋಪಿಯನ್ ಜನಗಳಿಗೆ, ಕೋಟೆಯೊಳಗೆ ಹೋಗಬೇಕೆಂತ ಗುಪ್ತರೀತಿಯಿಂದ ಸೂಚನೆ ಮಾಡಿದರು. ಕ್ಯಾಪ್ಟನ್ ಡನ್ ಲಾಪ್'ನು, ಝಾನಸಿಯಲ್ಲಿನ ಎಲ್ಲಾ ಸೈನ್ಯವೂ ಇದ್ದಕ್ಕಿದ್ದ ಹಾಂಗೆ ವಿರೋಧ ವಾಯಿತೆಂತ ಕಂಡು, ನೌಗಾಂಗ್‌ನಲ್ಲಿನ ಲಷ್ಕರಿನ ಅಧಿಕಾರಿಗಳಿಗೆ ಸಹಾಯ ಕಳುಹಿಸಿ ಕೊಡಬೇಕೆಂತ ತಕ್ಷಣವೇ ಪತ್ರವನ್ನು ಕಳುಹಿಸಿ ಕೊಟ್ಟನು. * ಮಾರನೇದಿನ ಬೆಳಗ್ಗೆ ಕ್ಯಾಪ್ಟನ್ ಸ್ಕೀನ್ ಮತ್ತು ಗಾರ್ಡನ್ ಸಾಹೇಬರುಗಳು, ಡೆನ್‌ಲಾಪ್' ಸಾಹೇಬನ ದರುಶನಕ್ಕೋಸ್ಕರ ಕಂಟೋನ್ಮೆಂಟಿಗೆ ಬಂದರು. ಅವರಲ್ಲಿ, ಅಂತರಂಗ ಸಲಹೆಗಳು ನಡೆದು ಮುಂದಿನ ವ್ಯವಸ್ಥೆಯ ವಿಷಯದಲ್ಲಿ ಏನೋ ಒಂದು ಸಿದ್ಧಾಂತ ಮಾಡಿಕೊಂಡು, ಆ ನಂತರ ಸ್ಕೀನ್ ಸಾಹೇಬನು ಕೋಟೆಗೆ ಹಿಂತಿರುಗಿ ಬಂದನು. ಗಾರ್ಡನ್ ಸಾಹೇಬನು ತನ್ನ ಬಂಗಲೆಗೆ ಹೋಗಿ, ನೆರೆಹೊರೆಯ ರಾಜರುಗಳಿಗೆ ಸೈನ್ಯ ಸಹಾಯ ಕಳುಹಿಸಿ ಕೊಡಬೇಕೆಂತ ಪತ್ರ ಬರೆದು, ಪುನಃ ಕೋಟೆಯೊಳಗೆ ಬಂದನು. ಕ್ಯಾಪ್ಟನ್ ಡನ್ ಲಾಪ್' ಸಾಹೇಬನು ಮದ್ದು ಗುಂಡಿನ ಸಾಮಗ್ರಿಗಳನ್ನು ಚೆನ್ನಾಗಿ ಸಿದ್ಧಮಾಡಿಕೊಂಡು, ಆ ಪತ್ರವನ್ನು ಕಳುಹಿಸುವಗೋಸ್ಕರ, ಟಪ್ಪಾಲ್ ಮನೆಗೆ ಬಂದನು. ಅಲ್ಲಿಂದ ಎನ್‌ಸಾಯಿನ್ ಟೇಲರ್ ಸಾಹೇಬನನ್ನ ಸಂಗಡ ಕರಕೊಂಡು, ತಿರುಗಿ ಕವಾಯತಿ ನಡಿಯತಕ್ಕ ಸ್ಥಳಕ್ಕೆ ಬಂದನು. ಅಲ್ಲಿಗೆ ಬಂದ ಕೂಡಲೆ, ದಂಗೆಗೆ ಸಹಕಾರಿಗಳಾಗಿದ್ದ ಹನ್ನೆರಡನೇ ಪಾಯದಳದ ಪಟಾಲಂನ ಜನಗಳು, ಅವರಿಬ್ಬರ ಮೇಲೂ ಗುಂಡು ಹಾರಿಸಿ ಅವರನ್ನು ಕೊಂದುಹಾಕಿ

---

* ಇದೇ ಪತ್ರವನ್ನ ಝಾನಸಿ ದಂಗೆಯ ರುಜುವಾತಿನ ಮಧ್ಯದಲ್ಲಿ ನಮೂದು ಮಾಡಿಥೆ. ಯಿದರಿಂದ ಅಲ್ಲಿನ ಯುರೋಪಿಯನ್ ಜನಗಳ ಕಡೆ ಶುದ್ಧಾಂಗ ರುಜುವಾತ್ತೇ ಇಲ್ಲಾ. ಈ ಪತ್ರವು ಕೆಳಗೆ ಬರದಿರುವ ಪ್ರಕಾರವಾಗಿಥೆ:–

"To
The Officer Commanding at Nowgong,
Jhansi, June 4th 1857 4 P. M.

"Sir,—The Artillery and infantry have broken into Mutiny, and have entered the Star Fort. No one has been hurt as yet. Look out for strugglers.

"Yours &c. J. Dunlop."

ಬಿಟ್ಟರು. ಕ್ಯಾಪ್ಟನ್ ಡನ್ ಲಾಪ್' ಸಾಹೇಬನು ಸಾಹಸಿಯಾದ ಅಧಿಕಾರಿಯಾಗಿದ್ದದ್ದರಿಂದ, ಕಷ್ಟ ಸಮಯಗಳಲ್ಲಿ ಬಹಳ ಉಪಯೋಗವಾಗತಕ್ಕವನಾಗಿದ್ದನು. ಇದು ಹಾಗಿರಲಿ.

ಝಾಂಸಿ ಮುಖ್ಯ ಸೇನಾಧಿಪತಿಯಾಗಿದ್ದ ಕ್ಯಾಪ್ಟನ್ ಡನ್ ಲಾಪ್' ಸಾಹೇಬನು, ದಂಗೇ ಜನಗಳಿಗೆ ಮೊದಲು ಬಲಿಯಾಗಿ ಸಿಕ್ಕಿದ್ದರಿಂದ, ಆ ಜಯದ ಆನಂದದಲ್ಲಿ ಕೂಡಲೇ ಅವರು ಉಬ್ಬಿಹೋಗಿ, ಕಂಟೋನ್ಮೆಂಟಿನಲ್ಲಿನ ಇತರ ಯೂರೋಪಿಯನ್ ಜನಗಳನ್ನ ಯಮನ ಮನೆಗೆ ಕಳುಹಿಸಲುದ್ಯುಕ್ತರಾದರು. ಸಾರ್‌ಜಂಟ್ ಮೇಜರ್ ನ್ಯೂಟನ್ ಮತ್ತು ಸರ್ವೇ ಖಾತೇದಾರ್ ಅಧಿಕಾರಿ ಲೆಫ್ಟಿನೆಂಟ್ ಟರ್ನ್‌ಬುಲ್ ಯಿವರನ್ನು ಆ ದುಷ್ಟರು ವಧೆಮಾಡಿದರು. ಹದಿನೈದನೇ ನೇಟಿವ್ ಇನ್‌ಫೆಂಟ್ರಿಯ ಲೆಫ್ಟಿನೆಂಟ್ ಕ್ಯಾಂಬೆಲ್ ಸಾಹೇಬನು, ಹದಿನಾಲ್ಕನೇ ಯಿರೆಗ್ಯುಲರ್ ಪಟಾಲಮಿನ ಮೇಲೆ, ಒಬ್ಬ ಅಧಿಕಾರಿಯಾಗಿದ್ದನು. ದಂಗೇಖೋರರು ಆತನಮೇಲೆ ಬಿದ್ದರು. ಆದರೆ ಅವನು ಬಹಳ ಶೌರ್ಯದಿಂದ ಅವರ ಕೈತಪ್ಪಿಸಿಕೊಂಡು, ಕೋಟೆಗೆ ಹೋಗಿ ತಲ್ಪಿದನು. ಕ್ಯಾಪ್ಟನ್ ಸ್ಕೀನ್ ಮತ್ತು ಆತನ ಕುಟುಂಬ ಮತ್ತು ಆತನ ಯಿಬ್ಬರು ಮಕ್ಕಳೂ ಸಹ, ಅಲ್ಲಿಯೇ ಯಿದ್ದರು. ಯಿದು ಶಿವಾಯಿ, ಅಲ್ಲಿಯಿದ್ದ ಇತರ ಯೂರೋಪಿಯನ್ ಜನಗಳ ಪೈಕಿ ಮುಖ್ಯವಾದವರ ಹೆಸರು ಮುಂದೆ ಬರಿಯಲ್ಪಿಟ್ಟಿದೆ:— ಝಾಂಸಿ ಡೆಪ್ಯುಟಿ ಕಮಿಷನರ್, ಕ್ಯಾಪ್ಟನ್ ಗಾರ್ಡನ್; ಸರ್ವೆ ಖಾತೆದಾರ್ ಲೆಫ್ಟಿನೆಂಟ್ ಬರ್ಗೇಸ್; * 12 ನೇ ಪಟಾಲಂನ ಡಾ. ಮ್ಯಾಕಿಗನ್ ಮತ್ತು ಆತನ ಕುಟುಂಬ, ಲೆಫ್ಟಿನೆಂಟ್ ಪಾಫಿಸ್, ಆತನ ಕುಟುಂಬ ಮತ್ತು ಸಣ್ಣ ಹುಡುಗರು, ಸುಂಕದ ಕಲೆಕ್ಟರ್ ಡಬ್ಲ್ಯು. ಯಸ್, ಕಾರ್‌ಪೋಲರ್, ಮತ್ತು ಆತನ ಕುಟುಂಬ; ಟಿ. ಆನ್‌ಡ್ರ್ಯೂಜ್; ಆರ್. ಆಂಡ್ರ್ಯುಸ್ ಮತ್ತು ಆತನ ಕುಟುಂಬ; ಮಿಸೆಸ್ ಬ್ರೌನ್ ಮತ್ತು ಒಂದು ಹುಡುಗಿ; ಸ್ಕಾರ್ಕಟ ಮತ್ತು ಆತನ ಕುಟುಂಬ; ಕ್ರಾಫರ್ಡ್ ಎಂಬ ಹೆಸರುಳ್ಳ ಇಬ್ಬರು ಬಂಧುಗಳು, ಪಾರ್ಸೆಲ್ ಎಂಬ ಬಂಧುಗಳು, ಇಲಿಯಟ್, ಫ್ಲಮಿಂಗ್ ಮತ್ತು ಇನ್ನು ಚಿಕ್ಕ ಚಿಕ್ಕ, ಯೂರೋಪಿಯನ್ ಮತ್ತು ಯುರೇಷಿಯನ್ ಉದ್ಯೋಗಸ್ಥರು, ಈ ಸರ್ವರ ಸಂಖ್ಯೆಯು ಸುಮಾರು 45 ಆಗಿತ್ತು.

ಈ ಸರ್ವಮಂಡಲಿಯವರಿಗೆ ಕ್ಯಾಪ್ಟನ್ ಸ್ಕೀನ್ ಸಾಹೇಬನು ಆಯುಧಗಳನ್ನು ಕೊಟ್ಟು, ಬಹಳ ಭದ್ರತೆಯಿಂದ ಕೋಟೆಯ ಮಧ್ಯದಲ್ಲಿಟ್ಟನು. ಅವರು ಶತ್ರುಗಳಿಗೆ

---

* ಲೆಫ್ಟಿನೆಂಟ್ ಬರ್ಗೇಸ್ ಮತ್ತು ಇನ್ನು ಕೆಲವು ಯೂರೋಪಿಯನ್ ಮತ್ತು ಯುರೇಷಿಯನ್ ಉದ್ಯೋಗಸ್ಥರು ಹಳೇ ಅರಮನೆಯಲ್ಲಿ ಆಶ್ರಯ ತೆಗದುಕೊಂಡಿದ್ದರೆಂತಲೂ ಹೇಳುತ್ತಾರೆ.

*The Indian Empire Vol. 2 Page* 305.

ಶರಣರಾಗದೆ, ಅಲ್ಲಿ ತಮ್ಮ ಆತ್ಮಸಂರಕ್ಷಣೆಯನ್ನು ಮಾಡಿಕೊಳ್ಳಲು ನಿಶ್ಚಯಿಸಿದರು. ಕಿಲ್ಲೆಯ ಪ್ರಚಂಡವಾದ ಬಾಗಲನ್ನ ಮುಚ್ಚಿ, ಕೆಲವು ಕಡೆಯಲ್ಲಿ ಕಲ್ಲುಗಳಿಂದ ಮರೆ ಮಾಡಿ ಶತ್ರುಗಳು ವಳಗೆ ಪ್ರವೇಶಮಾಡದ ಹಾಗೆ, ಏರ್ಪಾಟುಮಾಡಿದರು. ಇತ್ತಲಾಗಿ, ದಂಗೇ ಜನಗಳು, ಕಂಟೋನ್ಮೆಂಟಿನಲ್ಲಿ ಏಕಪ್ರಕಾರ ಪ್ರಳಯವನ್ನೆಬ್ಬಿಸಿ, ಕೈಯ್ಯಿಗೆ ಶಿಕ್ಕಿದ ಯೂರೋಪಿಯನ್ ಜನಗಳ ಪ್ರಾಣನಾಶಮಾಡಿ, ತಮ್ಮ ದೃಷ್ಟಿಯನ್ನು ಕೋಟೆಯಕಡೆಗೆ ತಿರುಗಿಸಿದರು. ಕೋಟೆಯಲ್ಲಿನ ಇಂಗ್ರೇಜಿ ಜನಗಳು ಶೌರ್ಯದಿಂದ ಯುದ್ಧ ಮಾಡಿ, ದಂಗೆ ಜನಗಳನ್ನು ಹಿಂತಿರುಗಿಸುವದಕ್ಕೆ ಪ್ರಯತ್ನ ಪಟ್ಟರು. ಆದರೆ ಈ ಉಗ್ರವಾದ ಸೇನಾಸಾಗರದ ಮುಂದೆ, ಆ ದೀನ ಮನದವರ ಪ್ರಯತ್ನವು ಯೇನು ನಡೆದೀತು ! ಅವರು ಮೂರನೇ ದಿವಸ ಬೆಳಿಗ್ಯೆ ರಾಣೀ ಸಾಹೇಬಳ ಹತ್ತರ ಸಹಾಯವನ್ನು ಕೇಳುವದಕ್ಕಾಗಿ ಸ್ಕಾಟ್ ಮತ್ತು ಪಾರ್ಸೆಲ್ ಬಂಧುವು ಸೇರಿ ಮೂರು ಜನಗಳನ್ನ ಅರಮನೆಗೆ ಕಳುಹಿಸಿದರು. ಪರಂತು ದಂಗೇ ಜನಗಳು ಅವರನ್ನ ಮಧ್ಯ ದಾರಿಯಲ್ಲೇ ಹಿಡಿದು, ಹೊಡೆದು ಹಾಕಿಬಿಟ್ಟರು. ಝಾಂಸಿ ಸದರಮೀನ್ ಆಂಡ್ರೂಸ್ ಸಾಹೇಬನನ್ನ ದಂಗೇಖೋರ ಜನಗಳು ಅರಮನೆಯ ಎದುರಿಗೇನೇ ಕೊಂದುಹಾಕಿದರೆಂತ ಹೇಳುತ್ತಾರೆ.

ಕ್ಯಾಪ್ಟನ್ ಸ್ಕೀನ್ ಮತ್ತು ಗಾರ್ಡನ್ ಸಾಹೇಬರು ನಾಗೋಡ್ ಮತ್ತು ಗ್ವಾಲಿಯರ್‌ನಿಂದ ಸಹಾಯ ತರಿಸಿಕೊಳ್ಳುವದಕ್ಕೋಸ್ಕರ ನಿರೂಪವನ್ನು ಕಳುಹಿಸಿದರು. ಪರಂತು ಅಲ್ಲಿಂದ ಸಹಾಯಬರುವ ಪರ್ಯಂತರ, ದಂಗೇಖೋರ ಜನಗಳು, ತಮ್ಮ ದುಷ್ಟ ಹೇತುವನ್ನ ಸಿದ್ಧಿಗೆ ತಂದುಕೊಳ್ಳಲು ಕಡಮೆ ಮಾಡಲಿಲ್ಲ. ತಾರೀಖು 7 ನೇ ದಿವಸ ಮಧ್ಯಾನ್ಹ 2 ಘಂಟೇ ಮೇಲೆ ದಂಗೇಖೋರ ಜನಗಳು, ಕೋಟೆಯ ಮೇಲೆ ಬಿದ್ದು, ಅದನ್ನು ಕೈವಶ ಮಾಡಿಕೊಳ್ಳಲು, ನಿಶ್ಚಯಮಾಡಿ, ಯುದ್ಧಕ್ಕೆ ಪ್ರಾರಂಭಿಸಿದರು. ಒಳಗಿದ್ದ ಯೂರೋಪಿಯನ್ ಜನಗಳು ಆ ಸಮಯದಲ್ಲಿ ಮಹಾ ಶೌರ್ಯವನ್ನ ಉತ್ತಮ ಪ್ರಕಾರದಿಂದ ವ್ಯಕ್ತಪಡಿಸಿ, ಬಹುಕಾಲ ಪರ್ಯಂತರ ದಂಗೇ ಜನಗಳಿಗೆ ಆಸ್ಪದ ಕೊಡಲಿಲ್ಲ. ಅವರು ಕೆಲವು ಹಳೇ ತೋಪುಗಳನ್ನ ಸರಿಪಡಿಸಿಕೊಂಡು, ಕೋಟೆಯ ಮೇಲಿನಿಂದ ಹೊಡೆಯಲು ಪ್ರಾರಂಭಿಸಿದರು. ಆದರೆ ಅದರಿಂದ ಏನೂ ಉಪಯೋಗವಾಗಲಿಲ್ಲ. ಕಾರಣ ವೇನಂದರೆ, ಆ ತೋಪುಗಳೆಲ್ಲಾ ಸರಿಯಾಗಿರಲಿಲ್ಲ ; ಅಲ್ಲದೆ, ಬಂದೂಕು ಹಿಡಿಯತಕ್ಕವರಿಗೆ ಅದನ್ನು ಸರಿಪಡಿಸಿಕೊಳ್ಳುವ ಅನುಭವವೂ ಇರಲಿಲ್ಲವಾದ್ದರಿಂದ, ಅದರಲ್ಲಿ ಸರಿಯಾಗಿ ಹೊಡೆಯುತ್ತಿರಲಿಲ್ಲ. ಕೋಟೆಯವಳಗಿನ ಜನಗಳು ಯೇಕಪ್ರಕಾರವಾಗಿ ಶತ್ರುಗಳಮೇಲೆ, ಗುಂಡುಗಳ ಮಳೆಯನ್ನು ಕರೆದರು. ಆದ್ದರಿಂದ ಪುಷ್ಕಳ ದಂಗೇ ಜನಗಳು ಹಿಂದಕ್ಕೆ ಸರಿದರು. ತಥಾಪಿ, ಅವರ ಗುಂಪು ದೊಡ್ಡದಾಗಿದ್ದದ್ದರಿಂದ ಮತ್ತೆ ಮತ್ತೆ ಸೇರಿಕೊಂಡರು. ದಂಗೇ ಜನಗಳು ಕೋಟೆಯೊಳಗೆ ಹೋಗುವದಕ್ಕೋಸ್ಕರ, ಕಳ್ಳದಾರಿಯನ್ನು ಹುಡುಕುವ ಪ್ರಯತ್ನ ಮಾಡಿದರು. ಝಾಂಸಿಯ ಅಸಿಸ್ಟೆಂಟ್ ಸರ್ವೆಯರು ಲೆಫ್ಟಿನೆಂಟ್ ಪಾವಿಸ್ ಸಾಹೇಬನು

ಕಿಲ್ಲೆಯ ಮಧ್ಯದಲ್ಲಿ ಹೋಗುವಾಗ ತನ್ನ ವಿಶ್ವಾಸಕ್ಕೆ ಪಾತ್ರನಾದ ಒಬ್ಬ ಸಿಪಾಯಿಯನ್ನ ಸಂಗಡ ಕರದುಕೊಂಡಿದ್ದನು. ಆದರೆ ಅವನು ದಂಗೇ ಜನಗಳಿಗೆ ವಶನಾಗಿ, ಅವರಿಗೆ ಒಳಗೆ ಬರುವದಕ್ಕೆ ಮಾರ್ಗವನ್ನು ತೋರಿಸುವದಕ್ಕೆ ಉದ್ಯುಕ್ತನಾದನು. ಇದು ಪಾವಿಸ್ ಸಾಹೇಬನ ದೃಷ್ಟಿಗೆ ಬೀಳುತ್ತಲೇ ತನ್ನ ಶಿಪಾಯಿಗೆ ಆತಂಕಪಡಿಸಿದನು. ಆ ಕೂಡ್ಲೆ, ದಂಗೇಖೋರರ ಪೈಕಿ ಒಬ್ಬನು ಪಾವಿಸ್ ಸಾಹೇಬನ ಪ್ರಾಣವನ್ನು ತೆಗೆದುಕೊಂಡನು. ಪರಂತು ಕ್ಯಾಪ್ಟನ್ ಬರ್ಗೇಸ್‌ನು ಅವನಮೇಲೆ ಬಿದ್ದು, ಆತನಿಗೆ ದೇಹಾಂತ ಶಿಕ್ಷೆ ಕೊಟ್ಟನು.

ದಂಗೇ ಜನಗಳು ಕೋಟೆ ತೆಗದುಕೊಳ್ಳಲೇಬೇಕೆಂತ ಹಟಕ್ಕೆ ನಿಂತರು. ಅವರ ಪ್ರಚಂಡ ಸಮೂಹವನ್ನು ನೋಡಿ, ಒಳಗಿದ್ದ ಜನಗಳಿಗೆ ನಿರಾಶೆಯು ಹುಟ್ಟಿತು. ದಂಗೇ ಜನಗಳು ಕೋಟೆಯ ಬಾಗಿಲನ್ನ ತೆರೆಯುವದಕ್ಕಾಗಿ, ಅದನ್ನ ಕೇವಲ ಜೀರ್ಣಕ್ಕೆ ತಂದರು. ಕ್ಯಾಪ್ಟನ್ ಸ್ಕೀನ್ ಮತ್ತು ಗಾರ್ಡನ್ ಸಾಹೇಬರುಗಳು ಕೃದ್ಧರಾಗಿ, ಬಹಳ ಸಿಟ್ಟಿನಿಂದ ದಂಗೇ ಜನಗಳ ಮೇಲೆ, ಒಳಗಿನಿಂದ ಗುಂಡುಗಳನ್ನು ಬಿಟ್ಟರು. ಪರಂತು ಅವರ ಗುಂಡುಗಳಿಗೆ ಯಶಸ್ಸು ಬರುವ ಸಂಭವದ ಆಶೆಯಿರಲಿಲ್ಲ. ದಂಗೇ ಜನಗಳು, ಕೋಟೆಯ ಮುಂಭಾಗವನ್ನು ಪ್ರವೇಶಿಸಿ, ಮೇಲೆ ಹತ್ತಿದರು. ಇದನ್ನು ನೋಡಿ ಒಳಗಿದ್ದ ಜನಗಳು "ಕೊಲ್ಲೋಣ ಅಥವಾ ಸಾಯೋಣ" ಎಂತ ನಿಶ್ಚಯಮಾಡಿ ಬಹಳ ಶೌರ್ಯದಿಂದ ಯುದ್ಧ ಮಾಡಿದರು. ಆ ಸಮಯದಲ್ಲಿ, ಯುರೋಪಿಯನ್ ಜನಗಳ ಹೆಂಗಸರಿಗೆ ಕೂಡಾ ಆವೇಶ ಹುಟ್ಟಿ, ಅವರಿಗೆ ಸಹಾಯ ಮಾಡಲು ವುದ್ಯುಕ್ತರಾದರು. * ಗಾರ್ಡನ್ ಸಾಹೇಬನು, ಅಗ್ನಿಕೊಂಡದೋಪಾದಿಯಲ್ಲಿದ್ದ ಕೋಟೆಯ ಮಧ್ಯದಲ್ಲಿ ತಿರುಗುತ್ತಾ ಕಿಡಕಿಯ ಮಧ್ಯದಲ್ಲಿ ಶತ್ರುಗಳಮೇಲೆಸರಿಯಾಗಿ ನಿಶಾನಿ ಇಡಲು ವುದ್ಯುಕ್ತನಾದನು. ಪರಂತು, ಆತನ ಮುಖ ಪರಿಚಯವು ಶತ್ರುಗಳಕಡೆ ಜನಗಳಿಗೆ ಚನ್ನಾಗಿ ತಿಳಿದಿದ್ದಕಾರಣ, ಒಬ್ಬ ಅಂಬುಗಾರನು ಗುರಿಯಿಟ್ಟು, ಆತನ ಪ್ರಾಣವನ್ನು ತೆಗದುಕೊಂಡನು. ಗಾರ್ಡನ್ † ಸಾಹೇಬನ ಮರಣ

---

* ಕ್ಯಾಪ್ಟನ್ ಸ್ಕೀನ್ ಸಾಹೇಬನ ಹೆಂಡತಿಯು ಆತನಿಗೆ ಬಂದೂಕು ತುಂಬಿ ಕೊಡುತ್ತಿದ್ದಳೆಂತ ಪುಷ್ಕಳ ಯಿಂಗ್ರೇಜಿ ಇತಿಹಾಸಕಾರಕರು ಬರೆದಿರುತ್ತಾರೆ. ಆದರೆ ಕೇ ಸಾಹೇಬನು ಆ ಮಾತು ಸರಿಯಾದ ದೃಷ್ಟಾಂತದಿಂದ ನಿಶ್ಚಯ ವಾಗುವದಿಲ್ಲವೆಂತ ಹೇಳುತ್ತಾನೆ.

† Captain Gardon is described as. "a Gallant Gentleman and an excellent officer, *the life and soul of the Garrison,*"

*Kay's Sepoy War P.* 308.

ದಿಂದ ಕೋಟೆಯೊಳಗೆ ಯಿದ್ದ ಜನಗಳಿಗೆ ಮುಖ್ಯ ಆಧಾರವೇ ತಪ್ಪಿ ಹೋಯಿತೆಂತ ತೋರಿ, ಅವರ ಧೈರ್ಯವೆಲ್ಲಾ ಕುಂದಿ ಹೋಯಿತು. ಇದೇ ಸಮಯದಲ್ಲಿ ಕೋಟೆಯೊಳಗಿನ ಮದ್ದು ಮತ್ತು ಇತರ ಪದಾರ್ಥಗಳು ಸಹ ತೀರಿಹೋದವು. ಆದ್ದರಿಂದ ಸ್ಕೀನ್ ಸಾಹೇಬನು ಕೇವಲ ಉಪಾಯ ಶೂನ್ಯ ನಾದನು. ದಂಗೇ ಜನಗಳ ಕಡೆಯ 14 ನೆ ಕ್ಯಾವಲರಿ ರಿಸಾಲ್ದಾರ್ ಕಾಲಾಖಾನ್ ಮತ್ತು ಝಾನ್ಸಿ ತಾಸಿಲ್ದಾರ್ ಅಹಮ್ಮದ್ ಹುಸೇನ್ ಈ ಇಬ್ಬರು, ಬಹಳ ಶೌರ್ಯದಿಂದ ಯುದ್ಧಮಾಡಿ, ಕೋಟೆಯ ಬಹು ಭಾಗವನ್ನ ಕೈವಶಮಾಡಿಕೊಂಡಿದ್ದನ್ನ ನೋಡಿ, ಹತವೀರ್ಯರಾಗಿದ್ದ ಯುರೋಪಿಯನ್ ಜನಗಳು ತಹಾದ ನಿಶಾನೆಯನ್ನು ಹಾಕಿದರು.

ಜೂನ್ ತಾರೀಖು 8 ನೇ ದಿವಸ ಬೆಳಗ್ಯೆ ವಿಜಯಾನಂದದಿಂದ್ ಉಬ್ಬಿಹೋಗಿದ್ದ ಶತೃಗಳಕಡೆ ಪ್ರಮುಖಮಂಡಲಿಯವರು, ಕೋಟೆಯ ಬಾಗಲ ಹತ್ತರಕ್ಕೆ ಬಂದು ಝಾಂಸಿಯಲ್ಲಿ ಪ್ರಸಿದ್ಧ ವೈದ್ಯನಾಗಿದ್ದ ಒಬ್ಬ ಸಾಲೆ ಮಹಮ್ಮದ್ ಎಂಬುವನನ್ನ ತಮ್ಮಕಡೆ ವಕೀಲನನ್ನಾಗಿ ನೇಮಿಸಿ ಸ್ಕೀನ್ ಸಾಹೇಬನ ಕಡೆಗೆ ಕಳುಹಿಸಿಕೊಟ್ಟರು. ಸ್ಕೀನ್ ಸಾಹೇಬನು ಬಾಗಲು ತೆಗೆದು ಹೊರಗೆಬಂದನು. 'ಆತನು ನಮ್ಮ ರೋಮಕ್ಕೆ ಕೂಡಾ ಹಿಂಸೆ ಕೊಡದೆ ನಮ್ಮನ್ನ ಸಾಗರಕ್ಕೆ ಹೋಗಲು ಬಿಟ್ಟುಕೊಡಿ ಎಂತ ದಂಗೇ ಜನಗಳಿಗೆ ಅಭಿವಚನವನ್ನ ಕೇಳಿಕೊಂಡನು. ಅದಕ್ಕೆ ಸಾಲೇ ಮಹಮ್ಮದನು, "ನೀವು ಆಯುಧಗಳನ್ನು ಕೆಳಗೆ ಇಟ್ಟು, ಕೋಟೆಯನ್ನು ಬರಿದುಮಾಡಿಕೊಟ್ಟರೆ ನಿಮ್ಮ ರೋಮಕ್ಕೆ ಕೂಡಾ ಬಾಧಕ ಬರದಂತೆ ನಾವು ನೋಡಿಕೊಳ್ಳುತ್ತೇವೆ" ಎಂತ ತಮ್ಮ ಜಾತೀ ಪದ್ಧತೀಪ್ರಕಾರ ಖುರಾನಿನಮೇಲೆ ಪ್ರಮಾಣಮಾಡಿ ಒಪ್ಪಿಕೊಂಡನು. ಈ ಮಾತು ಆ ದುರ್ದೈವಿಗಳಾದ ಜನಗಳಿಗೆ ನಿಶ್ಚಯ ತೋರಿ ಆ ಪ್ರಕಾರ ತಮ್ಮ ಆಯುಧಗಳನ್ನ ಕೋಟೆಯೊಳಗೆ ಇಟ್ಟು ಹೊರಗೆ ಹೊರಟರು. ಈ ಅನಾಥ ಜನಗಳು ಕೋಟೆಯ ಬಾಗಲು ಬಿಟ್ಟು ಹೊರಗೆ ಹೊರಟರೋ ಇಲ್ಲವೋ ಎಂಬಷ್ಟರಲ್ಲಿಯೇ ದಂಗೇ ಜನಗಳು ತಮ್ಮ ಸರ್ವ ವಚನಗಳನ್ನೂ ಮೀರಿ 'ದೀನ್ ದೀನ್' ಎಂತ ಅವರಮೇಲೆ ಬಿದ್ದರು. 'ಮತ್ತು ಕಾಫರ್ಕೋಮಾರೋ' (ಅನ್ಯಮತಸ್ಥರನ್ನು ಹೊಡಿ) ಎಂತ ಕೂಗಿಕೊಳ್ಳುತ್ತಾ ದೀನರಾಗಿದ್ದ ಆ ಜನಗಳನ್ನೆಲ್ಲಾ ಹೆಡಮುರಿಗೆ ಕಟ್ಟಿ ಕೈದಿಗಳನ್ನಾಗಿ ಮಾಡಿದರು. ಆ ಸಮಯದಲ್ಲಿ, ಅವರ ಸ್ಥಿತಿಯು ಕುರಿಗಳಹಾಗೆ ಆದಕಾರಣ, ಅವರು ಹಾ, ಹೂ ಎಂತ ಕೂಡ ಅನ್ನಲಿಲ್ಲ. ಈ ಎಲ್ಲಾ ಜನಗಳನ್ನ ದಂಗೇ ಜನಗಳು ಷಹರಿನಲ್ಲಿ ಮೆರವಣಿಗೆ ಮಾಡಿಕೊಳ್ಳುತ್ತಾ ಜೋಗನ ತೋಟದ ಕಡೆಗೆ ತೆಗೆದುಕೊಂಡು ಹೋದರು. ಈ ಪ್ರಕಾರ ನಿಬಂಧವಲ್ಲಿದ್ದ ಜನಗಳು ಪಟ್ಟಣದ ಹೊರಗೆ ತಲ್ಪಿದರೋ ಇಲ್ಲವೋ ಎಂಬಷ್ಟರಲ್ಲಿ, ಒಬ್ಬ ಸವಾರನು ಬಂದು ಈ ಜನಗಳನ್ನ ಶಿರಚ್ಛೇದನ ಮಾಡಬೇಕೆಂತ ರಿಸಾಲ್ದಾರ್ ಸಾಹೇಬನು ಅಪ್ಪಣೆ ಮಾಡಿರುವ ಹಾಗೆ ಹೇಳಿದನು. ಆ ಪ್ರಕಾರವಾಗಿ ಆ ದುಷ್ಟ ಜನಗಳು ಆ ಜನಗಳ ಶಿರಚ್ಛೇದ ಮಾಡಲು ನಿಶ್ಚಯಿಸಿ

ದರು. * ಝಾನ್ಸಿ ಜೈಲದರೋಗ ಬಕ್ಷಿಸ್ ಅಲ್ಲಿಯೂ, ದೀನರಾದ ಈ ಜನಗಳನ್ನು ಹೆಂಗಸರು, ಮಕ್ಕಳು, ಮತ್ತು ಪುರುಷರು, ಈ ರೀತಿ ಮೂರುಭಾಗ ಮಾಡಿದನು. ತಾನು, ಸ್ವತಃ, ಸ್ಕೀನ್ ಸಾಹೇಬನ ಶಿರಚ್ಛೇದನ ಮಾಡಿ, ಬಾಕಿಯವರ ತಲೆಗಳನ್ನ ಹೊಡಿಯಲೇಬೇಕೆಂತ ಖಂಡಿತವಾದ ಅಪ್ಪಣೆ ಮಾಡಿದನು. ಹಾಯ್! ಹಾಯ್!! ಆ ಪಾಷಾಣ

---

* ಆ ಸಮಯದಲ್ಲಿ ದಂಗೇಮಾಡುವ ಜನಗಳಿಗೆ ಆವೇಶ ತುಂಬಿ ಕೇವಲ ವಿಚಾರಶೂನ್ಯರಾಗಿ ಹೋಗಿದ್ದರು. ಆ ವೇಳೆಯ ವರ್ಣನೆಯನ್ನು ಒಬ್ಬ ಇಂಗ್ರೇಜಿ ಗ್ರಂಥಕಾರನು ಬಹಳ ಚಮತ್ಕಾರವಾಗಿ ಮಾಡಿರುತ್ತಾನೆ:—

"Adverse and baneful influences, the demons of bloodshed, rapine, malice, and red handed murder, pervaded the air."

"The powers of the good spirits representing Love, Charity, Sympathy, Generosity, and Mercy—whose willing vocation and duty it is to help, comfort and render aid and assistance to Mankind in the difficulties and dangers which so persistently beset all, and which are inseparable from their earthly pilgrimage through this fickle and capricious, though beautiful and frequently joyous world of ours—were for the time paralysed, and in helpless grief they veiled their eyes, to shut out from view the blood-stained and brutal scenes so soon to be enacted before them, but which for some good reason, only known to the Creator they were incapable of preventing or interfering with."

"The atmosphere was lowering and sombre for the Monsoon or rainy season was nigh, and its fore runner a bank of inkblack clouds, stood up like a dark and gloomy wall, a pall-like prototype of calamity and of death."—*The Rane P.* 223.

ಹೃದಯವು ಸ್ಕೀನ್ ಸಾಹೇಬನ ಕುತ್ತಿಗೆಯನ್ನು ಕತ್ತರಿಸುತ್ತಲೇ, ಆತನ ಕೈಕೆಳಗಿನ ಜನಗಳು ಉಳಿದ ಸರ್ವ ಹೆಂಗಸರು ಮಕ್ಕಳನ್ನ ಬಹಳ ಕ್ರೌರ್ಯದಿಂದ ವಧೆ ಮಾಡಿದರು !!! † ಈ ಭಯಂಕರವಾದ ಪ್ರಸಂಗದ ವರ್ಣನೆಯನ್ನು ಮಾಡಲು ನಮ್ಮ ಲೇಖಣಿಯು ಕೇವಲ ಅಸಮರ್ಥವಾಗಿಧೆ.

ಈ ಪ್ರಕಾರವಾಗಿ ಸಂಹೃತರಾದ ಯುರೋಪಿಯನ್ ಜನಗಳ ಸಂಖ್ಯೆಯು ಸುಮಾರು 60 ಯಿರಬಹುದೆಂತ ಒಬ್ಬ ಇಂಗ್ರೇಜಿ ಇತಿಹಾಸಕಾರಕನು ಹೇಳುತ್ತಾನೆ. ವುಳಿದಜನಗಳು ಕಂಟೋನ್ಮೆಂಟಿನಲ್ಲಿಯೂ ಮತ್ತು ಇತರ ಕಡೆಯಲ್ಲಿಯೂ ಸತ್ತು ಹೋದರು. ಅವರ ಒಟ್ಟು ಸಂಖ್ಯೆ 67 ಇತ್ತೆಂತ ಕ್ಯಾಪ್ಟನ್ ಪಿಂಕನೆ ಸಾಹೇಬನು ತನ್ನ ರಿಪೋರ್ಟಿನಲ್ಲಿ ಬರೆದಿರುತ್ತಾನೆ. ಜಬ್ಬಲಪುರದ ಕಮಿಷನರ್ ಮೇಜರ್ ಆಸ್ಕೀನ್ ಸಾಹೇಬನು 76 ಜನಗಳುಎಂತ ಹೇಳುತ್ತಾನೆ. ಯಿಂದೂರ್ ಪುಸ್ತಕದಲ್ಲಿ 75 ಸಾಹೇಬ್ ಜನಗಳೂ, 19 ಲೇಡಿಗಳು ಮತ್ತು 23 ಮಕ್ಕಳೂ ಈ ಪ್ರಕಾರ ಕೊಂದು ಹಾಕಲ್ಪಟ್ಟರು ಎಂತ ಬರದು ಇಧೆ.

ಈ ಘೋರಕೃತ್ಯದಲ್ಲಿ, ಮಹಾರಾಣಿ ಲಕ್ಷ್ಮೀ ಬಾಯಿ ಸಾಹೇಬಳು ಕುಮಕಿಗೆ ಸೇರಿದ್ದಳೇ ಯಿಲ್ಲವೇ ಎಂಬುವದು ಒಂದು ದೊಡ್ಡ ಪ್ರಶ್ನೆಯಾಗಿಧೆ. ಯಿದನ್ನ ಇತ್ಯರ್ಥ

---

† ಕ್ಯಾಪ್ಟನ್ ಸ್ಕಾಟ್ ಕೊಟ್ಟಿರುವ ತಿಳುವಳಿಕೆಯಲ್ಲಿ ಬರ್ಗೆಸ್ ಸಾಹೇಬನ ವಧೆ ಪ್ರಥಮತಃ ಆಯಿತೆಂತ ಹೇಳಿರುತ್ತಾನೆ. ಅದರ ವರ್ಣನೆಯನ್ನ ಮುಂದೆ ಬರದಿರುವ ಪ್ರಕಾರ ಮಾಡಿರುತ್ತಾನೆ.

"The men died first, Burgess taking the lead, his elbows tied behind his back and a prayer book in his hands. What a sad end for so kind-hearted and unselfish a man ! But to die confessing the faith is a noble death. The rest died in the same way. They tried hard to get the women, and children saved...... The women we are told, "stood with theirbabes in their arms, and the older children holding their gowns. They had to see the men killed," but there was every reason to believe "theywere spared any Violence save death."

*Captain Scot's Letter—Times, Sept. 11th 1857.*

*The Indian Empire*

ಮಾಡುವದು ಬಹಳ ಮಹಾತ್ಮ್ಯೆಯುಳ್ಳ ಕಠಿಣವಾದ ಕೆಲಸವಾಗಿಧೆ. ದೈವಯೋಗದ ಚಮತ್ಕಾರದಿಂದ ಈ ರಾಣಿ ಸಾಹೇಬಳು ಅನಂತರ ಇಂಗ್ರೇಜಿಯವರಿಗೆ ವಿರೋಧಿಯಾದಕಾರಣ, ಸಹಜವಾಗಿ, ಇಂಗ್ರೇಜಿಜನಗಳಿಗೂ ಮತ್ತು ಇತಿಹಾಸ ಬರಿಯುತಕ್ಕವರಿಗೂ ಝಾನ್ಸಿಯಲ್ಲಿ ನಡೆದ ದಂಗೆಯಲ್ಲಿ ಪ್ರಥಮದಿಂದಲೂ ಆಕೆಯ ಸಂಪರ್ಕ ಇತ್ತು; ಆ ಮುಂದಿನ ದುಃಖಕರವಾದ ಕಾರ್ಯಗಳು ಆಕೆಯ ಕೈಯಿಂದಲೇ ನಡೆಯಿತು. ಎಂತ ಕಾಣ ಬಹುದಾಗಿಧೆ. ರಾಣಿಸಾಹೇಬಳು, ದಂಗೇ ಖೋರರಿಗೆ ವಿರುದ್ಧವಾಗಿದ್ದು, ಆ ಸಮಯದಲ್ಲಿ ಝಾನಸಿಯಲ್ಲಿದ್ದ ಯಿಂಗ್ರೇಜಿ ಜನಗಳಿಗೆ ಬಳ್ಳೇ ಸಹಾಯ ಮಾಡಿದಳು ಎಂಬುವದನ್ನ ಸ್ಥಾಪಿಸುವದಕ್ಕೆ ಇರತಕ್ಕ ದೃಷ್ಟಾಂತರಗಳಿಗಿಂತಲೂ, ರಾಣಿಸಾಹೇಬಳು ದಂಗೇಖೋರರಿಗೆ, ಸಹಕಾರಿಯಾಗಿದ್ದಳು ಎಂತ ತೋರಿಸಲು ಮುಂದಿಡುವಕ್ಕೆ ಇಂಗ್ರೇಜಿ ಇತಿಹಾಸ ಕಾರಕರಿಗೆ ಪುಷ್ಕಳ ಕಾರಣಗಳು ವದಗಿವೆ. ಆದ್ದರಿಂದ ಅದನ್ನ ವಿಚಾರ ಮಾಡತಕ್ಕದ್ದು ಇಲ್ಲಿ ಅತ್ಯವಶ್ಯಕವಾಗಿಧೆ.

ಝಾಁಸಿ ಸಂಸ್ಥಾನವನ್ನ ಲಾರ್ಡ್ ಡಾಲ್ಹೂಜಿ ಸಾಹೇಬನು ಸರಕಾರಕ್ಕೆ ಶೇರಿಸಿಕೊಂಡದ್ದರಿಂದ ರಾಣಿಸಾಹೇಬಳಿಗೆ ಕ್ರೋಧವು ಹುಟ್ಟಿ, * ಅವಳು ಇಂಗ್ರೇಜಿ ಜನಗಳ ಮೇಲಿನ ತನ್ನದ್ವೇಷವನ್ನ ತೀರಿಸಿಕೊಂಡಳೆಂತ ಪ್ರತಿಬಬ್ಬ ಯಿತಿಹಾಸಕಾರಕನ ಹೇಳಿಕೆ ಯಾಗಿಇದೆ. ಅದನ್ನು ಕುರಿತು, ಆ ಇತಿಹಾಸಕಾರಕರು, ಆಕೆಯಮೇಲೆ ಪುಷ್ಕಳವಾಕ್' ಪ್ರಹಾರ ಮಾಡಿರುತ್ತಾರೆ. ಇಂಗ್ರೇಜಿ ಸರಕಾರದವರು ಝಾನ್ಸಿ

---

* ರಾಣೀ ಸಾಹೇಹಳ ಸಮ್ಮಂಧದಲ್ಲಿ ರಾಬರ್ಟ್‌ಮಾಂಟು ಗಾಮರಿ ಮಾರ್ಟಿನ್ ಸಾಹೇಬನು ಹೇಳಿರುವದೇನಂದರೆ :—

"She was a heathen: the forgiveness of injuries was no article in her creed; and believing herself deeply injured by the infraction of the Hindu laws of adoption and inheritance, she threw aside every consideration of tenderness for sex or age, and committed herself to a deadly struggle with the supreme Government by an act, for which as she must have well-known, her own life would, in all human probability, pay the forfeit,

*The Indian Empire Vol.* 11 *P.* 303.

ಈ ಪ್ರಕಾರವಾಗಿ ಇತರೆ ಅನೇಕ ಇಂಗ್ರೀಜಿ ಗ್ರಂಥಕಾರರ ಹೇಳಿಕೆಯಾಗಿಧೆ !

ಸಂಸ್ಥಾನವನ್ನ ಸರಕಾರಕ್ಕೆ ಸೇರಿಸಿಕೊಂಡು ರಾಣಿಸಾಹೇಬಳನ್ನ ಅಸಂತುಷ್ಟಳಾಗಿ ಮಾಡಿದ್ದು ಮಾತ್ರವಲ್ಲದೆ, ಅವಳಿಗೆ ಕ್ರೋಧಹುಟ್ಟುವಂತೆ ಪುಷ್ಕಳ ಕೆಲಸಗಳನ್ನು ನಡಸಿದರು ಎಂತ ಒಬ್ಬ ಇಂಗ್ರೇಜಿ ಗ್ರಂಥಕಾರನು ಸ್ಪಷ್ಟವಾಗಿ ಬರೆಯುತ್ತಾನೆ. ರಾಣಿ ಸಾಹೇಬಳಿಗೆ ಸಿಕ್ಕುತ್ತಿದ್ದ ಪೆನ್ಷನ್‌ನನ್ನ ಆಕೆಯಗಂಡನ ಸಾಲಕ್ಕಾಗಿ ಮುರಕೊಳ್ಳುತ್ತಾ ಬಂದದ್ದೂ, ಝಾನಸೀಯಲ್ಲಿನ ಮಹಾಲಕ್ಷ್ಮೀ ದೇವಸ್ಥಾನಕ್ಕೆ ಸೇರಿದ ವೂರುಗಳ ಪೈಕಿ, ಎರಡನ್ನ ಜಪ್ತಿ ಮಾಡಿದ್ದೂ, ಮತ್ತು ಪಟ್ಟಣ ಮಧ್ಯದಲ್ಲಿ ಗೋವಧೆ ಮಾಡುವ ಪದ್ಧತಿ ನಡವಳತೆಯಲ್ಲಿ ಇಟ್ಟದ್ದೂ ಮುಂತಾದ ಸಂಗತಿಗಳು, ರಾಣಿಸಾಹೇಬಳಿಗೆ ಕ್ರೋಧ ಹುಟ್ಟುವದಕ್ಕೆ ಕಾರಣವಾಯಿತೆಂತ ಆತನ ಹೇಳಿಕೆ ಯಾಗಿಇದೆ. * ಪರಂತು, ಆಪೈಕಿ ಕೆಲವುಸಂಗತಿಗಳು ನಿಜವಾಗಿವೆ ಎಂತ ಅಂಗೀಕರಿಸಲು ಆಧಾರವಿಲ್ಲ ವಾದ್ದರಿಂದ ಅವುಗಳನ್ನ ಝಾನ್ಸಿಯಲ್ಲಿ ನಡೆದ ದಂಗೆಗೆ ಸಮ್ಬಂಧಪಡಿಸ ತಕ್ಕದ್ದಲ್ಲ. ರಾಣಿಸಾಹೇಬಳು

* "The British Government regarded her anger and her remonstrances with careless indifference. They did what was even worse. They added meanness to insult. On the confiscation of the State, they had granted to the widowed Rani a pension of 6,000 £ a year. The Rani had first refused, but had ultimately agreed to accept this pension. Her indignation may be imagined when she found herself called upon to pay; Out of a sum which she regarded as a mere pittance, the debts of her late husband."

"Better as was her remonstrance against a course which she considered not less as an insult than as a fraud, it was unavailing. Uselessly she urged that the British had taken the debts of the late ruler with the kingdom of which they had despoiled her. Mr. Colvin insisted, and caused the account to be deducted from her pension. Other grievances such as the slaughter of kine amid a Hindu population and resumption of grants made by former rulers for the support of Hindu

ತೀರಿಹೋಗುವ ಪರ್ಯಂತರ, ಪ್ರಥಮದಿಂದಲೂ ಯಾವಾಗ್ಯೂ ಪೇಂಷನ್ ತೆಗೆದುಕೊಳ್ಳಲಿಲ್ಲ; ಮತ್ತು ಆಕೆಯ ಗಂಡನಿಗೆ ಮೂಲತಃ ಸಾಲವೇ ಇರಲಿಲ್ಲ. ಹೀಗಿರುತ್ತಾ ಪೇಂಷನನ ಮಾತು ನಿಜವೆಂತ ನಂಬಲು ಆಗುವದಿಲ್ಲ. ಈ ರೀತಿಯಾದ "ಕಾಕತಾಳೀಯ" ನ್ಯಾಯವನ್ನ ಅನ್ವಯಿಸಿ ಆ ಎಲ್ಲಾ ಸಂಗತಿಗಳೂ ದಂಗೆಯ ಸಮ್ಮಂಧಕ್ಕೆ ಸೇರಿಸಲು ಅನುಕೂಲ ಕಂಡದ್ದರಿಂದ ಆ ಸರ್ವ ದೋಷವನ್ನೂ ರಾಣಿಸಾಹೇಬಳ ಮೇಲೆ ಹೊರಿಸಬೇಕೆಂತ ಪ್ರತಿ ಒಬ್ಬ ಇಂಗ್ರೇಜಿ ಗ್ರಂಥಕಾರನು ಪ್ರಯತ್ನಪಟ್ಟಿರುತ್ತಾನೆ. ಪರಂತು, ಆ ಸಮ್ಮಂಧದಲ್ಲಿ, ಸರಿಯಾದ ದೃಷ್ಟಾಂತರವೂ ಎಲ್ಲಿಯೂ ಶಿಕ್ಕುವದಿಲ್ಲ. ಇದರಿಂದ ರಾಣೀ ಸಾಹೇಬಳು ಈ ಭಯಂಕರವಾದ ಪ್ರಸಂಗದಲ್ಲಿ, ದಂಗೇಖೋರ ಜನಗಳಿಗೆ ಅನುಕೂಲಳಾಗಿರಲಿಲ್ಲವೆಂಬುವದು ಸ್ಪಷ್ಟವಾಗುತ್ತದೆ. ಆ ಸಮ್ಮಂಧದಲ್ಲಿ ನಮಗೆ ಶಿಕ್ಕಿರುವ ತಿಳುವಳಿಕೆಯಿಂದ ಆಕೆಯು ದಂಗೇ ಪ್ರಸಂಗದಲ್ಲಿ ಇಂಗ್ರೇಜಿ ಜನಗಳಿಗೆ ಒಳ್ಳೇ ಸಹಾಯಮಾಡಿದಳೆಂತಲೇ ಕಂಡುಬರುತ್ತದೆ. ಅದನ್ನು ನಾವು ಇಲ್ಲಿ ತಿಳಿಸುತ್ತೇವೆ. ಎರಡೂ ಕಡೆ ಕೊಟ್ಟಿರುವ ದೃಷ್ಟಾಂತರಗಳಿಂದ ಸತ್ಯ ಯಾವದೂ ಅಸತ್ಯ ಯಾವದೂ ಎಂಬುವದನ್ನ ವಿಚಾರಮಾಡುವ ಕೆಲಸವನ್ನ ವಾಚಕರ ಕಡೆಗೆ ಬಿಟ್ಟಿರುತ್ತೇವೆ.

ಜೂನ್ ತಿಂಗಳ ಪ್ರಾರಂಭದಲ್ಲಿ, ಝಾಂಸೀ ಸಂಸ್ಥಾನದ ಮಧ್ಯ, ಏನೋ ಹೆಚ್ಚು ಕಡಮೆ ನಡೆಯುವ ಚಿನ್ಹೆಯು ತೋರಿದ ಕೂಡಲೆ ಕ್ಯಾಪ್ಟನ್ ಗಾರ್ಡನ್ ಸಾಹೇಬನು ಮತ್ತು ಕಂಟೋನ್ಮೆಂಟಿನ ಇತರ ಕೆಂಪುಜನಗಳೂ ಸಹ ರಾಣೀ ಸಾಹೇಬಳ ಭೇಟಿಗೆ ಬಂದು ವಿನಂತಿ ಮಾಡಿಕೊಂಡಿದ್ದೇನಂದರೆ,—"ನಮಗೆ ನಾಳೆ ಕಷ್ಟಕಾಲ ಸಂಭವಿಸೀತು ಎಂಬ ಭೀತಿ ಇರೋಣದ್ದರಿಂದ, ತಾವು ನಮ್ಮನ್ನ ರಕ್ಷಣೆ ಮಾಡಬೇಕು; ಮತ್ತು ಝಾಂಸಿಯ 25 ಲಕ್ಷದ ಪ್ರಾಂತ್ಯವು ಸುರಕ್ಷಿತವಾಗಿರುವದಕ್ಕೋಸ್ಕರ ಸಹಾಯ

---

temples, whilst fomenting the discontents of the population with their change of masters, formed subject for further remonstrance; but the personal indignity was that which rankled most deeply in the breast of this high spirted lady, and made her hail with gratitude the symptoms of disaffection which, in the early part of 1857, began to appear amongst the native soldiers of the hated English.

*Malleson's History of the Indian Meeting.*

ಮಾಡಬೇಕು." ಆ ಸಮಯದಲ್ಲಿ ರಾಣಿಸಾಹೇಬಳು, "ನಾನು ನಿಮಗೆ ಆಶ್ರಯ ಕೊಟ್ಟರೆ, ಕರೇಪಟಾಲಂನವರು ನಮ್ಮನ್ನು ಸುಲಕೊಂಡು ಸುಟ್ಟುಹಾಕಿಬಿಟ್ಟಾರು. ಆದಾಗ್ಯೂ ನಮ್ಮಿಂದ ಆದಷ್ಟು ಸಹಾಯ ಮಾಡುತ್ತೇವೆ." * ಎಂತ ಹೇಳಿದಳು.

ಬಾಯಿಸಾಹೇಬಳ ಹತ್ತರ ಆಕೆಯ ಅಂಗರಕ್ಷಕರು ಸೇರಿ, ಇನ್ನೂರು ಶಿಪಾಯಿಗಳಿದ್ದರು. ಇನ್ನೂ ಏನಾದರೂ ಸಹಾಯ ಬೇಕಾದರೆ, ಹೊಸ ಜನಗಳನ್ನು ಇಟ್ಟುಕೊಳ್ಳಬೇಕು ; ಅವರಿಗೆ ಆಯುಧ ಕೊಡಬೇಕು ಎಂತ ಇಂಗ್ರೇಜಿ ಸರ್ಕಾರದವರು ಆಕೆಗೆ ಅಪ್ಪಣೆ ಕೊಟ್ಟರು. † ಈ ಪ್ರಕಾರ ಮೊದಲನೇ ದಿವಸ ಪ್ರಸ್ಥಾಪ ನಡೆಯಿತು.

---

* ಉಜ್ಜನ ಪ್ರತ.

† ಈ ಸಂಗತಿ ಕರ್ನಲ್ ಮ್ಯಾಲಿಸನ್ ಸಾಹೇಬನು ಸ್ಪಷ್ಟವಾಗಿ ಹೇಳಿರುತ್ತಾನೆ ; ಮತ್ತು "Gillean" ಸಾಹೇಬನು ಹಾಗೆಯೇ ಬರೆದಿರುತ್ತಾನೆ :—

"It was at this time the Rani wrote to Colonel × × × a letter protesting that she was loyal and asking his permission in consideration of the disturbed state of the Country, to enlist a large body of armed men for her protection and that of her property."

"This (Colonel), knowing that he had but little voice in the matter, but wishing to retain as long as he was able, at least the semblance of friendly relations with Luchme Bai, consented to."

*The Rane P.* 180.

ಅರ್ಥಾತ್, ಇದರಿಂದ ರಾಣಿಸಾಹೇಬಳು ಬ್ರಿಟಿಷ್ ಸರಕಾರದವರ ಸಂಗಡ ಸ್ನೇಹ ಭಾವದಿಂದ ನಡೆದುಕೊಳ್ಳುತ್ತಿದ್ದಳೆಂಬುವದು ಸಿದ್ಧಾಂತವಾಗುತ್ತದೆ. ಗ್ವಾಲಿಯರ ಪುಸ್ತಕದಲ್ಲಿ ರಾಣಿಸಾಹೇಬಳು ಮುನಷಿ ಅಯೋಧ್ಯಾ ಪ್ರಸಾದನನ್ನ ಕೋಟೆಗೆ ಕಳುಹಿಸಿ ಯೂರೋಪಿಯನ್ ಅಧಿಕಾರಿಗಳಿಗೆ ವಿನಂತಿ ಮಾಡಿದ್ದೇನೆಂದರೆ, "ನಮ್ಮನ್ನ ತಾವು ಯಾವ ಉಪಯೋಗಕ್ಕೂ ಬರುವಹಾಂಗೆ ಇಟ್ಟಿಲ್ಲ. ಈಗ ತಮಗೆ ಕಷ್ಟಕಾಲ ಬಂದಿದೆ ; ಆದರೆ ತಮ್ಮ ಅಪ್ಪಣೆ ಬೇಕು. ಅದು ಸಿಕ್ಕಿದರೆ, ಠಾಕೂರು ಮುಂತಾದ ಜನಗಳನ್ನು ಸೇರಿಸಿಕೊಂಡು, ತಮಗೆ ಸಹಾಯ ಮಾಡುತ್ತೇನೆ." ಇದಕ್ಕೆ ಡೆಪ್ಯು ಕಮಿಷನರು ಗಾರ್ಡನ್ ಸಾಹೇಬನು ಈ ವಿಧವಾದ ಉತ್ತರ ಕೊಟ್ಟನು :—

"ನಾವು ನಿಮ್ಮ ಸಹಾಯವನ್ನು ತೆಗದುಕೊಳ್ಳಲಿಕ್ಕೆ ಅಪೇಕ್ಷಿಸುವದಿಲ್ಲ. ನೀವು ನಮ್ಮ ಯೋಚನೆ ಬಿಟ್ಟು ನಿಮ್ಮ ಸಂರಕ್ಷಣೆ ಮಾತ್ರ ಮಾಡಿಕೊಳ್ಳಬೇಕು." ಇದನ್ನು ಕೇಳಿ ರಾಣಿಸಾಹೇಬಳಿಗೆ ನಿರೂಪಾಯವಾಗಿರಬಹುದು ಎಂಬುವದು ಸಹಜವಾಗಿದೆ.

ಮೂರನೆ ದಿವಸ ರಾತ್ರಿ ಗಾರ್ಡನ್ ಸಾಹೇಬನು ಏಕಾಂಗಿಯಾಗಿ, ಅರಮನೆ ಹತ್ತರ ಬಂದು, ಪಹರೆ ಜನಗಳಿಂದ ಸುದ್ದಿ ತೆಗೆದುಕೊಂಡು, ಬಾಯಿ ಸಾಹೇಬಳ ದರ್ಶನ ಮಾಡಿ ಹೇಳಿದ್ದೇನಂದರೆ ;—"ನಮಗೇನಾದರೂ ಆಗಲಿ. ಪರಂತು, ನಮ್ಮ ಹೆಂಗಸರು ಮಕ್ಕಳ ಸಂರಕ್ಷಣೆ ತಮ್ಮ ಕೈಗಳಿಂದ ಆಗಲೇಬೇಕು. ಆದಕಾರಣ ತಾವು ಅವರಿಗೆ ತಮ್ಮ ಅರಮನೆಯಲ್ಲಿ ಆಶ್ರಯ ಕೊಟ್ಟು ಸಂರಕ್ಷಣೆ ಮಾಡಬೇಕು" ಎಂತ ಬೇಡಿ ಕೊಂಡನು. ಗಾರ್ಡ್ನ ಸಾಹೇಬನು ಸಂಸ್ಥಾನದ ಮೇಲೆ ಅತಿಲುಬ್ಧನಾದ್ದರಿಂದ, ಬಾಯಿಸಾಹೇಬಳಿಗೆ ಕರುಣಹುಟ್ಟಿ, ಆಕೆಯು, "ನಮ್ಮಿಂದ ಸಾಧ್ಯವಾಗುವ ಪರ್ಯಂತರ ಸಂರಕ್ಷಣೆ ಮಾಡುತ್ತೇವೆ; ನೀವು ಯೋಚನೆ ಮಾಡಬ್ಯಾಡಿ," ಎಂತ ತಿಳಿಸಿದಳು. ಇಷ್ಟು ನಡೆದ ನಂತರ ಗಾರ್ಡನ್ ಸಾಹೇಬನು ಅಪ್ಪಣೆ ತೆಗದುಕೊಂಡು ಎದ್ದು ಹೊರಟುಹೋದನು. ಮೂರನೆದಿವಸ ಬೆಳಿಗ್ಯೆ ಕೆಂಪು ಜನಗಳ ಹೆಂಗಸರು ಬಾಯಿಸಾಹೇಬಳ ಅರಮನೆಗೆ ಬಂದರು. ಆಕೆಯು ಪ್ರಶಸ್ತವಾದ ಒಂದು ದೊಡ್ಡ ಸ್ಥಳವನ್ನು ನೋಡಿ, ಅಲ್ಲಿ ಅವರನ್ನೆಲ್ಲಾ ಇಟ್ಟು, ಅವರಮೇಲೆ ರಕ್ಷಕರನ್ನು ನೇಮಿ ಸಿದಳು. ಅನಂತರ ಕಂಟೋನ್ಮೆಂಟಿನಲ್ಲಿ ದಂಗೆ ನಡದು, ಭಂಡಖೋರರು ಸರಕಾರದ ಬಂಗಲೆಯನ್ನು ಸುಟ್ಟುಹಾಕಿಬಿಟ್ಟು, ಮದ್ದು ಗುಂಡು ಮತ್ತು ಖಜಾನೆ ಸಹ ದಾಟಿಸಿ ಬಿಟ್ಟರು. ಆ ಕಾಲದಲ್ಲಿ ಸಾಹೇಬ್ ಜನಗಳು ಕೋಟೆಯೊಳಗೆ ಹೋದರು. ಆ ಸಮ ಯದಲ್ಲಿ ಅವರು ತಮ್ಮ ಹೆಚ್ಚು ಸಂರಕ್ಷಣೆ ಆದೀತೆಂಬ ಇಚ್ಛೆಯಮೇಲೆ ಅವರಮನೆ ಯಿಂದ ಹೆಂಗಸರು ಮಕ್ಕಳನ್ನೆಲ್ಲಾ ಅಲ್ಲಿಗೆ ತೆಗದುಕೊಂಡು ಹೋದರು. ಕೋಟೆಗೆ ಹೋದಮೇಲೆಯೂ ರಾಣಿಸಾಹೇಬಳು ಸಾಹೇಬ ಜನಗಳಿಗೆಲ್ಲಾ ಆಗಾಗ್ಯೆ ಧೈರ್ಯ ಕೊಟ್ಟಳು ; ಮತ್ತು ಎರಡು ಮೂರು ದಿವಸಗಳವರಿವಿಗೂ ರಾತ್ರಿ ದಂಗೇ ಜನಗಳಿಗೆ ತಿಳಿಯದಂತೆ, ಮೂರು ಮಣ ಗೋಧಿಯ ರೊಟ್ಟಿ ಮುಂತಾದ ಸಾಮಾನುಗಳನ್ನ ಕಳುಹಿಸಿ ಕೊಡಲಿಕ್ಕೆ ಏರ್ಪಾಟು ಇಟ್ಟು, ಅವರನ್ನ ಉತ್ತಮಪ್ರಕಾರವಾಗಿ ಸಂರಕ್ಷಣೆ ಮಾಡಿದಳು. * ಸತ್ಯವಾಗಿ, ಈ ಪ್ರಕಾರದಲ್ಲಿ ರಾಣಿ ಸಾಹೇಬಳು, ಇಂಗ್ರೇಜಿ ಜನ ಗಳಿಗೆ ಇಂಥಾ ಕಠಿಣ ಸಮಯದಲ್ಲಿ ಸಹಾಯ ಮಾಡಿರುತ್ತಾ, ಇಂಗ್ರೇಜಿ ಇತಿಹಾಸಕಾರ ಕರು ಆಕೆಯ ಮೇಲೆ ಶತೃತ್ವವನ್ನೂ ಹೊರಿಸುತ್ತಾರಲ್ಲ! ಇದಕ್ಕೆ ಏನು ಹೇಳಬೇಕು?

---

* ಇಂಗ್ರೇಜಿಯವರಕಡೆ, ಇದರ ದೃಷ್ಟಾಂತರವು ಅಯಾಚಿತವಾಗಿ ಸಿಕ್ಕಿದೆ. ಒಬ್ಬ ಇಂಗ್ರೇಜಿ ಇತಿಹಾಸ ಕಾರಕನು, ಝಾನ್ಸಿ ಕೋಟೆಯ ಸ್ಥಿತಿವರ್ಣನೆ ಮಾಡು ವದರಲ್ಲಿ ಹೇಳಿರುವ ದೇನಂದರೆ:—

"Whether the Europeans in the fort held any communication with the Rani is not known ; but they are stated *to have remaind unmolested till the 7th June,*

ಕರ್ನಲ್ ಮ್ಯಾಲಿಸನ್ ಸಾಹೇಬನು, ಇನ್ನೂ ಹೀಗೆಯೂ ಹೇಳಿರುತ್ತಾನೆ:— ಜೂನ್ ತಾರೀಖು 6 ನೇ ದಿವಸ ಮಧ್ಯಾನ್ಹ "ರಾಣಿಸಾಹೇಬಳ ಸವಾರಿ, ಮುಖ್ಯ ಮುಖ್ಯ ಮಂಡಲಿ ಸಹಿತ, 2 ನಿಶಾನಿಗಳನ್ನು ಹಾರಿಸಿಕೊಳ್ಳುತ್ತಾ ದೊಡ್ಡ ಉತ್ಸವ ಮಾಡಿಕೊಂಡು ಷಹರಿನಿಂದ ಕಂಟೋನ್ಮೆಂಟಿಗೆ ಹೋಯಿತು. ಅಲ್ಲಿ ಹರ್ಸ ಅಲ್ಲಿ ಎಂಬ ಬುಬ್ಬ ಮುಲ್ಲನು, ಸರ್ವ ಮುಸಲ್ಮಾನ ಜನಗಳನ್ನ ನಿಮಾಜು ಓದುವದಕ್ಕೆ ಕರಿಸಿ, ಅವರಿಗೆ ದಂಗೆ ಮಾಡಬೇಕೆಂತ ಪ್ರೋತ್ಸಾಹ ಪಡಿಸಿದನು. ಅದರಿಂದ ಸರ್ವ ಜನಗಳು, ಆಯುಧಗಳನ್ನ ಹಿರಿದುಕೊಂಡು ಶಿದ್ಧರಾದರು." ಪರಂತು ಈ ಮಾತು, ಕೇವಲ ತಪ್ಪು ತಿಳುವಳಿಕೆಯದಾಗಿರಬೇಕು ಎಂತ ಯಾರಿಗೂ ತೋರದೇ ಇರಲಾರದು. ಕಾರಣವೇನಂದರೆ, ರಾಣೀಸಾಹೇಬಳು ದಂಗೇ ಸಮಯದಲ್ಲಿ ಅರಮನೆಯಿಂದ ಯಾವಾಗಲೂ ಹೊರಗೆ ಹೊರಡಲಿಲ್ಲವೆಂತ ಆಕೆಯ ಮಾತೋಶ್ರೀಯು ತಿಳಿಸುತ್ತಾಳೆ, ಹೀಗಿರುವಾಗ, ಕದಾಚಿತು, ದಂಗೇಖೋರ ಜನಗಳು, ರಾಣಿಸಾಹೇಬಳು ತಮಗೆ ಅನುಕೂಲಳಾಗಿದ್ದಾಳೆಂತ ತೋರಿಸುವದಕ್ಕಾಗಿ ಆಕೆಯ ಸವಾರಿ ಹೊರಟಂತೆ ಸುಳ್ಳು ಉತ್ಸವವನ್ನು ಮಾಡಿದ್ದಾರೆಂತ, ಯಾಕೆ ಹೇಳಬಾರದು? ಭಯಂಕರವಾದ ಪ್ರಸಂಗದಲ್ಲಿ, ಹಗಲು ಆರುತಾಸಿನಲ್ಲಿ ಸಂಸ್ಥಾನದ ಅಂತಃಪುರದಲ್ಲಿರತಕ್ಕ ಸ್ತ್ರೀಯು ಹೊರಗೆ ಹೊರಟಳು ಎಂತ ಹೇಳುವದು ಹ್ಯಾಗೆ?

ದಂಗೇಖೋರ ಜನಗಳಿಗೆ ರಾಣಿಸಾಹೇಬಳ ಸಹಾಯವು ಇರಲಿಲ್ಲ ಎಂಬುವದಕ್ಕೇನೂ ಸಂಶಯವಿಲ್ಲಾ. ಈ ಪ್ರಸಂಗದಲ್ಲಿ ಆಕೆಯ ಹತ್ತರ ಸಮರ್ಥ ಕಾರಭಾರಿ ಮತ್ತು ಒಳ್ಳೇ ಸೈನ್ಯ ವಿದ್ದ ಪಕ್ಷದಲ್ಲಿ ಆಕೆಯು ಝಾನಸಿಯಲ್ಲಿ ಒಬ್ಬ ಯುರೋಪಿಯನ್ ಮನುಷ್ಯನ ರೋಮಕ್ಕಾದರೂ ನೋವು ತಗಲಲು ಬಿಡುತಿರಲಿಲ್ಲ. ಪರಂತು, ಆ ಸಮಯದಲ್ಲಿ ಆಕೆಯ ಹತ್ತರ ಶುದ್ಧಾಂಗವಾಗಿ ಸೈನ್ಯವಿರಲಿಲ್ಲ. ದಂಗೇ ಖೋರರು ಅತ್ಯಂತ ಪ್ರಬಲವಾಗಿದ್ದು ಬಿಟ್ಟಿದ್ದರು. ಆದ್ದರಿಂದ ಆಕೆಯು ನಿರೋಪಾಯಳಾಗಿ ಹೋದಳು. ತಥಾಪಿ, ಆಕೆಯು ದಂಗೇ ಜನಗಳು ಡಿಲ್ಲಿ ಕಡೆಗೆ ಹೊರಟು ಹೋದನಂತರ ರಣ ಭೂಮಿಯಮೇಲೆ ಬಿದ್ದಿದ್ದ ಸರ್ವ ಯುರೋಪಿಯನ್ ಜನಗಳ ಶವವನ್ನ, ತನ್ನ ಕಡೆ ಜನಗಳಿಂದ

---

and to have employed during the interval, in endeavouring *to get provisions* and ammunition into the fort etc. etc."

*The Indian Empire P.* 305.

ಇದರಿಂದ ಕೋಟೆಯೊಳಗೆ ಅವರಿಗೆ ರಾಣಿಸಾಹೇಬಳ ಸಹಾಯ ಶಿಕ್ಕುತ್ತಿತ್ತೆಂತ ಹೇಳುವದಕ್ಕೇನೂ ಅಡ್ಡಿ ಇಲ್ಲ.

ತೆಗೆಸಿ ಹಾಕಿಸಿದಳು. ಆ ಸಂಹಾರದ ಸಮಯದಲ್ಲಿ ಅಡಗಿಕೊಂಡು ವುಳಿದಿದ್ದ, ಇಬ್ಬರು ಸಾಹೇಬ್ ಜನಗಳು ಮತ್ತು ಒಬ್ಬ ಲೇಡಿಯನ್ನ ಹುಡಿಕಿಸಿ, ರಾಣಿಸಾಹೇಬಳು ಅವರನ್ನು ಚನ್ನಾಗಿ ಸಂರಕ್ಷಣೆ ಮಾಡಿದಳು. * ಆ ಪೈಕಿ ಮಾರ್ಟಿನ್ ಎಂಬ ಹೆಸರುಳ್ಳ ಒಬ್ಬ ಸಾಹೇಬನು ಆಗ್ರದಲ್ಲಿ ಅದ್ಯಾಪಿ "1894" ರವರಿಗೆ ಜೀವಂತನಾಗಿದ್ದಾನೆ. ಆತನು ರಾಣಿ ಸಾಹೇಬಳ ದತ್ತಕಪುತ್ರ ಶ್ರೀಮಂತ ದಾಮೋದರ ರಾಯನಿಗೆ, 1889 ನೇ ಇಸ್ವಿ ಅಗಷ್ಟ ತಾರೀಖು 20 ರಲ್ಲಿ ಒಂದು ಪತ್ರವನ್ನ ಬರದಿರುತ್ತಾನೆ. ಅದರಲ್ಲಿ ಸ್ಪಷ್ಟವಾಗಿ ಹೇಳಿರುವ ದೇನಂದರೆ:—

" *Your poor mother was very unjustly and cruelly dealt with "and no one knows her true case as I do. The poor thing took no "part whatever in the massacre of the European Residents of "Jhansi in June* 1857. *On the contrary she supplied them with "food for 2 days after they had gone into the Fort—got* 100 "*match lock men from Kurrura, and sent them to assist us, but "after being kept a day in the Fort, they were sent away in the "evening. She then advised Major Skene and Captain Gordon "to fly at once to dattia and place themselves under the Raja's "protection, but this even they would not do; and finally they were "all Massacred by our own troops—the Police Jail, and Cas: "Este.*"

" ದೀನಳಾದ ತಮ್ಮ ಮಾತೋಶ್ರೀ ಸಂಗಡ ನಡಿಸಿದ ವಿಶಿಷ್ಟ ವರ್ತನೆಯು, ಬಹಳ ಅನ್ಯಾಯ ಮತ್ತು ನಿಷ್ಠುರಕರವಾದ್ದಾಗಿ ಇತ್ತು. ಅಸಂಬಂಧದ ನಿಜವಾದ ಸಂಗತಿಯು ನನ್ನ ಹೊರ್ತು ಇನ್ಯಾರಿಗು ತಿಳುವಳಿಕೆ ಇಲ್ಲ. 1857 ನೆ ಇಸ್ವಿ ಜೂನ್ ತಿಂಗಳಲ್ಲಿ ನಡೆದ ಸಂಹಾರದ ಪ್ರಸಂಗದಲ್ಲಿ, ಆ ಬಡದೀನಳ ಸಮ್ಮಂಧವು ಏನೂ ಇರಲಿಲ್ಲ. ಇಷ್ಟೇ ಅಲ್ಲದೆ, ತಿರುಗಿ ಆಕೆಯು ಇಂಗ್ರೇಜಿ ಜನಗಳು ಕೋಟೆಯ ವಳಗೆ ಹೋದ ನಂತರ 2 ದಿವಸಗಳವರಿಗೆ ಅವರಿಗೆ ಆಹಾರವನ್ನ ವದಗಿಸಿದಳು. ಮತ್ತು ಕರೇರಾ

---

* ಝಾನ್ಸಿಯಲ್ಲಿನ ಸಂಹಾರದಲ್ಲಿ ವುಳುಕೊಂಡಿದ್ದ ಜನಗಳ ವಿಷಯದಲ್ಲಿ, ಕಮಿಷನರು ಆರ್ಸ್ಕಿನ್ ಸಾಹೇಬನು 1858 ನೆ ಇಸ್ವಿ ಮೇ 6 ನೇ ತಾರೀಖಿನಲ್ಲಿ ಲಂಡನ್ ಗೆಜೆಟ್‌ನಲ್ಲಿ ಸ್ಪಷ್ಟವಾಗಿ ಬರೆದಿರುತ್ತಾನೆ. ಅದರಲ್ಲಿ ಲೆಫ್ಟಿನೆಂಟ್ ಜಿ. ಬ್ರವನ್ ಡೆಪ್ಯುಟಿ ಕಮಿಷನರ್ ಎರ್ ಸಾಯಿನ್ ಬ್ರವನ್ ಮತ್ತು ಲೆ. ಲ್ಯಾಂಬ್ ಇವರಹೆಸರುಗಳಿವೆ. ಅದರಲ್ಲಿ ಮಾರ್ಟಿನ್ ಸಾಹೇಬನ ಹೆಸರು ಕಾಣುವದಿಲ್ಲ.

ಊರಿನಿಂದ 100 ಆಯುಧಶಾಲಿ ಸಿಪಾಯಿಗಳನ್ನ ಕರಸಿ ನಮ್ಮ ಸಹಾಯಕ್ಕೋಸ್ಕರ ಕೋಟೆಯ ಒಳಗೆ ಕಳುಹಿಸಿಕೊಟ್ಟಳು. ಅವರನ್ನ ನಾವು ಒಂದು ದಿವಸ ಇಟ್ಟು ಕೊಂಡು ಸಾಯಂಕಾಲದಲ್ಲಿ ಹಿಂತಿರುಗಿ ಕಳುಹಿಸಿದೆವು. ಅನಂತರ ಆಕೆಯು ಮೇಜರ್ ಸ್ಕೀನ್ ಮತ್ತು ಕ್ಯಾಪ್ಟನ್ ಗಾರ್ಡನ್ ಸಾಹೇಬರಿಗೆ ಕೂಡ್ಲೆ ದತ್ತಿಯಾಕ್ಕೆ ಓಡಿಹೋಗಿ; ಅಲ್ಲಿನ ರಾಜನ ಆಶ್ರಯವನ್ನ ಹಿಡಿಯರಿ ಎಂತ ಸೂಚಿಸಿದಳು. ಪರಂತು ಅವರು ಇಷ್ಟಾದರೂ ಮಾಡಲು ಇಚ್ಛೆ ಪಡಲಿಲ್ಲ. ಅನಂತರ, ನಮ್ಮ ಸೈನ್ಯವೇ ಅಂದರೆ, ಪೋಲೀಸು, ಜೈಲು ಅಧಿಕಾರದ ಮುಂತಾದ ಜನಗಳು ಅವರನ್ನೆಲ್ಲಾ ಸಂಹಾರ ಮಾಡಿದರು.'' *

ಈ ಮಾತನ್ನ ಝಾನಸಿಯಲ್ಲಿ ನಡೆದ ದಂಗೆಯಲ್ಲಿ ಪ್ರತ್ಯಕ್ಷವಾಗಿ ಹಾಜರಿದ್ದ ಒಬ್ಬ ಯುರೋಪಿಯನ್ ಗೃಹಸ್ಥನ ಹೇಳಿಕೆಯಾಗಿದೆ. ಆದ್ದರಿಂದ, ರಾಣಿಸಾಹೇಬಳ ಕಡೆಗೆ ಆ ಸಂಮ್ಮಂಧದ ದೋಷ ಶುದ್ಧಾಂಗ ವುಳಿಯಲಿಲ್ಲ ಎಂಬುವದು ಶಿದ್ಧಾಂತ ವಾಗುತ್ತದೆ. ಈ ಮಹಾತ್ಮೆಯುಳ್ಳ ದೃಷ್ಟಾಂತರಕ್ಕಿಂತಲೂ, ಹೆಚ್ಚಿಗೆ ದೃಷ್ಟಾಂತ ಕೊಡಬೇಕಾದ್ದಕ್ಕೇನೂ ಕಾರಣ ವಿಲ್ಲ. ತಥಾಪಿ, ಆವಿಷಯವಾಗಿ ಸುಪ್ರಸಿದ್ಧವಾದ ಇತಿಹಾಸ ಕಾರಕನಾದ ಕೇ ಸಾಹೇಬನು ಯೇನು ಹೇಳುತ್ತಾನೆಂಬುವದನ್ನು ಸಹ ಇಲ್ಲಿ ತಿಳಿಸುವದು ಅವಶ್ಯವಾಗಿಧೆ. ಆತನು ಬರಿಯುವದೇನಂದರೆ:—

" *I have been informed, on good authority, that none of the*
" *Ranee's Servants were present on the occasion of the Massacre.*
" *It seems to have been mainly the work of our own old followers.*
" *The Irregular Cavalry issued the bloody mandate and our Goal*
" *Darogah was foremost in the but-chery.* (*Page* 369.)"

" ನನಗೆ ಈ ಪ್ರಕಾರ ಸರಿಯಾದ ತಿಳುವಳಿಕೆ ಸಿಕ್ಕಿಧೆ. ಆ ಸಂಹಾರದಲ್ಲಿ ರಾಣಿಯ ಒಬ್ಬ ನೌಕರನೂ ಕೂಡ ಸೇರಿರಲಿಲ್ಲ. ಅದೆಲ್ಲಾ ನಮ್ಮ ಜನಗಳ ಕೆಲಸ ವೇನೆ ಎಂತ ನನಗೆ ತೋರಿಬರುತ್ತದೆ. ಇರ್ರೆಗ್ಯುಲರ್ ಕ್ಯಾವಲರಿಯನ್ನು ಮಾಡಿದರು, ಆ ಭಯಂಕರವಾದ ಅಪ್ಪಣೆಯನ್ನು ಮಾಡಿದರು. ನಮ್ಮ ಜೈಲ್‌ದ ರೋಗನು ಮುಂದಾಳು ತನವನ್ನು ವಹಿಸಿ, ಈ ಕ್ರೂರಸಂಹಾರ ಕೃತ್ಯವನ್ನು ನಡೆಸಿದನು. "

---

* ಈ ಅಸಲು ಪತ್ರವನ್ನ ಶ್ರೀಮಂತ ದಾಮೋದರರಾವು ಸಾಹೇಬನು ನಮ್ಮಕಡೆ ಕಳುಹಿಸಿದ್ದನು. ಅದನ್ನು ಖುದ್ದು ಮಾರ್ಟಿನ್ ಸಾಹೇಬನು ಬರದಿದ್ದನು. ಅದಕ್ಕೆ ಮುಂದೆ, ಟಿ. ಎ. ಮಾರ್ಟಿನ್ ಎಂತ ಸಹಿ ಇತ್ತು. ಈ ಪತ್ರ ಶ್ರೀಮಂತನ ಹತ್ತಿರ ವಿಧೆ.



# ೭ನೇ ಪ್ರಕರಣ.

## "ಮುಂದಿನ ವೃತ್ತಾಂತ."

ಝಾಂಸಿಯಲ್ಲಿ ದಂಗೆಖೋರರು ಯೂರೋಪಿಯನ್ ಜನಗಳನ್ನು ಸಂಹಾರ ಮಾಡಿದನಂತರ ಪಟ್ಟಣದಲ್ಲಿರುವ ಅರಮನೆಗೆಹೋಗಿ ಮಹಾರಾಣಿ ಲಕ್ಷ್ಮೀಬಾಯಿ ಸಾಹೇಬಳಿಗೆ ಈ ಪ್ರಕಾರ ನಿರೂಪ ಮಾಡಿಕೊಂಡರು. "ನಾವು ದಿಲ್ಲೀಕಡೆಗೆ ಹೋಗತಕ್ಕವರಾಗಿದ್ದೇವೆ. ಇದಕ್ಕಾಗಿ ಮೂರುಲಕ್ಷ ರೂಪಾಯಿಗಳನ್ನು ಖರ್ಚಿಗೆ ಕೊಡಿ, ಇಲ್ಲದಿದ್ದರೆ ಒಂದೇ ಉಸುರಿಗೆ ತೋಫು ಹಾರಿಸಿ ಅರಮನೆಯನ್ನು ಹಾರಿಸಿಬಿಡುತ್ತೇವೆ." ಇದನ್ನು ಕೇಳಿದಕೂಡಲೆ ಅರಮನೆಯಲ್ಲಿನ ಸರ್ವ ಮಂಡಲಿಯೂ ಕೇವಲ ಭಯಪಟ್ಟಿತು. ಮಾಮಾ ಸಾಹೇಬ್‌ತಾಂಬೆ, ದಿವಾನ್ ಲಕ್ಷ್ಮಣರಾವ್, ಇವರು ಚಿಂತಾಕ್ರಾಂತರಾಗಿ ರಾಣಿಸಾಹೇಬಳ ಹತ್ತಿರ ಬಂದು ಅವಳನ್ನು ಆ ಸಂಕಟದಿಂದ ಮುಕ್ತರಾಗುವುದಕ್ಕೆ ಉಪಾಯವನ್ನು ವಿಚಾರಿಸಿದರು. ಬಾಯಿಸಾಹೇಬಳು ಜಾತಿಯಲ್ಲಿ ಸ್ತ್ರೀಯಾಗಿದ್ದಾಗ್ಯೂ, ಆಕೆಯ ಧೈರ್ಯವು ಮತ್ತು ಪ್ರಸಂಗಾವಧಾನವು ಅಪೂರ್ವವಾಗಿತ್ತು. ಆಕೆಯು ಯಾವವಿಧದಿಂದಲೂ ಘಾಬರಿಯಾಗದೆ, ಲೀನತಾ ಸ್ವೀಕಾರಮಾಡಿ, ಯುಕ್ತಿಯಿಂದ ಸ್ವಸಂರಕ್ಷಣೆ ಮಾಡಿಕೊಳ್ಳಲು ನಿಶ್ಚಯಿಸಿ, ದಂಗೇಖೋರರ ಮುಖ್ಯಸ್ಥರಿಗೆ ಈ ಪ್ರಕಾರ ಉತ್ತರವನ್ನು ಕಳುಹಿಸಿದಳು. "ನಮ್ಮ ರಾಜ್ಯವನ್ನೆಲ್ಲಾ ಇಂಗ್ರೇಜಿ ಸರಕಾರಕ್ಕೆ ಸೇರಿಕೊಂಡಿರೋಣದರಿಂದ ನಮ್ಮಹತ್ತರ ದ್ರವ್ಯವು ಮೂಲತಃ ಉಳಿಯಲಿಲ್ಲ. ಪ್ರಕೃತ ನಮ್ಮದು ಕೇವಲ ದೀನಸ್ಥಿತಿ ಯಾಗಿದೆ. ಹೀಗಿರುವಾಗ ಇಂಥಾಸಮಯದಲ್ಲಿ ನನ್ನಂಥ ದರಿದ್ರಹೆಂಗಸಿಗೆ ತೊಂದರೆ ಕೊಡುವುದು ನಿಮಗೆ ಯೋಗ್ಯವಾದ್ದಲ್ಲ." ಈ ವಿಧವಾದ ನಿರೂಪವು ದಂಗೇಖೋರರ ಕಡೆಗೆಹೋಯಿತು. ಆದರೆ ಆ ಉನ್ಮತ್ತಜನಗಳು ಏನೂ ಅದರ ವಿಚಾರಮಾಡದೆ ರಾಣಿ ಸಾಹೇಬಳಿಗೆ ಪುನಃ ಈ ರೀತಿ ಉತ್ತರ ಕಳುಹಿಸಿದರು. "ನಿಮ್ಮಕಡೆಯಿಂದ ನಮಗೆ ಖರ್ಚಿಗೋಸ್ಕರ ಏನೂ ರೂಪಾಯಿಗಳು ಸಿಕ್ಕದೆ ಹೋದರೆ ನಾವು ನಿಮ್ಮರಮನೆಯನ್ನು ಬರೆದುಮಾಡಿ ನಮ್ಮಸ್ವಾಧೀನಕ್ಕೆ ಬರುವ ಝಾಂಸೀದೇಶವನ್ನು ನಿಮ್ಮದಾಯಾದಿಯಾದ ಸದಾಶಿವರಾವ್ ನಾರಾಯಣ್ ಕಡೆಗೆ ಕೊಡುತ್ತೇವೆ." ಈ ಮಾತು ಬಾಯಿಸಾಹೇಬಳ ಕಿವಿಗೆ ಬೀಳುತ್ತಲೇ ಆಕೆಯು ನಿರುಪಾಯಳಾದಳು. ಮತ್ತು ಆಕೆಯು ಆಗ ಈ ದಂಗೇ ಖೋರರ ಮುಂದೆ ನಿಲ್ಲಲಿಕ್ಕೆ ಆಗುವದಿಲ್ಲವೆಂಬುವದನ್ನು ನೋಡಿ ತನ್ನಸ್ವಂತದ್ರವ್ಯದ ಪೈಕಿ ಒಂದುಲಕ್ಷ ರೂಪಾಯಿ ಕಿಮ್ಮತ್ತಿನ ಐವಜು

ಅವರ ಸ್ವಾಧೀನಪಡಿಸಿ ತನ್ನ ಸಂರಕ್ಷಣೆಯನ್ನು ಮಾಡಿಕೊಂಡಳು. * ನಂತರ ದಂಗೇಖೋರರು ಅರಮನೆಯ ಮುಂದೆ ಹಾಕಿದ ಮುತ್ತಿಗೆ ತೆಗೆದು ದೊಡ್ಡ ವಿಜಯಾನಂದದಿಂದ ಝಾಂಸಿಯಲ್ಲಿ ತಮ್ಮ ಸರ್ವ ಸೈನ್ಯದ ಮಧ್ಯದಲ್ಲಿ "ಖುಲ್ಕ ಖುದಾಕಾ, ಮುಲ್ಕ ಬಾದಶಹಾಕಾ, ಅಮಲ್ ರಾಣಿ ಲಕ್ಷ್ಮೀಬಾಯಿಕಾ" ಎಂತ ಸಾರಿಕೊಳ್ಳುತ್ತಾ ದಿಲ್ಲಿ, ನೌಗಾಂಗ್ ಮುಂತಾದ ಸ್ಥಳಗಳಿಗೆ ನಡೆಯುತ್ತಾ ಹೋದರು. † ಝಾಂಸಿಯಿಂದ

---

* ಇಂಗ್ರೇಜಿ ಇತಿಹಾಸಕಾರಕ ಕರ್ನಲ್ ಮ್ಯಾಲಿಸನ್ ಸಾಹೇಬನು, ಈ ಸಮ್ಬಂಧದಲ್ಲಿ ಕೇವಲ ತಪ್ಪು ತಿಳುವಳಿಕೆ ಯಿಂದಲೋ ಯೇನೋ, ಈ ವಿಷಯಕ್ಕೆ ಪ್ರತ್ಯೇಕ ರೂಪವನ್ನು ಕೊಟ್ಟಿದ್ದಾನೆ. ಆತನು ಹೇಳುತ್ತಾನೆ :—

"Her conduct after the massacre disclosed the passion of her soul. For a moment it seemed very doubtful whether she would not quarrel with the Sipahis about the division of the spoil. To coerce her the latter even threatened to bring upon the scene an illegitimate relation of the late Rajah as a rival. But the Rani was a very clever a woman. The Sipahis had their price, and she was a prepared to pay it. She wanted the little—they the coin. She gave them the coin; whereupon they proclaimed her Rani of Jhansi."

† ಬುಂದೇಲ್ ಕಂಡದಲ್ಲಿ ಒಬ್ಬ ಡೆಪ್ಯುಟಿ ಕಲೆಕ್ಟರ್ ಮಿ. ಥಾರ್ಟನ್ ಯೆಂಬುವನು ಆಗಸ್ಟ್ ತಾರೀಕು 18 ರಲ್ಲಿ ತನ್ನ ರಿಪೋರ್ಟಿನಲ್ಲಿ ಈ ಪ್ರಕಾರ ಬರೆದಿರುತ್ತಾನೆ :— ಝಾಂಸಿ ರಾಣಿಸಾಹೇಬಳು, ಝಾಂಸಿಯಲ್ಲಿ ನಡೆದ ಸಂಹಾರದಲ್ಲಿ ಪ್ರಮುಖಳಾಗಿದ್ದು, ಅವಳೇನೇ ದಂಗೇಖೋರರಿಗೆ ಸಹಾಯ ಮಾಡಿದಳೆಂತ ಎಲ್ಲಾ ಜನಗಳ ಅಭಿಪ್ರಾಯವಾಗಿದೆ. ಈ ಸಾಹೇಬನು ಇನ್ನೂ ಬರೆಯುತ್ತಾನೆ :—

"The allowed them to be massacred by the Ranee's people in their presence, in a most cruel and brutal manner, having no regard to sex or age. For this act, the mutineers are said to have received from her 35,000 rupees in cash, two elephants, and five horses."

*Further Parlimentary Papers* (No. 4) *P.* 169.

ದಂಗೇಖೋರ ಜನಗಳು ಹೊರಟುಹೋದಮೇಲೆ ರಾಣೀ ಸಾಹೇಬಳು ಫೌಜ್‌ದಾರೀ ಶಿರಸ್ತೇದಾರ್ ಗೋಪಾಲರಾವ್ ಲಘಟೆ, ಸಾಗರ್‌ಕರ್, ಅಹರ್ಸ್‌ಅಲ್ಲಿ, ಸಿರಸ್ತೇದಾರ್ ಮಾಲ್ ಮತ್ತು ಕಮಿಷರ್‌ರೀ ಸಿರಸ್ತೇದಾರ್ ಮುಂತಾದ ದೊಡ್ಡ ದೊಡ್ಡ ಗೃಹಸ್ಥರನ್ನು ಕರೆ ಯಿಸಿಕೊಂಡು ಮುಂದೆ ಏನು ಮಾಡಬೇಕೆಂಬುವದನ್ನು ಕುರಿತು ಅವರ ಸಲಹೆಯನ್ನು ವಿಚಾರಿಸಿದಳು. ದುರ್ದೈವದಿಂದ ಝಾಸಿಯಲ್ಲಿ ಇಂಗ್ರೇಜಿ ಸರಕಾರದ ಕಪ್ಪು

---

ಪರಂತು ರಾಣೀ ಸಾಹೇಬಳು ದಂಗೇ ಜನಗಳಿಗೆ ಸಹಕಾರಿಯಾಗಿದ್ದರೆ, ಆಕೆಯು ಆ ಜನಗಳ ಮನಸ್ಸು ಹಿಡಿದುಕೊಂಡಿರಬೇಕಾದ ಸಂಭವ ಎಂದಿಗೂ ಬರುತ್ತಿರಲಿಲ್ಲ ವೆಂಬು ವದು ಸಣ್ಣ ಹುಡಗರಿಗೆ ಕೂಡ ತಿಳಿಯ ಬಹುದು. ಆದ್ದರಿಂದ ರಾಣಿಸಾಹೇಬಳ ವಿಷ ಯವಾಗಿ ಯುರೋಪಿಯರ್ನ ಜನಗಳಿಗೆ ವ್ಯರ್ಥ ತಪ್ಪುತಿಳುವಳಿಕೆ ಆಗಿದೆಯಂತ ಹೇಳ ಬೇಕಾಗಿದೆ. ಗ್ವಾಲಿಯರ್ ಪುಸ್ತಕದಲ್ಲಿ ಬರೆದಿರುವ ದೇನಂದರೆ, "ದಂಗೇ ಖೋರರು ರಾಣಿಸಾಹೇಬಳ ಅರಮನೆಗೆ ಮುತ್ತಿಗೆ ಹಾಕಿದರು; ಮತ್ತು ನೀವು ಕೋಟೆಗೆ ವಕೀಲ ರನ್ನು ಕಳುಹಿಸಿದ್ದಿರಿ. ಆದ್ದರಿಂದ ಇಂಗ್ರೇಜಿಯವರ ಕಡೆಗೆ ಸೇರಿದ್ದೀರೆಂತ ಹೇಳಿದರು. ಆ ಸಮಯದಲ್ಲಿ ರಾಣಿ ಸಾಹೇಬಳು ಬಹಳ ದೀನಳಾಗಿ, ನಮ್ರತೆಯಿಂದ ಅವರಿಗೆ ಒಂದು ಲಕ್ಷರೂಪಾಯಿ ಕೊಟ್ಟು ತನ್ನ ಪ್ರಾಣವನ್ನು ಉಳಿಸಿಕೊಂಡಳು. ಆ ಸೈನ್ಯದವರು ದ್ರವ್ಯಮಾತ್ರ ತೆಗದುಕೊಂಡು ಹೋದರು." ರಾಣೀ ಸಾಹೇಬಳ ಮಾತೋಶ್ರೀ ಕಡೆ ಆಕೆಯ ಬಂಧು ರಾ. ಸಾ. ಚಿಂತಾಮಣಿರಾವ್ ತಾಂಬೆಯು ಕಳುಹಿಸಿಕೊಟ್ಟರತಕ್ಕ ತಿಳು ವಳಿಕೆಯಲ್ಲಿ ಹೇಳಿರುವದೇನಂದರೆ :— ಇಂಗ್ರೇಜಿ ಸೈನ್ಯದವರು ಕಂಟೋನ್ಮೆಂಟನ್ನೆಲ್ಲಾ ಲೂಟ ಮಾಡಿಕೊಂಡು, ಅರಮನೆಯ ಕಡೆಗೆ ಬಂದರು. ಅವರ ಅಧಿಕಾರಿಯು ಅರ ಮನೆಗೆ ಬಾಯಿ ಸಾಹೇಬಳ ದರುಶನಕ್ಕೆ ಬಂದನು. ಆಕೆಯು ತನ್ನ ತಂದೆ ಮೋರೋ ಪಂತ ತಾಂಬೆಗೆ, ಆ ಉದ್ಯೋಗಸ್ತನ ಭೇಟಿಯನ್ನ ತೆಗದುಕೊಳ್ಳಿಯಂತ ಪ್ರಥಮತಃ ಹೇಳಿದಳು. ನಮ್ಮ ಹಿರಿಯರು ಆತನ ಭೇಟಿಗೆ ಹೋದ ಕೂಡಲೆ, ಸೈನ್ಯದವರು ಆತ ನಿಗೆ ಕೈದು ಮಾಡಿದರು. ಆತನು ಬಾಯಿ ಸಾಹೇಬಳಿಗೆ ಅವರ ವಶವಾಗಬೇಕೆಂತ ಬಹಳವಾಗಿ ಆಗ್ರಹ ಮಾಡಿದನು. ಬಾಯಿ ಸಾಹೇಬಳು ಇನ್ನೊಬ್ಬ ವಕೀಲನನ್ನ ಕಳುಹಿಸಿ ನಮ್ಮ ಹಿರಿಯರಿಗೆ ನೀವು ನಿರ್ಬಂಧದಲ್ಲಿಟ್ಟಿರೋಣದರಿಂದ, ನಿಮಗೆ ಯೇನು ಪ್ರಯೋಜನ ವಿದೆಯಂತ ತಿಳಿಸಿದಳು. ಆತನನ್ನು ಬಿಟ್ಟುಬಿಟ್ಟರೆ, ನಾವು ಎಲ್ಲಾ ಸಂಗತಿಯೂ ವಿಚಾರ ಮಾಡುತ್ತೇವೆ ಯಂತಲೂ ತಿಳಿಸಿದಳು. ಈ ಎಲ್ಲಾ ಸಂಗತಿ ಯನ್ನು ಕುರಿತು, ಬಾಯಿ ಸಾಹೇಬಳ ಕಡೆಯಿಂದ ಇಂಗ್ರೇಜಿಯವರಿಗೆ ಇತ್ತಿಲ್ಲೆ ಕೊಡ ಲ್ಪಟ್ಟಿತು............ಈ ಇಂಗ್ರೇಜಿ ಸೈನ್ಯದವರು ಬಹಳ ನಿರ್ಬಂಧಮಾಡಿ, ಕೆಲವು ರೂಪಾಯಿ ಖರ್ಚಿಗೆ ತೆಗೆದುಕೊಂಡು ಹೋದರು." ಇದರಿಂದ ರಾಣೀ ಸಾಹೇಬಳು ದಂಗೇಖೋರರ ಸಂಗಡ ಯಾವರೀತಿಯಲ್ಲಿ, ನಡಕೊಳ್ಳುತಿದ್ದಳು ಎಂಬುವದು ಚನ್ನಾಗಿ ಸ್ಪಷ್ಟಪಡುತ್ತದೆ.

ಸೈನ್ಯವು ವಿರೋಧವಾಗಿ, ಅವರು ಅಘೋರ ಕೃತ್ಯವನ್ನು ನಡೆಯಿಸಿದ್ದಕ್ಕೋಸ್ಕರ ರಾಣೀ ಸಾಹೇಬಳಿಗೆ ಬಹಳ ವಿಷಾದವಾಗಿತ್ತು. ಅಂಥಾ ಸಂಕಟ ಸಮಯದಲ್ಲಿ ಆಕೆಯು ತನ್ನ ಕೈಲಾದಷ್ಟು ಸಹಾಯವನ್ನು ಇಂಗ್ರೇಜಿಯವರಿಗೆ ಮಾಡಿದ್ದಳು. ಆ ಪ್ರಕಾರ ಆ ಪ್ರಮುಖ ಗೃಹಸ್ತರೆಲ್ಲಾ ಅರಮನೆಗೆ ಬಂದು ರಾಣೀ ಸಾಹೇಬಳಿಗೆ ಈ ಪ್ರಕಾರ ಸಲಹೆ ಕೊಟ್ಟರು.— ಸಾಗರದಲ್ಲಿ ಅದ್ಯಾಪಿ ದಂಗೆ ಹುಟ್ಟಿಲ್ಲ. ಆದರೆ ಝಾಸಿ ವೃತ್ತಾಂತವನ್ನು ಕೇಳಿ, ಅಲ್ಲಿನ ಸೈನ್ಯವು ವಿರೋಧವಾಗಬಹುದಾದ ಸಂಭವ ವಿದೆ. ಆದಕಾರಣ ಅಲ್ಲಿನ ಕಮಿಷನರ್ ಸಾಹೇಬನಿಗೆ ನಡೆದ ವರ್ತಮಾನವನ್ನು ತಿಳಿಸಿ, ಝಾಸಿ ಪ್ರಾಂತ್ಯದ ವ್ಯವಸ್ಥೆಗೆ * ಏನು ಮಾಡಬೇಕೆಂಬುವದನ್ನು ವಿಚಾರಿಸಬೇಕು. ಆ ಪ್ರಕಾರ ಶಿರಸ್ತೇದಾರ್ ಗೋಪಾಲರಾಯನು ತಾನು ಒಂದು ಲಿಖಿತ ಬರೆದು ಅಲ್ಲಿಗೆ ಕಳುಹಿಸಿದನು. ಅದರ ಯೋಗದಿಂದ ಅಲ್ಲಿನ ಅಧಿಕಾರಿಯು ಎಚ್ಚರಾಗಿ ಸ್ವಸಂರಕ್ಷಣೆಗೆ ಒಳ್ಳೇ ಏರ್ಪಾಟು ಮಾಡಿಕೊಂಡನು. † ಮತ್ತು ಝಾಸೀ ಪ್ರಾಂತ್ಯದ

---

* ಮ್ಯಾಲಿಸ್ಸ್ ಸಾಹೇಬನು ಹೀಗೆ ಬರೆಯುತ್ತಾನೆ..

"ದಂಗೇಖೋರರು ಝಾಸಿ ರಾಣಿಯನ್ನು ನಾವು ಗಾದಿಯಮೇಲೆ ಕೂಡಿಸಿದ್ದೇವೆ ಇನ್ನು ಮುಂದೆ ಸರ್ವ ಕಾರಭಾರವು ಆಕೆಯ ಹೆಸರಿನಲ್ಲಿ ನಡೆಯಬೇಕು. ಎಂತ ಅಲ್ಲಲ್ಲಿ ಮೇಜಸ್ಟ್ರೇಟು ಜನಗಳಿಗೆಲ್ಲಾ ಬರದು ಕಳುಹಿಸಿದರು. ಈ ಸಂಗತಿಯನ್ನು ನಾಗಾಂಗದ ಲಷ್ಕರೀ ಅಧಿಕಾರಿ ಮೇಜರ್ ಕರ್ಕ ಸಾಹೇಬನಿಗೆ ಮಹಾರಾಣೀಪುರದ ತಿವಾರೀ ಹುಸೇನ್ ಎಂಬ ತಹಸೀಲ್ದಾರನು ತಿಳಿಸಿದನು. ಪರಂತು ಆತನ ವಿಷಯ ರಾಣೀ ಸಾಹೇಬಳ ಕಡೆ, ಹ್ಯಾಗೆ ಬರುತ್ತದೆಯೋ ತಿಳಿಯುವದಿಲ್ಲ."

† ಈ ಸಂಗತಿ ಗ್ವಾಲಿಯರ್ ಪುಸ್ತಕದಲ್ಲಿ ಬರೆದಿದೆ. ಇತರ ಸ್ಥಳದ ಪುಸ್ತಕದಲ್ಲಿ ಅಲ್ಲಲ್ಲಿ ಸಾಹೇಬ್ ಜನಗಳಿಗೆ ರಾಣೀ ಸಾಹೇಬಳು ಖಲೀತೆಮಾತ್ರ ಕಳುಹಿಸಿಕೊಟ್ಟಳು ಎಂತ ಬರೆಯಲ್ಪಟ್ಟಿದೆ. ಇದನ್ನು ಕುರಿತು ಇಂಗ್ರೇಜಿ ಇತಿಹಾಸಕಾರಕರು ಯಾರೂ ವಿವರವಾಗಿ ತೋರಿಸಿರುವದಿಲ್ಲ. ಆದಾಗ್ಯೂ ರಾಣೀ ಸಾಹೇಬಳು ಸಾಗರಕ್ಕೆ ಕಳುಹಿಸಿ ಕೊಟ್ಟ ಖಲೀತಾದಿಂದ ಒಳ್ಳೇ ಉಪಯೋಗ ವಾಯಿತೆಂತ ಹೇಳುವದಕ್ಕೆ ಇನ್ನೊಂದು ದೃಷ್ಟಾಂತರವಿದೆ. 31 ಮತ್ತು 42 ನೇ ಎರಡು ಕಪ್ಪು ಪಟಾಲಂ ಮತ್ತು ಮೂರನೇ ಇರಸಾಲೆ ಸೈನ್ಯ ಸಹ ಸಾಗರದಲ್ಲಿತ್ತು.. ಅದರಮೇಲೆ ಬ್ರಿಗೇಡಿಯರ್ ಸೇಲ್ ಸಾಹೇಬನು ಮುಖ್ಯಾಧಿಕಾರಿಯಾಗಿದ್ದನು. ಅದೇಪ್ರಕಾರವಾಗಿ ಅಲ್ಲಿ ಕ್ಯಾಪ್ಟನ್ ಪಿವನೇ (ಈತನೇ ಮುಂದೆ ಝಾಸಿ ಕಮಿಷನರಾದನು) ಡೆಪ್ಟಿ ಕಮಿಷನರಾಗಿದ್ದನು. ಆತನ ಮುಂಜಾಗ್ರತೆಯ ವ್ಯವಸ್ಥೆಯಿಂದ ಸಾಗರದಲ್ಲಿ ದಂಗೇಖೋರರ ಯತ್ನವೇನೂ ಸಾಗಲಿಲ್ಲ. ಇಷ್ಟೇ ಅಲ್ಲದೆ 31 ನೇ ಪಟಾಲಂನವರು ರಾಜನಿಷ್ಠೆಯುಳ್ಳವರಾಗಿದ್ದು ದಂಗೇ

ಎಲ್ಲಾ ವ್ಯವಸ್ಥೆಯನ್ನು ಎರಡನೆಯ ಯೂರೋಪಿರ್ಯ ಅಧಿಕಾರಿ ಬರುವ ವರೆಗೂ ರಾಣೀ ಸಾಹೇಬಳ ಕಡೆಗೆ ವಹಿಸಿಬಿಟ್ಟಾಯೆಂತ ಹೇಳುತ್ತಾರೆ. ಆ ಸಮಯದಲ್ಲಿ ರಾಣೀ ಸಾಹೇಬಳ ಹತ್ತರದಲ್ಲಿ ಮುತ್ಸದ್ದಿ ಮುಂತಾದವರು ಯಾರೂ ಇರಲಿಲ್ಲ. ರಾಜ್ಯವು ಸರಕಾರಕ್ಕೆ ಸೇರಿದ ತರುವಾಯ ಪುಷ್ಕಳ ಜನಗಳು ಹೊರಟುಹೋದರು. ಮತ್ತು ಕೆಲವರು ಮನೆಯಲ್ಲಿ ಸ್ವಸ್ಥವಾಗಿ ಕೂತುಕೊಂಡರು. ಆದಕಾರಣ ಏನಾದರೂ ರಾಜ ಕಾರ್ಯದ ಮಾತು ಬಂದರೆ ಅರಮನೆಯಲ್ಲಿ ಅದರ ವಿಚಾರವು ಸರಿಯಾಗಿ ನಡೆಯುತ್ತಿರ ಲಿಲ್ಲ. ರಾಣೀ ಸಾಹೇಬಳು ಕುಶಾಗ್ರಬುದ್ಧಿಯುಳ್ಳವಳಾಗಿಯೂ, ಚತುರಳಾಗಿಯೂ ಇದ್ದಾಗ್ಯೂ ಆಕೆಯು ಘರದೆಯೊಳಗೆ ಇರುತ್ತಿದ್ದಳಾದ್ದರಿಂದ ಕಾರಭಾರಿ ಮಂಡಲಿಯಿಂ ದಲೇ ಎಲ್ಲಾ ಸಂಗತಿಯು ತೀರ್ಮಾನವಾಗುತ್ತಿತ್ತು. ಮಾಮಾಸಾಹೇಬ್ ತಾಂಬೆಯು, ಖಾಸಗೆ ದೀವಾನನಾಗಿದ್ದನು, ಲಕ್ಷ್ಮಣರಾವ್ ಭಾಂಡೆ ಸರ್ವ ಆಡಳಿತವನ್ನು ನೋಡು ತ್ತಿದ್ದನು. ಮಾಮಾಸಾಹೇಬನು ಅರಮನೆಯಲ್ಲಿ ಸಂಪೂರ್ಣ ತಿಳುವಳಿಕೆಯುಳ್ಳವ ನಾಗಿಯೂ, ಇರಲಿಲ್ಲ. ಲಕ್ಷ್ಮಣರಾಯನು ಪೂರ್ವದಲ್ಲಿ ಖಾಸಗಿಯಲ್ಲಿ ಒಬ್ಬ ಬರಹ ಗಾರನಾಗಿದ್ದು, ಈಗ ರಾಣೀ ಸಾಹೇಬಳ ಕಾರಭಾರೀ ಪದವಿಗೆ ಬಂದಿದ್ದನು. ಆತನಲ್ಲಿ ರಾಜ್ಯ ಸೂತ್ರವನ್ನು ನಡೆಸುವದಕ್ಕೆ ಅವಶ್ಯಕವಾದ ಒಂದು ಗುಣವೂ ಇರಲಿಲ್ಲ. ಆತನ ತರುವಾಯ ಆತನ ಚಿರಂಜೀವಿ ಗಂಗಾಧರರಾವ್ ಲಕ್ಷ್ಮಣ್ ಮತ್ತು ಝಾಂಸೀಕರರ ಅಣ್ಣತಮ್ಮಂದಿರು ಕಾಶೀನಾಥ ಹರಿ ನೇವಾಳಕರ್ ಮುಂತಾದ ಬಹಳ ಜನಗಳಿದ್ದರು. ಆದರೆ ರಾಜಕೀಯ ಸಂಬಂಧದಲ್ಲಿ ದೂರದೃಷ್ಟಿಯಿಟ್ಟು ಒಳ್ಳೇ ಸಲಹೆಯನ್ನು ಕೊಡ ತಕ್ಕಂಥ ಹೊಸ ತಿಳುವಳಿಕೆಯುವರು ಯಾರೂ ಉಳಿದಿರಲಿಲ್ಲ. ಆದಕಾರಣ ರಾಜ್ಯದ ವ್ಯವಸ್ಥೆಯನ್ನ ಸರಿಯಾಗಿ ನಡೆಸುವುದಕ್ಕೋಸ್ಕರ ಇಂಗ್ರೇಜಿಯುವರ ಕಡೆಯಿಂದ ಬರೆದು ಬಂದಿದ್ದನ್ನು ಕುರಿತು, ಅವರು ಪತ್ರ ವ್ಯವಹಾರ ಮುಂತಾದ್ದನ್ನ ಸರಿಯಾದ ರೀತಿ ಯಿಂದ ಇಟ್ಟು, ರಾಣೀ ಸಾಹೇಬಳ ನಿಜವಾದ ಉದ್ದೇಶ್ಯವನ್ನು ಮತ್ತು ಮಿತ್ರಭಾವ ವನ್ನೂ ಇಂಗ್ರೇಜಿಯುವರಿಗೆ ತಿಳಿಸುವ ಪ್ರಯತ್ನ ಮಾಡಲಿಲ್ಲ. ತಿರುಗಿ ಅವರು ಸಿರಸ್ತೇ ದಾರ್ ಗೋಪಾಲರಾಯನಂಥ ತಿಳುವಳಿಕೆಯುಳ್ಳ ಗೃಹಸ್ಥನನ್ನ ರಾಜ್ಯದಿಂದ ಹೊರಗೆ ಹಾಕಿಬಿಟ್ಟರು. ಆದಕಾರಣ ಇಂಗ್ರೇಜಿ ತಿಳಿದಂಥಾ ಮನುಷ್ಯನೊಬ್ಬನೂ ಝಾಂಸೀ ದರ್ಬಾರಿನಲ್ಲಿ ಇಲ್ಲದೇ ಹೋಗಿ, ಸರ್ವವೂ ಅವ್ಯವಸ್ಥತೆ ಮತ್ತು ತಪ್ಪು ತಿಳುವಳಿಕೆಗೆ ಬಂತು. ದೇಶದ ಸಂರಕ್ಷಣೆಗೋಸ್ಕರ ಹೊಸದಾಗಿ ನೇಮಿಸಲ್ಪಟ್ಟ ಜನಗಳೆಲ್ಲರೂ—ಓರ್ಛಾ ಮುಂತಾದ ಸಂಸ್ಥಾನದಿಂದ ಬಂದವರು. ಇವರು ಅರಾಜನಿಷ್ಟರು ಮತ್ತು ಅನನು

---

ಚೋರರನ್ನು ಬಹಳವಾಗಿ ಚದರಿಸಿಬಿಟ್ಟರು. ಹೆಚ್. ಸಿ. ಟಿಕ್ಕರ್ ಸಾಹೇಬನು ಇದನ್ನು ಕುರಿತು ಬರೆಯುವದೇನಂದರೆ ;— "*Well done,* 3151—1 *This is worth all the volunteering in the world.*"

ಭವಿಗಳಾಗಿದ್ದರು. ಆದಕಾರಣ ರಾಣೀ ಸಾಹೇಬಳ ನಿಜವಾದ ಉದ್ದೇಶ್ಯವು, ಇಂಗ್ರೇಜಿ ಅಧಿಕಾರಿಗೆ ತಿಳಿಯುವದಕ್ಕೆ ಮಾರ್ಗವಿಲ್ಲದಂತಾಯಿತು. ಬಾಯಿಸಾ ಸಾಹೇಬಳು ತನ್ನ ಮನಸ್ಸಿನಂತೆ ಇಂಗ್ರೇಜಿ ಅಧಿಕಾರಿಗಳಿಗೆ ಪತ್ರ ಮುಂತಾದ್ದು ಹೋಗುತ್ತಿದೆಯಂತ ತಿಳಿದುಕೊಂಡಿದ್ದಳು. ಆದರೆ ಅದು ಕೇವಲ ತಪ್ಪು ತಿಳುವಳಿಕೆಯಾಗಿತ್ತು. ಆ ಪ್ರಕಾರವಾಗಿ ಕಾರಭಾರೀ ಜನಗಳು ನಡೆದುಕೊಳ್ಳುತ್ತಿದ್ದರೆಂತ ಹೇಳುವದಕ್ಕೆ ಆಗುವದಿಲ್ಲ. ಆದಾಗ್ಯೂ ರಾಣೀ ಸಾಹೇಬಳು ತನ್ನ ಕಡೆಯಿಂದ ಇಂಗ್ರೇಜಿ ಅಧಿಕಾರಿಗೆ ಪ್ರೇಮಭಾವದಿಂದ ಪತ್ರ ಕಳುಹಿಸಿಕೊಡುವುದಕ್ಕೂ, ಮತ್ತೂ ದೇಶದ ರಕ್ಷಣೆಯ ವರ್ತಮಾನವನ್ನು ಅವರಿಗೆ ತಿಳಿಸುವುದಕ್ಕೂ ಪ್ರಯತ್ನ ಮಾಡಿದಳು ಎಂಬುವುದು, ಸ್ಪಷ್ಟವಾಗಿತ್ತು. ಝಾನ್ಸೀ ಕಮಿಷನರ್ ಕ್ಯಾಪ್ಟನ್ ಪಿನ್ಕ್ನೇಯು, * ಇದನ್ನು ಕುರಿತು ಸ್ಪಷ್ಟವಾಗಿ ಬರೆದಿರುತ್ತಾನೆ.—

"It is stated on the most trustworthy authority, that at the same time, she endeavoured to keep terms with our Government, by writing to the Commissioner

---

* ಕ್ಯಾಪ್ಟನ್ ಪಿನ್ಕ್ನೇ ಸಂಬಂಧವಾಗಿ ಮುಂದಿನ ತಿಳುವಳಿಕೆಯು ಸಿಕ್ಕುತ್ತದೆ:—

"Mr. Pinknay, after a short service in Arracan, was transferred in 1849 to the Saugor and Nerbudda Commission, which administered the affairs of a large province of Central India. In this new territory he laboured, as he had done in Goomsar, with great intelligence and with steadfast zeal and singleness of purpose. He gradually rose to the important office of Commissioner of Jhansi, and his abilities were conspicuously displayed, to the great advantage of the public service in the days of the Revolt. He was among those who received the companionship of the Bath, for their exertions upon that occasion. He has since died, leaving behind him the reputation of a soldier of brilliant courage, an excellent political officer, and an honest and upright man."

of Jubbulpore and to others, lamenting the massacre of our countrymen; stating she was in no way concerned in it, and declaring that she only held the Jhansi District, till our Government could make arrangements to re-occupy it."

"ನಂಬುವುದಕ್ಕೆ ಅರ್ಹವಾದ ರುಜುವಾತಿನಿಂದ ಆ ಸಮಯದಲ್ಲಿ ರಾಣೀ ಸಾಹೇಬಳು ಜಬ್ಬಲ್ಪುರದ ಕಮಿಷನರ್ ಮತ್ತು ಇತರ ಸಾಹೇಬ್ ಜನಗಳಿಗೆ ಖಲೀತೆಯನ್ನು ಕಳುಹಿಸಿ ಸರ್ಕಾರದವರ ಸಂಗಡ ಸ್ನೇಹವಿಟ್ಟುಕೊಳ್ಳುವುದಕ್ಕೆ ಪ್ರಯತ್ನ ಪಟ್ಟಳು. ಮತ್ತು ಅದರಲ್ಲಿ ಯುರೋಪಿಯನ್ ಜನಗಳ ಸಂಹಾರವಾದದ್ದರಲ್ಲಿ ಸ್ವಲ್ಪವೂ ತನ್ನ ಸಂಬಂಧ ವಿರಲಿಲ್ಲವಾದ್ದರಿಂದ ನನಗೆ ಬಹಳ ದುಃಖವಾಗುತ್ತದೆ. ಸರಕಾರದ ರಾಜಸತ್ವವು ಝಾಸಿಯಲ್ಲಿ ಸ್ಥಾಪಿತವಾಗುವ ವರೆಗೂ ರಾಜ್ಯ ವ್ಯವಸ್ಥೆಯನ್ನು ತಾನು ನಡೆಸುತ್ತಾ ಇದ್ದೇನೆ."

ಇದು ಹೊರ್ತು ಈ ಖಲೀತಾ ಪತ್ರವನ್ನು ತನ್ನ ಕೈಯಿಂದ ಪ್ರತ್ಯಕ್ಷ ಕೊಟ್ಟೆ ಯಂತ ಹೇಳುವ ಗೃಹಸ್ಥ ಮಾರ್ಟಿನ್ ಸಾಹೇಬನು ಅದ್ಯಾಪಿ (1894 ನೇ ಇಸವಿ) ಜೀವಂತನಾಗಿದ್ದಾನೆ. ಅದನ್ನು ಶ್ರೀಮಂತ ದಾಮೋದರರಾವ್ ಸಾಹೇಬನ ಪತ್ರದಲ್ಲಿ ಬರೆಯುತ್ತಾನೆ:—

"She sent Kharieetas to Colonel Erksine at Jubbulpore, to Colonel Frazer, Chief Commissioner of Agra, which *I handed to him with my own hand*, to hear her explanation, but no! Jhansi had been a by-word and was condemned unheard!"

ಇದರಿಂದ ರಾಣೀ ಸಾಹೇಬಳು ಇಂಗ್ರೇಜಿಯವರಿಗೆ ವಿರುದ್ಧಳಾಗಿರಲಿಲ್ಲ. ಇಂಗ್ರೇಜಿ ಸರ್ಕಾರದವರು ಝಾಸಿಯಲ್ಲಿ ಯಾರೂ ಇಲ್ಲದೇ ಹೋದ್ದರಿಂದ ಅವರ ಅಪ್ಪಣೆ ಪ್ರಕಾರ ಆ ಪ್ರಾಂತ್ಯದ ರಾಜ್ಯ ವ್ಯವಸ್ಥಾ ಮಾಡಲು ಪ್ರಾರಂಭಿಸಿದಳೆಂತ ಕಂಡು ಬರುತ್ತದೆ.

ಇದುಹಾಗಿರಲಿ! ಝಾಸೀ ಪ್ರಾಂತ್ಯದ ಮೇಲೆ ಬ್ರಿಟಿಷ್ ರಾಜಸತ್ವವು ಶುದ್ಧಾಂಗವಾಗಿ ವುಳಿಯಲಿಲ್ಲ. ಆ ಪ್ರಾಂತ್ಯದ ಸ್ವಾಮಿತ್ವವು ಮಹಾರಾಣಿ ಲಕ್ಷ್ಮೀಬಾಯಿ ಸಾಹೇಬಳ ಕಡೆಗೆ ಬಂತೆಂತ ತಿಳಿದು, ಕೆಲವು ರಾಜ್ಯ ಲೋಭಿಗಳಾದ ಪುರುಷರು, ತಮ್ಮ ದುರಾಶೆಯನ್ನು ಸಾಧಿಸಲು ಪ್ರಯತ್ನಪಟ್ಟರು. ರಾಣೀಸಾಹೇಬಳು ಅಂತಃಪುರದ ಸಾಮಾನ್ಯ ಸ್ತ್ರೀಯಾಗಿದ್ದಾಳೆ. ತಮ್ಮಮುಂದೆ ಆಕೆಯದೇನು ನಡೆದೀತು ? ಇಂಥ ಭ್ರಮೆಯುಳ್ಳ ವಿಚಾರವನ್ನ ಮನಸ್ಸಿಗೆ ತಂದು, ಝಾಸೀ ಸಂಸ್ಥಾನದ ರಾಜಮನೆತನದ ದಾಯಾದಿ ಸದಾಶಿವ ನಾರಾಯಣನು, ಆ ಸಮಯದಲ್ಲಿ ಸುಲಭವಾಗಿ ಕಾಣುತ್ತಿದ್ದ ರಾಜ್ಯಪದವಿ

ಯನ್ನು ಸಂಪಾದಿಸಿಕೊಳ್ಳಲು ಉದ್ಯುಕ್ತ ನಾದನು. 2 ನೇ ರಘುನಾಥರಾಯನು, ಝಾಸೀ ರಾಜ್ಯವನ್ನು ಸಂಪಾದಿಸಿ ಕೊಳ್ಳುವದಕ್ಕಿಂತ ಮುಂಚೇನೆ, ಆತನ ಹಿರಿಯರು ಹರಿದಾಮೋದರ್ ಮತ್ತು ಆತನ ಬಂಧು ಸದಾಶಿವ ದಾಮೋದರ್ ಇವರು ವಿಭಕ್ತರಾಗಿ ಹೋಗಿದ್ದರು. ಆದಕಾರಣ ಝಾಸೀ ಸಂಸ್ಥಾನಕ್ಕೆ ಸದಾಶಿವ ದಾಮೋದರನಿಗೆ ಶುದ್ಧಾಂಗ ಸಮ್ಮಂಧವಿಲ್ಲದೇ ಇದ್ದದ್ದರಿಂದ, ಅವನು ಪೋರವಳೆಯಲ್ಲಿ ಅರ್ಧ ಜಹಗೀರಿಮೇಲೆ ತನ್ನ ನಿರ್ವಾಹವನ್ನು ಮಾಡಿಕೊಳ್ಳುತ್ತಿದ್ದನು. ಆತನ ವಂಶದಲ್ಲಿ ಮುಂದೆಹುಟ್ಟಿದ ಪುರುಷ ಈ ಸದಾಶಿವ ನಾರಾಯಣನಿಗೆ ಝಾಸೀ ಗದ್ದಿಗೆಯಮೇಲೆ ಶುದ್ಧಾಂಗ ಹಕ್ಕು ಇಲ್ಲದೇ ಇದ್ದಾಗ್ಯೂ ಮಹಾರಾಜ ಗಂಗಾಧರರಾವ್ ಕೈಲಾಸ ವಾಸಿಯಾದಮೇಲೆ 1855 ನೇ ಇಸವಿ ಅಕ್ಟೋಬರ್ ತಿಂಗಳಲ್ಲಿ ಝಾಸಿಗೆ ಬಂದನು. ಆಕಾಲದಾರಭ್ಯ ಆತನು ಝಾಸಿ ಪೊಲಿಟಿಕಲ್ ಏಜಂಟಿನ ಮೂಲಕ ಇಂಗ್ರೇಜಿ ಸರಕಾರಕ್ಕೆ ಅನೇಕ ವಿಜ್ಞಾಪನ ಪತ್ರಿಕೆಗಳನ್ನು ಕಳುಹಿಸಿ ರಾಜ್ಯವನ್ನು ಸಂಪಾದಿಸಿಕೊಳ್ಳುವದಕ್ಕಾಗಿ ಪುಷ್ಕಳ ಪ್ರಯತ್ನ ಮಾಡಿದನೆಂಬುವದನ್ನು ಕುರಿತು, ಹಿಂದಿನ ಪ್ರಕರಣದಲ್ಲಿ ಹೇಳಿದೆ. ಆತನ ಹಕ್ಕನ್ನು ಹಿಂದುಸ್ಥಾನದ ಸರಕಾರದವರು ಒಪ್ಪಿಕೊಳ್ಳಲಿಲ್ಲ ವಾದ್ದರಿಂದ ಆತನು ಇಂಗ್ರೇಜಿ ಸರಕಾರದವರಿಗೆ ವಿರೋಧಿಯಾಗಿ ಹೋಗಿದ್ದನು. ಆತನಿಗೆ ಅನಾಯಾಸದಿಂದ ಝಾಸಿಯಲ್ಲಿ ನಡೆದ ದಂಗೆಯು ಉತ್ತಮ ಸಮಯವಾಗಿ ದೊರಕಿದ್ದರಿಂದ, ಆತನು ಸ್ವತಂತ್ರವಾಗಿ ಹೋಗಿ ಝಾಸೀ ಪ್ರಾಂತ್ಯವನ್ನು ತನ್ನ ಅಧೀನ ಪಡಿಸಿಕೊಳ್ಳುವದಕ್ಕೆ ಆರಂಭಿಸಿದನು. ಪ್ರಥಮದಲ್ಲಿ ಆತನು ತನ್ನ ಕೈಕೆಳಗೆ 200, 300 ಜನಗಳನ್ನಿಟ್ಟು ಕೊಂಡು ಝಾಸಿಯ ನೆರೆಹೊರೆಯ ದೇಶವನ್ನು ಸ್ವಾಧೀನ ಪಡಿಸಿಕೊಳ್ಳಲು ಪ್ರಯತ್ನ ಮಾಡಿದನು. ಝಾಸಿಯಿಂದ 30 ಮೈಲಿಗಳಲ್ಲಿ ಕರೋರಾ ಎಂತ ಒಂದು ಬಲವಾದ ಕೋಟೆಯಿದೆ. ಅದನ್ನು 1857 ನೇ ಇಸವಿ ಜೂನ್ ತಾರೀಖು 13 ನೇ ದಿವಸ ಆತನು ಅಲ್ಲಿನ ಇಂಗ್ರೇಜಿ ಸರಕಾರದ ಠಾಣೇದಾರ್ ಮತ್ತು ತಹಸೀಲ್‌ದಾರ್ರನ್ನ ಹೊರಗೆಹಾಕಿ, ತನ್ನ ಅಧೀನ ಪಡಿಸಿಕೊಂಡು ಅದರಮೇಲೆ ತನ್ನ ಕಡೆ ಹೊಸ ಸೈನ್ಯವನ್ನಿಟ್ಟು, ಅದನ್ನು ಬಲಪಡಿಸಿಕೊಂಡನು. ಈ ಪ್ರಕಾರವಾಗಿ ಸ್ವಲ್ಪ ಅಧಿಕಾರವು ಕೈಯಿಗೆ ಬರುತ್ತಲೇ ನೆರೆಹೊರೆ ಠಾಕೂರು ಜನಗಳ ಮೇಲೆ ಬಲವಂತಮಾಡಿ, ಅವರಿಂದ ಧಾನ್ಯಮತ್ತು ದ್ರವ್ಯವನ್ನು ತೆಗೆದುಕೊಳ್ಳಲು ಉದ್ಯುಕ್ತನಾದನು. ಮತ್ತು ಸ್ವಲ್ಪಕಾಲದಲ್ಲಿಯೇ ಕರೋರಾಕಿಲ್ಲೆಯ ಮೇಲೆ ತನಗೆ ಝಾಸೀ ಸಂಸ್ಥಾನದ ರಾಜ್ಯಾಭಿಷೇಕ ಮಾಡಿ ಕೊಂಡು "ಮಹಾರಾಜ ಸದಾಶಿವರಾವ್ ನಾರಾಯಣ" ಎಂತ ಪದವಿಯನ್ನು ಧಾರಣ ಮಾಡಿಕೊಂಡನು. * ಆ ಸಮಯದಲ್ಲಿ ಆತನು ತನ್ನ ಸಹಿಯ ಪ್ರಕಟನ ಪತ್ರಿಕೆ

---

* ಈ ಸಂಬಂಧದಲ್ಲಿ ಕೇ ಸಾಹೇಬನು ಈ ರೀತಿ ಬರೆಯುತ್ತಾನೆ:—

"It should be mentioned here that, finding his claims disallowed, Sadashio Rao collected some three

ಯನ್ನು ಪ್ರಸಿದ್ಧಪಡಿಸಿ ಊರೂರಿನ ಠಾಣೇದಾರರುಗಳಿಗೆ ತನ್ನ ಹೆಸರಿನಿಂದ ನಿರೂಪಗಳನ್ನು ಕಳುಹಿಸಿಕೊಟ್ಟನು. ರಾಜಪುರದ ದಿಹಿಲ್ಲಾದ ಠಾಣೇದಾರ್ ಗುಲಾಂ ಹುಸೇನ್ ಸಾಹೇಬನಿಗೆ ಆಷಾಢವದ್ಯ ೮ ಸಂವತ್ 1914 ನೇ ದಿವಸ ತನ್ನ ಸ್ವೈ ಮೊಹರಿನಿಂದ ಅಪ್ಪಣೆ ಕಳುಹಿಸಿ ಆತನಿಗೆ ತಿಳಿಸಿದ್ದೇನೆಂದರೆ " ನಿಮಗೆ ರಾಜಪುರದ ದಿಹಲ್ಲಾದ ಠಾಣೇದಾರೀ ಕೆಲಸ ಕಾಯಂ ಮಾಡಿದೆ. ನೀವು ಆ ಕೆಲಸವನ್ನು ನಮ್ಮ ಹೆಸರಿನಿಂದ ನಡೆಸಿಕೊಳ್ಳುತ್ತಾ, ನಿಮ್ಮ ಠಾಣ್ಯಾದ ಕೆಳಗಿನ ಎಲ್ಲಾ ಊರುಗಳಲ್ಲಿಯೂ, ಮಹಾರಾಜ ಸದಾಶಿವರಾವ್ ನಾರಾಯಣ, ಝಾನ್ಸಿಯ ರಾಜನಾಗಿದ್ದಾನೆಂತ ಡಂಗೂರ ಹೊಡೆಯಿಸಬೇಕು." ಆ ಟಾಣೇದಾರನು, ಆ ಹುಕುಂಗೆ ಮರ್ಯಾದೆ ಕೊಡಲಿಲ್ಲ. ಆಗ ಸದಾಶಿವರಾಯನು ಆಷಾಢ ವದ್ಯ 10, 1914 ರಲ್ಲಿ ಇನ್ನೊಂದು ಅಪ್ಪಣೆ ಕಳುಹಿಸಿ ಗುಲಾಂ ಹುಸೇನನನ್ನ ಆ ಉದ್ಯೋಗದಿಂದ ತಪ್ಪಿಸಿದನು. ಅಲ್ಲದೆ ಆತನ ಕುದುರೆ ಮತ್ತು ಸಾಮಾನನ್ನು ಸುಲುಕೊಂಡನು. ಈ ಪ್ರಕಾರವಾಗಿ ಝಾನ್ಸೀ ಮಾಧ್ಯದಲ್ಲಿ ಸದಾಶಿವರಾಯನು ಅವಿವೇಕವಾದ ಆಳ್ವಿಕೆಗೆ ಪ್ರಾರಂಭಿಸಿದನು. ಈಸಮಾಚಾರವು ರಾಣಿಸಾಹೇಬಳಿಗೆ ತಿಳಿಯಿತು. ಆಗ ಆಕೆಯು ಸದಾಶಿವರಾಯನನ್ನ ದಂಡಿಸುವುದಕ್ಕಾಗಿ, ಒಂದು ಸಾವಿರ ಜನಗಳನ್ನು ಹೊಸದಾಗಿ ನೇಮಿಸಿಕೊಂಡು ಅವರನ್ನು ಆ ಕಡೆಗೆ ಕಳುಹಿಸಿದಳು. ಆ ಸೈನ್ಯವು ಕರೇರಾ ಕೋಟೆಗೆ ಮುತ್ತಿಗೆ ಹಾಕಿ ಅದನ್ನು ಸ್ವಾಧೀನ ಪಡಿಸಿಕೊಂಡಿತು. ಇದನ್ನು ನೋಡಿದ ಕೂಡಲೆ, ಮಹಾರಾಜ ಸದಾಶಿವರಾಯನು ಸಿಂಧ್ಯಾನ ದೇಶದಲ್ಲಿನ ನರವರಯೆಂಬ ಊರಿಗೆ ಪಲಾಯನ ಮಾಡಿದನು. ಅಲ್ಲಿ ಅವನು ಪುನಃ ಸೈನ್ಯ ಸೇರಿಸಿಕೊಂಡು, ಝಾನ್ಸಿಯನ್ನು ತೆಗದುಕೊಳ್ಳುವ ಉಪಾಯವನ್ನು ನಡೆಸಿದನು. ಈ ವರ್ತಮಾನವು ರಾಣೀ ಸಾಹೇಬಳಿಗೆ ತಿಳಿದ ಕೂಡಲೆ ಆಕೆಯು ತನ್ನ ಇನ್ನೂ ಕೆಲವು ಸೈನ್ಯವನ್ನು ಅಲ್ಲಿಗೆ ಕಳುಹಿಸಿ, ಆ ಝಾನ್ಸಿಯ ಸ್ವಯಂಕೃತ ಮಹಾರಾಜನನ್ನು ಹಿಡಿತರಿಸಿ, ಝಾನ್ಸೀ ಕೋಟೆಯಲ್ಲಿ ಶೆರೆಮನೆಯಲ್ಲಿಡಿಸಿದಳು. ಅಲ್ಲಿ ಅವನು ಪುಷ್ಕಳದಿವಸ ಶೆರೆಮನೇ ವಾಸದುಪಭೋಗವನ್ನು ತೆಗೆದುಕೊಳ್ಳುತ್ತಿದ್ದನು. ಈ ರೀತಿಯಾಗಿ ರಾಣೀ ಸಾಹೇಬಳು ಇಂಗ್ರೇಜಿಯವರ

---

thousand men, seized the fort of Karrara, and issued a proclamation saying, "Maharajah Sadashio Rao Narain has seated himself on the throne of Jhansi at Karrara." It was a very uneasy and unstable seat, for, the Ranee despatched a body of troops against him and he was feign to escape into scindia's territory."

*Kay's History of the Sepoy War P.* 371.

ಒಬ್ಬ ಶತೃವನ್ನು ದಂಡಿಸಿ, ದೇಶವಲ್ಲಿ ಶಾಂತತೆಯನ್ನುಂಟುಮಾಡಿದಳು. ಇದರ ಯೋಗ ದಿಂದ ಬುಂದೇಲೆಯು ಠಾಕೂರು ಮುಂತಾದ ಜನಗಳಿಗೆ ರಾಣೀ ಸಾಹೇಬಳ ಬೆದರಿ ಕೆಯು ಹುಟ್ಟಿ ಅವರು ದಂಗೆ, ಲೂಟ ಸಹ ಮಾಡದಂತಾಯಿತು.

ಒಬ್ಬ ಶತೃವನ್ನು ನಿಗ್ರಹಿಸಿ, ರಾಣೀ ಸಾಹೇಬಳು ಕಿಂಚಿತ್ ಸ್ವಸ್ಥಳಾದಳೋ ಇಲ್ಲವೋ ಎಂಬಷ್ಟರಲ್ಲಿಯೇ ಝಾಂಸೀ ಹತ್ತರಿನ ಓರ್ಛಾ ಎಂಬ ಬುಂದೇಲೆ ಸಂಸ್ಥಾನದ ದಿವಾನ ನಾಥೇಖಾನನು, ಇಪ್ಪತ್ತುಸಾವಿರ ಸೈನ್ಯವನ್ನು ಸೇರಿಸಿಕೊಂಡು, ಝಾಂಸೀ ಪ್ರಾಂತ್ಯದ ಮೇಲೆ ದಂಡೆತ್ತಿಬಂದು, ಒಂದೊಂದು ಪರ್ಗಣವನ್ನು ಹಸ್ತಗತ ಮಾಡಿ ಕೊಂಡು, * ಝಾಂಸೀ ಸಮೀಪ ಮೂರು ಹರದಾರಿಯಲ್ಲಿರುವ ವೇತ್ರಾವತಿ ನದಿಯ ದಂಡೆಯಮೇಲೆ ಸೈನ್ಯಸಹಿತ ಇಳುಕೊಂಡನು. ಆ ಸಮಯದಲ್ಲಿ ರಾಣಿ ಲಕ್ಷ್ಮೀಬಾಯಿ ಸಾಹೇಬಳ ಹತ್ತರ ಬಹಳಸ್ವಲ್ಪ ಸೈನ್ಯವಿತ್ತು. ಆದ್ದರಿಂದ ತಾನು ಆ ಸೈನ್ಯವನ್ನ ನಿರಾಯಾಸವಾಗಿ, ಹಾಹಾ ಅನ್ನಿಸಿ, ಓಡಿಸಿಬಿಡುತ್ತೇನೆಂತ ಆ ದಿವಾನನಿಗೆ ಬಹಳ ವಿಶ್ವಾಸ ವಿತ್ತು. ಆದ್ದರಿಂದ ಅವನು ರಾಣೀ ಸಾಹೇಬಳಿಗೆ ಹೀಗೆ ನಿರೂಪ ಕಳುಹಿಸಿದನು. "ಇಂಗ್ರೇಜಿಯವರು ನಿಮಗೆ ನಿಶ್ಚಯಿಸಿರುವ ಮಾಸಾಶನವನ್ನು ನಾವು ಕೊಡಲು ಸಿದ್ಧವಾಗಿದ್ದೇವೆ. ನೀವು ನಿಮ್ಮ ಕೋಟೆ ಮತ್ತು ಪಟ್ಟಣವನ್ನ ನಮ್ಮ ಸ್ವಾಧೀನ ಪಡಿಸಬೇಕು." ಈ ಮಾತು ಕೇಳುತ್ತಲೇ ಬಾಯಿ ಸಾಹೇಬಳಿಗೆ ಮನಸ್ವೀ ಸಂತಾಪ ಹುಟ್ಟಿತು. ಮತ್ತು ಆಕೆಯು ತನ್ನ ದಿವಾನ ಮತ್ತು ಮುತ್ಸದ್ದಿ ಮಂಡಲಿಯವರಿಗೆ ಈ ಸಂದರ್ಭದಲ್ಲಿ ಯೇನು ಪ್ರಯತ್ನ ಮಾಡಬೇಕೆಂತ ಪ್ರಶ್ನೆಮಾಡಿದಳು. ಅದನ್ನು ಕೇಳಿ ಸರ್ವ ದರ್ಬಾರು ಮಂಡಲಿಯವರು ಭಯಭೀತರಾಗಿ ಹೇಳಿದ್ದೇನಂದರೆ,—"ಓರ್ಛಾ ಸಂಸ್ಥಾನದವರ ಕಡೆಯಿಂದ ತಮಗೆ ಪೆನ್ಷನ್ ಸಿಕ್ಕುವದಾದರೆ, ತಮಗೆ ಯುದ್ಧದ ಪೇಚಾಟಕ್ಕೇ ಕಾರಣವಿಲ್ಲ." ಈ ಉತ್ತರವನ್ನು ಕೇಳಿ ಆ ತೇಜಸ್ವಿನಿಯಳಿಗೆ ಪರಮಾ ವಧಿಯ ಖೇದವು ವುತ್ಪನ್ನವಾಯಿತು. ಆಕೆಯು ಆ ಶಿಖಂಡಿತನದ ಉತ್ತರವನ್ನ ಮನ್ನಿ ಸದೆ, ನಾಥೇಖಾನಗೆ ಈ ರೀತಿ ನಿರೂಪವನ್ನು ಕಳುಹಿಸಿದಳು.—'ನಾನು ಶಿವರಾವ್ ಭಾವೂನ ಸೊಸೆಯಾಗಿದ್ದೇನೆ. ನಿಮ್ಮಂಥ ಬುಂದೇಲೆ ಜನಗಳಿಗೆ ಹೆಂಗಸರನ್ನಾಗಿ ಮಾಡಿ ಬಿಡುವಶಕ್ತಿ ನನ್ನ ಶರೀರದಲ್ಲಿದೆ. ಆದಕಾರಣ ನೀವುದೂರದೃಷ್ಟಿ ವಿಚಾರಮಾಡಿ ಯುದ್ಧಕ್ಕೆ ಸಿದ್ಧರಾಗಬೇಕು." ಈ ನಿರೂಪವು ನಾಥೇಖಾನನಿಗೆ ಸೇರುತ್ತಲೇ ಆತನಿಗೆ ಕ್ರೋಧಾ ಗ್ನಿಯು ಪ್ರಜ್ವಲಿತವಾಗಿ ಝಾಂಸೀ ಮೇಲೆ ಪ್ರಯಾಣಮಾಡಿದನು.

---

* ಇದನ್ನು ಕುರಿತು ರಾಣಿಸಾಹೇಬಳು ಮಧ್ಯ ಹಿಂದುಸ್ಥಾನದ ಪೊಲಿಟಕಲ್ ಏಜಂಟ್ ಹ್ಯಾಮಿಲ್ಟನ್ ಸಾಹೇಬನಿಗೆ ಒಂದು ಪತ್ರವನ್ನು ಕಳುಹಿಸಿದಳು. ಆದರೆ ಆ ಪತ್ರವನ್ನ ನಾಥೇಖಾನನು ತಲ್ಪುವದಕ್ಕೆ ಬಿಡಲಿಲ್ಲವೆಂಬದಾಗಿ ಶ್ರೀಮಂತ ದಾಮೋದರ ರಾಯನ ಕಡೆಯಿಂದ ಶಿಕ್ಕಿದ ಮಾಹಿತಿಯಲ್ಲಿ ಬರೆದಿದೆ.



Natekhan.

ನಥೇಖಾನ್.

ಇತ್ತಲಾಗಿ ರಾಣೀ ಸಾಹೇಬಳು ಝಾಂಸೀ ಸಂಸ್ಥಾನವಲ್ಲಿನ ಸತ್ಯಾತ್ಮಕವಾದ ಜಾತಿಯ ಠಾಕೂರ್ ಮತ್ತು ಬುಂದೇಲೆ ಜಹಗೀರು ದಾರರುಗಳಿಗೆ ನಿರೂಪ ಪತ್ರವನ್ನು ಕಳುಹಿಸಿ, ಅರಮನೆಯಲ್ಲಿ ಸಭೆಶೇರಿಸಿದಳು. ದಿವಾನ್ ಜವಾಹೀರ್‌ಸಿಂಗ್, ದಿವಾನ್ ದಿಲೀಪ್‌ಸಿಂಗ್ ದಿವಾನ್‌ದೂಲಾಜಿ ಕೈಠಾನ್ ಯಿವಾಲೆ, ಮುಂತಾದ ಸರದಾರರುಗಳನ್ನು ಸೇರಿಸಿಕೊಂಡು, ರಾಣೀಸಾಹೇಬಳು ಅವರಿಗೆ ಹೀಗೇಹೇಳಿದಳು. "ನೀವು ಒರ್ಛೇ ವಾಲೆರಾಜರ ವಂಶಸ್ಥರಾಗಿದ್ದು, ಈ ಗಾದೀಗೆ ಅಧೀನರಾಗಿದ್ದೀರಿ. ಆದ್ದರಿಂದ ಈ ಸಂದರ್ಭದಲ್ಲಿ ನನ್ನ ಮರ್ಯಾದೆಯನ್ನ ಕಾಪಾಡುವುದು, ನಿಮಗೆ ಕೂಡಿದೆ." ರಾಣಿಸಾಹೇಬಳ ಈ ಮಾತನ್ನು ಕೇಳುತ್ತಲೇ ಸರ್ವ ಬುಂದೇಲೆ ಸರದಾರರು ಹೀಗೆ ಹೇಳಿದರು. "ಝಾಂಸಿಯ ಸಾರ್ವಭೌಮತ್ವವು, ಇಂಗ್ರೇಜಿ ಸರ್ಕಾರದಕಡೆಗೆ ಯಿದೆ. ಆದ್ದರಿಂದ ಸರ್ವ ಅಧಿಕಾರವು ಅವರದ್ದಾಗಿದೆ. ಒರ್ಛಾ ತಮ್ಮ ಸಮಾನ ಸಂಸ್ಥಾನವಾಗಿದೆ. ಅದಕ್ಕೆ ಸಾರ್ವಭೌಮತ್ವದ ಅಧಿಕಾರವನ್ನು ಕೊಟ್ಟು, ರಾಜ್ಯವನ್ನು ಅವರಕಡೆಗೆ ವಹಿಸುವುದು, ಎಂದಿಗೂ ಯೋಗ್ಯವಾದ ಮಾತಲ್ಲ. ಅದಕಾರಣ ಯಾವವರೆಗೂ ನಮ್ಮ ಶರೀರದಲ್ಲಿ ಜೀವವಿರುತ್ತದೆಯೋ ಆ ಪರ್ಯಂತರವೂ ಈ ರಾಜ್ಯವನ್ನ ನಾವು ಕೊಡಕ್ಕವರಲ್ಲ." ಈ ಪ್ರಕಾರವಾಗಿ ಸರ್ವ ಸರದಾರರ ಮತವಾಯಿತು. ಅದೇ ಪ್ರಕಾರ ಅವರು ಪತ್ರ ಬರೆದು, ನಾಥೇಖಾನಕಡೆಗೆ ಕಳುಹಿಸಿ ಕೊಟ್ಟರು. ಮತ್ತು ಅದರ ಸಂಗಡಲೇ 5 ಗುಂಡುಗಳನ್ನು ಕಳುಹಿಸಿ, ಈ ಪ್ರಕಾರ ತಿಳಿಸಿದರು. "ಇದು ನಮ್ಮ ಹತ್ತರವಿದೆ. ಝಾಂಸೀ ಮೇಲೆ ಸಂತೋಷವಾಗಿ ಬೀಳಬೇಕು." *

ನಥೇಖಾನಿಗೆ ಯುದ್ಧಕ್ಕೆ ಬರಬೇಕೆಂತ ಪತ್ರವು ತಲ್ಪುತ್ತಲೇ ಆತನು ಸಿದ್ಧನಾದನು. ಆದರೆ ಈಚಿಗೆ ರಾಣೀ ಸಾಹೇಬಳ ಸೈನ್ಯವು, ಶುದ್ಧಾಂಗ ಸಿದ್ಧವಾಗಿರಲಿಲ್ಲ. ಝಾಂಸಿಯಲ್ಲಿ ಪೂರ್ವದ ಸಂಸ್ಥಾನದ ಸೈನ್ಯವನ್ನು ಇಂಗ್ರೇಜಿ ಸರ್ಕಾರದವರು ಕಡಮೆ ಮಾಡಿದ್ದದ್ದಲ್ಲದೆ, ಕೋಟೆಯ ಮೇಲಿನ ಎಲ್ಲಾ ಫಿರಂಗಿಗಳೂ ಮದ್ದು ಗುಂಡುಗಳನ್ನೆಲ್ಲ ಇಲ್ಲದಂತೆ ಮಾಡಿದ್ದರು. ಆದಕಾರಣ ನಾಥೇಖಾನ ಸೈನ್ಯವನ್ನು ಸೋಲಿಸಿ, ಅದನ್ನು ಹಿಂತಿರುಗಿ ಕಳುಹಿಸುವ ವಿಚಾರವನ್ನು ರಾಣೀ ಸಾಹೇಬಳು ಮಾಡಿದ್ದು, ಸಿದ್ಧಿಗೆ ಬರುವುದು ಬಹಳ ಕಠಿಣವಾಗಿತ್ತು. ಆದಾಗ್ಯೂ ರಾಣೀ ಸಾಹೇಬಳ ಕರ್ತೃತ್ವ ಶಕ್ತಿ ಮತ್ತು ಯುಕ್ತಿ ಚಾತುರ್ಯವು ಏನೋ ವಿಶೇಷ ವಾಗಿದ್ದಕಾರಣ, ಆಕೆಯು ಇಂಥಾ ಪ್ರಸಂಗದಲ್ಲಿ ದಾಟಿಹೋಗುವ ವಿಚಾರ ಮಾಡಿದಳು. ಆದಿಯಲ್ಲಿ ಆಕೆಯು ಸದಾಶಿವ ನಾರಾಯಣನ ದಂಗೆಯನ್ನ ನಿಲ್ಲಿಸುವಗೋಸ್ಕರ ಇಟ್ಟುಕೊಂಡಿದ್ದ ಸೈನ್ಯದಲ್ಲಿ ಇನ್ನು ಕೆಲವು ಸಂಸ್ಥಾನದ ಹೊಸಜನಗಳನ್ನ ಸೇರಿಸಿ, ಅದರ ಸಂಖ್ಯೆ 5000, ದ

* ಗ್ವಾಲಿಯರ್ ಪುಸ್ತಕ.

ವರೆಗೂ ತೋರಿಸಿದಳು. ಝಾನ್ಸಿಯಲ್ಲಿ ಮದ್ದು ಗುಂಡು ಮಾಡುವ ಕಾರ್ಖಾನೆಯನ್ನ ಇಡಿಸಿದಳು. ಕೋಟೆಯೊಳಗೆ ಪೂರ್ವದ ಮೂರು ತೋಫುಗಳನ್ನ ತುಂಬಿಟ್ಟಿತ್ತು. ಅರಮನೆಯಲ್ಲಿ ಅಂತರಂಗವಾಗಿ, ಇಟ್ಟಿದ್ದ ನಾಲ್ಕು ತೋಫುಗಳನ್ನ ಹೊರಕ್ಕೆ ತೆಗೆಸಿ, ಕೋಟೆಯ ಪ್ರಚಂಡವಾದ ಬುರ್ಜಿನ ಮೇಲೆ ಹೇರಿಸಿ ಯಿಡಿಸಿದಳು. ಝಾನ್ಸೀ ಸಂಸ್ಥಾನದ ಸರದಾರ ಮತ್ತು ಠಾಕೂರು ಜನಗಳಿಗೆ ಊರೂರಿಗೆ ನಿರೂಪವನ್ನು ಕಳುಹಿಸಿ ಕೊಟ್ಟಳು. ದಿವಾನ್ ಜವಾಹಿರ್ ಸಿಂಗ್, ದಿವಾನ್ ದಿಲೀಪ್ ಸಿಂಗ್, ರಾವ್ ರಾಮಚಂದ್ರ ಮುಂತಾದ ಬುಂದೇಲೆ ಸರದಾರರು, ಮತ್ತು ಠಾಕೂರರು, ತಮ್ಮ ತಮ್ಮ ಸೈನ್ಯಗಳನ್ನು ತೆಗೆದುಕೊಂಡು, ಝಾನ್ಸಿಗೆ ಬಂದು ಸೇರಿದರು. ರಾತ್ರಿಯಲ್ಲಿಯೇ ಅವರು ಯುದ್ಧಮಾಡತಕ್ಕ ವ್ಯವಸ್ಥೆಯನ್ನೆಲ್ಲಾ ನಡೆಸಿ, ಅದರ ಮೇಲೆ ಚತುರರಾದ, ಬಂದೂಕು ಹೊಡೆಯತಕ್ಕ ಗುರಿಗಾರರನ್ನ ನಿಲ್ಲಿಸಿದರು. ಪ್ರಾತಃಕಾಲದಲ್ಲಿ ದಿವಾನ್ ಜವಾಹಿರ್ ಸಿಂಗ ಕಟಲೆ ವಾಲೆಯನ್ನು ರಣಕಂಕಣವನ್ನ ಕಟ್ಟಿ, ಸೇನಾಪತಿಯನ್ನಾಗಿ ನೇಮಿಸಿದರು. ಅವನು ಪಟ್ಟಣದ ಗೋಡೆಗಳ ಮೇಲೂ, ಮತ್ತು ಬಂದೂಕು ಹೊಡೆಯತಕ್ಕ ಸ್ಥಳಗಳಲ್ಲಿಯೂ, ಸೈನ್ಯದ ವ್ಯೂಹವನ್ನು ಕಟ್ಟಿ, 1000 ಸರಿಯಾದ ಪಾಯದಳ ಆಯುಧಶಾಲಿಗಳನ್ನ ಶತ್ರು ಸೈನ್ಯದ ಮೇಲೆ ಬೀಳುವುದಕ್ಕೆ ಸಿದ್ಧಪಡಿಸಿಟ್ಟನು. ರಾಣೀ ಸಾಹೇಬಳು ಸ್ವತಃ ಪಠಾಣ್ ವೇಷಧಾರಣೆ ಮಾಡಿಕೊಂಡು, ಕೋಟೆಯಲ್ಲಿನ ಮುಖ್ಯ ಬುರ್ಜಿನ ಮೇಲೆ ಬಂದು ನಿಂತುಕೊಂಡಳು. ಮತ್ತು ಪೇಷ್ವೆಯವರ ಕಾಲದ ಹಳೇ ನಿಶಾನಿ, ಮತ್ತು ಇಂಗ್ರೇಜಿಯವರು ಕೊಟ್ಟ, ಯೂನಿಯನ್‌ಜಾಕ್ ನಿಶಾನೆಯನ್ನು ಸಹ ನಿಲ್ಲಿಸಿದರು.

ಇತ್ತಲಾಗಿ ದಿವಾನ್ ನಾಥೆಖಾನು ಝಾನ್ಸಿಯು ಕ್ಷುಪದಾರ್ಥವಾಗಿದೆಯೆಂತ ತಿಳದು, ವಿಜಯದ ಆಶೆಯಿಂದ ಉಬ್ಬಿ ಹೋಗಿದ್ದನು. ನಮ್ಮಂಥ ಶೂರ ಬುಂದೇಲದವರ ಸಂಗಡ ಝಾನ್ಸೀ ಸಂಸ್ಥಾನದ ಬ್ರಾಹ್ಮಣ ವಿಧವೆ ಯೇನು ಯುದ್ಧ ಮಾಡ್ಯಾಳು ? ನಾವು ಅರ್ಧ ಕ್ಷಣದಲ್ಲಿ ಝಾನ್ಸಿಯನ್ನ ತೆಗೆದು ಕೊಳ್ಳುತ್ತೇವೆಯೆಂಬ ಗರ್ವದಿಂದ ಅವನು ತುಂಬಿ ಹೋಗಿದ್ದನು. ಅನಂತನ ಚತುರ್ದಶಿಯ ದಿವಸ ಆತನು ದೊಡ್ಡವುತ್ಸವದಿಂದ, ತನ್ನ ಬಂಗಾರದ ನಡುಕಟ್ಟನ್ನೂ ಮತ್ತು ಬಿರುದುಗಳನ್ನೆಲ್ಲಾ ಸರಿಪಡಿಸಿಕೊಂಡು, ಸೇನೆಸಹಿತ ಝಾನ್ಸೀ ಕಡೆಗೆ ಹೊರಟನು. ಓಛಾಂದ ಸೈನ್ಯವು, ಝಾನ್ಸೀ ಕಡೆಗೆ ಪ್ರಯಾಣಮಾಡಿ ಬರುತ್ತದೆ ಯೆಂಬುವದನ್ನ ನೋಡಿ, ರಾಣೀಸಾಹೇಬಳು ಅವರಿಗೆ ಕೋಟೆಯ ದಕ್ಷಿಣಭಾಗದಿಂದ ಪ್ರವೇಶಮಾಡಲು ಬಿಟ್ಟುಕೊಟ್ಟಳು, ಮತ್ತು ಅವರು ತೋಫುಗಳ ಸುಮಾರು ಗುರಿಗೆ ಬರುತ್ತಲೆ, ತನ್ನಕಡೆ ಚತುರ ಯುದ್ಧಶಾಲಿಯಾದ ಗುಲಾಂ ಗೋಷಖಾನ್ ಯೆಂಬುವನಿಗೆ ಶತ್ರು ಸೈನ್ಯದ ಭಂಗಾರದ ನಡುಕಟ್ಟು ನಿಶಾನೆ ಮತ್ತು ಪಟ್ಟದ ಆನೆ ಸಹ ಗೆಲ್ಲಬೇಕೆಂತ ಅಪ್ಪಣೆ ಮಾಡಿದಳು. ಆಪ್ರಕಾರವಾಗಿ ಆ ಯುದ್ಧಶಾಲಿಗಳು ತೋಫುಗಳನ್ನ ಹೊಡೆಯಲು ಪ್ರಾರಂಭಿಸಿದರು. ನಥೇ

ಖಾನ ಸೈನ್ಯದಲ್ಲಿನ ರಣಶೂರ ಬುಂದೇಲೆ ಜನಗಳು ತಮ್ಮ ಬಾಣ ಮತ್ತು ಬಂದೂಕು ಗಳನ್ನು ಏಕಪ್ರಕಾರವಾಗಿ ಬಿಡಲಾರಂಭಿಸಿದರು. ಎರಡು ಪ್ರಹರದ ವರೆಗೆ ದೊಡ್ಡ ದಾಗಿ ಅವಿಚ್ಛಿನ್ನ ಯುದ್ಧ ನಡೆಯಿತು. ಪರಂತು ಕೋಟೆಯಲ್ಲಿನ ಪ್ರಚಂಡ ತೋಪುಗಳ ಅಸಹ್ಯವಾದ ಪೆಟ್ಟುಗಳೆದುರಿಗೆ ನಥೇಖಾನನ ಸೈನ್ಯವು ನಿಲ್ಲಲು ಅಸಾಧ್ಯವಾದ್ದರಿಂದ ಅವರು ಹಿಂತಿರುಗಿ ಹೋಗಿ ಕೋಟೆಗೆ ಮುತ್ತಿಗೆ ಹಾಕಿದರು. ಪ್ರತಿ ದಿವಸವೂ ಉಭಯ ಪಕ್ಷದ ಸೈನ್ಯದ ಯುದ್ಧವು ನಡೆಯುತ್ತಿತ್ತು. ಪರಂತು ನಥೇಖಾನ ಸೈನ್ಯಕ್ಕೆ ಯಶಸ್ಸು ಶುದ್ಧಾಂಗವಾಗಿ ಬರಲಿಲ್ಲ. ಪ್ರಥಮದಲ್ಲಿಯೇ ಆತನ ಭಂಗಾರದ ನಡುಕಟ್ಟು ಮತ್ತು ಪಟ್ಟದ ಆನೆ ಸಹ ಬಿದ್ದುಹೋಯಿತು. ಅಲ್ಲದೆ ಪುಷ್ಕಳ ಜನಗಳು ಸತ್ತು ಹೋದರು. ಆದಕಾರಣ ಆ ಸೈನ್ಯವು ಕೇವಲ ಧೈರ್ಯಗುಂದಿತ್ತು. ಝೂಸೀ ವಿಧವೆ ರಾಣೀ ಬಬ್ಬ ಸ್ತ್ರೀಯಾಗಿದ್ದಾಳೆ. ತನ್ನಂಥ ಶೂರ ಪುರುಷನು ಮುಷ್ಟಿಯಲ್ಲಿ ಜೀವ ಹಿಡಿದುಕೊಂಡು, ಓಡಿಹೋಗುವುದು ದೊಡ್ಡ ನಾಚಿಕೆಗೇಡಾಗಿದೆಯಂತ ಯೋಚಿಸಿ, ನಥೇಖಾನು ರಾತ್ರಿಯಲ್ಲಿ ಝೂಸೀ ಕೋಟೆಯ ಓರ್ಛಾ ಬಾಗಲುಮೇಲೆ ನಾಲ್ಕು ತೋಫುಗಳನ್ನು ಇಡಿಸಿ, ತನ್ನ ಸರ್ವ ಸೈನ್ಯವನ್ನು ನಾಲ್ಕು ಭಾಗವಾಗಿ ಮಾಡಿ ಝೂಸೀ ಸೈನ್ಯದ ಮೇಲೆ ಬಿದ್ದನು. ರಾಣೀ ಸಾಹೇಬಳ ಕಡೆಯಲ್ಲಿ ಸೈನ್ಯದ ಸಿದ್ಧತೆ ಚನ್ನಾಗಿತ್ತು. ಆದಾಗ್ಯೂ ಯಾವ ಸಮಯದಲ್ಲಿ ನಥೇಖಾನನ ನಾಲ್ಕು ತೋಫುಗಳ ಏಟುಗಳು ಓರ್ಛಾ ಬಾಗಲು ಮೇಲೆ ಯೇಕ ಪ್ರಕಾರ ಬೀಳಲಿಕ್ಕೆ ಪ್ರಾರಂಭವಾಯಿತೋ ಆಗ ಆ ಬಾಗಲಿಗೆ ಸ್ವಲ್ಪ ಏಟು ತಗಲಿ, ಅದು ಶತೃವಿಗೆ ಸಾಧ್ಯವಾದೀತೆಂತ ಚಿನ್ಹೆ ಕಂಡು ಬಂತು. ಈ ವರ್ತಮಾನವು ರಾಣೀ ಸಾಹೇಬಳಿಗೆ ತಿಳಿದ ಕೂಡಲೆ ಆಕೆಯು ಸ್ವಾರಿಯು ಓರ್ಛಾ ಬಾಗಲು ಮೇಲಿನ ಹತ್ತಿರಕ್ಕೆ ಬಂತು. ಆಕೆಯು ಬಹಳ ಪ್ರೇಮಭಾವದಿಂದ ಅಲ್ಲಿನ ಸೈನ್ಯಕ್ಕೆ ಸ್ತೋತ್ರಮಾಡಿ, ಅವರಿಗೆ ಆವೇಶ ಹುಟ್ಟುವುದಕ್ಕೋಸ್ಕರ ಕೆಲವು ಬಹುಮಾನವನ್ನು ಕೊಟ್ಟಳು. ಆದಕಾರಣ ಆ ಜನಗಳಿಗೆ ಈರ್ಷ್ಯೆ ಯೆದ್ದು ಶತ್ರುವಿನ ತೋಫುಗಳ ಹೊಡೆತದ ಮಧ್ಯದಲ್ಲಿ ನಿಂತು, ಆ ದಿಕ್ಕು ಶತೃಗಳ ಕೈವಶವಾಗಲು ಬಿಟ್ಟುಕೊಡಲಿಲ್ಲ. ಇಷ್ಟರಲ್ಲಿ ರಾಣೀ ಸಾಹೇಬಳು ಶೂರ ಸರದಾರನಾದ ಲಾಲಾಬಾವು ಬಕ್ಷಿ—ಯೆಂಬುವನಿಗೆ ಅಪ್ಪಣೆ ಮಾಡಿ, ಕಿಲ್ಲೆಯಲ್ಲಿನ ಪ್ರಸಿದ್ಧಿಯಾದ ಮತ್ತು ಪ್ರಚಂಡ ತೋಫುಗಳನ್ನು "ಖಡಕ ಬಿಜಲಿ" ಆ ಬುರ್ಜಿನಮೇಲೆ ತರಿಸಿದಳು. ಮತ್ತು ಆ ತೋಫು ಹೊಡೆಯತಕ್ಕ ತನ್ನ ಕಡೆ ಶಿಪಾಯಿಗಳಿಗೆ ಭಂಗಾರದಿಂದ ನಿರ್ಮಿತವಾದ ಬಕ್ಷಿಸ್ಸನ್ನು ಕೊಟ್ಟು, ಅವರ ಕಡೆಯಿಂದ ಖಂಡಿತವಾದ ಯುದ್ಧವನ್ನು ನಡೆಸಿದಳು. ಈ ತೋಫಿನ ಹೊಡೆತಕ್ಕೆ ಆರಂಭವಾಗುತ್ತಲೇ ಶತೃವಿನಕಡೆ ಸೈನ್ಯದವರು ಭಯಭೀತರಾಗಿ, ರಣವನ್ನು ಬಿಟ್ಟು ಓಡಿಹೋದರು. ಆದ್ದರಿಂದ ಅವರ ತೋಫುಗಳೆಲ್ಲಾ ಝೂಸೀ ಸಂಸ್ಥಾನದವರ ಸೈನ್ಯದ ಹಸ್ತಗತವಾಯಿತು. ಈ ಪ್ರಕಾರವಾಗಿ ಬಹಳದಿವಸ ಉಭಯ ಪಕ್ಷದವರ ಯುದ್ಧ ನಡೆದು, ಶತೃಗಳಕಡೆ ಸೈನ್ಯವು ಮುರಿದುಹೋದ್ದಲ್ಲದೆ ಪುಷ್ಕಳ ಜನಗಳಿಗೆ ಪೆಟ್ಟಾಯಿತು. ಮತ್ತು ಬಹಳ ಜನಗಳು ಸತ್ತುಹೋದರು.

ಝಾನ್ಸೀ ಸಮೀಪದಲ್ಲಿನ ಪರ್ವತದ ಮಧ್ಯದ ರಘುನಾಥಸಿಂಗ್ ಜರಯಿಲೆ ಯೆಂಬ ಶೂರ ಸರದಾರನ ಕೈಕೆಳಗಿನ ಒಂದು ತುಕಡಿ ಸೈನ್ಯದವರು, ಓಡಿಹೋಗುತ್ತಿದ್ದ ಓರ್ಛಾ ಸೈನ್ಯದವರ ಮೇಲೆ ಬಿದ್ದು ಅವರನ್ನು ಸಂಪೂರ್ಣವಾಗಿ ಜಯಿಸಿದ್ದಲ್ಲದೆ ಅನೇಕ ಜನಗಳನ್ನ ಕೆಡಿವಿ, ಝಾನ್ಸೀಗೆ ಹಿಡುಕೊಂಡು ಹೋದರು. ಈ ಪ್ರಕಾರ ವಾಗಿ ದಿವಾನ್ ರಘುನಾಥಸಿಂಗ್ * ಜಾಜರೆ ವಾಲೆಯು ತನ್ನ ಕಡೆ 200 ಜನಗಳ ಸಹಿತ ಇನ್ನೊಂದು ಸ್ಥಳದ ರಕ್ಷಣೇಮೇಲೆ ಯಿರುವಾಗ ಅವನನ್ನ ರಾಣೀ ಸಾಹೇಬಳು ಕರಸಿ ಕೊಂಡಳು ಎಂಬ ಸಮಾಚಾರವು ಶತ್ರುಗಳಿಗೆ ತಿಳಿದ ಕೂಡಲೆ ಅವರು ಆತನ ಮಾರ್ಗದ ಕಡೆ ತಮ್ಮ ಸೈನ್ಯವನ್ನ ಒಯ್ಯಲು ಯೋಚನೆ ಮಾಡಿದರು. ದಿವಾನ್ ರಘುನಾಥ ಸಿಂಗನು ಅವಸರದಿಂದ ಬರುತ್ತಿರುವಾಗ ಆತನ ಮತ್ತು ಶತ್ರುವಿನ ಸೈನ್ಯವು ಸಂಧಿಸಿತು. ಉಭಯಪಕ್ಷದ ಜನಗಳೂ ಕೈಗೆ ಕೈಹಚ್ಚಿ ಯುದ್ಧಕ್ಕೆ ಪ್ರಾರಂಭಿಸಿದರು. ಆ ಸಮಯದಲ್ಲಿ ದಿವಾನ್ ರಘುನಾಥ ಸಿಂಗನು ಬಹಳ ಪರಾಕ್ರಮದಿಂದ ಶತೃಗಳನ್ನು ಓಡಿ ಸಿಬಿಟ್ಟನು. ಈ ರೀತಿಯಾಗಿ ನಥೇಖಾನನ ಸಂಪೂರ್ಣ ಪರಾಭವವಾಯಿತು. ಈ ಯುದ್ಧದಲ್ಲಿ 50 ಜನಗಳು ಶಸ್ತ್ರದಬಾಯಿಗೆ ಆಹುತಿಯಾದರು. ಈ ವೃತ್ತಾಂತವು ರಾಣೀ ಸಾಹೇಬಳಿಗೆ ತಿಳಿದಕೂಡಲೆ ಆಕೆಯು ದಿವಾನ್ ರಘುನಾಥ ಸಿಂಗನ ಶೌರ್ಯಕ್ಕೆ ಸ್ತೋತ್ರಮಾಡಿ, ಆತನಿಗೆ ಒಳ್ಳೊಳ್ಳೇ ಅಲಂಕಾರ ಮತ್ತು ವಸ್ತ್ರಗಳನ್ನ ಬಕ್ಷಿಸ್ಸಾಗಿ ಕೊಟ್ಟು ಸನ್ಮಾನಮಾಡಿದಳು.

ಇದುಹಾಗಿರಲಿ; ಝಾನ್ಸಿ ಸೈನ್ಯದಮುಂದೆ ತಮ್ಮ ಉಪಾಯವೇನೂ ನಡೆಯುವ ದಿಲ್ಲವೆಂತ ನೋಡಿ, ಓರ್ಛಾದವರು ತಹಾಕ್ಕೆ ಹಚ್ಚಿದರು. ಓರ್ಛಾ ಸಂಸ್ಥಾನವು ಕ್ಷತ್ರಿ ಯಕುಲದಲ್ಲಿ ಬಹಳ ಪ್ರಾಚೀನ ವಾಗಿದ್ದು ಅದಕ್ಕೆ ಅಲ್ಲಿನ ರಾಜ ಮನೆತನದವರೆಲ್ಲಾ ವಂದ್ಯರಾಗಿದ್ದಕಾರಣ ಮಹಾರಾಣಿ ಲಕ್ಷ್ಮೀಬಾಯಿ ಸಾಹೇಬಳು, ಬಹಳ ವುದಾರಬುದ್ಧಿ ಯಿಂದ ಯುದ್ಧದ ಖರ್ಚು ಮುಂತಾದ್ದನ್ನ ಅವರ ಕೈಯಿಂದ ತೆಗೆದುಕೊಂಡು ಅವರ ಕಡೆಯಿಂದ ಸಖ್ಯದ ತಹಾ ಮಾಡಿಕೊಂಡಳು. ಝಾನ್ಸೀರಾಣಿ ಲಕ್ಷ್ಮೀಬಾಯಿ ಮತ್ತು ಓರ್ಛಾದರಾಣಿ ಲಢಹಿ ಇವರಿಬ್ಬರೂ ಸಹೋದರಿಗಳಂತೆ ಸೇರಿಕೊಂಡರು. † ಈ ತಹಾದ ಸಮ್ಮಂಧದಲ್ಲಿ ಬಾಣಪುರದ ರಾಜ, ಮರ್ಧನಸಿಂಗ್, ಕಳಿಂಜರದ ಜಹಗೀರ್ದಾರ್

---

* ದಿವಾನ್ ರಘುನಾಥಸಿಂಗ್‌ನು ಬಹಳ ಶೂರನಾಗಿದ್ದು, ಅವನು ವಿಲಿಯಂ ಹೆನ್ರಿ ಸ್ಲಿಮನ್ ಸಾಹೇಬನ ಆಡಳಿತದಲ್ಲಿ ಬಹಳ ಮಹಾತ್ಮೆಯುಳ್ಳ ಕೆಲಸಗಳನ್ನು ಮಾಡಿದ್ದನು. ಆತನಲ್ಲಿದ್ದ, 'ವಿಕ್ಟೋರಿಯಾ ಸ್ವಂತ ಸರ್ಟಿಫಿಕೇಟ್ ಮತ್ತು ಬಕ್ಷಿಸ್ ಕೊಟ್ಟ ಶಸ್ತ್ರ,' ಸಹ ಈ ಮಾಹಿತಿ ಕೊಟ್ಟಿರುವ ಗೃಹಸ್ಥನು 1921 ನೇ ಇಸವಿಯಲ್ಲಿ ತನ್ನ ಪ್ರತ್ಯಕ್ಷ ಕಣ್ಣಿನಿಂದ ನೋಡಿದ್ದೆಯಂತ ಹೇಳುತ್ತಾನೆ.

† ಶ್ರೀಮತ್ ಚಿಮಾಬಾಯಿ ಸಾಹೇಬಳು ತಿಳಿಸಿದ್ದು.

ಚೋಬೆ, ಇವರು ಮಧ್ಯಸ್ತಿಕೆ ಮಾಡಿದರೆಂತ ಹೇಳುತ್ತಾರೆ. ಮಹಾರಾಣಿ ಲಕ್ಷ್ಮೀಬಾಯಿ ಸಾಹೇಬಳು ಝಾನ್ಸೀ ಸಂಸ್ಥಾನದಮೇಲೆ ಬಂದ ಆಪತ್ತನ್ನ ಈ ಪ್ರಕಾರವಾಗಿ ನಿವಾರಣೆ ಮಾಡಿ, ಝಾನ್ಸೀ ಪ್ರಾಂತ್ಯವನ್ನ ಚನ್ನಾಗಿ ಭದ್ರಪಡಿಸಿದಳು. ಮತ್ತು ಇದನ್ನ ಕುರಿತು ಹ್ಯಾಮಿಲ್ಟನ್ ಸಾಹೇಬನಿಗೆ ಒಂದು ನಿರೂಪ ಕಳುಹಿಸಿ, ಎಲ್ಲಾ ಸಮಾಚಾರವನ್ನೂ ನಿವೇದನ ಮಾಡುವುದಕ್ಕೆ ಪ್ರಯತ್ನ ಮಾಡಿದಳು. ಪರಂತು ನಾಥೇಖಾನ್ನು ಗುಪ್ತರೀತಿಯಿಂದ ಜನಗಳನ್ನಿಟ್ಟು, ಆ ಪತ್ರಗಳನ್ನು ತೆಗದುಕೊಂಡು ಹೋಗುತ್ತಿದ್ದ ಸವಾರರುಗಳನ್ನ ಹೊಡಿಸಿ ಹಾಕಿಸಿ. ಒಂದುಪತ್ರವೂ ಹ್ಯಾಮಿಲ್ಟನ್ ಸಾಹೇಬನಿಗೆ ಸೇರಲಿಕ್ಕೆ ಬಿಡಲಿಲ್ಲ. ಇಷ್ಟೇಅಲ್ಲದೆ ಆತನು ತಿರುಗಿ ಹ್ಯಾಮಿಲ್ಟನ್ ಸಾಹೇಬನಿಗೆ ರಾಣಿ ಲಕ್ಷ್ಮೀಬಾಯಿ ಸಾಹೇಬಳು ದಂಗೇಖೋರ ಜನಗಳಿಗೆ ಸಹಕಾರಿಯಾದ್ದರಿಂದ ಆಕೆಯಸಂಗಡ ನಾನು ಯುದ್ಧ ಮಾಡುತ್ತಾ ಯಿದ್ದೇನೆ. * ಯಂತ ತಿಳಿಸಿದನು. ಈ ಕಾರಣದಿಂದಲೋ ಅಥವ ಇತರಕಾರಣದಿಂದಲೋ ರಾಣಿ ಲಕ್ಷ್ಮೀಬಾಯಿ ಸಾಹೇಬಳು ಇಂಗ್ರೇಜಿಯವರ ನಂತರ ಅವರಿಗೋಸ್ಕರವೇ ಝಾನ್ಸೀ ಪ್ರಾಂತ್ಯದ ಉತ್ತಮ ವ್ಯವಸ್ಥೆಯನ್ನು ಮಾಡುವದಕ್ಕಾಗಿ ಶ್ರಮಪಟ್ಟದ್ದು ಯೋಗ್ಯ ರೀತಿಯಲ್ಲಿ ಪರಿಣಮಿಸಲಿಲ್ಲ. †

---

* ಇಂದೂರು ಪುಸ್ತಕ.

† ನಥೇಖಾನನು ಸಾರ್ವಭೌಮತ್ವವಿಲ್ಲದ ಝಾನ್ಸಿ ಪ್ರಾಂತ್ಯವನ್ನ ತೆಗದುಕೊಳ್ಳುವದಕ್ಕೆ ಅದರಮೇಲೆ ಬಿದ್ದನು. ಪರಂತು ಆ ಪ್ರಾಂತ್ಯದ ಸಾರ್ವಭೌಮತ್ವ ಇಂಗ್ರೇಜಿ ಸರ್ಕಾರದ್ದಾಗಿದ್ದ ಕಾರಣ, ಅವರ ಪಕ್ಷದಲ್ಲಿ ರಾಣೀ ಲಕ್ಷ್ಮೀಬಾಯಿಯು ಅದರ ಸಂರಕ್ಷಣೆಯನ್ನು ಮಾಡಿದ್ದನ್ನ ಕುರಿತು, ಇಂಗ್ರೇಜಿ ಇತಿಹಾಸಕಾರಕರ ದೃಷ್ಟಿಗೆ ಬೀಳುವದಿಲ್ಲ. ಇದಕ್ಕೆ ಬದಲಾಗಿ, ಓರ್ಛಾದ ರಾಣಿಯು ಇಂಗ್ರೇಜಿಯವರಿಗೋಸ್ಕರ ಯುದ್ಧ ಮಾಡಿದಳೆಂತ ಇಂಗ್ರೇಜಿಯವರ ತಿಳುವಳಿಕೆಯಾಗಿದೆ ಯಂಬುವದು, ದೃಷ್ಟಿಗೆ ಬೀಳುತ್ತದೆ. ಈ ಮಾತು ಆಶ್ಚರ್ಯವಾದ್ದೆಂತ ತಿಳುಕೊಳ್ಳಬೇಕು! ಇದನ್ನು ಕುರಿತು ಸರ್ ಹ್ಯೂರೋಜ್ ಸಾಹೇಬನು ಫೌಜಿನ ಡಾಕ್ಟರ್ ಲೋ ಸಾಹೇಬನಿಗೆ ಬರದಿರುವ ಒಂದು ಕಾಗದದಲ್ಲಿ, ಈ ರೀತಿ ಹೇಳಿರುತ್ತಾನೆ.

"A few days prior to our arrival here, the Ranee of Tehree (Oracha) with a small force was said to have marched upon Jhansi with *one gun*, and proclaimed that she had come to fight for the Ranee of England; they then fired a few shots, and departed."

*Central India P.* 327.

# ೮ನೇ ಪ್ರಕರಣ.

## ಮಹಾರಾಣಿ ಲಕ್ಷ್ಮೀಬಾಯಿ ಸಾಹೇಬಳ ಆಳ್ವಿಕೆ.

ಮಹಾರಾಜ ಗಂಗಾಧರರಾಯನು ತೀರಿಹೋಗುವ ಪರ್ಯಂತರ ಮಹಾರಾಣಿ ಲಕ್ಷ್ಮೀಬಾಯಿ ಸಾಹೇಬಳಲ್ಲಿರತಕ್ಕ ಅನೇಕ ಗುಣಗಳು ಕೇವಲ ಪ್ರಕಾಶಕ್ಕೆ ಬಾರದೆ ಇದ್ದಾಗ್ಯೂ ಆಕಾಲದಾರಭ್ಯದಿಂದಲೂ ಆಕೆಯು ತೇಜಸ್ಸಿನ ವಿಷಯುವು ಪ್ರಸಿದ್ಧಿಯಾಗಿಯೇ ಯಿತ್ತು. ಬಾಯಿಸಾ ಸಾಹೇಬಳ ದಾಸೀ ಜನಗಳು ಅಥವ ಇತರ ಸೇವಕರು ಆಕೆಯು ಯೆದುರಿಗೆ ಹೋಗಲು ಗಡಗಡನೆ ನಡುಗುತ್ತಿದ್ದರು. ಇಷ್ಟೇ ಅಲ್ಲದೆ ಮಹಾರಾಜ ಗಂಗಾಧರರಾಯನೂ ಕೂಡ ಆಕೆಯು ತೀಕ್ಷ್ಣ ಸ್ವಭಾವವನ್ನು ನೋಡಿ, ರಾಜನಲ್ಲವೆಂಬ ಹಾಗೆ ಆಗಿ ಹೋಗಿದ್ದನೆಂತಲೂ, ಹೇಳುತ್ತಾರೆ. ಮಹಾರಾಜ ಗಂಗಾಧರರಾಯನು ಪರ ಲೋಕವಾಸಿಯಾದ ನಂತರ ಕೆಲವುಕಾಲ ಬಾಯಿಸಾ ಸಾಹೇಬಳ ಚಿತ್ತವೃತ್ತಿಯು ಶೋಕ ದಿಂದ ತುಂಬಿಹೋಗಿತ್ತು. ತಥಾಪಿ ಸರ್ವ ಆಡಳಿತದ ಭಾರವು ಆಕೆಯು ತಲೆಯುಮೇಲೆ ಬಿದ್ದಿದ್ದಕಾರಣ ಪತಿವಿಯೋಗ ದುಃಖವನ್ನು ಸಹಿಸಿಕೊಂಡು, ಶ್ರೀಮಂತ ದಾಮೋದರ ರಾಯನ ಹೆಸರಿನಿಂದ ಝಾಸೀ ಸಂಸ್ಥಾನವೂ ಪೂರ್ವದಂತೆ ನಡೆಯುತ್ತಿರಬೇಕು. ಎಂಬುವದಕ್ಕಾಗಿ ಯೋಗ್ಯವಾದ ಪ್ರಯತ್ನವನ್ನು ನಡೆಸಿದಳು. ಅದರಲ್ಲಿ ಆಕೆಗೆ ಬ್ರಿಟಿಷ್ ಸರ್ಕಾರದವರ ವಿಷಯುದಲ್ಲಿ ಯಿದ್ದ ಪೂಜ್ಯ ಬುದ್ಧಿ ಮತ್ತು ರಾಜನಿಷ್ಟತೆ ಈ ಯೆರಡು ಗುಣಗಳು ಉತ್ತಮ ಪ್ರಕಾರದಿಂದ ವ್ಯಕ್ತವಾಗುತ್ತದೆ. ಆ ಪ್ರಯತ್ನ ದಲ್ಲಿ ಆಕೆಗೆ ಯಶಸ್ಸು ಬಾರದಿದ್ದರೂ ಸ್ವಲ್ಪವಾದರೂ ಕ್ರುದ್ಧಳಾಗದೆ ತನ್ನ ಸುಶೀಲತ್ವ ಮತ್ತು ಔದಾರ್ಯ ಬುದ್ಧಿಯನ್ನು ಯಥಾಪ್ರಕಾರವಾಗಿ ನಿರಂತರ ಯಿಟ್ಟುಕೊಂಡಳು. ಮತ್ತು ದುರ್ದೈವದಿಂದ ಝಾಸಿಯಲ್ಲಿ ನಡೆದ ಭಯಂಕರವಾದ ಪ್ರಳಯದಲ್ಲಿ ಆ ಯೆರಡು ಗುಣಗಳನ್ನು ಚನ್ನಾಗಿ ಉಪಯೋಗ ಪಡಿಸಿದಳು. ಇದಕ್ಕಾಗಿ ಆಕೆಗೆ ಸ್ತುತಿ ಮಾಡುವುದು ತುಂಬಾ ಯೋಗ್ಯವಾದ್ದಾಗಿದೆ. ದಂಗೆ ಸಮಾಪ್ತಿಯಾದನಂತರ ಸ್ವತಂತ್ರವಾದ ಝಾಸೀ ಪ್ರಾಂತ್ಯದ ಪ್ರಜೆಗಳಿಗೆ ಸರ್ವಥಾ ತೊಂದರೆ ಯಾಗಕೂಡದೆಂ ಬುವುದರಿಂದ ರಾಣೀ ಸಾಹೇಬಳು ಸರ್ವರಾಜ್ಯದ ಆಡಳಿತವನ್ನು ಇಂಗ್ರೇಜಿ ಸರ್ಕಾರದ ಪಕ್ಷದಿಂದಲೇ ತನ್ನ ಕೈಗೆ ತೆಗೆದುಕೊಂಡಳು. ಮತ್ತು ಸದಾಶಿವ ನಾರಾಯಣ ಮತ್ತು ನಥೇಖಾ ಸಹ ನಡೆಸಿದ ಗಡಬಡೆಯುನ್ನು ನಿಗ್ರಹಮಾಡಿ, ತನ್ನ ಪ್ರಜೆಗಳಿಗೆ ನಿರ್ಭಯು ಉಂಟುಮಾಡತಕ್ಕಂಥಾ ಪ್ರಯತ್ನ ಮಾಡಿದಳು. ಇಂಗ್ರೇಜಿ ಸರ್ಕಾರದವರ ರಾಜ

ಸತ್ವವು ಝಾಸೀ ಪ್ರಾಂತ್ಯದಲ್ಲಿ ಸುಮಾರು 9, 10, ತಿಂಗಳ ಪರ್ಯಂತರ ನಷ್ಟವಾಗಿತ್ತು. ಈ ಮಧ್ಯಕಾಲದಲ್ಲಿ ರಾಣೀ ಸಾಹೇಬಳು ಅವರಕಡೆಯಿಂದ ರಾಜ್ಯ ಸೂತ್ರವನ್ನು ನಡೆಸಿ, ರಾಜಕಾರ್ಯ ಪ್ರಾವೀಣ್ಯ, ಪ್ರಜಾವಾತ್ಸಲ್ಯ ಮತ್ತು ನ್ಯಾಯ ಚಾತುರ್ಯ, ಇತ್ಯಾದಿ ಗುಣಗಳಿಂದ ಸ್ವತಃ ತಾನು ಸರ್ವರಿಗೂ ಪ್ರಿಯಳಾಗುವಂತೆ ಮಾಡಿಬಿಟ್ಟಳು ಎಂತ ಹೇಳಲಿಕ್ಕೆ ಏನೂ ಅಡ್ಡಿಯಿಲ್ಲ. ನಿಜವಾಗಿ ಘೋಷಾದಲ್ಲಿರತಕ್ಕ ರಾಜ ಸ್ತ್ರೀಯು ತನ್ನ ಕೇವಲ ಅಜ್ಞಾನದ ವಿಚಾರಗಳನ್ನು ತ್ಯಜಿಸಿ, ಒಂದೇಸಲ ರಾಜ್ಯಕಾರ್ಯಪ್ರವೀಣೆ ಮತ್ತು ವಿಚಾರ ಕ್ಷಮಳಾದ್ದು ಎಷ್ಟು ಆಶ್ಚರ್ಯಕಾರಕವಾದ ಮಾತಾಗಿದೆ. ಒಳ್ಳೇದು !— ಪರಂತು ಅದರಲ್ಲಿ ಹೆಚ್ಚಿಗೆ ಆಶ್ಚರ್ಯ ಪಡಲಿಕ್ಕೆ ಕಾರಣವಿಲ್ಲ.

ಶ್ಲೋಕ ॥ ಸ್ತ್ರಿಯೋಹಿನಾಮ ಖಲ್ವೇತಾ ನಿಸರ್ಗಾ ದೇವಪಂಡಿತಾಃ ।
ಪುರುಷಾಣಾಂತು ಪಾಂಡಿತ್ಯಂ ಶಾಸ್ತ್ರೈರೇ ವೋಪದಿಶ್ಯತೇ ॥

ಹಾಗಿರಲಿ ! ರಾಣಿಸಾಹೇಬಳು ಝಾಸೀ ರಾಜ್ಯದ ಕಾರಭಾರವನ್ನು ಬಹಳ ಸ್ವಲ್ಪಕಾಲ ನಡೆಯಿಸಿದಾಗ್ಯೂ, ಆಕೆಯ ಆಳಿಕೆಯು ಅಲ್ಲಿನ ಪ್ರಜೆಗಳಿಗೆ ಅಭಿನಂದನೀಯವಾಗಿಯು ಮತ್ತು ಆನಂದ ಪ್ರದವಾಗಿಯೂ ಇತ್ತು. ಅದರ ವರ್ಣನೆಯನ್ನು ಸ್ವಲ್ಪ ಮಾಡತಕ್ಕದ್ದು ಅವಶ್ಯಕವಿದೆ. ಮಹಾರಾಣಿ ಲಕ್ಷ್ಮೀಬಾಯಿ ಸಾಹೇಬಳ ಕೈಯಲ್ಲಿ ಝಾಸೀ ರಾಜ್ಯದ ಕಾರುಭಾರು ಬರುತ್ತಲೇ ಅಲ್ಲಿನ ರಾಜ ದರ್ಬಾರಿನ ಪೂರ್ವದ ಶೋಭಾ ಪ್ರಾಪ್ತವಾಗಿ, ಹಿಂದಿನ ಪದ್ಧತಿಯ ಪ್ರಕಾರ 12 ಕಾರ್ಖಾನೆಗಳು ನಡೆಯಲು ಪ್ರಾರಂಭವಾಗಿ ಸರ್ವತ್ರದಲ್ಲಿಯೂ ರಾಜಕೀಯ ಅಟ್ಟಹಾಸವು ಕಾಣಲು ಪ್ರಾರಂಬಿಸಿತು. ಇಂಗ್ರೇಜಿ ಸರ್ಕಾರದವರು ಸಂಸ್ಥಾನವನ್ನು ಸರ್ಕಾರಕ್ಕೆ ಸೇರಿಸಿಕೊಂಡಾಗ ಅಲ್ಲಿನ ಸರ್ವ ವೈಭವವನ್ನು ರಾಣಿಯು ಸ್ವಾಧೀನ ಪಡಿಸಿದ್ದರು. ಆದರೆ ರಾಜಸತ್ವವು ನಷ್ಟವಾಗಿದ್ದ ಕಾರಣ ಆ ವೈಭವವು ನಿಸ್ತೇಜಸ್ಕವಾಗಿ ತೋರುತ್ತಿತ್ತು. ಪರಂತು ಅದಕ್ಕೆ ರಾಜಸತ್ವದ ಸಹಾಯವು ಸಿಕ್ಕುತ್ತಲೇ ಅದು ಅತ್ಯಂತ ಶೋಭಾಯಮಾನವಾಗಿ ಕಾಣಲು ಪ್ರಾರಂಭಿಸಿತು. ಶುಭೇದಾರರ ಆಳಿಕೆಯಲ್ಲಿ ಝಾಸೀ ಪಟ್ಟಣವು ಯಾವಪ್ರಕಾರ ವಿಶೇಷವಾಗಿ ಶೋಭಿಸುತ್ತಿತ್ತೋ ಮತ್ತು ದಕ್ಷಿಣದಲ್ಲಿ ಪೂನ ಮತ್ತು ಹಿಂದುಸ್ತಾನದಲ್ಲಿ ಝಾಸಿ ಮತ್ತು ಅದರಕೀರ್ತಿಯು ಹ್ಯಾಗೆ ಹರಡಿಕೊಳ್ಳುತ್ತಿತ್ತೋ ಅದೇ ಪ್ರಕಾರವಾಗಿ ರಾಣಿಸಾಹೇಬಳ ಆಡಳಿತದಲ್ಲಿಯೂ ಅದಕ್ಕೆ ಒಂದು ಪ್ರಕಾರವಾದ ವಿಶೇಷ ಸೌಂದರ್ಯ ಸ್ವರೂಪವು ಬಂದು ಅದು ಬಹಳ ಸುರೇಖ ಮತ್ತು ಲಕ್ಷಣವಾದ ಪಟ್ಟಣದಂತೆ ಕಾಣಿಸಿಕೊಳ್ಳಲು ಪ್ರಾರಂಭಿಸಿತು. ಸರ್ಕಾರದ ಮುಖ್ಯ ಅರಮನೆಗೆ ನಾಲ್ಕು ಉಪ್ಪರಿಗೆಗಳು ಮತ್ತು ಎಂಟು ಚೌಕಿಗಳು ಇದ್ದು, ಬಹಳ ಚನ್ನಾಗಿತ್ತು. ಪರಂತು ರಾಜ್ಯಸತ್ವವು ಅಭಾವವಾಗಿದ್ದಕಾರಣ ಅದು ಕೆಲವುಕಾಲ ಉದಾಶಿನದ ರೂಪವುಳ್ಳದ್ದಾಗಿ ತೋರುತ್ತಿತ್ತು. ಅದು ಈ ಕಾಲದಲ್ಲಿ ಮನೋಹರವಾಗಿ ಶಿಪಾಯಿಗಳು ಮತ್ತು ಪ್ಯಾದೆಗಳು ಮುಂತಾದ ಜನಗಳಿಂದ ಕೇವಲ ತುಂಬಿಹೋ

ದಂತೆ ಕಾಣಲು ಪ್ರಾರಂಭಿಸಿತು. ತಾತ್ಪರ್ಯ ವೇನಂದರೆ—ಸ್ವತಃ ರಾಣಿಸಾಹೇಬಳು ವೈಭವದ ಯೋಗ್ಯ ವುಪಭೋಗವನ್ನು ತೆಗೆದು ಕೊಳ್ಳವಳಾಗಿದ್ದು, ಆಕೆಗೆ ಸ್ವರಾಜ್ಯದ ವುತ್ಕರ್ಷದ ವಿಷಯದಲ್ಲಿ ವಿಶೇಷವಾದ ಮನಸ್ಸಿದ್ದಕಾರಣ ಝಾಂಸಿಯ ಪ್ರಜೆಗಳ ಮುಖ ಕಮಲವು ಅರಳಿದಂತೆ ಕಾಣುತ್ತಿತ್ತು. ಬಾಯಿಸಾಹೇಬಳ ದಿನ ಚರ್ಯದ ಸಮ್ಮಂಧವಾಗಿ ಆಕೆಯ ಹತ್ತರಿದ್ದ ಒಬ್ಬ ಗೃಹಸ್ತನು ಈ ರೀತಿ ತಿಳುವಳಿಕೆ ಕೊಟ್ಟಿರುತ್ತಾನೆ.—ಬಾಯಿಸಾಹೇಬಳು ಪ್ರಾತಃಕಾಲದಲ್ಲಿ 5 ಹೊಡೆಯುತ್ತಲೇ ಯೆದ್ದು ನೈಸರ್ಗಿಕ ಕರ್ತವ್ಯವನ್ನು ಮುಗಿಸಿ, ಉತ್ತಮವಾದ ಸುವಾಸಕ ದ್ರವ್ಯದಿಂದ ಮಂಗಳ ಸ್ನಾನವನ್ನು ಮಾಡುತ್ತಿದ್ದಳು. ಪ್ರಥಮದಲ್ಲಿ ಪತಿ ಮರಣಾನಂತರ ತಲೆಯ ಕೂದಲನ್ನಿಟ್ಟುಕೊಂಡಿದ್ದಕ್ಕೋಸ್ಕರ ಇರತಕ್ಕ ಕೃಚ್ಛ್ರ ಪ್ರಾಯಶ್ಚಿತ್ತದ ಉದಕವನ್ನು ಬಿಟ್ಟು, ಬೆಳ್ಳಿಯ ವೃಂದಾವನದಲ್ಲಿನ ಶ್ರೀತುಳಸೀಪೂಜಾ ಮಾಡುತ್ತಿದ್ದಳು. ಅನಂತರ ಪಾರ್ಥಿವ ಪೂಜೆ ಪ್ರಾರಂಭವಾಗುತ್ತಿತ್ತು. ಆ ಸಮಯದಲ್ಲಿ ಸರ್ಕಾರದ ಗಾಯಕರು ಹಾಡುತ್ತಿದ್ದರು. ಪುರಾಣೀಕರ ಪುರಾಣವು ಅದರಲ್ಲಿಯೇ ನಡೆಯುತ್ತಿತ್ತು. ತದನಂತರ ಸರದಾರ ಮತ್ತು ಆಶ್ರಿತ ಜನಗಳ ಮುಜರೆ ಆಗುತ್ತಿತ್ತು. ಬಾಯಿಸಾಹೇಬಳ ದಕ್ಷತೆ (ಕಾರ್ಯ ನಿರ್ವಾಹಶಕ್ತಿ) ವಿಶೇಷ ವಿದ್ದದ್ದರಿಂದ ಯಾವದಾದರೂ ಒಂದು ದಿವಸ 150 ಜನಗಳು ಮುಜರೆ ಮಾಡತಕ್ಕವರ ಪೈಕಿ ಯಾರಾದರೂ ಬಾರದೆ ನಿಂತು ಹೋಗಿದ್ದರೆ ಮಾರನೇ ದಿವಸ 'ನಿನ್ನೆ ತಾವು ಯಾಕೆ ಬರಲಿಲ್ಲ?' ಎಂತ ವಿಚಾರಿಸದೇ ಇರುತ್ತಿರಲಿಲ್ಲ. ಈ ಪ್ರಕಾರವಾಗಿ ದೇವರಪೂಜೆ ನಡೆದತರುವಾಯ ಭೋಜನವಾಗುತ್ತಿತ್ತು. ಭೋಜನೋತ್ತರದಲ್ಲಿ ಕೆಲವುಕಾಲ ವಿಶ್ರಾಂತಿ ಅಥವ ಇತರ ಕಾರ್ಯದಮೇಲೆ ಹೋಗುತಿದ್ದಳು. ಅನಂತರ ಬೆಳಗ್ಗೆ ನಜರಿಗೆ ಬಂದದ್ರವ್ಯಗಳನ್ನ ತಟ್ಟೆಯಲ್ಲಿ ಹಾಕಿ ರೇಷ್ಮೆಯವಸ್ತ್ರದಲ್ಲಿ ಮುಚ್ಚಿಟ್ಟದ್ದನ್ನ ತನ್ನ ಎದುರಿಗೆ ತರಿಸಿಕೊಂಡು, ತನ್ನ ಮನಸ್ಸಿಗೆ ಬಂದ ಪದಾರ್ಥವನ್ನ ಗ್ರಹಣಮಾಡಿ, ಉಳಿದ ಪದಾರ್ಥವನ್ನು ಆಶ್ರಿತ ಜನಗಳಿಗೋಸ್ಕರ ಖಜಾನತೀಯವರ ಸ್ವಾಧೀನ ಮಾಡುತ್ತಿದ್ದಳು. ಅನಂತರ 3 ಘಂಟೆ ಹೊಡೆಯುವ ಸುಮಾರಿಗೆ ಕಛೇರಿಗೆ ಹೋಗುತ್ತಿದ್ದಳು. ಆ ವೇಳೆಯಲ್ಲಿ ಬಹಳವಾಗಿ ಪುರುಷ ವೇಷಧಾರಿಯಾಗಿರುತ್ತಿದ್ದಳು. ಕಾಲಿನಲ್ಲಿ ಪಾಜಾಮಿ, ಮೈಯಲ್ಲಿ ನೇರಲು ಹಣ್ಣಿನ ವರ್ಣದ ಮಾವಿನ ಕಾಯಿಯಹಾಗೆ ಹೂಗಳುಳ್ಳ ಅಂಗಿಯು, ತಲೆಗೆ ಪ್ರಕಾಶಿಸುವಹಾಗೆ ಸುಂದರವಾದ ಬತ್ತಿಯಿಂದ ಕಟ್ಟಿದ ಟೋಪಿ, ಸೊಂಟಕ್ಕೆ ಜರತಾರಿ ದುಬಟಾ, ಮತ್ತು ಅದಕ್ಕೆ ಕಟ್ಟಿದ್ದ ರತ್ನಖಚಿತವಾದ ಬಿಚ್ಚು ಕತ್ತಿ, ಈ ರೀತಿಯಾದ ವಸ್ತ್ರಾಲಂಕಾರದಿಂದ ಅಗೌರ ವರ್ಣದ ಮೂರ್ತಿಯು ಗೌರೀದೇವಿಯಂತೆ ಕಾಣುತ್ತಿದ್ದಳು. *

---

* ಮಹಾರಾಣಿ ಲಕ್ಷ್ಮಿಬಾಯಿ ಸಾಹೇಬಳ ಉಡುಪಿನ ವಿಷಯವಾಗಿ, "Gillean" ಸಾಹೇಬನು ಬರೆದಿರುವ ವರ್ಣನೆಯ ಅಧಾರದ ಮೇಲೆ ವರ್ಣಿಸುವದು ಬಹಳ ಸಮರ್ಪಕವಾಗಿರುತ್ತದೆ. ಆತನು ಹೇಳುತ್ತಾನೆ:—

ಯಾವಾಗಲಾದರೂ ಹೆಂಗಸರಸಂಗಡ ಸಂಚರಿಸುವ ಪದ್ಧತಿ ಯಿತ್ತು. ಪತಿ ಮರಣಾನಂತರದಲ್ಲಿ ಮುಖರ ಮುಂತಾದ ಆಭರಣವನ್ನು ಆಕೆಯು ಶುದ್ಧಾಂಗವಾಗಿ ಹಾಕಿಕೊಳ್ಳಲಿಲ್ಲ. ಕೈಯಲ್ಲಿ ವಜ್ರಖಚಿತವಾದ ಬಳೆಗಳೂ, ಕೊರಳಿನಲ್ಲಿ ಮುತ್ತಿನ ಸರ ಅನಾಮಿಕ ಬೆಟ್ಟಿನಲ್ಲಿ ವಜ್ರದುಂಗುರ, ಇಷ್ಟು ಹೊರ್ತು ಇನ್ಯಾವ ಅಲಂಕಾರವೂ ಬಾಯಿಸಾ ಸಾಹೇಬಳ ಮೈಮೇಲೆ ದೃಷ್ಟಿಗೆ ಬೀಳುತ್ತಿರಲಿಲ್ಲ. ತಲೇ ಕೂದಲನ್ನು ಯಾವಾಗಲೂ ಗಂಟುಹಾಕಿಕೊಂಡು ಇರುತ್ತಿದ್ದಳು. ಮತ್ತು ಬಿಳೇ ರೇಷ್ಮೆಯ ಶೀರೆಯನ್ನುಟ್ಟುಕೊಂಡು ಮೈಗೆ ಸ್ವಚ್ಛವಾದ ಬಿಳೇ ಕುಬಸ ತೊಟ್ಟುಕೊಳ್ಳುತ್ತಿದ್ದಳು. ಈ ಪ್ರಕಾರವಾಗಿ ಕೆಲವುಕಾಲ ಪುರುಷ ವೇಷದಲ್ಲಿಯೂ, ಕೆಲವುಕಾಲ ಸ್ತ್ರೀ ವೇಷದಲ್ಲಿಯೂ ಬಾಯಿಸಾ ಸಾಹೇಬಳು ದರ್ಬಾರಿಗೆ ಬರುತ್ತಿದ್ದಳು. ಆ ದರ್ಬಾರಿನ ಮಧ್ಯದಲ್ಲಿ ಯಾವಾಗಲಾದರೂ ಕೆಲವರಿಗೆ ದೃಷ್ಟಿಗೆ ಬೀಳುತ್ತಿರಲಿಲ್ಲ. ಆಕೆಯು ಕೂಡತಕ್ಕ

---

" Her dress, though that of a woman, was not the ordinary costume generally worn by females of her class and position in life. On her head she had a small cap of bright coloured scarlet silk, with a string of pearls and rubies encircling and laced into it, and round her neck a diamond necklace sparkled, of not less value than a lac of rupees at least. Her bodice, freely opened in front, showed a well shaped voluptuous bust, and terminated at the waist, which was somewhat tightly drawn in by a belt worked over and embroidered with gold, and in it were ostentatiously stuck two elaborately—carved, silver mounted pistols, of Damascus make, together with a small but elegantly shaped " pash kubs," or hand dagger, the point of which it was whispered, had been dipped in a subtle poison, whereby a wound, however slight, must prove fatal. Instead of the usual cloth, or petticoat, she wore a pair of loose trousers, from which protruded two small prettily rounded, bare feet, which rested on a cushion placed in front of her."

*The Ranee P.* 47—48,

ಕೋಣೆ ದರ್ಬಾರಿನ ದಿವಾನಖಾನೆಗೆ ಸಮೀಪ ಪ್ರತ್ಯೇಕವಾಗಿತ್ತು. ಅದರ ಬಾಗಲಿಗೆ ಸೋನೇರಿ ಬಣ್ಣ ಹಾಕಿ, ಅದರಮೇಲೆ ಜರತಾರಿ ಬಳ್ಳಿಗಳಿರತಕ್ಕ ಫರದೆ ಬಿಡುತ್ತಿತ್ತು. ಅದರಲ್ಲಿ ಗಾದಿಯಮೇಲಿನ ಲೋಡಿಗೆ ವರಗಿಕೊಂಡು, ರಾಣೀಸಾಹೇಬಳು ಕೂತುಕೊಳ್ಳುತ್ತಿದ್ದಳು. ಬಾಗಲ ಹೊರಗೆ ಇಬ್ಬರು ದ್ವಾರಪಾಲಕರು ಬೆಳ್ಳಿ ಮತ್ತು ಭಂಗಾರದ ಕಟ್ಟಿಗೆಗಳನ್ನು ಹಿಡಿದುಕೊಂಡು, ನಿಂತಿರುತ್ತಿದ್ದರು. ಮುಂದುಗಡೆ ದಿವಾನ ಲಕ್ಷ್ಮಣರಾಯನು ಸೊಂಟಾ ಕಟ್ಟಿಕೊಂಡು, ಕಾಗದದ ಗಂಟು ಕೈಯಲ್ಲಿ ತೆಗೆದುಕೊಂಡು ನಿಂತಿರುತ್ತಿದ್ದನು. ಹಿಂದುಗಡೆ ಹಜೂರ್ ಕಾರ್ಕೂನನು ಕೂತುಕೊಂಡಿರುತ್ತಿದ್ದನು. ಬಾಯಿಸಾಹೇಬಳ ಬುದ್ಧಿಯು ಬಹಳ ಸೂಕ್ಷ್ಮವಾಗಿದ್ದಕಾರಣ ಯಾವಕೆಲಸದ ಸಂಗತಿಯೇ ಆಗಲಿ, ಕೂಡಲೆ ತಿಳಿದುಕೊಂಡು ಅದಕ್ಕೆ ತತ್‌ಕ್ಷಣವೆ ಅಪ್ಪಣೆ ಹೇಳುವುದು, ಕೆಲವುಕಾಲ ತಾನು ಸ್ವತಃ ಬರಹಮೂಲಕ ಅಪ್ಪಣೆ ಬರೆಯುವದು, ಹೀಗೆ ಮಾಡುತ್ತಿದ್ದಳು. ನ್ಯಾಯದ ಕೆಲಸದಲ್ಲಿ ಆಕೆಯು ಬಹಳ ದಕ್ಷಳಾಗಿದ್ದದ್ದರಿಂದ ಫೌಜದಾರಿ ಮತ್ತು ಅದಾಲತ್ ಕೆಲಸವನ್ನು ಬಹಳ ಚಾತುರ್ಯದಿಂದ ನಡೆಸುತ್ತಾಯಿದ್ದಳು. * ಬಾಯಿಸಾಹೇಬಳಿಗೆ ಶ್ರೀಮಹಾಲಕ್ಷ್ಮಿಯಲ್ಲಿ ಅತಿಶಯ ಭಕ್ತಿಯಿತ್ತು. ಎಂತ ಹಿಂದೆಯೇ ಹೇಳಲ್ಪಟ್ಟದೆ. ಪ್ರತಿಯೊಂದು ಶುಕ್ರವಾರವೂ, ಮತ್ತು ಮಂಗಳವಾರ ದಿವಸಗಳಲ್ಲಿ ತನ್ನ ಸರ್ವಸಿದ್ಧತೆಯಿಂದ ದಾಮೋದರರಾಯನನ್ನು ಸಂಗಡ ಕರೆದುಕೊಂಡು,

---

* ರಾಣೀ ಸಾಹೇಬಳ ದರಬಾರಿನ ವರ್ಣನೆಯನ್ನು ಮೆಡೋಸ್‌ಟೇಲರ್ ಸಾಹೇಬನು ಈ ಪ್ರಕಾರವಾಗಿ ಮಾಡಿರುತ್ತಾನೆ :—

"The Ranee Lakshumee Byee, as Mahratha Brahmin had no affection of personal concealment; and she sat daily on the seat or Gaddee, of her deceased husband, receiving reports, giving directions, hearing petitions, and comporting herself as a brave and determined woman had need to do in her position. In appearance she was fair and handsome, with a noble presence and figure, and a dignified and resolute, indeed stern, expression, which appeared to have usurped the place of the peculiar softness which, when she was younger and had good hope of a prosperous life, and distinguished her."

*Seeta P.* 247.

ಸಂಧ್ಯಾಕಾಲದಲ್ಲಿ ಸರೋವರದಲ್ಲಿನ ಮಂದಿರದ ಮಧ್ಯೆಯಿರತಕ್ಕ ಮಹಾಲಕ್ಷ್ಮಿಯ ದರ್ಶನಕ್ಕೆ ಹೋಗತಕ್ಕ ಪದ್ಧತಿಯು ಆಕೆಗೆಯಿತ್ತು. ಈ ಮಂದಿರವು ಸರೋವರದ ಮಧ್ಯದಲ್ಲಿದ್ದಕಾರಣ ಅದಕ್ಕೆ ಅಲ್ಲಿನ ಸುಂದರವಾದ ಕಮಲಗಳು ಬಹಳ ಶೋಭಾ ಕೊಡುತ್ತಾಯಿದ್ದವು. ಆದ್ದರಿಂದ ಅದು ವಿಶೇಷ ರಮಣೀಯವಾಗಿ ಕಾಣುತ್ತಿತ್ತು. ಇದು ಹಾಗಿರಲಿ ! ಬಾಯಿಸಾಹೇಬಳ ಸ್ವಾರಿಯ ಅತ್ಯೈಹಾಸವನ್ನು ವರ್ಣಿಸಲು ಅಸಾಧ್ಯವಾಗಿದೆ. ಆಕೆಯು ಕೆಲವು ವೇಳೆಯಲ್ಲಿ ಮ್ಯಾನಾದಲ್ಲಿಯೂ ಮತ್ತು ಕೆಲವು ಸಮಯದಲ್ಲಿ ಕುದುರೆಯ ಮೇಲೂ ಕೂತುಕೊಂಡು ದೇವಿಯ ದರ್ಶನಕ್ಕೆ ಹೊಗುತಿದ್ದಳು. ಯಾನದಲ್ಲಿ ಕೂತುಕೊಂಡು ಹೋಗುವವೇಳೆಯಲ್ಲಿ ಅದರಮೇಲೆ ಕಿಂಖಾಬಿನ ವಸ್ತ್ರ (ಪಟ್ಟೆವಸ್ತ್ರ)ಕ್ಕೆ ಜರತಾರಿಯಿಂದ ಕಟ್ಟಿದ ಫರದೆಯನ್ನು ಇಳೀಬಿಟ್ಟಿರುತಿತ್ತು. ಆದಕಾರಣ ಆಮೇನೆಯು ಸುಶೋಭಿತವಾಗಿ ಕಾಣುತಿತ್ತು. ಬಾಯಿಸಾಹೇಬಳ ಸ್ವಾರಿಯು ಪುರುಷವೇಷದಲ್ಲಿ ಕುದುರೆಯಮೇಲೆ ಕೂತ ಸಮಯದಲ್ಲಿ ಆಕೆಯು ಝುರಝುರಿತವಾದ ಸುಂದರ ಭರ್ಜರಿ ಕಲಾಬತ್ತಿನ ಸೆರಗು ಬೆನ್ನಮೇಲೆ ಆಡುತಿತ್ತು. ಅದು ಬಹಳ ಮನೋಹರವಾಗಿ ಕಾಣುತ್ತಿತ್ತು. ಆಕೆಯ ಸ್ವಾರಿಯು ಮ್ಯಾನಾದಲ್ಲಿದ್ದರೆ ಅದರ ತುದಿಯನ್ನ ನಾಲ್ಕು ಐದು ದಾಸಿಯರು ಹಿಡಿದುಕೊಂಡು ಭರಭರನೆ ನಡಿಯುತ್ತಿದ್ದರು. ಈ ದಾಸಿಯರು ಜಮಾದಾರನ ಖಾನೆಯಲ್ಲಿ ಹೋಗಿ ಸುವರ್ಣರತ್ನದ ಅಲಂಕಾರ ಮತ್ತು ಜರತಾರಿ ಕುಬಸ ಸಹ ಹಾಕಿಕೊಳ್ಳಬೇಕು. ಹಸರು, ಕೆಂಪು ಅಥವಾ ಭಸ್ಮವರ್ಣದ ಶೀರೆಗಳನ್ನು ಉಟ್ಟುಕೊಳ್ಳಬೇಕು. ಕಾಲಲ್ಲಿ ದೊಡ್ಡ ದೊಡ್ಡ ಸರಪಳಿಗಳನ್ನ ಹಾಕಿಕೊಂಡು, ಕೆಂಪುಬಣ್ಣಹಾಕಿದ ಜೋಡುಗಳನ್ನ ಮೆಟ್ಟಿಕೊಳ್ಳಬೇಕು. ಕೆಲವು ವೇಳೆಯಲ್ಲಿ ಶೀರೆಯ ಕಚ್ಚೆಹಾಕಿಕೊಳ್ಳಬೇಕು. ಒಂದುಕೈಯಲ್ಲಿ ಬೆಳ್ಳಿ ಅಥವಾ ಭಂಗಾರದ ಹಿಡಿಯುಳ್ಳ ಚಾಮರವನ್ನು ತೆಗೆದುಕೊಂಡು, ಮತ್ತೊಂದು ಕೈಮೇನೆಯ ಬಾಗಲಿಗೆ ಹಾಕಿಕೊಂಡು ಸ್ವಾರಿಯ ಸಂಗಡ ಓಡಬೇಕು. ಈ ರೀತಿಯಾದ ಪದ್ಧತಿಯಿತ್ತು. ಆ ಸಮಯದಲ್ಲಿ ಈ ಅಪಾದಿತರಾದ ಸರ್ವಾಲಂಕಾರ ಯುಕ್ತರಾದ ದಾಸಿಯರು ಬಹಳ ಸುಂದರರಾಗಿ ಕಾಣುತ್ತಿದ್ದರು. ಸ್ವಾರಿಯಮುಂದೆ ಡಂಕಾ, ನಿಶಾನಿ, ಸಹ ಇದ್ದು ರಣವಾದ್ಯವು ಹಲಿಗೆ ಮುಂತಾದವುಗಳನ್ನ ಬಾರಿಸುತ್ತಿದ್ದರು. ನಿಶಾನಿಯಹಿಂದೆ ಸುಮಾರು ಇನ್ನೂರು ವಿಲಾಯಿತಿಯ ಜನಗಳು ಇರುತ್ತಿದ್ದರಲ್ಲದೆ, ಹಿಂದೆ ಮುಂದೆ ಸುಮಾರು ನೂರು ಕುದುರೆ ಸವಾರರು ಇರುತ್ತಿದ್ದರು. ಮ್ಯಾನೇಯ ಸಂಗಡ ಸಂಸ್ಥಾನದ ಕಾರುಭಾರಿ, ಮುತ್ಸದ್ದಿ ಮಾನಕರಿ ಮತ್ತು ಭಯಾಸಾಹೇಬ್ ಉಪಾಸನೆ ಮುಂತಾದ ಆಶ್ರಿತ ಮಂಡಲಿಯವರು ಕುದುರೆಯ ಮೇಲೆ ಕೂತುಕೊಂಡು, ಅಥವಾ ಪಾದಚಾರಿಗಳಾಗಿ ಹೋಗುತಿದ್ದರು. ಮತ್ತು ಅವರಸಂಗಡ ಕೆಲವು ಶಿಬ್ಬಂದಿಜನಗಳೂ ಇರುತ್ತಿದ್ದರು. ಈ ಪ್ರಕಾರವಾಗಿ ದೊಡ್ಡ ಡಂಭದಿಂದ ಕಾಳೆ ತಮಟೆಗಳನ್ನು ಹೊಡಿಸಿಕೊಳ್ಳುತ್ತಾ ಭಾಲೇದಾರ್, ಛೋಪ್‌ದಾರ್, ಸಹಿತ ಬಾಯಿಸಾಹೇಬಳ ಸ್ವಾರಿಯು ಹೊರಗೆಹೊರಟಕೂಡಲೆ, ಕೋಟೆಯ ಬುರುಜಿನ ಮೇಲೆ ನಗಾರಿ ಬಾರಿಸಲುಪ್ರಾರಂಭವಾಗುತ್ತಿತ್ತು. ಅದನ್ನು ಬಾಯಿಸಾಹೇಬಳ ಸ್ವಾರಿಯು ಹಿಂತಿರುಗಿ ಬರುವ

ಪರ್ಯಂತರ ಬಾರಿಸುತ್ತಿದ್ದರು. ಇದೇರೀತಿಯಾಗಿ ಸರೋವರದಲ್ಲಿನ ಮಹಾಲಕ್ಷ್ಮಿ ನಗಾರೆಖಾನೆಯಲ್ಲಿಯೂ ನಗಾರೆಯಾಗುತ್ತಿತ್ತು. ಕುದುರೆಯಮೇಲೆ ರಾಣಿಸಾಹೇಬಳ ಸ್ವಾರಿಯು ಹೊರಟವೇಳೆಯಲ್ಲಿ ದಾಸಿಯರನ್ನು ಅಥವಾ ಆಶ್ರಿತಸಮೂಹವನ್ನು ತನ್ನ ಸಂಗಡ ತೆಗೆದುಕೊಳ್ಳುತ್ತಿರಲಿಲ್ಲ. ಕುದುರೆ ಸವಾರರು ಮತ್ತು ವಿಲಾಯತಿ ಜನಗಳು ಮಾತ್ರ ಆಕೆಯ ಸ್ವಾರಿಸಂಗಡ ಇರುತಿದ್ದರು. ಶ್ರೀಮಹಾಲಕ್ಷ್ಮಿಯು ಝಾಁಸಿ ಸಂಸ್ಥಾನಿಕರ ಕುಲಸ್ವಾಮಿನಿ ಯಾಗಿದ್ದದ್ದರಿಂದ ದೇವಸ್ಥಾನದ ಭದ್ರತೆಗೋಸ್ಕರ ಬಹಳ ವೆಚ್ಚವನ್ನ ಇಟ್ಟಿದ್ದರು. ನಂದಾದೀಪ, ಪೂಜಾ, ಮಹಾನೈವೇದ್ಯ, ನಗಾರಿ, ಗಾಯಕರು, ನರ್ತಕಿ ಮತ್ತು ಧರ್ಮಶಾಲಾ, ಇವುಗಳ ವ್ಯವಸ್ಥೆಯು ವಿಜೃಂಭಿಸುತ್ತಿದ್ದವು. ಇದರಿಂದ ಬಾಯೀ ಸಾಹೇಬಳು ಪರಮೇಶ್ವರನಲ್ಲಿ ಅತ್ಯಂತ ಭಕ್ತಿವುಳ್ಳವಳಾಗಿದ್ದಳು ಎಂಬುವುದು ತೋರಿಬರುತ್ತೆ.

ಬಾಯೀ ಸಾಹೇಬಳಿಗೆ ಆಶ್ರಿತ ಮಂಡಲಿಯವರ ಮೇಲೆ ಬಳ್ಳೇ ಆದರವಿತ್ತು. ಅವರಿಗೆ ಊಟಕ್ಕೆ ತಿಂಡಿಗೆ ಚೆನ್ನಾಗಿ ಸಿಕ್ಕಬೇಕು ; ಬಟ್ಟೆಬರೆ ಚೆನ್ನಾಗಿರಬೇಕು. ಮತ್ತು ಅವರು ಸರ್ವದಾ ಸುಖಿಗಳಾಗಿರಬೇಕು ; ಎಂಬ ವಿಷಯದಲ್ಲಿ ಮಹಾರಾಣಿ ಸಾಹೇಬಳ ದೃಷ್ಟಿಯು ಚನ್ನಾಗಿತ್ತು. ಆಕೆಗೆ ಸರ್ವ ವಿದ್ಯೆಗಳಲ್ಲಿಯೂ ಬಳ್ಳೇ ಪರೀಕ್ಷೆಯಿದ್ದ ಕಾರಣ ವಿದ್ವಾಂಸರಿಗೆ ಆಕೆಯ ಸಮೀಪದಲ್ಲಿ ಬಳ್ಳೇ ಆಶ್ರಯವಿತ್ತು. ಆಕೆಯ ಹತ್ತರ ದೊಡ್ಡ ದೊಡ್ಡ ಶಾಸ್ತ್ರಿಗಳು, ವಿದ್ವಾಂಸರೂ, ವೈದೀಕರೂ ಮತ್ತು ಯಾಜ್ಞಿಕರೂ ಸಹ ಇದ್ದರು. ಪೂರ್ವಜರು ಸಂಪಾದಿಸಿದ ಪ್ರಾಚೀನವಾದ ಬಹಳ ಬೆಲೆಯುಳ್ಳ ಪುಸ್ತಕ ಸಂಗ್ರಹವು ಝಾಁಸಿಯಲ್ಲಿತ್ತು. ಬಳ್ಳೇ ಪುರಾಣೀಕರು ಗಾಯನದಲ್ಲಿ ಪರಿಶ್ರಮವುಳ್ಳ ಸಂಗೀತ ಶಾಸ್ತ್ರಜ್ಞರೂ, ಕುಶಲ ಕೈಗೆಲಸದವರೂ ಮುಂತಾದ ಅನೇಕ ಪ್ರಕಾರದ ವಿದ್ಯಾವಂತರು ಆಕೆಯ ಆಶ್ರಯದಲ್ಲಿದ್ದರು. ಸ್ವತಃ ಬಾಯೀ ಸಾಹೇಬಳು ಬಹಳ ನಿಷ್ಕಪಟ ಮತ್ತು ನಿರ್ಮಲ ಮನಸ್ಸಿನಿಂದ ಇದ್ದದ್ದರಿಂದ ಎಲ್ಲರ ಮೇಲೂ ಆಕೆಗೆ ಬಹಳ ಪ್ರೇಮವಿತ್ತು. ಆಕೆಯ ಸದ್ಗುಣಗಳ ಕೀರ್ತಿಯನ್ನು ಕೇಳಿ, ದೂರದೂರದಲ್ಲಿರತಕ್ಕ ಗುಣಜ್ಞರು ಆಕೆಯ ಕಡೆಗೆ ಬರುತ್ತಿದ್ದರು. ಆ ಸರ್ವರಿಗೆ ಅಲ್ಲಿ ಉತ್ತಮ ಪ್ರಕಾರವಾಗಿ ಮರ್ಯಾದೆ ನಡೆದು ಅವರವರ ಯೋಗ್ಯತಾನುಸಾರವಾಗಿ ಅರಮನೆಯಲ್ಲಿ ಸಂಭಾವನೆಯು ಸಿಕ್ಕುತ್ತಿತ್ತು. ದಾಸರೂ ಸಂಗೀತಗಾರರೂ ಶಾಸ್ತ್ರಿಗಳು ಮುಂತಾದ ಮಂಡಲಿಯವರು ಒಂದು ದಿವಸವಾದರೂ ಅರಮನೆಯಲ್ಲಿಲ್ಲವೆಂತ ಇರುತ್ತಿರಲಿಲ್ಲ.*

---

* ಒಂದು ಸಲ ಹೋಳೀಹಬ್ಬದ ಸಮಯದಲ್ಲಿ, ಗ್ವಾಲಿಯರ್‌ಗೆ ಕೊಂಕಣದೇಶದ ನಾಟಕ ಮಂಡಲಿಯವರು ಸುಮಾರು 50 ಜನಗಳು ಬಂದಿದ್ದರು. ಅವರಿಗೆ ಪಟ್ಟಣದ ಜನಗಳು ಕಾಗದ ಬರೆದು ಕರೆಕಳುಹಿಸಿದ್ದರು. ಅವರ ಆಟವು ಷಹರಿನಲ್ಲಿ

ಇದು ಹಾಗಿರಲ್ಲಿ! ಬಾಯಿಸಾಹೇಬಳಿಗೆ ಅಶ್ವ ಪರೀಕ್ಷೆಯಲ್ಲಿ ಬಹಳ ಚನ್ನಾಗಿ ಪರಿಶ್ರಮವಿತ್ತು. ಉತ್ತರ ಹಿಂದುಸ್ಥಾನದ ಮಧ್ಯದಲ್ಲಿ ಆವೇಳೆಯಲ್ಲಿ ಅಶ್ವಪರೀಕ್ಷೆ ಸಮ್ಮಂಧವಾಗಿ ಮೂರು ಜನಗಳ ಹೆಸರು ಪ್ರಖ್ಯಾತಿಗೆ ಬಂದಿತ್ತು. ಒಂದನೇ ಶ್ರೀಮಂತ ನಾನಾಸಾಹೇಬ್ ಪೇಷ್ವೆ, ಎರಡನೇ ಬಾಬಾಸಾಹೇಬ್ ಆಪ್ಟೇ ಗ್ವಾಲ್ಹೇರಿಕರ್, ಮತ್ತು ಮೂರನೇ ಝಾಂಸಿಕರ್ ಮಹಾರಾಣಿ ಲಕ್ಷ್ಮೀಬಾಯಿ ಸಾಹೇಬ್, ಇವರಲ್ಲಿ ಬಾಯಿಸಾಹೇಬಳು ಸ್ತ್ರೀಯಾಗಿದ್ದಾಗ್ಯೂ ಅಶ್ವಪರೀಕ್ಷಾ ನಿಪುಣತನದಲ್ಲಿ ಅಗ್ರಗಣ್ಯಳಾಗಿದ್ದಳೆಂತ ಹೇಳಬಹುದಾಗಿದೆ. ಆಕೆಯ ಅಶ್ವಪರೀಕ್ಷಾ ಪರಿಶ್ರಮ ವಿಷಯದಲ್ಲಿ ಅನೇಕ ದೃಷ್ಟಾಂತಗಳಿವೆ. ಅದರಲ್ಲಿ ಒಂದು ಈ ರೀತಿ—ಒಂದು ದಿವಸ ಒಬ್ಬ ಕುದುರೆಯ ವ್ಯಾಪಾರಗಾರನು ನೋಡಲಿಕ್ಕೂ ಮತ್ತು ಚುರುಕಿನಲ್ಲಿ ಸಹ ಬಹಳ ಚನ್ನಾಗಿರತಕ್ಕ ಎರಡು ಕುದುರೆಗಳನ್ನು ತೆಗೆದುಕೊಂಡು ಝಾಂಸಿಗೆ ಬಂದನು. ಅವುಗಳನ್ನ ಮಾರುವದಕ್ಕಾಗಿ ಅರಮನೆಗೆ ಹೋದನು. ಬಾಯಿಸಾಹೇಬಳು ಅವುಗಳಮೇಲೆ ಕೂತುಕೊಂಡು ಚಕ್ರಾಕಾರವಾಗಿ ತಿರುಗಿಸಿ, ಕೂಡಲೆ ಅವುಗಳಿಗೆ ಮೌಲ್ಯ ಕಟ್ಟಿದಳು. ಒಂದಕ್ಕೆ ಸಹಸ್ರ ರೂಪಾಯಿ ಮತ್ತು ಇನ್ನೊಂದಕ್ಕೆ ಐವತ್ತು ರೂಪಾಯಿ ಅಂದಳು. ಇದನ್ನು ಕೇಳಿ ಸರ್ವರಿಗೂ ಆಶ್ಚರ್ಯ ತೋರಿತು. ಎರಡು ಕುದುರೆಗಳೂ ನೋಡಲಿಕ್ಕೆ ತೇಜಸ್ವಿಗಳಾಗಿಯೂ, ಮತ್ತು ವಯಸ್ಸಿನಲ್ಲಿ ಸಮನಾಗಿಯೂ, ಇರುವಾಗ ಬೆಲೆಯಲ್ಲಿ ಇಷ್ಟು ಹೆಚ್ಚುಕಡಮೆ ಕಟ್ಟಲು ಕಾರಣವೇನೆಂಬುವದು ಯಾರಿಗೂ ಗೊತ್ತಾಗಲಿಲ್ಲ. ಆಗ ಬಾಯಿಸಾಹೇಬಳು ಹೇಳಿ ತೋರಿಸಿಕೊಟ್ಟಳು. "ಇದರಲ್ಲಿ ಒಂದು ಕುದುರೆ ಚನ್ನಾಗಿದೆ. ಇನ್ನೊಂದು ನೋಡಲಿಕ್ಕೆ ಪ್ರಾಯದ್ದಾಗಿಯೂ ಮತ್ತು ಚುರುಕಾಗಿಯೂ ಇದ್ದಾಗ್ಯೂ, ಅದರ ಎದೆ ಹೋಗಿದೆ. ಆದಕಾರಣ ಅದು ಶುದ್ಧಾಂಗ ಪ್ರಯೋ

---

ಅನೇಕವಾಯಿತು. ಆಗ ಬಾಯಿಸಾಹೇಬಳು ಅವರಿಗೆ ಸರ್ಕಾರದ ಕಡೆಯಿಂದ ಸೀದಾ ಕಳಹಿಸುವ ಏರ್ಪಾಟು ಇಟ್ಟು, ಅರಮನೆಯಿಂದಲೂ ಅವರಿಗೆ ಪ್ರಯೋಜನ ಮಾಡಿಸಿಕೊಟ್ಟಳು. ಒಂದು ಸಲ ಹರಿಶ್ಚಂದ್ರನ ಕಥೆ ನಡಿಯಿತು. ಆ ಸಮಯದಲ್ಲಿ ನಾಟಕದ ಸಮೋಬಾ ನಾಶಿಕವಾಲೆ ಎಂಬುವನು ವಿಚಾರಿಸಿದನು, "ಈ ನಾಟಕದಲ್ಲಿ ದೊಂಬರ ಮನೆಯಲ್ಲಿ ಹರಿಶ್ಚಂದ್ರನ ತಲೆಯಮೇಲೆ ಮಣ್ಣಿನ ಪಾತ್ರೆಯನ್ನ ಒಡೆಯಬೇಕಾಗುತ್ತದೆ. ಅಪ್ಪಣೆಯಾದರೆ ಅದನ್ನು ತರಿಸಿ ಒಡಿಸುತ್ತೇನೆ." ಅದಕ್ಕೆ ಬಾಯಿಸಾಹೇಬಳು ಅಪ್ಪಣೆ ಕೊಟ್ಟಳು. ಪರಂತು ನಾಟಕದಲ್ಲಿ ಕೂತಾಗ ಮಡಿಕೆ ಒಡೆದ ಕೂಡಲೆ, ವೃದ್ಧ ಮಂಡಲಿಯವರಿಗೆ ಇದು ಅಪಶಕುನವೆಂತ ಖಿನ್ನ ಮನಸ್ಸಾಯಿತು. ಬಾಯಿಸಾಹೇಬಳು ನಾಟಕದವರಿಗೆ ಯೋಗ್ಯವಾಗಿ ಕೊಡುವದನ್ನು ಕೊಟ್ಟು ತನ್ನ ಔದಾರ್ಯ ಬುದ್ಧಿಯನ್ನ ವ್ಯಕ್ತಪಡಿಸಿದಳು.

ಉಜ್ಜನ ಪತ್ರ.

ಜನವಾದ್ದಾಗಿಲ್ಲ.'' ಅದರಮೇಲೆ ಆ ಕುದುರೇ ವ್ಯಾಪಾರೀಕನು ಬಾಯಿಸಾಹೇಬಳ ಚಾತುರ್ಯಕ್ಕೆ ಬಹಳ ಶ್ಲಾಘನೆಮಾಡಿ, ಈ ಕುದುರೆಗೆ ನಾನು ಒಳ್ಳೇ ಮಾಲೀಸು ಕೊಟ್ಟು, ನೋಡಲಿಕ್ಕೆ ಸರಿಪಡಿಸಿದ್ದೇನೆ. ಆದರೆ ಬಾಯಿಸಾಹೇಬಳು ಹೇಳುವದು ನಿಜವೆಂತ ಒಪ್ಪಿಕೊಂಡನು. ನಾನು ಅನೇಕಕಡೆ ತಿರುಗಿದೆ. ಯಾರೂ ಇದರ ಪರೀಕ್ಷೆಯನ್ನು ಹಿಡಿಯಲಿಲ್ಲವೆಂತ ಹೇಳಿದನು. ಅನಂತರ ಬಾಯಿಸಾಹೇಬಳು ತಾನು ನಿಶ್ಚಯಿಸಿದ ಮೌಲ್ಯಕ್ಕೆ ಆ ಯೆರಡು ಕುದುರೆಗಳನ್ನೂ ತೆಗೆದುಕೊಂಡು ಆ ವ್ಯಾಪಾರಗಾರನಿಗೆ ಬಹುಮಾನವನ್ನೂ ಕೊಟ್ಟು ಕಳುಹಿಸಿದಳು.

ರಾಣೀ ಸಾಹೇಬಳ ದಾತೃತ್ವವು ಮತ್ತು ಔದಾರ್ಯ ಗುಣಗಳು ಕೇವಲ ಅಸದೃಶವಾಗಿದ್ದವು. ಆಕೆಯಬಳಿಗೆ ಯಾರಾದರೂ ಭಿಕ್ಷುಕ, ದರಿದ್ರ, ಅಥವ ಇನ್ಯಾರಾದರೂ ದಿಕ್ಕಿಲ್ಲದವನು ಹೋಗಿ ಯಾವಾಗಲೂ ಮುಖ ಬಣಗಿಸಿಕೊಂಡು ಹಿಂತಿರುಗಿದನೆಂತ ಆಗುತ್ತಿರಲಿಲ್ಲ. ಒಂದು ದಿವಸ ಒಬ್ಬ ಕಾಶೀ ವಿದ್ವಾಂಸ ಬ್ರಾಹ್ಮಣನು ಅರಮನೆಯ ಪುರೋಹಿತನ ಸಂಗಡ ನಿತ್ಯದಾನಕ್ಕೋಸ್ಕರ ಅರಮನೆಗೆ ಹೋದನು. ಅಲ್ಲಿ ಲಾಲೂಭಾವೂ ಟೇಂಕರೆ ಉಪಾಧ್ಯಾಯನು ಆ ಬ್ರಾಹ್ಮಣನ ವಿದ್ಯಾವಿಷಯದಲ್ಲಿಯೂ, ಆಚಾರಶೀಲತೆ ವಿಷಯದಲ್ಲಿಯೂ, ಸ್ತೋತ್ರಮಾಡಿ ಬಾಯಿಸಾಹೇಬಳಿಗೆ ಹೇಳಿದ್ದೇನಂದರೆ :— ಈ ವಿದ್ವಾಂಸನ ಮೊದಲನೇ ಹೆಂಡತಿ ತೀರಿಹೋದ್ದರಿಂದ ಈತನು ಎರಡನೇ ಲಗ್ನ ಮಾಡಿಕೊಳ್ಳುವುದಕ್ಕೆ ಅಪೇಕ್ಷಿಸುತ್ತಾನೆ. ಪರಂತು ಹುಡಿಗಿಯನ್ನು ಸಂಪಾದಿಸಲು ಬಹಳ ದ್ರವ್ಯ ಬೇಕಾಗುತ್ತಾದ್ದರಿಂದ ಬಹಳ ವ್ಯಸನದಲ್ಲಿದ್ದಾನೆ. ಇದನ್ನು ಕೇಳಿ ಬಾಯಿಸಾಹೇಬಳು ಪ್ರಶ್ನೆಮಾಡಿದ್ದೇನಂದರೆ :—ರೂಪಾಯಿ ಕೊಟ್ಟರೆ ಮಗಳನ್ನು ಕೊಡತಕ್ಕವರು ಯಾರಾದರೂ ಇದ್ದಾರೆಯೆ ? ಹ್ಯಾಗೆ? ಅದಕ್ಕೆ ಆ ಬ್ರಾಹ್ಮಣನು ಬಹಳ ಸಮ್ರತೆಯಿಂದ ಹೇಳಿದ್ದೇನಂದರೆ :—ನಮ್ಮ ಜಾತಿಯ ಒಬ್ಬ ದೇಶಸ್ಥ ಬ್ರಾಹ್ಮಣನು ಕಾಶಿಯಲ್ಲಿದ್ದಾನೆ. ಆಗ ಆತನಿಗೆ 12 ವರ್ಷ ವಯಸ್ಸಿನ ಒಬ್ಬ ಮಗಳಿದ್ದಾಳೆ. ಆಕೆಯು ರೂಪದಲ್ಲಿ ಚನ್ನಾಗಿದ್ದಾಳೆ. ಘಟಿತಾರ್ಥಗಳು ಸರಿಯಾಗಿ ಸೇರುತ್ತದೆ. ಆದರೆ ಹುಡಿಗಿಗೋಸ್ಕರ 400 ರೂಪಾಯಿಗಳನ್ನು ಕೊಡಬೇಕು. ಅದಕ್ಕೆ ನಾನು ಬಡವ ಯೆಲ್ಲಿಂದ ತರಬೇಕು ? ಇದು ಹೊರ್ತು ಲಗ್ನದ ಖರ್ಚಿಗೆ 100 ರೂಪಾಯಿ ಕೊಡಬೇಕು. ಈ ಮಾತನ್ನು ಕೇಳಿದ ಕೂಡಲೆ ಬಾಯಿಸಾಹೇಬಳು 500 ರೂಪಾಯಿಗಳನ್ನು ತರಿಸಿ ಧಾರೆಯೆರದು, ಬ್ರಾಹ್ಮಣನ ಕರಗಿನಲ್ಲಿಟ್ಟು, ಹೀಗೆ ಹೇಳಿದಳು. ಲಗ್ನಕಾಲಕ್ಕೆ ನಮಗೆ ಲಗ್ನಪತ್ರಿಕೆ ಕಳುಹಿಸುವದನ್ನು ಮರೆಯಬೇಡಿ. ಬ್ರಾಹ್ಮಣನು ಈ ಪ್ರಕಾರ ಕೃತಕೃತ್ಯನಾಗಿ ಹೊರಟುಹೋದನು. *

ಒಂದುದಿನ ಬಾಯಿಸಾಹೇಬಳ ಸ್ವಾರಿಯು ಮಹಾಲಕ್ಷ್ಮೀ ದರ್ಶನಕ್ಕೆ ಹೋಗಿ ತಿರುಗಿಬರುವಾಗ ದಕ್ಷಿಣಬಾಗಲಿನಿಂದ ಒಳಗೆ ಪ್ರವೇಶಿಸಿದಳು. ಅಲ್ಲಿ ಸಾವಿರಾರು ಭಿಕ್ಷ

* ಉಜ್ವಲನ ಪ್ರತಿ.

ಕರು ದಾರಿ ಅಡ್ಡಗಟ್ಟಿ ಗಲಬಿಲೆ ಮಾಡುವದನ್ನು ಕಂಡು, ಬಾಯಿಸಾಹೇಬಳು ದಿವಾನ್ ಲಕ್ಷ್ಮಣರಾಯನಿಗೆ ಅದರಕಾರಣವನ್ನು ವಿಚಾರಿಸಿದಳು. ಅದಕ್ಕೆ ಅತನು ವಿನಂತಿ ಮಾಡಿದ್ದೇನಂದರೆ “ ಮಹಾರಾಣಿಯೇ ಈ ಜನಗಳು ಬಹಳ ಬಡವರಾಗಿದ್ದಾರೆ. ಈಚಿಗೆ ಯಥೇಷ್ಟ ಛಳಿ ಬೀಳುತ್ತಿರೋಣದರಿಂದ ಅವರಿಗೆ ವಿಶೇಷ ಸಷ್ಟವಾಗುತ್ತಿದೆ. ಆದ್ದರಿಂದ ಸರ್ಕಾರದವರು ಕೃಪೆಯಿಂದ ತಮ್ಮನ್ನ ವಿಚಾರಿಸಬೇಕೆಂತ ಅವರ ವಿಜ್ಞಾಪನೆಯಾಗಿದೆ.” ಇದನ್ನು ಕೇಳಿ ಬಾಯಿಸಾಹೇಬಳಿಗೆ ಬಹಳ ವ್ಯಸನವಾಗಿ ಕನಿಕರದಿಂದ ತಕ್ಷಣವೇ ಹೀಗೆ ಅಪ್ಪಣೆ ಮಾಡಿದಳು. ಇವತ್ತಿಗೆ 4 ನೇ ದಿವಸ ಬಡಜನಗಳನ್ನೆಲ್ಲಾ ಕರೆಯಿಸಿ ಪ್ರತಿಯೊಬ್ಬ ಮನುಷ್ಯನಿಗೂ ಒಂದು ಅಂಗಿ, ಒಂದು ಟೋಪಿ, ಮತ್ತು ಒಂದು ಕರೇ ಕಂಬಳಿ, ಈ ರೀತಿಕೊಡಬೇಕು. ಬಾಯಿಸಾಹೇಬಳ ಈ ಹುಕ್ಕುಂ ಹುಟ್ಟಿದ ಮಾರನೇ ದಿವಸವೇ ಷಹರ್‌ನಲ್ಲಿನ ಹೊಲಿಗೆಕಾರರನ್ನೆಲ್ಲಾ ಸೇರಿಸಿ, ಟೋಪಿಗಳೂ, ಅಂಗಿಗಳೂ, ಸಹ ಹೊಲಿಯಿಸಲಿಕ್ಕೆ ಪ್ರಾರಂಭಿಸಿದರು. ನಿಶ್ಚಯಿಸಿದ ದಿವಸ ಪಟ್ಟಣದಲ್ಲಿ ತಮಟೇ ಹೊಡಿಸಿ, ಬಡಜನಗಳನ್ನೆಲ್ಲಾ ಅರಮನೆಯ ಯೆದುರಿಗೆ ಸೇರಿಸಿದರು. ಅದರಲ್ಲಿ ಸಾಧಾರಣವಾದ ಬಡಜನರೂ ಕೂಡ ನುಗ್ಗಿದ್ದರು. ಬಾಯಿಸಾಹೇಬಳು ಆ ಸರ್ವರಿಗೂ ವಸ್ತ್ರ ದಾನಮಾಡಿ ಮನಸ್ಸಂತೋಷ ಪಡಿಸಿದಳು.

ಬಾಯಿಸಾಹೇಬಳ ಕೃಪಾಳುತನ, ಮತ್ತು ಪರೋಪಕಾರ ಬುದ್ಧಿ, ಸಹ ಝಾಸೀ ಜನಗಳಿಗೆ ನಥೇಖಾನನ ಯುದ್ಧ ಸಮಯದಲ್ಲಿ ಸಂಪೂರ್ಣವಾಗಿ ವ್ಯಕ್ತವಾಗಿತ್ತು. ಆ ಸಮಯದ ಸಂಗತಿಗಳನ್ನು ಅಲ್ಲಿ ಸಮಕ್ಷಮದಲ್ಲಿದ್ದ ಒಬ್ಬ ದೊಡ್ಡ ಮನುಷ್ಯನು ಈ ಪ್ರಕಾರವಾಗಿ ತಿಳಿಸಿರುತ್ತಾನೆ.–ಝಾಸೀಯವರಕಡೆ ಸೈನ್ಯದಲ್ಲಿ ಘಾಯವಾದ ಜನಗಳು ಪಟ್ಟಣಕ್ಕೆ ಬಂದಕೂಡಲೆ ಅವರ ಘಾಯಕ್ಕೆ ರಾಣೀ ಸಾಹೇಬಳ ಸಮಕ್ಷಮ ಮಲಾಂ ಪಟ್ಟಿ ಹಾಕಬೇಕು. ಆಗ ಅವರು ತಮ್ಮ ಶೂರ ಮಹಾರಾಣಿಯನ್ನು ನೋಡಿ, ಬಹಳ ಆವೇಶ ತೋರಿಸುತ್ತಿದ್ದರು. ರಾಣೀ ಸಾಹೇಬಳು ವ್ಯಸನದಿಂದ ಉಸುರುಬಿಡುತ್ತಾ ಅವರಿಗೆ ಭೂಷಣವನ್ನು ಕೊಟ್ಟು, ಅವರ ಮೈಮೇಲೆ ತನ್ನ ಕೈ ಆಡಿಸಿ ಎರಡನೆಯವರಿಗೆ ಇಂಥಾ ಘಾಯದ ದುಃಖ ತೋರದೆ ನಿಮ್ಮಂತೆ ಆವೇಶ ಹುಟ್ಟಿತೇ ಹ್ಯಾಂಗೆ ? ಎಂತ ಶೂರತ್ವವನ್ನು ತೋರಿಸಿ, ರಾಣೀ ಸಾಹೇಬಳ ಕೈಯಿಂದಲೇ ತಮ್ಮ ಪರಿಣಾಮವಾಗಬೇಕೆಂತ ಅವರಿಗೆ ನಂಬಿಕೆ ಹುಟ್ಟಿಸುತ್ತಿದ್ದಳು. * ನಿಜವಾಗಿ ಇಷ್ಟು ಮಮತೆಯಿಂದ ತನ್ನ ಪ್ರಜೆಗಳ ಸಂಗಡ ನಡೆದುಕೊಳ್ಳುತ್ತಿದ್ದ ಸದ್ಗುಣೀ ರಾಜಸ್ತ್ರೀ ಮೇಲೆ ಸರ್ವ ಜನಗಳೂನು ತಮ್ಮ ಮಾತೃವಿನಂತೆ ಭಕ್ತಿಯಿಟ್ಟು ಆಕೆಯ ಅನೇಕ ಸದ್ಗುಣಗಳನ್ನ ಹೊಗಳುವದರಲ್ಲಿ ಆಶ್ಚರ್ಯವೇನೂ ?

ಬಾಯಿಸಾಹೇಬಳಿಗೆ ದಾಮೋದರರಾವ್ ವುರ್ಫ್ ರಾವು ಸಾಹೇಬನ (ದತ್ತುಮಗನ) ಮೇಲೆ ಅತ್ಯಂತ ಪ್ರೀತಿ ಯಿದ್ದುದ್ದರಿಂದ ಆತನ ವಿಷಯದಲ್ಲಿ ಯಾವದಕ್ಕೂ

---

* ಗ್ವಾಲಿಯರ್ ಪುಸ್ತಕದಿಂದ ತಿಳುವಳಿಕೆ.

ಹಿಂದು ಮುಂದು ನೋಡುತ್ತಿರಲಿಲ್ಲ. ರಾವು ಸಾಹೇಬನು ಕೃಪೆಗಳು ಬ್ರಿಟಿಷ್ ಸರ್ಕಾರದವರ ದಯದಿಂದ ಈಗ ಝಾನ್ಸೀ ಸಂಸ್ಥಾನದ ಅಧಿಪತಿ ಯಾದಾನು ಯೆಂತ ಬಾಯಿಸಾಸಾಹೇಬಳಿಗೆ ಸಂಪೂರ್ಣವಾಗಿ ನಂಬಿಕೆಯಿತ್ತು, 1857 ನೇ ಇಸವಿ ಜೂನ್ ತಿಂಗಳಲ್ಲಿ ಇಂಗ್ರೇಜಿ ಅಧಿಕಾರಿಗಳಿಗೆ ತಾನು ಮಾಡಿದ ಸಹಾಯಕ್ಕೆ ಮತ್ತು ಝಾನ್ಸೀ ಪ್ರಾಂತ್ಯವನ್ನ ಸಂರಕ್ಷಣೆ ಮಾಡುವದಕ್ಕೆ ತಾನು ಮಾಡಿದ ಪ್ರಯತ್ನಕ್ಕೂ ಸಹ ಬ್ರಿಟಿಷ್ ಸರ್ಕಾರದವರ ಕಡೆಯಿಂದ ಯೋಗ್ಯವಾದ ಪ್ರತಿಫಲ ಶಿಕ್ಕೀತು. ಜಬ್ಬಲ್ಪುರದ ಕಮಿಷನರ್, ಸೆಂಟ್ರಲ್ ಇಂಡಿಯಾದ ಪೊಲಿಟಿಕಲ್ ಏಜಂಟ್ ಮತ್ತು ಆಗ್ರಾದ ಕಮಿಷನರ್ ಸಹ ಕಳುಹಿಸಿದ ನಿರೂಪಗಳು ಬಳ್ಳೇ ಉಪಯೋಗಕ್ಕೆ ಬಂದೀತು. ನ್ಯಾಯ ಪ್ರೀತಿ ಮತ್ತು ಔದಾರ್ಯ ಬುದ್ಧಿಯನ್ನ ತೋರಿಸತಕ್ಕ ವಿಲಾಯಿತೀ ಸರ್ಕಾರದವರ ಕಡೆಗೆ ಕಳುಹಿಸಲ್ಪಟ್ಟ ವಕೀಲರ ಕೆಲಸವು ಸಿದ್ಧಿಗೆ ಬಂದೀತು. ಮತ್ತು ಈಚೆಗೆ ಮಹಾರಾಜ ಗಂಗಾಧರರಾಯನ ಇಷ್ಟಪ್ರಕಾರ ದಾಮೋದರರಾಯನಿಗೆ ಝಾನ್ಸೀ ಸಂಸ್ಥಾನದ ಸ್ವಾಮಿತ್ವವು ಶಿಕ್ಕೀತು ; ಎಂತ ರಾಣೀ ಸಾಹೇಬಳಿಗೆ ವಿಶೇಷವಾದ ಆಶೆ ತೋರುತ್ತಿತ್ತು. ಪರಂತು ಇತ್ತಲಾಗಿ ಝಾನ್ಸೀ ಪ್ರಾಂತ್ಯವು ದಂಗೆಯವರ ಅಧೀನದಲ್ಲಿದೆಯೆಂಬ ತಪ್ಪು ತಿಳುವಳಿಕೆಯಮೇಲೆ ಪ್ರಖ್ಯಾತಿ ಹೊಂದಿದ ಯುದ್ಧಶಾಲಿಯಾದ ಸೇನಾಪತಿ ಸರ್ ಹ್ಯೂರೋಜ್ ಸಾಹೇಬನು ಬಲವಾದ ಸೈನ್ಯವನ್ನು ತೆಗೆದುಕೊಂಡು ಝಾನ್ಸೀಕಡೆಗೆ ಬಂದನು ಮತ್ತು

ಶ್ಲೋಕ॥ ರಾತ್ರಿರ್ಗಮಿಷ್ಯತಿ ಭವಿಷ್ಯತಿ ಸುಪ್ರಭಾತಂ ।
ಭಾಸ್ವಾನುದೇಷ್ಯತಿ ಹಸಿಷ್ಯತಿ ಪದ್ಮಜಾಲಂ ॥
ಇತ್ಥಂ ವಿಚಿಂತಯತಿ ಕೋಶ ಗತೇದ್ವಿರೇಫೇ ।
ಹಾಹಂತಹಂತ ನಲಿನೀಂ ಗಜಉಜ್ಜಹಾರ ॥

ಈ ಪಂಡಿತರಾಯರ ವುಕ್ತಿಯಂತೆ ಆಗಿಹೋಗಿ ರಾಣೀಸಾಹೇಬಳ ಆಶೆಯಲ್ಲಾ ಮಾಯವಾಗಿ ಹೋಯಿತೆಂಬ ಮಾತು ಬಹಳ ವ್ಯಸನಕರವಾದ್ದಾಗಿದೆ. ಝಾನ್ಸೀ ಸಂಸ್ಥಾನದ ಪ್ರಜೆಗಳು ಅದೃಷ್ಟ ಹೀನರಾಗಿದ್ದದ್ದರಿಂದಲೋ ಅಥವ ನಮ್ಮ ಹಿಂದುಸ್ಥಾನಕ್ಕೆ ಇಂಥಾ ಅಸದೃಶವಾದ ಸ್ತ್ರೀರತ್ನದ ಲಾಭವು ಬಹಳಕಾಲ ದಕ್ಕತಕ್ಕದ್ದಲ್ಲವಾದ್ದರಿಂದಲೋ ಸರ್ವವೂ ವಿಪರೀತದಲ್ಲಿ ಪರಿಣಮಿಸಿತು. ಇದಕ್ಕೆ ಯಾರ ವುಪಾಯವೂ ಇಲ್ಲ.!

" ಈಶ್ವರೇಚ್ಛಾ ಬಲವಾದ್ದು " !!



# ೯ನೇ ಪ್ರಕರಣ.

## ಸರ್ ಹ್ಯೂರೋಜ ಸಾಹೇಬನು, ಝಾರ್ನಿಸಿಮೇಲೆ ದಂಡೆತ್ತಿ ಬಂದದ್ದು.

ಶ್ಲೋಕ ॥ ತಾದೃಶೀ ಜಾಯತೇ ಬುದ್ಧಿ ರ್ವ್ಯವಸಾಯೋ ಪಿತಾದೃಶಃ ।
ಸಹಾಯಾಸ್ತಾ ದೃಶಾಏವ ಯಾದೃಶೀ ಭವಿತವ್ಯತಾ ॥

ದೈವೇಚ್ಛೆಯು ಯಾವರೀತಿ ಯಿರುತ್ತದೆಯೋ ಮನುಷ್ಯನ ಬುದ್ಧಿಯು ಮತ್ತು ಉದ್ಯೋಗವು, ಇತರ ಸಹಾಯಗಳೂ ಕೂಡ ತದನುಗುಣವಾಗಿಯೇ ಉಂಟಾಗುತ್ತವೆ. ಎಂಬಂತೆ ಮಹಾರಾಣೀ ಲಕ್ಷ್ಮೀಬಾಯಿ ಸಾಹೇಬಳು ಸ್ವತಂತ್ರವಾಗಿದ್ದ ಝಾರ್ನಿಸೀ ಪ್ರಾಂತ್ಯದ ರಾಜ್ಯ ವ್ಯವಸ್ಥೆಯನ್ನು ಇಂಗ್ರೀಜಿ ಸರ್ಕಾರದವರ ಪಕ್ಷದಲ್ಲಿ ತನ್ನ ಕೈಗೆ ತೆಗೆದುಕೊಂಡಳು. ಮತ್ತು ದಂಗೇಖೋರರು, ಸುಲಿಗೆಗಾರರು ಸಹ, ನಾಲ್ಕು ದಿಕ್ಕಿನಲ್ಲೂ ಹುಟ್ಟಿಸಿದ ಅನಾಯಕತ್ವವನ್ನು ಹೋಗಲಾಡಿಸಿ, ಪ್ರಜಾಪಾಲನೆಗೋಸ್ಕರ ಯೋಗ್ಯವಾದ ಭದ್ರತೆ ಪಡಿಸಿದಳು. ತಥಾಪಿ ರಾಜಕೀಯ ವಿಷಯಕ್ಕೆ ಸಂಬಂಧಪಟ್ಟ ಕೆಲಸಗಳನ್ನು ಚನ್ನಾಗಿ ಲಕ್ಷ್ಯದಲ್ಲಿಟ್ಟುಕೊಂಡು, ಇಂಗ್ರೀಜಿ ಅಧಿಕಾರಿಗಳ ಕೃಪಾ ಸಂಪಾದನೆ ಮಾಡುವ ಕೆಲಸಗಳಲ್ಲಿ ಆಕೆಯು ನೂತನ ಮುತ್ಸದ್ದಿ ಮಂಡಲಿಯವರು ಅಜಾಗ್ರತರಾಗಿದ್ದದ್ದರಿಂದಲೋ ಅಥವಾ ಇತರೇ ಯಾವ ಕಾರಣದಿಂದಲೋ ರಾಣೀ ಸಾಹೇಬಳ ನಿಷ್ಕಪಟತೆಯು, ಇಂಗ್ರೀಜಿ ಸರ್ಕಾರದವರಿಗೆ ತಿಳಿಯಬರಲಿಲ್ಲ. ಆಕೆಯು ಜಬ್ಬಲ್ಪುರ, ಮತ್ತು ಆಗ್ರೆದ ಕಮಿಷನರ ಸಾಹೇಬರುಗಳಿಗೆ ಪೂರ್ವದಲ್ಲಿ ಅನೇಕ ಪತ್ರಗಳನ್ನು ಕಳುಹಿಸಿಕೊಟ್ಟಿದ್ದಳು. ಪರಂತು ಯಾರೂ ಅದರ ವಿಚಾರವನ್ನು ಮಾಡಲಿಲ್ಲ. ಆದರೆ ಪುನಃ ಆಕೆಯು ಇಂದೂರಲ್ಲಿನ ಮಧ್ಯ ಹಿಂದುಸ್ಥಾನದ ಪೊಲಿಟಿಕಲ್ ಏಜಂಟ್ ಸರ್ ರಾಬರ್ಟ್ಸ ಹ್ಯಾಮಿಲ್ಟನ ಸಾಹೇಬನಿಗೆ ಕೂಡ ನಥೇಖಾನ್ ಮುಂತಾದ ಪರರಾಜ್ಯ ಲೋಭಿ ಮಂಡಲಿಯವರು ಝಾರ್ನಿಸೀ ಪ್ರಾಂತ್ಯವನ್ನು ತೆಗೆದುಕೊಳ್ಳುವ ಉದ್ದೇಶ್ಯದಿಂದ ಮಾಡಿದ ಯುದ್ಧದ ವರ್ತಮಾನವನ್ನು ತಿಳಿಸಿದ್ದಳು. ಪರಂತು ಆ ಸಮಯದಲ್ಲಿ ಎಲ್ಲಾ ಸ್ಥಳದಲ್ಲಿಯೂ ದಂಗೇಖೋರ ಜನಗಳ ಪ್ರಾಬಲ್ಯವು ಹೆಚ್ಚಾಗಿದ್ದಕಾರಣ ಆ ಎಲ್ಲಾ ಪತ್ರಗಳೂನು ಅವರುಗಳಿಗೆ ಸುರಕ್ಷಿತವಾಗಿ ಮುಟ್ಟಿದವೋ ಇಲ್ಲವೋ ಎಂಬ ವಿಷಯದಲ್ಲಿ ಏನೂ ತಿಳಿಯಬರುವದಿಲ್ಲ. ಆದಕಾರಣ ರಾಣೀ ಸಾಹೇಬಳ ತಿಳುವಳಿಕೆಯು ಝಾರ್ನಿಸಿ ವಿಷಯವಾಗಿ ತಾನು ಮಾಡಿರತಕ್ಕ ವ್ಯವಸ್ಥೆಯು

ಇಂಗ್ರೀಜಿ ಸರ್ಕಾರದವರಿಗೆ ಮನಸ್ಸು ಬಂದು, ಅವರು ದಿಲ್ಲಿ, ಲಕ್ನೋ ಮುಂತಾದ ಸ್ಥಳದ ದಂಗೇಖೋರರ ಮಂಡಲಿಯನ್ನ ಅಡಗಿಸಿದನಂತರ ಒಬ್ಬ ಒಳ್ಳೇ ಅಧಿಕಾರಿಯನ್ನು ಕಳುಹಿಸಿ, ತಮ್ಮ ರಾಜ್ಯವನ್ನು ತಮ್ಮ ಕಡೆಗೆ ವಹಿಸಿಕೊಂಡಾರು. ಅಥವಾ ನಮ್ಮ ರಾಜನಿಷ್ಟತೆಯ ಅಭಿನಂದನಾರ್ಥಕ್ಕಾಗಿ ನಮ್ಮ ಪೂರ್ವಜರ ವಿನಂತೀ ಪತ್ರವನ್ನು ನ್ಯಾಯವಾಗಿ ವಿಚಾರಣೆ ಮಾಡಿ ಈ ಸಂಸ್ಥಾನವನ್ನು ನಮ್ಮ ಕಡೆಗೆ ವಹಿಸಿಕೊಟ್ಟಾರು ಎಂತ ಇತ್ತು. ಇಂಥಾ ಅಭಿಪ್ರಾಯದ ಆಶೆಯಮೇಲೆ ದೃಷ್ಟಿಕೊಟ್ಟು, ರಾಣೀ ಸಾಹೇಬಳು ಝಾಂಸೀ ಪ್ರಾಂತ್ಯವನ್ನು ಅನ್ಯಾಯವಾಗಿ ಕೈವಶಮಾಡಿಕೊಳ್ಳಲು ಅಪೇಕ್ಷಿಸಿದ ನಥೇಖಾಂ ಮತ್ತು ಸದಾಶಿವ ನಾರಾಯಣ, ಇವರನ್ನು ಸರಿಯಾಗಿ ನಿಗ್ರಹಿಸಿದಳು. * ಪರಂತು ಈ ಎಲ್ಲಾ ಸಂಗತಿಗಳನ್ನು ಇಂಗ್ರೇಜಿ ಸರ್ಕಾರದವರಿಗೆ ರಾಣೀ ಸಾಹೇಬಳ ಅಪೇಕ್ಷೆಪ್ರಕಾರ ಕಾರಭಾರಿ ಮಂಡಲಿಯವರು ತಿಳಿಸಲಿಲ್ಲ. ಈ ಮಾತು ಬಹಳ ದುಃಖಕರವಾದ್ದಾಗಿದೆ ಯೆಂತಲೇ ಹೇಳಬೇಕು. ಝಾಂಸೀ ಪ್ರಾಂತ್ಯದ ರಾಜಸತ್ವವು ಅಲ್ಪಕಾಲಮಾತ್ರ ಪ್ರಾಪ್ತವಾಗಿದ್ದದ್ದರಿಂದ ಅಧಿಕಾರ ಮದದಿಂದ ಉನ್ಮತ್ತರಾಗಿ ಹೋಗಿ ಈ ನೂತನ ಕಾರಭಾರಿ ಮಂಡಲಿಯವರು ಝಾಂಸಿಯಲ್ಲಿನ ಪಕ್ವ ಮನಸ್ಸಿನ ವೃದ್ಧಜನಗಳ ಸಲಹೆಯನ್ನು ತೆಗೆದುಕೊಳ್ಳಲಿಲ್ಲ. ಝಾಂಸಿ ದರ್ಬಾರಿನಲ್ಲಿನ ಹಳೇ ಮುತ್ಸದ್ದಿಗಳು ಲಾಲಾಭಾವು ಬಕ್ಷಿ, ನಾನಾಭೋಪಟ್ಕರ ಮುಂತಾದ ಮಂಡಲಿಯವರು ನೂತನ ಕಾರಭಾರಿ ಲಕ್ಷ್ಮಣರಾವ್ ಭಾಂಡೇಗೆ ಬಹಳ ಪ್ರಕಾರವಾಗಿ

---

* ಝಾಂಸೀ ಸಂಸ್ಥಾನದಲ್ಲಿ, ಬ್ರಿಟಿಷ ಆಳ್ವಿಕೆಯು ಇಲ್ಲದಂತೆ ಆದಮೇಲೆ, ರಾಣೀ ಸಾಹೇಬಳು ಅದರ ಸರ್ವ ವ್ಯವಸ್ಥೆಯನ್ನು ತನ್ನ ಕಡೆಗೆ ತೆಗೆದುಕೊಂಡಳು. ಇದನ್ನು ನೋಡಿ ಝಾಂಸಿಯಲ್ಲಿ ನಡೆದ ದಂಗೆ ಸಮಯದಲ್ಲಿ ಇಂಗ್ರೇಜಿ ಸರ್ಕಾರದವರಿಗೆ ಸಹಾಯ ಮಾಡಲು ಅಸಮರ್ಥರಾಗಿದ್ದ ಟಿಹೇರಿ ಮತ್ತು ದತಿಯ ಈ ಎರಡು ಸಂಸ್ಥಾನದವರು, ಝಾಂಸಿ ಸಂಸ್ಥಾನದವರ ಮೇಲೆ ದಂಡೆತ್ತಿ ಹೋಗಿ, ಆಗ ಸ್ವತಂತ್ರವಾಗಿದ್ದ ಆ ದೇಶವನ್ನ ಜಯಿಸಿ ತೆಗೆದುಕೊಳ್ಳುವದಕ್ಕೆ ಪ್ರಯತ್ನಪಟ್ಟರು. ಅದಕ್ಕೆ ರಾಣೀ ಸಾಹೇಬಳು ಆಸ್ಪದ ಕೊಡಲಿಲ್ಲ. ಈ ವಿಷಯವಾಗಿ ಮಿ. ಮಾರ್ಟಿನ್ ಸಾಹೇಬನು ತನ್ನ ಪತ್ರದಲ್ಲಿ ಮುಂದೆ ಬರದಂತೆ ಹೇಳಿರುತ್ತಾನೆ:—

" * * * After the mutinious troops had quitted Jhansi, she certainly took possession of her country, when the two states Dattia and Tehree who could easily have protected our people; but would not, so much as raise a finger to help us, though the Orcha boundary was not more than a mile and half from the

ತಿಳುವಳಿಕೆಯನ್ನು ಕೊಟ್ಟರು. ಆದರೆ ಆತನು ಗರ್ವದಲ್ಲಿ ಮುಳುಗಿಹೋಗಿದ್ದದ್ದ
ರಿಂದ ಅವರ ಹೇಳಿಕೆಯನ್ನು ಧಿಕ್ಕಾರಮಾಡಿದನು. ಇಷ್ಟೇ ಅಲ್ಲದೆ ಆತನು ಈ ಜನ
ಗಳು ರಾಣೀ ಸಾಹೇಬಳ ಸಮೀಪಕ್ಕೆ ಹೋಗುವದಕ್ಕೇನೆ ನಿರ್ಬಂಧಪಡಿಸಿದನು. ಆ
ಮೇಲೆ ನಾನಾಭೋಪಟ್ಕರನು ರಾಣೀ ಸಾಹೇಬಳ ದರ್ಶನವನ್ನು ತೆಗೆದುಕೊಂಡು,
ಮಹಾತ್ಮ್ಯವುಳ್ಳ ರಾಜಕೀಯ ಮಾತನ್ನು ಕುರಿತು ಸರಿಯಾದ ಯೋಚನೆಮಾಡಿ, ಆಕೆಗೆ
ಈಪ್ರಕಾರವಾಗಿ ಪ್ರಾರ್ಥನೆ ಮಾಡಿದನು. "ನಾನು ಬಹುಕಾಲದಿಂದ ಝಾಂಸೀ ಸಂ
ಸ್ಥಾನಾಧಿಪತಿಯ ಶೇವೆಯಲ್ಲಿದ್ದೇನೆ. ಆದಕಾರಣ ನನ್ನ ವಿನಂತಿಯ ಕಡೆಗೆ ಸಂಪೂರ್ಣ
ಲಕ್ಷ್ಯಕೊಟ್ಟು,—ಇಂಗ್ರೇಜಿ ಸರ್ಕಾರದವರಕಡೆಗೆ ತಮ್ಮ ವಕೀಲನನ್ನ ಅವಶ್ಯವಾಗಿ
ಕಳುಹಿಸಿಕೊಡಬೇಕು. ತಮ್ಮಕಡೆಗೆ ದಂಗೆಯ ಸಂಬಂಧವು, ಯಾವುದೂ ಇರುವ
ದಿಲ್ಲ. ಇಂಗ್ರೇಜಿಯವರ ಅಪ್ಪಣೆಮೇಲೇನೆ ಸಂಸ್ಥಾನವನ್ನು ಭದ್ರಪಡಿಸಿದ್ದೇವೆ.
ಮತ್ತು ಅವರ ಪ್ರೀತ್ಯರ್ಥವಾಗಿಯೇ ತಾವು ಓರ್ಛಾ ಸಂಸ್ಥಾನದವರ ಸೈನ್ಯವನ್ನ
ದಂಡಿಸಿದ್ದೇವೆ; ಎಂಬ ಸರ್ವ ಸಂಗತಿಯನ್ನು ಈ ಇಂಗ್ರೇಜಿ ಸರ್ಕಾರದವರಿಗೆ ಸರಿ
ಯಾದ ತಿಳುವಳಿಕೆ ಕೊಟ್ಟು, ಹೇಳುವದಕ್ಕಾಗಿ ಯಾರಾದರೂ ಒಬ್ಬ ಯೋಗ್ಯನಾದ
ವಕೀಲನು ಹೋಗಬೇಕಾಗಿದೆ. ತಾವು ಕಳುಹಿಸಿಕೊಡುವ ಪತ್ರವು ಇಂಥಾ ಕಾಲದಲ್ಲಿ
ಅವರಿಗೆ ಸುರಕ್ಷಿತವಾಗಿ ತಲ್ಪಿ ಸರ್ವ ಸಂಗತಿಯೂ ವಿವರವಾಗಿ ತಿಳಿದೀತು ಎಂಬ
ನಂಬಿಕೆ ಇಲ್ಲ." ನಾನಾಸಾಹೇಬನಂಥ ವಿಚಾರಪರನು ಮತ್ತು ದೂರದೃಷ್ಟಿಯುಳ್ಳ ಗೃಹ
ಸ್ಥನ ಈ ವಿವೇಕವಾದ ಮಾತನ್ನು ಕೇಳಿ, ರಾಣೀ ಸಾಹೇಬಳು ಇಂದೂರು ಮತ್ತು
ಗ್ವಾಲಿಯರಿನಲ್ಲಿ ಪೊಲಿಟಕಲ್ ಏಜಂಟನ ಹತ್ತರ ಇರುವ ಇಂಗ್ರೇಜಿ ಭಾಷಾ ಬಲ್ಲ ವಕೀಲ
ನನ್ನ ಕರಸಬೇಕೆಂತ ತನ್ನ ಕಾರಭಾರಿಗಳಿಗೆ ಅಪ್ಪಣೆ ಮಾಡಿದಳು. ರಾಣೀ ಸಾಹೇ
ಬಳು ವಿಚಾರಶಾಲಿ ಮತ್ತು ಸೂಕ್ಷ್ಮಬುದ್ಧಿಯುವಳಾಗಿದ್ದ ಕಾರಣ ನಾನಾಭೋಪಟ್ಕರನ
ಉಪಯೋಗವಾದ ಸೂಚನೆಯನ್ನು ಸ್ವೀಕಾರಮಾಡಿದಳು. ಪರಂತು ಅದನ್ನು ನೆರವೇ

---

Jhansi parade grounds, and that of Dattia only six miles—with large bodies of armed men on their respective frontier watching the doings of our Troops. Imagining that the Rani being unprepared, and that they would with ease wrest her country from her hands, attacked her with their combined forces, and were, from time to time, thrashed back by that Gallant Lady."

*Letter from Agra, dated 20th August* 1889.

ರಿಸುವ ಕೆಲಸವು ಕಾರಭಾರ ಮಂಡಲಿಯವರಕಡೆ ಯಿದ್ದಕಾರಣ ಆಕೆಯ ಅಪ್ಪಣೆ ಪ್ರಕಾರ ಕಾರ್ಯವು ನೆರವೇರಲಿಲ್ಲ. ಆಕೆಯು ತನ್ನ ನೂತನ ಮಂಡಲಿಯವರಲ್ಲಿ ಅನುಭವವಿಲ್ಲದ ಮತ್ತು ರಾಜಕಾರ್ಯದಲ್ಲಿ ಶುದ್ಧಾಂಗವಾಗಿ ತಿಳುವಳಿಕೆಯಿಲ್ಲದ ಒಬ್ಬ ಗೃಹಸ್ಥನನ್ನ ಆ ಕೆಲಸವಮೇಲೆ ನೇಮಿಸಿದಳು. ಆದಕಾರಣ ಆತನಿಂದ ಏನೂ ಪ್ರಯೋಜನವಾಗಲಿಲ್ಲ. ಈ ನೂತನ ವಕೀಲನು ಗ್ವಾಲಿಯರಿಗೆ ಅಥವಾ ಇಂದೂರಿಗೆ ಹೋಗಿ ಏಜಂಟ್ ಸಾಹೇಬನ ದರ್ಶನ ತೆಗದುಕೊಳ್ಳುವುದು ಬಿಟ್ಟು, ಸಿಂಧ್ಯ ಸರ್ಕಾರದ ಅಧೀನದಲ್ಲಿರತಕ್ಕ ಇಸುಗಡಾ ಎಂಬ ತಾಲ್ಲೂಕಿಗೆ ಹೋಗಿ, ಅಲ್ಲಿ ರಾಮಚಂದ್ರ ಬಾಜೀರಾವ್ ಸರಸುಭೇದಾರನ ಮನೆಯಲ್ಲಿ ಉಳಕೊಂಡು ಅಲ್ಲಿಂದ ಝಾಂಸಿಗೆ ಸುಳ್ಳು ಪತ್ರವನ್ನ ಬರೆಯಲಿಕ್ಕೆ ಪ್ರಾರಂಭಿಸಿದನು. ಝಾಂಸೀ ದರ್ಬಾರಿನಲ್ಲಿನ ನವೀನ ಮುತ್ಸದ್ದಿ ಮಂಡಲಿಯವರು ಆ ವಕೀಲನ ಪತ್ರದಮೇಲೆ ವಿಶ್ವಾಸವಿಟ್ಟುಕೊಂಡು, ಸ್ವಸ್ಥವಾಗಿ ಕೂತಿದ್ದರು. !! ತಾತ್ಪರ್ಯವೇನೆಂದರೆ " ದುರ್ಮಂತ್ರಿ ರಾಜ್ಯನಾಶಾಯ " ಎಂತ ಹೇಳಿರುವುದು ಝಾಂಸೀ ದರ್ಬಾರಿನಲ್ಲಿ ಚನ್ನಾಗಿ ಅನುಭವಕ್ಕೆ ಬಂತು.

ಇತ್ತಲಾಗಿ ಇಂಗ್ರೀಜಿ ಸರ್ಕಾರದವರ ಪಕ್ಷಕ್ಕೆ ಯಾವಸಂಭವಬಂತೋ ಅದು ಕೇವಲ ಪ್ರತ್ಯೇಕ ವಾದ್ದಾಗಿತ್ತು. ಅದರ ಸಂಕ್ಷೇಪವಾದ ವರ್ಣನೆಯನ್ನ ಇಲ್ಲಿ ತಿಳಿಸತಕ್ಕದ್ದು ಅವಶ್ಯಕವಾಗಿದೆ.

ಸನ್ 1857 ನೇ ಇಸವಿ ಜೂನ್ ತಿಂಗಳಲ್ಲಿ ದಂಗೇಖೋರ ಜನಗಳು ಝಾಂಸಿಯಲ್ಲಿ ನಡೆಸಿಬಿಟ್ಟ ಮಹಾಭಯಂಕರವಾದ ಪ್ರಳಯದ ವರ್ತಮಾನವನ್ನು ಕೇಳಿದಾರಭ್ಯ ಇಂಗ್ರೀಜಿ ಜನಗಳ ಅಂತಃಕರಣವು ಕೇವಲ ಉಗ್ರವಾಗಿಹೋಗಿ, ಅದಕ್ಕಾಗಿ ಅವರಿಗೆ ಭಂಡಕೋರ ಜನಗಳಮೇಲೆ ಅಪರಿಮಿತವಾದ ಸಂತಾಪವು ಹುಟ್ಟಿತ್ತು. ಮತ್ತು ಅಲ್ಲಿನ ಭಂಡಕೋರ ಜನಗಳಮೇಲೆ ಯಾವಾಗ ತಮ್ಮ ಹಗೆಯನ್ನು ತೀರಿಸಿಕೊಂಡೇವೋ ಎಂತ ಆಗಿತ್ತು. ಝಾಂಸಿಯಲ್ಲಿ ನಡೆದ ಭಯಂಕರವಾದ ಕೊಲೆ ಪಾತಕದಲ್ಲಿ ರಾಣೀಸಾಹೇಬಳು ಪ್ರಮುಖಳಾಗಿದ್ದಳು ಎಂತ ಸರ್ವ ಇಂಗ್ರೀಜಿ ಅಧಿಕಾರಿಗಳು ತಪ್ಪು ತಿಳಿದುಕೊಂಡಿದ್ದರು. * ಇಂಥಾದ್ದರಲ್ಲಿ ರಾಣಿಸಾಹೇಬಳು ಝಾಂಸೀ ಪ್ರಾಂತ್ಯದ ಸಂರಕ್ಷಣಾರ್ಥ

---

* ಈ ಸಮ್ಮಂಧದಲ್ಲಿ ಸರ್‌ಹ್ಯೂರೋಜ್ ಸಾಹೇಬನ ಸೈನ್ಯದ ಸಂಗಡ ಇದ್ದ ಡಾಕ್ಟರ್ ಲೋ ಸಾಹೇಬನು ಬರೆದಿರುವದನ್ನ ಓದಿದರೆ, ಆ ಸಮಯದಲ್ಲಿ ಇಂಗ್ರೇಜಿ ಜನಗಳ ಮನಸ್ಸು ಹ್ಯಾಗೆ ಸಂತಪ್ತವಾಗಿತ್ತು ಎಂಬುವದು ಕಂಡುಬರುತ್ತದೆ. ಅವನು ಹೇಳುವದೇನಂದರೆ:—

" The horrid massacres at this city, instigated by the Ranee, ( ? ) had only been exceeded by the bloody

ವಾಗಿ ಇಟ್ಟದ್ದ ಪ್ರಚಂಡವಾದ ಸೈನ್ಯವನ್ನು ನೋಡಿ, ಇಂಗ್ರೇಜಿ ಜನಗಳು ಆಕೆಯು ತಮಗೆ ವಿರುದ್ಧಳಾಗಿದ್ದಾಳೆಂತ ಊಹಿಸಿಕೊಂಡಿದ್ದರು. ಮಧ್ಯ ಹಿಂದುಸ್ಥಾನದಲ್ಲಿ ಬಹಳ ಮಟ್ಟಿಗೆ ಎಲ್ಲಾ ಕಡೆಗಳಲ್ಲಿಯೂ ದಂಗೆನಡೆದು ಬ್ರಿಟಿಷ್ ರಾಜಸತ್ವದ ಕಾಲುಜಾರಿ ಅದು ನೆಲಕ್ಕೆ ಬೀಳುತ್ತದೆಯೋ ಏನೋಎಂತ ಭಯವು ಉತ್ಪನ್ನವಾಗಿದ್ದಕಾರಣ ಹಿಂದುಸ್ಥಾನದ ಗವರ್ನರ್ ಜನರಲ್ ಲಾರ್ಡ್ ಕ್ಯಾನಿಂಗ್ ಸಾಹೇಬನು, ವಿಲಾಯತಿ ಸರ್ಕಾರದ ಅನುಮತಿಯನ್ನು ಪಡೆದು, ಹಿಂದುಸ್ಥಾನದಲ್ಲಿನ ಯುದ್ಧಪ್ರವೀಣರಾದ ಸೇನಾಪತಿಗಳನ್ನು ಏಕತ್ರ ಕೂಡಿಸಿಕೊಂಡು ಪ್ರಬಲವಾದ ಸೈನ್ಯವನ್ನ ಸೇರಿಸಿ ದಂಗೇಖೋರರನ್ನೆಲ್ಲಾ ಜಯಿಸಲು ನಿಶ್ಚಯಮಾಡಿದನು. ಉತ್ತಮವಾದ ಸೇನಾ ನಾಯಕರು ಇಲ್ಲದಿದ್ದರೆ ಬರೇಪ್ರಚಂಡ ಸೇನೆಗೆ ಎಂದಿಗೂ ಯಶಸ್ಸು ಪ್ರಾಪ್ತಿಯಾಗುವದಿಲ್ಲ. ರೋಮನ್ ಜನಗಳು ಗಾಲ್ ಪ್ರಾಂತ್ಯವನ್ನು ಜಯಿಸಿದ್ದಕ್ಕೆ ಅವರ ಸೇನಾಪತಿ ಸೀಜರನು ಕಾರಣನಾಗಿದ್ದನು. ಕಾರ್ಥಿ

---

deeds at Cawnpore under the orders of Nana. The same course of events had marked the mutiny here as elsewhere—the extermination of every soul, followed up by general spoliation and ruin, so as to obliterate every trace of British existence.

* * * * * Ten moons only had shown upon the gory pit in which the seventy-four mangled bodies of our fellow-countrymen had been thrown, and the day of avenging had arrived; their spirits had risen up against their murderers who were now hemmed in on every side, and the voices from the grave were soon to be answered by the deafening roar of cannon and the shouts of vengeance falling with the merciless sword. No mandlin clemency was to mark the fall of this city. The Jezebel of India was there—the young, energetic, proud, unbending, uncompromising Ranee, and upon her head rested the blood of the slain, and a punishment as awful awaited her."

*Central India P.* 235—236.

ಜೇನಿಯನ್ನು ಜನಗಳು ರೋಮ್‌ದೇಶದ ಬಾಗಿಲು ಪರ್ಯಂತರ ತಮ್ಮ ನುಗ್ಗುವಿಕೆಯನ್ನು ವ್ಯಾಪಿಸಿದರೋ ಅದು ಹಾನಿಬಾಲನ ಜೀವದಮೇಲೆ ಆಗಿತ್ತು. ಮಾನಿಡೋನಿಯ ಜನಗಳು ಸಿಂಧೂ ನದಿಯಮೇಲೆ ತಮ್ಮ ನಿಶಾನಿಯನ್ನು ಹಾಕಿದ್ದಕ್ಕೆ ಅವರಿಗೆ ಅಲಗ್ಸಾಂಡರ್ ಎಂಬುವನು ಕಾರಣನಾದನು. ಸೇಸರ್ ಮತ್ತು ಇನ್, ಪರ್ಯಂತರ ಫ್ರೆಂಚ್ ಜನಗಳು ತಮ್ಮ ಆಳಿಕೆಯನ್ನು ಸ್ಥಾಪನ ಮಾಡಿದ್ದಕ್ಕೆ ಅವರ ಟ್ಯೂರ್ರ್ ಎಂಬುವನು ಕಾರಣನಾದನು. ಪ್ರಷ್ಯಾದೇಶದಮೇಲೆ ಯೂರೋಪಿನಲ್ಲಿನ ಮೂರು ಪ್ರಬಲ ರಾಜ್ಯದವರು ಏಳುವರ್ಷ ಪರ್ಯಂತರವಾಗಿ ಉಗ್ರತನವನ್ನ ತೋರಿಸಿದ್ದನ್ನು ನಿವಾರಿಸುವದಕ್ಕೆ ಫ್ರೆಡರಿಕ್ ದಿಗ್ರೇಟನೇ ಕಾರಣನಾದನು. ಈ ಪ್ರಕಾರವಾಗಿ ಯಾರಾದರೂ ಅಸದೃಶನಾದ ಸೇನಾಪತಿಯು ಶಿಕ್ಕದಹೊರ್ತು ಹಿಂದುಸ್ಥಾನದ ರಾಜ್ಯಸತ್ವವು ತಿರುಗಿ ಬ್ರಿಟಿಷ ರಾಜ್ಯದಕೈಗೆ ಬರುವುದು ಬಹಳಮಟ್ಟಿಗೆ ಅಸಾಧ್ಯವಾಗಿ ತೋರುತ್ತಿತ್ತು. ಇಂಥಾಸಂಧಿಯಲ್ಲಿ ಬ್ರಿಟಿಷ್‌ರಾಷ್ಟ್ರದ ಸುದೈವದಿಂದ ಇಂಗ್ಲೆಂಡಿನಿಂದ ಬಂದ ಶೂರಸೇನಾಪತಿ ಸರ್‌ಹ್ಯೂರೋಜ್ ಸಾಹೇಬನು ಪರಾಕ್ರಮದಿಂದ ದಂಗೆಜನಗಳನ್ನು ಗೆದ್ದು ಅಸದೃಶವಾದ ಯಶಸ್ಸನ್ನು ಸಂಪಾದಿಸಿಕೊಂಡನು. ಈ ಶೂರನು, ಸಿರಿಯಾದೇಶದ ಮಧ್ಯದಲ್ಲಿ ಕಾರ್ಸ್ಟಾಂಟಿನೋಪಲ್ಲಿನಲ್ಲಿಯೂ, ಮತ್ತು ಶಿಬಾಸ್ಟಪುಲ್ಲಿನ ಘನಘೋರ ಯುದ್ಧದಲ್ಲಿಯೂ, ತೋರಿಸಿದಬುದ್ಧಿ ಚಾತುರ್ಯವು ಮತ್ತು ರಣಶೌರ್ಯವು ಇವುಗಳನ್ನೂ ನೋಡಿ ಹಿಂದುಸ್ಥಾನದಲ್ಲಿನ ಈ ಪ್ರಕಾರವಾದ ಯುದ್ಧ ಸಮಯದಲ್ಲಿ ಆತನನ್ನು ನೇಮಿಸಿದಹೊರ್ತು ಪರಿಣಾಮವಿಲ್ಲವೆಂತ ಯೋಚಿಸಿ ಡ್ಯೂಕಆಫ್' ಕೇಂಬ್ರಿಡ್ಜ ಸಾಹೇಬನು ಆತನನ್ನ ಹಿಂದುಸ್ಥಾನಕ್ಕೆ ಕಳುಹಿಸಿಕೊಟ್ಟನು. ಆ ಪ್ರಕಾರವಾಗಿ ಆತನು ಬಹಳ ಉಲ್ಲಾಸದಿಂದಲೂ, ಮತ್ತು ಆಹ್ಲಾದದಿಂದಲೂ 1857 ನೇ ಇಸವಿ ಸೆಪಟಂಬರು ತಾರೀಖು 19 ನೇ ದಿವಸ ಮುಂಬೈ ಬಂದರದಲ್ಲಿ ಉತ್ಸವದಿಂದ ಬಂದು ಇಳಿದನು.

ಇದೇ ಸಂಧಿಯಲ್ಲಿ ಮಧ್ಯ ಹಿಂದುಸ್ಥಾನದ ಪೂರ್ಣ ಪರಿಚಿತೆಗಾರನಾದ ಮತ್ತು ಲೋಕಪ್ರಿಯನಾದ ಪೊಲಿಟಿಕಲ್ ಏಜಂಟ ಸರ್ ರಾಬರ್ಟ ಸಾಹೇಬನು ರಜಾ ತೆಗೆದುಕೊಂಡು ವಿಲಾಯತಿಗೆ ಹೋದವನು ಕೂಡ ಹಿಂದುಸ್ಥಾನಕ್ಕೆ ಹಿಂತಿರುಗಿಬಂದನು. ಆತನು ಲಾರ್ಡ ಕ್ಯಾನಿಂಗ್ ಮತ್ತು ಕಮ್ಯಾಂಡರ್ ಇನ್ ಚೀಫ್' ಸರ್ ಕಾಲಿನ್ ಕ್ಯಾಂಬೆಲ್ ಸಾಹೇಬರುಗಳ ಸಲಹೆಯನ್ನು ತೆಗೆದುಕೊಂಡು, ಉತ್ತರ ಹಿಂದುಸ್ಥಾನವನ್ನ ಜಯಿಸುವದಕ್ಕಾಗಿ ಬಹಳ ಚಾತುರ್ಯದಿಂದ ಸೈನ್ಯವನ್ನ ಪ್ರತ್ಯೇಕವಾಗಿ ಭಾಗಮಾಡಿ ಸಿದ್ಧಪಡಿಸಿ, ಯಾವ ಮಾರ್ಗದಿಂದ ಪ್ರಯಾಣಮಾಡಿ, ಯಾವಪ್ರಕಾರ ಯುದ್ಧಮಾಡಬೇಕೆಂಬುವದನ್ನ ನಿಶ್ಚಯಿಸಿದನು. ಮಧ್ಯ ಹಿಂದೂಸ್ಥಾನದಲ್ಲಿ, ಝಾಂಸಿಯು ದಂಗೇಖೋರ ಜನಗಳಿಗೆ ಮುಖ್ಯ ಆಶ್ರಯ ಸ್ಥಳವಾಗಿರೋಣದ್ದರಿಂದ, ಅದನ್ನು ತೆಗೆದುಕೊಳ್ಳುವದು ಯಲ್ಲದಕ್ಕಿಂತಲೂ ಬಹಳ ಅವಶ್ಯವಾಗಿಧೆ ಯಂತ, ಲಾರ್ಡ ಕ್ಯಾನಿಂಗ ಮುಂತಾದ ಪ್ರಮುಖ ಮಂಡಲಿಯವರ, ಅಭಿಪ್ರಾಯವಾಗಿತ್ತು. ಯಾಕಂದರೆ ಝಾಂಸಿ ಕೋ

ಟೆಯು ಅತ್ಯಂತ ಬಲವಾಗಿದ್ದ ಕಾರಣ, ದಂಗೇ ಜನಗಳಿಗೆ ಅದು ಮುಖ್ಯ ಆಧಾರವಾಗಿತ್ತು. ಯಮುನಾನದಿಯ ದಡವಮೇಲೆ ಇರುವ ಜಯಿಸಲಿಕ್ಕೆ ಅಸಾಧ್ಯವಾದ ಶತ್ರುಸೈನ್ಯದ ಸಾಮರ್ಥ್ಯವೂ, ಅದನ್ನ ಆದರಿಸಿಕೊಂಡಿಧೆಯಂತ, ಆ ಮಂಡಲಿಯವರ ತಿಳುವಳಿಕೆಯಾಗಿತ್ತು. ಸರ್ ರಾಬರ್ಟ್ ಹ್ಯಾಮಿಲ್ಟನ್ ಸಾಹೇಬನು ಈ ರೀತಿಯಾಗಿ ಯೋಚಿಸಿದನು. ಬೊಂಬಾಯಿ ಮತ್ತು ಮದರಾಸಿನಿಂದ ಬರತಕ್ಕ ಎಲ್ಲಾ ಸೈನ್ಯವನ್ನು, ಸ್ವತಂತ್ರವಾಗಿ ಪ್ರತ್ಯೇಕ ಎರಡು ಭಾಗಮಾಡಿ, ಮೊದಲನೇಯದಕ್ಕೆ ಮಹರು ಎಂಬ ಸ್ಥಳದಲ್ಲಿ ಸೇನಾನಿವೇಶವನ್ನು ಮಾಡಬೇಕು. ಮತ್ತು ಆ ಸ್ಥಳದಿಂದ ಯಮುನಾನದಿಯ ಮೇಲಿನ ಕಾಲ್ಪೀ ಪಟ್ಟಣದ ಪರ್ಯಂತರ ಝಾಸಿ ಸಹಿತ ಸರ್ವ ಪ್ರಾಂತ್ಯವನ್ನು ಕೈಗೆ ತೆಗದುಕೊಳ್ಳಬೇಕು. ಮತ್ತು ಎರಡನೇ ಭಾಗಕ್ಕೆ ಜಬ್ಬಲ್‌ಪೂರ್ ಮುಖ್ಯ ವಸತಿಯಾಗಿರಬೇಕು. ಅಲಹಾಬಾದ್, ಮತ್ತು ಮಿರಝಾಪುರ ಈ ಎರಡು ಸ್ಥಳದ ಸೈನ್ಯದ ಸಂಪರ್ಕವು ನಿಂತುಹೋಗಿದ್ದನ್ನು ಪೂರ್ವದಂತೆ ನಡೆಸುತ್ತಾ ಬರಬೇಕು. ಮತ್ತು ಬುಂದೇಲ್‌ಖಂಡದ ಮೇಲೆ ಸೈನ್ಯವನ್ನು ತೆಗೆದುಕೊಂಡು ಹೋಗಿ, ಬಾಂದಾದವರಿಗಿನ ಪ್ರಾಂತ್ಯವನ್ನು ಕೈವಶಮಾಡಿಕೊಳ್ಳಬೇಕು. ಈ ರೀತಿಯಾಗಿ ಮೊದಲನೆ ಭಾಗದಮೇಲೆ ಸರ್ ಹ್ಯೂರೋಜ್ ಸಾಹೇಬನನ್ನು ಮತ್ತು ಎರಡನೇ ಭಾಗದ ಮೇಲೆ ಬ್ರಿಗೇಡಿಯರ್ ಜನರಲ್ ಹ್ವಿಟ್ಲಾಕ್ ಸಾಹೇಬನನ್ನು ನೇಮಿಸಲಾಯಿತು.

ಉತ್ತರ ಹಿಂದೂಸ್ಥಾನದಲ್ಲಿ ಲಕ್ನೋ, ಡಿಲ್ಲಿ ಮತ್ತು ಕಾನ್‌ಪೂರ್ ಮುಂತಾದ ಸ್ಥಳದಲ್ಲಿ, ಸರ್‌ಕಾಲಿನ್ ಕ್ಯಾಂಪ್ಬೆಲ್ ಮುಂತಾದ ಅನೇಕ ಶೂರ ಪುರುಷರುಗಳು ದಂಗೇಖೋರರನ್ನು ಜಯಿಸುವದಕ್ಕಾಗಿ ಸೇರಿದ್ದವರಿಗೆ ದಕ್ಷಿಣದ ಕಡೆಯಿಂದ ಸೈನ್ಯದ ಸಹಾಯವು ಅವಶ್ಯವಾಗಿ ಬೇಕಾಗಿತ್ತು. ನರ್ಮದಾ ನದಿಯ ಉತ್ತರಕಡೆಯಲ್ಲಿನ ಬಹುಭಾಗವು ಮಾಲವ ಮತ್ತು ಬುಂದೇಲಖಂಡ ಸಹ ಸರ್ವವೂ ದಂಗೇಖೋರರ ಸ್ವಾಧೀನಕ್ಕೆ ಹೋಗಿತ್ತು. ಕಾಲ್ಪಿ ಸಮೀಪದ ಸರ್ವ ದೇಶವನ್ನ ಗ್ವಾಲಿಯರ್‌ನಲ್ಲಿನ ದಂಗೇಖೋರ ಜನಗಳು ತೆಗೆದುಕೊಂಡಿದ್ದರು. ಇಂಥಾ ಸಮಯದಲ್ಲಿ, ಆ ಪ್ರಾಂತ್ಯದ ಮೇಲೆ ಸರ್ ಹ್ಯೂರೋಜ್ ಸಾಹೇಬನಂಥ ಶೂರ ಮತ್ತು ರಣದಲ್ಲಿ ಪೂರ್ಣ ಅನುಭವಶಾಲಿಯಾದ ಸೇನಾಪತಿಯನ್ನ ನೇಮಿಸಿದ್ದರಿಂದಲೇ, ಸಫಲವಾಯಿತು. ಇಲ್ಲದಿದ್ದರೆ, ದಂಗೇಖೋರರ ಕೈಯಿಂದ ಆ ಪ್ರಾಂತ್ಯವನ್ನು ಹಿಂದಕ್ಕೆ ತೆಗೆದುಕೊಳ್ಳುವ ಆಶೆಯು ಹೆಚ್ಚಾಗಿ ವುಳಿದಿರಲಿಲ್ಲ.

ಸರ್ ಹ್ಯೂರೋಜ್ ಸಾಹೇಬನು ತನ್ನ ಸೈನ್ಯವನ್ನು ಯರಡುಭಾಗ ಮಾಡಿದನು. ಅದರಲ್ಲಿ ಮೊದಲನೆ ಭಾಗದ ಮೇಲೆ, ಮುಂಬಯಿ ಪಟಾಲಂನ ಮೇಲಿನ ಬ್ರಿಗೇಡಿಯರ್ ಸಿ. ಯಸ್. ಸ್ಟ್ಯೂವರ್ಟ್ ಸಾಹೇಬನನ್ನ ಮುಖ್ಯಾಧಿಕಾರಿಯನ್ನಾಗಿ ನೇಮಿಸಿದನು. ಮತ್ತು ಎರಡನೇದರ ಮೇಲೆ 14 ನೇ ಲೈಟ್ ಡ್ರಾಗೂನ ಬ್ರಿಗೇಡಿಯರ್ ಸ್ಟ್ಯೂವರ್ಟ್ ಸಾಹೇಬನನ್ನು ಮುಖ್ಯಾಧಿಕಾರಿಯನ್ನಾಗಿ ನೇಮಿಸಿದನು. ಮೊದಲನೇದರಲ್ಲಿ ಮುಖ್ಯ

ವಾಗಿ ಮುಂಬಯಿನ ಮೂರನೇ ಇರಸಾಲೆ, 14 ನೇ ಲೈಟ್ ಡ್ರಾಗೂನ್ಸ್, ಹೈದರಾಬಾದಿನ ಕಂಟಂಜೆಂಟಿನ ಪೈಕಿ ಕುದುರೆ ಸವಾರರ ಎರಡು ಪಟಾಲಂ 86 ನೇ ಪಟಾಲಂನ ಎರಡು ಭಾಗಗಳು, ಬೊಂಬಾಯಿ ನೇಟಿವ್ ಇನ್‍ಫೆಂಟ್ರಿಯ 25 ನೆಯ ಪಟಾಲಂ, ಮತ್ತು 3 ತೋಫ್ಖಾನೆಗಳು ಸಹ ಯಿದ್ದವು. ಎರಡನೆಯ ಭಾಗದಲ್ಲಿ ಮುಂಬಯಿ ಇರಸಾಲೆಯ ಒಂದು ಮುಖ್ಯ ಭಾಗ, ಹೈದರಾಬಾದ್ ಕಂಟಂಜೆಂಟಿನ ಪೈಕಿ, ಕುದುರೆ ಸವಾರರ ಒಂದು ಪಟಾಲಂ, 3 ಬೊಂಬಾಯಿ ಯೂರೋಪಿಯನ್ ರಿಜಿಮೆಂಟ್, 24ನೇ ನೇಟಿವ್ ಪಾಯದಳ, ಹೈದರಾಬಾದ್ ಕಂಟಂಜೆಂಟಿನ ಒಂದು ಪಾಯದಳದ ಪಟಾಲಂ, ಭೋಪಾಲ್ ಸಂಸ್ಥಾನದ ತೋಫ್ಖಾನೆ ಮದರಾಸ್ ಸ್ಯಾಪರ್ಸ್‌ರ ಒಂದು ಕಂಪೆನಿ, ಇಷ್ಟು ಸೈನ್ಯಗಳಿದ್ದವು. ಈ ಸೈನ್ಯದ ಮೊದಲನೇ ಭಾಗವು ಮೊಹರು ಸ್ಥಳದಲ್ಲಿಯೂ ಮತ್ತು ಎರಡನೇದು ಸಿಹೋರ್ ಸ್ಥಳದಲ್ಲಿಯೂ ಇಡಲ್ಪಟ್ಟವು. ಈ ಸರ್ವ ಸೈನ್ಯದ ಆಧಿಪತ್ಯವನ್ನು ಸರ ಹ್ಯೂರೋಜ್‘ ಸಾಹೇಬನು, ಸನ್ 1857 ನೇ ಇಸ್ವಿ, ಡಿಸೆಂಬರು ತಾರೀಖು 17 ನೇ ದಿವಸ ತನ್ನ ಕಡೆಗೆ ತೆಗೆದುಕೊಂಡು ಅದನ್ನೆಲ್ಲಾ ಚೆನ್ನಾಗಿ ಶೋಧನೆಮಾಡಿ, ಮೊಹರು ಪಟ್ಟಣದಿಂದ ಹಿಡಿದು, ಇಂದೂರು ಪರ್ಯಂತರ, ಸೈನ್ಯ ತೆಗೆದುಕೊಂಡು ಹೋಗಲು, ನಿಶ್ಚಯ ಮಾಡಿದನು.

ಜನವರಿ ತಾರೀಖು 6 ನೇ ದಿವಸ ಸರ್ ಹ್ಯೂರೋಜ್‘ ಮತ್ತು ಸರ್ ರಾಬರ್ಟ್ಸ್ ಹ್ಯಾಮಿಲ್ಟನ್ ಸಾಹೇಬರುಗಳು ಶಿಹೋರಾದಲ್ಲಿದ್ದ 2 ನೇ ಭಾಗದ ಸೈನ್ಯಕ್ಕೆ, ಹೋಗಿ ಸೇರುವಗೋಸ್ಕರ ಮೌಹಿಯಿಂದ ಪ್ರಯಾಣ ಮಾಡಿದರು. ಅವರಿಗೆ ಮಧ್ಯ ದಾರಿಯಲ್ಲಿ ಭೋಪಾಳದ ರಾಜನಿಷ್ಟ ಬೇಗಂಸಿಕಂದರಳು ಕಳುಹಿಸಿದ 800 ಶೂರ ಜನಗಳು ಬಂದು ಸೇರಿದರು. ಅವರನ್ನು ತೆಗೆದುಕೊಂಡು ಸರ್ ಹ್ಯೂ ಸಾಹೇಬನು, ದಂಗೇಖೋರರಿಗೆ ಮುಖ್ಯ ಸ್ಥಾನವಾಗಿದ್ದ ಸಾಗರ್ ಪಟ್ಣವನ್ನು ತೆಗೆದುಕೊಳ್ಳುವದಕ್ಕೆ ನಿಶ್ಚಯ ಮಾಡಿದನು. ಅದಕ್ಕಾಗಿ ಹೊರಟು ಪ್ರಯಾಣ ಮಾಡಿಕೊಳ್ಳುತ್ತಾ, ಕೆಲವು ಸೈನ್ಯವು ರಹಾಟ್ ಗಡಕ್ಕೆ ಬಂದು ಸೇರಿತು. ಈ ರಹಾಟ್ ಗಡವು ಬುಂದೇಲ್ ಖಂಡದಲ್ಲಿನ ಪ್ರಸಿದ್ಧ ಪಟ್ಟಣವಾಗಿದ್ದು ಸಾಗರಕ್ಕೆ 24 ಮೈಲಿ ದೂರದಲ್ಲಿಧೆ. ಅಲ್ಲಿ ಒಂದು ಬಹಳ ಬಲವಾದ ಕೋಟೆ ಯಿಧೆ. ಅದನ್ನು ಅಫ್ಘಾನ್ ಜನಗಳು ಮತ್ತು ಪಠಾಣ್ ಜನಗಳು, ಕೈವಶ ಮಾಡಿಕೊಂಡು, ಅದರಕೋಟೆಯನ್ನು ಸರಿಯಾಗಿ ಭದ್ರಪಡಿಸಿದ್ದರು. ಪರಂತು ಇಂಗ್ರೇಜೀ ಸೈನ್ಯದವರು ಅಲ್ಲಿ 4 ದಿವಸಗಳ ಪರ್ಯಂತರವೂ ದಂಗೆಖೋರರ ಸಂಗಡ ಯುದ್ಧ ನಡಿಸಿ ಅವರನ್ನ ಸೋಲಿಸಿದರು. ಈ ಯುದ್ಧದಲ್ಲಿ, ವಿರುದ್ಧ ಪಕ್ಷದ, ಸೇನಾನಾಯಕರು ಮಹಮ್ಮದ್ ಫಸಲ್‍ಖಾನ್ ಮುಂತಾದ ಜನಗಳು, ಸತ್ತುಹೋದಕಾರಣ ದಂಗೇಖೋರರ ಧೈರ್ಯವು ಕುಂದಿಹೋಗಿ, ಬಹು ಶೀಘ್ರದಿಂದ ಪಲಾಯನ ಮಾಡಿದರು, * ಆ ಯೋಗ

---

* ರಹಾಟ್ ಗಡದ ಕೋಟೆಯು ವಿಶೇಷ ಬಲವಾಗಿದ್ದು, ಹಿಂದೆ 1810 ನೇ ಇಸ್ವಿಯಲ್ಲಿ, ಅದನ್ನು ತೆಗೆದುಕೊಳ್ಳುವದಕ್ಕೆ ಶಿಂಧ್ಯಾನಂಥ ಪ್ರಬಲ ಸರದಾರನು 7 ತಿಂಗಳು

ದಿಂದ ಆ ಕೋಟೆಯು ಇಂಗ್ರೇಜಿಯವರ ಸ್ವಾಧೀನವಾಯಿತು. ಇದು ಹಾಗಿರಲಿ, ಈ ಪ್ರಕಾರವಾಗಿ ರಹಾಟ್‌ಘಡದ ಪ್ರಥಮ ಯುದ್ಧದಲ್ಲಿ, ಸರ್‌ಹ್ಯೂರೋಸ್ ಸಾಹೇಬನಿಗೆ ಒಳ್ಳೇ ಯಶಸ್ಸುಬಂದು, ಆತನು ತನ್ನ ಸೈನ್ಯದ ಮೊಹರೆಯನ್ನು ಮುಂದಕ್ಕೆ ನಡೆಸಿದನು. ರಹಾಟ್ ಘಡದಿಂದ ಸುಮಾರು 15 ಮೈಲಿಗಳ ದೂರದಲ್ಲಿ ಬರೋಡ ಯಂಬ ಒಂದು ಊರುಇದೆ. ಅಲ್ಲಿ ಮನಸ್ವಿಯಾಗಿ ಅರಣ್ಯವಿದ್ದು, ಸೈನ್ಯದ ಸಂರಕ್ಷಣೆಯು ಅನಾಯಾಸವಾಗಿ ಆಗಬಹುದಾಗಿದ್ದ ಕಾರಣ, ಬಾಣಪುರದ ದಂಗೇಖೋರ ರಾಜನು ತನ್ನ ಜನಗಳ ವಸತಿ ಇಟ್ಟಿದ್ದನು. ಈ ವರ್ತಮಾನವು ಸರ್‌ಹ್ಯೂ ಸಾಹೇಬನಿಗೆ ತಿಳಿಯುತ್ತಲೇ, ಆತನಮೇಲೆ ಬಿದ್ದನು. ಅಲ್ಲಿ ದಂಗೇಖೋರರ ಮತ್ತು ಇಂಗ್ರೇಜಿ ಸೈನ್ಯದವರ ಯುದ್ಧವು ಚನ್ನಾಗಿ ನಡೆಯಿತು. ಅದರಲ್ಲಿ ಇಂಗ್ರೇಜಿ ಸೈನ್ಯದಕಡೆ ಕ್ಯಾಪ್ಟರ್ ನೇಹ್ವಿಲಿ ಎಂಬ ಒಬ್ಬ ಶೂರನು ಸತ್ತುಹೋದನು. ಆದಾಗ್ಯೂ ಅಲ್ಲಿಯೂಕೂಡ ದಂಗೇಖೋರರ ಪರಾಭವವಾಗಿ ಇಂಗ್ರೇಜಿ ಸೈನ್ಯಕ್ಕೆ ಯಶಸ್ಸುಬಂತು.

ಅನಂತರ ಸರ್‌ಹ್ಯೂರೋಸ್ ಸಾಹೇಬನು ಫೆಬ್ರವರೀತಾರೀಖು 3 ನೇ ದಿವಸ ಸಾಗರಕ್ಕೆ ಪ್ರಯಾಣ ಮಾಡಿಹೋಗಿ, ಅಲ್ಲಿನ ಡಂಗೇಖೋರರನ್ನು ಚದರಿಸಿ, ಅಲ್ಲಿನ ಕೋಟೆ

---

ದಿವಸ ಯುದ್ಧ ಮಾಡಬೇಕಾಯಿತು. ಅಂಥಾಕೋಟೆಯನ್ನು ಸರ್‌ಹ್ಯೂರೋಸ್ ಸಾಹೇಬನ ಸೈನ್ಯವು 4 ದಿವಸಗಳ ಒಳಗಾಗಿ ತೆಗೆದುಕೊಂಡಿತು ಯಂಬುವದಕ್ಕೋಸ್ಕರ ಒಬ್ಬ ಇಂಗ್ರೇಜಿ ಇತಿಹಾಸಕಾರಕನು ಸ್ತೋತ್ರಮಾಡುತ್ತಾನೆ. ಅದು ಯೋಗ್ಯವಾಗಿರಬಹುದು. ಆದರೆ ಅದಕ್ಕಿಂತಲೂ ಹೆಚ್ಚು ಆಶ್ಚರ್ಯ ಪಡತಕ್ಕಮಾತು ಯಾವದಂದರೆ, ಸರ್‌ಹ್ಯೂರೋಸ್ ಸಾಹೇಬನ ಪ್ರಬಲ ಸೈನ್ಯವು ಆಕೋಟೆಗೆ ಮುತ್ತಿಗೆ ಹಾಕಿದ್ದಾಗ, ದಂಗೇಖೋರರಿಗೆ ಹೊರಗೆ ಬರುವದಕ್ಕೆ ಮಾರ್ಗವಿರಲಿಲ್ಲ; ಆದಾಗ್ಯೂ ಅವರು ಅತ್ಯಂತ ಅಸಾಧ್ಯವಾದ ಗೋಡೆಗಳ ಮೇಲಿನಿಂದ ಕೆಳಕ್ಕೆ ಹಾರಿ ಇಂಗ್ರೇಜಿ ಸೈನ್ಯದವರ ಕೈಗೆ ಸಿಕ್ಕದೇ ಓಡಿಹೋದರು. ಆ ಸಂಬಂಧದಲ್ಲಿ ಪ್ರತ್ಯಕ್ಷವಾಗಿ ಆಗ ಅಲ್ಲಿದ್ದ ಡಾಕ್ಟರ್ ಲೋಸಾಹೇಬನು ಹೀಗೆ ಬರೆದಿರುತ್ತಾನೆ:—

"The most amazing thing was to see the place from whence they had escaped. To look down the precipitious path made one giddy; and yet down this place, where no possible footing could be seen, they had all gone-men and women—in the dead of the night! One or two mangled bodies lay at the bottom, attesting the difficulty of the descent. Nothing but despair could have tempted them to have chosen such a way!"

ಯಲ್ಲಿ ಆಶ್ರಯ ಹಿಡಿದುಕೊಂಡಿದ್ದ ಇಂಗ್ರೇಜಿ ಜನಗಳನ್ನು ಮುಕ್ತರನ್ನಾಗಿ ಮಾಡಿದನು. ಆಸಮಯದಲ್ಲಿ 14 ನೇ ಡ್ರಾಗೂನ್ ಪಟಾಲಂನ ಜನಗಳು ಸಾಗರದ ಕೋಟೆಯ ಮೇಲೆ ಹೋಗುತ್ತಲೆ, ಅಲ್ಲಿನ ಯೂರೋಪಿಯರ್ನ ಜನಗಳಿಗೆ ಪರಮಾನಂದವಾಯಿತು. ಅವರು ಇಂಗ್ರೇಜಿ ಸೈನ್ಯದ ಬರುವಿಕೆಗೆ ಗೌರವಾರ್ಥವಾಗಿ, ಕೋಟೆಯೊಳಗಿನಿಂದ ತೋಫಿನ ವಂದನೆಯನ್ನು ಕೊಟ್ಟರು, ಮತ್ತು ಆನೆಗಳು, ಬಗ್ಗಿಗಳು, ಮತ್ತು ಕುದುರೆಗಳ ಮೇಲೆ ಕೂತುಕೊಂಡು ಸರ್‌ಹ್ಯೂರೋಸ್ ಸಾಹೇಬನನ್ನು ಇದಿರ್‌ಗೊಂಡರು. ಇದು ಹಾಗಿರಲಿ. ಈ ಪ್ರಕಾರವಾಗಿ ಸ್ವಲ್ಪ ಕಾಲದಲ್ಲಿಯೇ ಸಾಗರದವರೆಗೂ, ಸರ್‌ಹ್ಯೂ ಸಾಹೇಬನು ಸರ್ವದೇಶವನ್ನು ಸ್ವಾಧೀನ ಪಡಿಸಿಕೊಂಡನು. ಸಾಗರದಿಂದ 25 ಮೈಲಿಗಳ ದೂರದಲ್ಲಿ, ಗಡಾಕೋಟಾಯಂಬ ಬಲವಾದ ಕೋಟೆಯಿಥೆ. ಅದನ್ನು ಬಂಗಾಳ ಶಿಪಾಯಿಯ 51—52ನೇ ಫಂಡಖೋರರ ಪಟಾಲಂನವರು ಸ್ವಾಧೀನಪಡಿಸಿಕೊಂಡಿದ್ದರು. ಅದನ್ನೇ ಆತನು ಜಯಿಸಿ ತೆಗೆದುಕೊಂಡನು. ಆ ಕೋಟೆಯಲ್ಲಿ ಇಂಗ್ರೇಜಿ ಸೈನ್ಯದ ವರಿಗೆ, ಬಹಳ ಸಾಮಗ್ರಿ ಮತ್ತು ಮದ್ದು ಗುಂಡುಗಳು ಸಿಕ್ಕಿದವು. ಆ ಲಾಭದಿಂದ ಅವರಿಗೆ ಹೆಚ್ಚು ಪ್ರೋತ್ಸಾಹವು ಹುಟ್ಟಿ, ಮುಂದಿನ ಕೆಲಸವನ್ನು ಬಹಳ ಶೀಘ್ರವಾಗಿ ಶಿದ್ಧಿಗೆ ತರುವ ವಿಷಯದಲ್ಲಿ ಆವೇಶವು ಹುಟ್ಟಿತು.

ಸರ್ ಹ್ಯೂರೋಜ್ ಸಾಹೇಬನು ನರ್ಮ್ಮದಾನದಿಯ ಉತ್ತರ ದಿಕ್ಕಿನಲ್ಲಿನ ಅನೇಕ ಪ್ರಾಂತ್ಯಗಳು ತಮ್ಮ ಸ್ವಾಧೀನಕ್ಕೆ ಬಂತು ಯಂಬುವದನ್ನು ನೋಡಿ, ಬುಂದೇಲುಖಂಡದ ಮೇಲೆ ದಂಡೆತ್ತಿಹೋಗಲು ನಿಶ್ಚಯಮಾಡಿದನು. ಬುಂದೇಲು ಖಂಡದಲ್ಲಿ, ಮುಖ್ಯ ಸ್ಥಾನವಾದ ಝಾನ್ಸಿಯು, ದಂಗೇಖೋರರ ಸ್ವಾಧೀನದಲ್ಲಿಥೆ ಯಂತ, ಆತನ ತಿಳುವಳಿಕೆ ಯಾಗಿದ್ದಕಾರಣ, ಆದಿಯಲ್ಲಿ ಅದನ್ನು ಸ್ವಾಧೀನಪಡಿಸಿಕೊಳ್ಳತಕ್ಕದ್ದು ಬಹಳ ಅವಶ್ಯ ವಾಗಿಥೆಯಂತ ಆತನಿಗೆ ತೋರುತ್ತಿತ್ತು. ಕಮ್ಯಾಂಡರ್ ಇನ್‌ಚೀಫ್', ಸರ್ ಕಾಲಿನ್ ಕ್ಯಾಂಬೆಲ್ ನಂತು, ಝಾನ್ಸಿ ಸ್ವಾಧೀನಪಡಿಸಿಕೊಂಡಹೊರ್ತು ಉತ್ತರ ಹಿಂದೂಸ್ಥಾನ ದಲ್ಲಿನ ದಂಗೇ ಜನಗಳನ್ನು ಜಯಿಸುವದಕ್ಕೆ ಸರಿಬೀಳಲಾರದು ಎಂತ ಯೋಚಿಸಿ ಸರ್ ಹ್ಯೂಸಾಹೇಬನಿಗೆ, ಝಾನ್ಸಿ ತೆಗೆದುಕೊಳ್ಳುವ ವಿಷಯದಲ್ಲಿ ಖಂಡಿತವಾದ ಪತ್ರವನ್ನು ಬರೆದನು.* ಪರಂತು ಝಾನ್ಸಿ ಪರ್ಯಂತರ ಪ್ರಯಾಣ ಮಾಡತಕ್ಕದ್ದು, ಬಹಳ ಕಷ್ಟ

---

* ಸನ್ 1858ನೇ ಇಸಿವಿ ಜನವರೀ ತಾರೀಖು 24ನೇ ದಿವಸ ಸರ್ ಕಾಲಿನ್ ಕ್ಯಾಂಬೆಲ್ ಸಾಹೇಬನು ತನ್ನ ಸೆಕ್ರೆಟರೀ ಮೂಲಕ ಸರ್ ಹ್ಯೂರೋಜ್ ಸಾಹೇಬನಿಗೆ ಪತ್ರದ್ವಾರ ಈ ರೀತಿ ತಿಳಿಸಿದ್ದನು:—

"Sir Colin will be glad to learn if Jhansi is to be fairly tackled during your present campaign. To us it is all important. Until it takes place, Sir Colin's

ಕೆಲಸವಾಗಿತ್ತು. ಯಾಕಂದರೆ, ಸಾಗರದಿಂದ ಹಿಡಿದು ನಾಗಪುರ ಪರ್ಯಂತರ ಸರ್ವ ದೇಶವೂ, ದಂಗೇಖೋರರ ಸ್ವಾಧೀನದಲ್ಲಿದ್ದಕಾರಣ ಇಂಗ್ರೇಜಿ ಸೈನ್ಯಕ್ಕೆ ಸಾಕಾದಷ್ಟು ಸಾಮಾನುಗಳನ್ನೇ ವದಗಿಸುವದು ಅಸಾಧ್ಯವಾಗಿ ಹೋಗಿತ್ತು. ಆದಾಗ್ಯೂ ಸರ್ ಹ್ಯೂ ಸಾಹೇಬನು ಬಹಳ ದೃಢಮನಸ್ಸಿನಿಂದ, ಸಾಗರದಿಂದ ಸಾಧ್ಯವಾದಮಟ್ಟಿಗೂ ಸಾಮಾನುಗಳನ್ನು ವದಗಿಸಿಕೊಂಡು, ಮುಂದಿನ ಪ್ರಾಂತ್ಯದಮೇಲೆ ಪ್ರಯಾಣಮಾಡಿದನು.

ಸಾಗರದಿಂದ ಹಿಡಿದು ಬುಂದೇಲ್ ಖಂಡಕ್ಕೆ ಹೋಗುವ ಪರ್ಯಂತರ, ನಾರ್ತಾ, ಮಾಲ್ಥೋನ, ಮದನಪುರ, ಮತ್ತು ಧಾಮೋನಿ, ಮುಂತಾದ ಬಿಕ್ಕಟ್ಟು ಘಾಟಿಗಳನ್ನು ದಾಟಿ ಹೋಗಬೇಕಾಗುತ್ತದೆ. ಆ ಸರ್ವ ಘಾಟಿಗಳಲ್ಲಿಯೂ ದಂಗೇಖೋರ ಜನಗಳು ವ್ಯಾಪಿಸಿಕೊಂಡು ಬಿಟ್ಟಿದ್ದರು. ಇಂಗ್ರೇಜಿ ಸೈನ್ಯವು ಆ ಘಾಟಿಯ ದಾರಿಯಲ್ಲಿ ಬರುತ್ತದೆಯಂತ ಯೋಚಿಸಿಕೊಂಡಿದ್ದ ಕಾರಣ, ಅವರು ಪ್ರತಿಸ್ಥಳದಲ್ಲಿಯೂ ಅಡ್ಡಗಟ್ಟಿ ಕೊಂಡಿರುವದಕ್ಕೆ ಏರ್ಪಾಟು ಇಟ್ಟಿದ್ದರು. ಸರ್‌ಹ್ಯೂ ಸಾಹೇಬನು ಯುದ್ಧ ಕಲೆಯಲ್ಲಿ ಬಹಳ ನಿಪುಣನಾಗಿದ್ದಕಾರಣ, ತನ್ನ ಶತ್ರುಗಳ ಪ್ರಯತ್ನವನ್ನು ಮುಂದಾಗಿ ಯೋಚಿಸಿಕೊಂಡು, ತನ್ನ ಸೈನ್ಯವನ್ನು ಪ್ರತ'ಪ್ರತ್ಯೇಕ ಭಾಗಮಾಡಿ, ಬೇರೆಬೇರೆ ದಾರಿಯಿಂದ ಮುಂದಕ್ಕೆ ಕಳುಹಿಸಿಕೊಟ್ಟನು; ಮತ್ತು ತಾನು ಸ್ವತಃ ನಾರುತ ಘಾಟಿನಮೇಲೆ ಪ್ರಯಾಣ ಮಾಡಲು ನಿಶ್ಚಯಿಸಿದನು. ಪರಂತು, ನಾರತ ಘಾಟಿಯು ಅತ್ಯಂತ ಬಿಕ್ಕಟ್ಟು ಮತ್ತು ದುರ್ಲಭವಾಗಿದ್ದು, ಅಲ್ಲಿ ಬಾಣಪುರದ ರಾಜನು, ಯಥೇಷ್ಟ ಸೈನ್ಯವನ್ನು ತೆಗೆದು ಕೊಂಡು, ಯುದ್ಧಕ್ಕೆ ಸಿದ್ಧನಾಗಿದ್ದಕಾರಣ ಆ ಮಾರ್ಗವಾಗಿ ಹೋಗುವದು ಬಹಳ ಅಶಕ್ಯವಾಗಿ ತೋರುತ್ತಿತ್ತು. ಅದನ್ನು ನೋಡಿ ಸರ್ ಹ್ಯೂ ಸಾಹೇಬನು ಷಹಗಡದ ರಾಜನ ಅಧೀನದಲ್ಲಿದ್ದ ಮದನಪುರದ ಘಾಟಿ ಮಾರ್ಗವಾಗಿ ಹೋಗಲು ಯೋಚಿಸಿದನು. ಆದರೆ ಮದನಪುರದ ಕಡೆಗೆಹೋದರೆ, ಶಹಗಡದ ರಾಜನ ಸಹಾಯಕ್ಕೆ ಬಾಣಾಪುರದ ರಾಜನು ಸೈನ್ಯತೆಗೆದು ಕೊಂಡು ಬಂದು, ವಿಶೇಷವಾದ ಆಟಂಕಪಡಿಸುವನು ಯಂಬ ಭೀತಿಯಿತ್ತು. ಆದ್ದರಿಂದ ಆತನು ಕ್ಲೈವ್ ಸಾಹೇಬನಂತೆ ಬಂದು ಹೊಸಯುಕ್ತಿಯನ್ನು ಹುಡಿಕಿದನು. ಅದು ಯಾವದೆಂದರೆ, ನಾರುತದ ಘಾಟಿಯಕಡೆ ಸ್ವಲ್ಪ ಸೈನ್ಯವನ್ನು ಕಳು

---

rear will always be inconvenienced, and he will be constantly obliged to look back over his shoulder as when he relieved Lucknow. The stiff neck this gives to the Commander-in-chief and the increased difficulty of his operations in consequence you will understand."

*Clyde and Straithnairn P.* 105,

ಹಿಸಿಕೊಟ್ಟು, ಬಾಣಪುರದ ರಾಜನಿಗೆ ಅತ್ತಕಡೆಯುದ್ಧಕ್ಕೆ ಹೆಚ್ಚಬೇಕು. ಮತ್ತು ತಾನು ಮದನಪುರದ ಘಾಟಿಯಲ್ಲಿಯೇ, ಮುಂದೆ ಹೋಗಿ ಶತ್ರುಗಳನ್ನು ಮುರಿಯಬೇಕು. ಈ ಉಪಾಯದಂತೆ ಸರ್‌ಹ್ಯೂ ಸಾಹೇಬನು ನಾರುತದಮೇಲೆ ಸೈನ್ಯವನ್ನು ಕಳುಹಿಸುವದಕ್ಕೆ ಯೇರ್ಪಾಟುಮಾಡಿ, ಕೂಡ್ಲೆ ತಾನು ಮದನಪುರದ ಮೇಲೆ ಧಂಡೆತ್ತಿ ಬಿದ್ದು, ಅಲ್ಲಿನಶತ್ರುಗಳನ್ನು ಕೇವಲ ನಿರ್ವಿಣ್ಣರನ್ನಾಗಿ ಮಾಡಿಬಿಟ್ಟನು. ಈ ಯುದ್ಧದಲ್ಲಿ, ದಂಗೇಖೋರ ಜನಗಳು, ಇಂಗ್ರೇಜಿ ಸೈನ್ಯದವರ ಸಂಗಡ ಬಹಳ ಶೌರ್ಯದಿಂದ ಯುದ್ಧ ನಡಿಸಿದರು. ನೇಟಿವ್ ಇನ್ಫಂಟ್ರಿಯಲ್ಲಿ ತಿರುಗಿಬಿದ್ದಿದ್ದ 50 ನೇ ಪಟಾಲಂನವರು, ಇಂಗ್ರೇಜಿ ಸೈನ್ಯದಮೇಲೆ ಅವಿಚ್ಛಿನ್ನವಾಗಿ ತೋಫಿನ ಯೇಟುಗಳನ್ನು ಹೊಡೆದು, ಸರ್‌ಹ್ಯೂ ಸಾಹೇಬನಂಥ ಪರಾಕ್ರಮಶಾಲಿಗೆ ಕೂಡ ಆಶ್ಚರ್ಯ * ತೋರುವಂತೆ ಮಾಡಿಬಿಟ್ಟರು. ಈ ಯುದ್ಧದಲ್ಲಿ, ಸರ್ ಹ್ಯೂರೋಸ್ ಸಾಹೇಬನ ಶರೀರಕ್ಕೆ ಕೂಡ, ಸ್ವಲ್ಪ ಗುಂಡು ತಗಲಿ, ಆತನ ಉತ್ತಮ ಕುದುರೆಗೆ ಘಾಯವಾಯಿತು. ತಥಾಪಿ, ಆ ಸಮಯದಲ್ಲಿ ಹೈದರಾಬಾದ್ ಕಂಟಿಂಜೆಂಟ್ ಫೌಜಿನವರು ತಮ್ಮ ಪರಾಕ್ರಮವನ್ನೆಲ್ಲಾ ಉಪಯೋಗಿಸಿ ಶತ್ರುಗಳನ್ನು, ಪೂರ್ಣವಾಗಿ ಜಯಿಸಿದರು. ಶತ್ರುಗಳ ಪಕ್ಷದಲ್ಲಿನ ಅನೇಕ ಬುಂದೇಲೇ ಜನಗಳು ಸತ್ತುಹೋದರು. ಈ ರೀತಿಯಾಗಿ ಮದನಪುರದ ದಾರಿಯಲ್ಲಿ ಮತ್ತು ನೆರೆಹೊರೆಯಲ್ಲಿ, ಗುಡ್ಡಗಳ ಮಧ್ಯದಲ್ಲಿ ನಿಲ್ಲುವದಕ್ಕೆ ಆಶ್ರಯಮಾಡಿಕೊಂಡಿದ್ದ ದಂಗೇಖೋರರನ್ನ ಹಿಂದು ಹಿಂದಕ್ಕೆ ಅಟ್ಟಸುತ್ತಾ ಇಂಗ್ರೇಜಿ ಸೈನ್ಯವು ಶಹಗಡಸಂಸ್ಥಾನದಲ್ಲಿನ ಸರಾಯಿಕೋಟೆಯ ಸಮೀಪಕ್ಕೆ ಬಂತು. ಸರಾಯಿಯ ಕೋಟೆಯು, ಒಂದು ಸಣ್ಣಗುಡ್ಡದಮೇಲೆ ಇದ್ದು, ಅದರ ಕೆಳಗೆ ಶಹಗಡದ ರಾಜನ ಸುಂದರವಾದ ಒಂದು ತೋಟ, ಮತ್ತು ಒಂದು ಬಂಗಲೇ ಸಹ ಇತ್ತು. ಅಲ್ಲಿ ಇಂಗ್ರೇಜಿ ಸೈನ್ಯದವರು ಇಳುಕೊಂಡು, ಚನ್ನಾಗಿ ವಿಶ್ರಾಂತಿ ತೆಗೆದುಕೊಂಡರು. ಸರ್ವ ದಂಗೇಖೋರ ಜನಗಳನ್ನು ಸಂಪೂರ್ಣವಾಗಿ ಜಯಿಸಿದೆವೆಂತ ನೋಡಿ, ಗೌರ್ನರ್ ಜನರಲ್ ಸಾಹೇಬನ ಏಜಂಟ್ ಸರ್ ರಾಬರ್ಟ್ ಹ್ಯಾಮಿಲ್ಟನ್ ಸಾಹೇಬನು, ಶಹಗಡದ ಸಂಸ್ಥಾನವನ್ನು ಬ್ರಿಟಿಷ್ ಸರ್ಕಾರಕ್ಕೆ ಸೇರಿಸಿಕೊಂಡು, ಸರಾಯಿಯ ಕೋಟೆಯಮೇಲೆ ತೋಫಿಗೆ ಸರಬತ್ತಿಕೊಟ್ಟು, ಅಲ್ಲಿ ಬ್ರಿಟಿಷ್‌ರಾಜ್ಯ ಸತ್ತ್ಯದ ಧ್ವಜವನ್ನು ಸ್ಥಾಪಿಸಿದನು. ಶಹಗಡದ ರಾಜನು ಎಲ್ಲಿಯೋ ಓಡಿಹೋದನು. ಕೈಗೆ ಶಿಕ್ಕಿದ ಆತನ ಕೆಲವು ಸರದಾರ ಮುಂತಾದ ಜನಗಳನ್ನು ಹಿಡಿದು, ಗಲ್ಲಿಗೆ ಹಾಕಿದರು !! † ಈ ರೀತಿಯಾಗಿ ಶಹಗಡದ ರಾಜನ್ನ ಜಯಿಸಿ, ಇಂಗ್ರೇಜಿ ಸೈನ್ಯವು ಬಾಣಪುರದ ದಿಕ್ಕಿಗೆ ಹೊರಟಿತು.

* ಈ ಸಮ್ಮಂಧದಲ್ಲಿ ಸರ್ ಕಾರ್ಲಿನ್ ಕ್ಯಾಂಬೆಲ್ ಸಾಹೇಬನಿಗೆ ಸರ್ ಹ್ಯೂರೋಸ್ ಸಾಹೇಬನು ಬರೆಯುವಾಗ "As rapid and hot, a fire, as I ever saw." ಯಂತ ವರ್ಣಿಸಿರುತ್ತಾನೆ.

† ಆ ಜನಗಳಲ್ಲಿ ಶಹಗಡದ ರಾಜನ ಹತ್ತಿರ ಒಬ್ಬ ಜ್ಯೋತಿಷ್ಯನಿದ್ದನು. ಅವನನ್ನು ಸಂಗಡ ಕರೆದುಕೊಂಡು, ಆತನು ಯುದ್ಧ ನಡಿಸುತ್ತಿದ್ದನು. ಆ ಜೋಯಿ

ಝುರ್ಾಸಿಯ ಪಶ್ಚಿಮ ದಿಕ್ಕಿಗೆ ವೇತ್ರಾವತೀ ನದೀ ಸಮೀಪ ಬಾಣಪುರವು ಒಂದು ಸಣ್ಣ ಸಂಸ್ಥಾನವಾಗಿತ್ತು. ಅಲ್ಲಿನ ರಾಜನಾದ ಮರ್ದನಸಿಂಗನು, ಝುರ್ಾಸೀ ಸಂಸ್ಥಾನಕ್ಕೆ ಮಂಡಲೀಕನಾಗಿದ್ದು, ಇಂಗ್ರೇಜಿ ಸರ್ಕಾರಕ್ಕೆ ವಿರುದ್ಧವಾಗಿ ತಿರುಗಿಬಿದ್ದಿದ್ದ ಕರೇಪಟೂಲಂಗೆ ಆಶ್ರಯ ಕೊಟ್ಟಿದ್ದನು. ಅವನು ತನ್ನ ಪಟ್ಟಣದಮೇಲೆ ಇಂಗ್ರೇಜಿ ಸೈನ್ಯ ಬರುತ್ತದೆ ಯಂಬುವದನ್ನು ನೋಡಿ, ತನ್ನ ಪ್ರಜೆಗಳಿಗೆ, ಗ್ರಾಮಾಂತರಗಳಿಗೆ ಹೋಗುವದಕ್ಕೆ ಆಜ್ಞೆ ಮಾಡಿದ್ದಲ್ಲದೆ, ಸ್ವತಃ ತಾನು ತನ್ನ ಹೆಂಡತಿ ಮಕ್ಕಳನ್ನು ಎರಡನೇ ಕಡೆಯಲ್ಲಿ ಮೈದು ಇಟ್ಟನು. ಮಾರ್ಚಿ ತಾರೀಖು 10 ನೇ ದಿವಸ ಇಂಗ್ರೇಜಿ ಸೈನ್ಯವು ಬಾಣಪುರಕ್ಕೆ ಬಂತು. ಪರಂತು, ಸರ್ವ ಪಟ್ಟಣವೂ ಬರಿದಾಗಿದ್ದದ್ದರಿಂದ, ಅದು ಅವರ ಕೈವಶವಾಗಲು ಪ್ರಯಾಸವಾಗಲಿಲ್ಲ. ಸರ್ ರಾಬರ್ಟ ಹ್ಯಾಮಿಲ್ಟನ್ ಸಾಹೇಬನು ಅಲ್ಲಿ ಇಂಗ್ರೇಜಿ ಸರ್ಕಾರದ ತಮಟೆ ಹೊಡಿಸಿ, ಅಲ್ಲಿನ ಪ್ರಜೆಗಳಿಗೆ ನಿರ್ಭಯವನ್ನು ತೋರಿಸಿದನು. ಬಾಣಪುರದ ರಾಜನ ವೈಭವವು ಬಹಳವಾಗಿದ್ದು, ಅಲ್ಲಿನ ಅರಮನೆಯು ಬಹಳ ಸುಂದರವಾಗಿತ್ತು. ಅದನ್ನು ಲೂಟಿಮಾಡಿ, ನೆಲ ಸರತಮಾಡುವದಕ್ಕೆ ಇಂಗ್ರೇಜಿ ಅಧಿಕಾರಿಗಳು ಅಪ್ಪಣೆ ಕೊಟ್ಟರು. ಆ ಪ್ರಕಾರವಾಗಿ ಮೇಜರ್ ಬಾಯ್ಲೋ ಸಾಹೇಬನು, ತಾರೀಖು 11 ನೇ ದಿವಸ ಅದರ ಅನೇಕ ಭಾಗಗಳನ್ನು ನೆಲಸರುತಮಾಡಿಬಿಟ್ಟು, ಉಳಿದ ಭಾಗದ ವ್ಯವಸ್ಥೆಮಾಡುವ ಕೆಲಸವನ್ನು ಅಗ್ನಿನಾರಾಯಣ

---

ಸನು ರಾಜನಿಗೆ ಹ್ಯಾಗೆ ಹೇಳುತ್ತಿದ್ದನೋ ಆ ಪ್ರಕಾರ ಯುದ್ಧ ನಡೆಯುತ್ತಿತ್ತು. ತಥಾಪಿ ಆತನ ಸರ್ವ ಪ್ರಶ್ನೆಯೂ ತಪ್ಪಿ ಹೋಗಿ, ತುದಿಗೆ ಇಂಗ್ರೇಜಿ ಜನಗಳ ನಾಶವಾಗುತ್ತದೆ ಯಂತ, ಆತನು ಹೇಳಿದ್ದು ಸುಳ್ಳಾಗಿ ಹೋಯಿತು. ಆ ಜೋಯಿಸನು, ಮುಂದೆ ಸರ್ ಹ್ಯೂರೋಸ್ ಸಾಹೇಬನ ಕೈಗೆ ಶಿಕ್ಕಿದಾಗ, ಅತನು ತನ್ನ ಗಣಿತ ತಪ್ಪಿಹೋಯಿತೆಂತ ಒಪ್ಪಿಕೊಂಡನು. ಆ ವಿಷಯವಾಗಿ ಎರಡು, ನಾಲ್ಕು ಸಾಲೆಗಳನ್ನು ಬರೆದಿದ್ದಾನೆ. ಆತನು ಹೇಳುವದೇನಂದರೆ :—

"The Raja of Shahghur had escaped, and his astrologer, who was now in our hands, confessed that he had been mistaken in his prediction of the fitting day for the annihilation of the Feringhees. He evidently had read the stars through a glass darkly that night, and had woefully proved himself a false prophet!"

ಇಂಥಾ ಜ್ಯೋತಿಷ್ಯನ ಸಲಹೆಮೇಲೆ ನಡೆದ ಯುದ್ಧದಲ್ಲಿ ಯಂಥಾ ಯಶಸ್ಸು ಬರಬಹುದೆಂಬುವದು, ಸಹಜವಾಗಿ ತೋರುತ್ತದೆ.

ದೇವರಕಡೆ ವಹಿಸಿದನು. ಆ ದಿವಸ ರಾತ್ರೆಯಲ್ಲಾ ಆ ಅರಮನೆಯ ಪ್ರಕಾಶವು ಬಹಳ ದೂರಕ್ಕೆ ಪ್ರಜ್ವಲಿತವಾಗಿ ಅರಮನೆಯಲ್ಲಿನ ಸುಗಂಧ ದ್ರವ್ಯದ ಪರಿಮಳವು ಹೊಗೆಯ ಸಂಗಡ ಹೊರಟು, ಸರ್ವತ್ರ ಹರಡಿಹೋಗಿತ್ತು. ಇದು ಹಾಗಿರಲಿ. ಇಂಗ್ರೇಜಿ ಸೈನ್ಯಕ್ಕೆ ಭಯಪಟ್ಟು, ಬಾಣಪುರದ ರಾಜನು, ವೇತ್ರಾವತೀ ನದಿಯ ಬೆಟ್ಟದ ಮಧ್ಯದಲ್ಲಿ ಎಲ್ಲಿಯೋ ಓಡಿಹೋದನೆಂತ ತಕ್ಷಣವೇ ಝಾನ್ಸಿಗೆ ವರ್ತಮಾನ ಬಂತು.

ಇಂಗ್ರೇಜಿ ಸೈನ್ಯವು ತಾರೀಖು 12ನೇ ದಿವಸ ಬಾಣಪುರವನ್ನು ಬಿಟ್ಟು ಪ್ರಯಾಣ ಮಾಡಿ, ತಾಲ್ಬೆಹುತ ಪಟ್ಟಣದ ದಿಕ್ಕಿಗೆ ಹೋಯಿತು. ಆ ಸ್ಥಳದಲ್ಲಿ ದಂಗೇಖೋರ ಜನಗಳು ಕೋಟೆಯ ಆಸರೆ ಹಿಡಿದುಕೊಂಡಿದ್ದರು. ಪ್ರಥಮತಃ ಅವರ ಮತ್ತು ಮೇಜರ್ ಆರ್ ಸಾಹೇಬನ ಗುಂಡು ಹಾರಿಸುವ ಯುದ್ಧ ನಡೆಯಿತು. ಪರಂತು, ಇಂಗ್ರೇಜಿಯವರ ಕಡೆ ಸೈನ್ಯವು ಪ್ರಬಲವಾಗಿಧೆಯಂತ ನೋಡಿ, ದಂಗೇಖೋರರು ಸುಮ್ಮನೆ ಪಲಾಯನ ಮಾಡಿದರು. ಆದಕಾರಣ ಆ ಕೋಟೆಯು ಇಂಗ್ರೇಜಿಯವರ ಕೈಗೆ ಬಂತು. ಅದು ಒಂದು ಸಣ್ಣ ಗುಡ್ಡದಮೇಲೆ ಯಿದ್ದು, ಅಲ್ಲಿ ಸೃಷ್ಟಿ ಸೌಂಧರ್ಯವು ಬಹಳ ಚೆನ್ನಾಗಿದ್ದ ಕಾರಣ, ಅದರಮೇಲೆ ಇಂಗ್ರೇಜಿ ಯುದ್ಧಶಾಲಿಗಳ ನಿಶಾನೆಯನ್ನ ಹಾಕುತ್ತಲೇ, ಅದಕ್ಕೆ ಬಹಳ ಶೋಭಾ ಬಂತು. ಈ ರೀತಿಯಾಗಿ ಸರ್ ಹ್ಯೂರೋಸ್ ಸಾಹೇಬನಿಗೆ ಪ್ರತಿ ಒಂದು ಸ್ಥಳದಲ್ಲಿಯೂ, ಯಶಸ್ಸು ಬರುತ್ತಾ, ದಂಗೇಖೋರರು ಚದುರಿ ಹೋದರು. ತಾರೀಖು 17ನೇ ಮಾರ್ಚಿ ದಿವಸ ಇಂಗ್ರೇಜಿ ಸೈನ್ಯದವರು ಬೇಟವ ನದೀದಾಟಿ ಆದರ ಆಚೇಕಡೆಗೆ ತಮ್ಮ ಡೇರೆಗಳನ್ನು ಹಾಕಿಕೊಂಡರು. ಅದೇ ದಿವಸ ಸರ್ ಹ್ಯೂರೋಸ್ ಸಾಹೇಬನ ಒಂದನೇ ಬ್ರಿಗೇಡ್, ಸೈನ್ಯವು ಚಂದೇರಿಯ ಇತಿಹಾಸ ಪ್ರಸಿದ್ಧವಾದ, ಕೋಟೆಯನ್ನು ನೆಲಸರುತ ಮಾಡಿತು. ಅಲ್ಲಿನ ದಂಗೇಖೊರರು, ಝಾನ್ಸಿಗೆ ಓಡಿಹೋದರು ಯೆಂಬ ಸಂತೋಷ ವರ್ತಮಾನವು ಸರ್ ಹ್ಯೂರೋಸ್ ಸಾಹೇಬನ ಸೈನ್ಯಕ್ಕೆ ತಿಳಿಯಿತು. ತಾರೀಖು 17 ನೇ ಮಾರ್ಚಿ, ಇಂಗ್ರೇಜೀ ಜನಗಳಿಗೆ ಸೆಂಟ್ ಪೀಟರ್ಸ್ ಡೇಯೆಂಬ ದೊಡ್ಡ ಹಬ್ಬದ ದಿವಸವಾಗಿದ್ದಕಾರಣ, ಅಲ್ಲಲ್ಲಿ, ವಿಜಯಾನಂಧವನ್ನು ತೋರಿಸಿದರು. ಚಂದೇರಿಯಲ್ಲಿನ ಇಂಗ್ರೇಜಿ ಸೈನ್ಯಕ್ಕೆ ಅತಿಶಯ ರೋಷವೆದ್ದು, ದಂಗೇ ಜನಗಳಮೇಲೆ ತಮ್ಮ ಹಗೆಯನ್ನ ತುಂಬಾ ತೀರಿಸಿಕೊಳ್ಳಬೇಕೆಂತ ನಿಶ್ಚಯಿಸಿದರು. ಚಾಂದೇರಿ ಲಡಾಯದಲ್ಲಿ ಸಿಕ್ಕಿದ ಪ್ರತಿಯೊಬ್ಬ ಮನುಷ್ಯನನ್ನೂ "ರಾಯಲ್ ಕೌಂಟಿಡಾನ್ಸ್" ಮತ್ತು 25 ನೇ ಪಟಾಲಂನವರು, ಯಮುನಪುರಿಗೆ ಪ್ರಯಾಣ ಮಾಡಿಸಿದರು. *

---

* ಆ ಸಮಯದಲ್ಲಿ, ಇಂಗ್ರೇಜಿ ಸೈನ್ಯದ ಪ್ರತಿಯೊಬ್ಬ ತಾಮ್ರಮುಖ ಶಿಪಾಯಿಗೂ, ಬಹಳ ರೋಷವೇರಿ ಕಾನ್ಪುರ ಮತ್ತು ಝಾನ್ಸಿಯಲ್ಲಿ ನಡೆದ ಭಯಂಕರ ಕೊಲೆಪಾತಕದ ವಿಷಯದಲ್ಲಿ, ದಂಗೇಖೋರ ಜನಗಳಮೇಲಿನ ತಮ್ಮ ಹಗೇತೀರಿಸಿ ಕೊಳ್ಳಬೇಕೆಂತ

ಇದು ಹಾಗಿರಲಿ. ಚಂದೇರಿಯಿಂದ ಝಾಂಸಿಗೆ ಓಡಿಹೋದ ದಂಗೇಖೋರರನ್ನು ಬೆನ್ನಟ್ಟಿ, ಜಯಹೊಂದಿದ ಚಂದೇರಿ ಸೈನ್ಯದವರು, ಹೊರಟುಹೋದರು. ಇತ್ತಲಾಗಿ, ಸರ್ ಹ್ಯೂರೋಸ್ ಸಾಹೇಬನು ತಾರೀಖು 19ನೇ ದಿವಸ ಬೇಟ್ವಾ ನದಿಯಮೇಲೆ ಉಳಕೊಂಡು, ಚಂಚರ್ಪುರದಮೇಲೆ ಬಿದ್ದನು. ಚಂಚರ್ಪುರದಿಂದ ಝಾಂಸಿಗೆ ಹೆಚ್ಚಾಗಿದ್ದರೆ, 18 ಮೈಲಿಗಳು ಉಳಿಯಿತೆಂಬುವದನ್ನು ನೋಡಿ, ಇಂಗ್ರೇಜಿ ಸೈನ್ಯದವರಿಗೆ ತಮ್ಮ ಅಪೇಕ್ಷಿಸಿದ ಸ್ಥಳವು ಸಮೀಪಿಸಿತು. ಈಗ ಅಲ್ಲಿ ತಮ್ಮ ಪರಾಕ್ರಮದ ಸೊಂಟಾ ಕಟ್ಟಬೇಕುಯಂತ ತಿಳಿದು, ಏಕಪ್ರಕಾರವಾಗಿ ತಮ್ಮ ಉತ್ಸಾಹ ಮತ್ತು ಆಹ್ಲಾದವನ್ನು ತೋರಿಸಿದರು. ಸರ್ ಹ್ಯೂರೋಸ್ ಸಾಹೇಬನು ಝಾಂಸಿ ಯುದ್ಧದ ಸರ್ವ ಕಾರ್ಯ ಕ್ರಮಗಳನ್ನು ಮೊದಲೇ ಸರಿಪಡಿಸಿಟ್ಟು, ತಾರೀಖು 20 ನೇ ದಿವಸ 2ನೇ ಬ್ರಿಗೇಡಿಯರ್ ಸೈನ್ಯದ ಪೈಕಿ, ಒಂದು ತೋಪುಖಾನೆ, ಮತ್ತು ಒಂದು ಕುದುರೆಯ ಸವಾರರ ಅರಸಾಲೆ ಸಹ ಝಾಂಸಿ ನೋಡಿಕೊಂಡು, ದಾರಿಗಳಲ್ಲಿಯೂ ಮತ್ತು ಗಿಡಗಳಲ್ಲಿಯೂ, ಅಡ್ಡಗಟ್ಟಿರಬೇಕೆಂತ ಕಳುಹಿಸಿದ್ದನು. ಅವರ ಹಿಂದೆಯೇ ತಾನು ಸ್ವತಃ ಹೋಗಬೇಕೆಂತ ಉದ್ದೇಶಪಟ್ಟಿದ್ದನು. ಇಷ್ಟರಲ್ಲಿ, ಗೌರ್ನರ್ ಜನರಲ್ ಸಾಹೇಬನ ಕಡೆಯಿಂದ, ಒಬ್ಬ ಕುದುರೆ ಸವಾರನು, ಒಂದು ಅವಶ್ಯಕವಾದ ಪತ್ರ ತೆಗದುಕೊಂಡು ಬಂದು, ಸರ್ ಹ್ಯೂರೋಸ್ ಸಾಹೇಬನ ಡೇರೆಯಲ್ಲಿ ಇಳಿದನು. ಅವನು ಕೂಡ್ಲೆ, ಸರ್ ರಾಬರ್ಟ್ಸ್ ಹ್ಯಾಮಿಲ್ಟನ್ ಮತ್ತು ಸರ್ ಹ್ಯೂರೋಸ್ ಸಾಹೇಬರಿಗೆ ಪ್ರತ್ಯೇಕವಾಗಿ ಗೌರ್ನರ್ ಜನರಲ್ ಮತ್ತು ಕಮ್ಯಾಂಡರ್ ಇನ್ ಛೀಫ, ಇವರುಗಳು ಬರೆದಿದ್ದ ಪತ್ರಗಳನ್ನು ಅವರವರಿಗೆ ತಲ್ಪಿಸಿದನು. ಈ ಯರಡು ಪತ್ರವನ್ನು, ಓದಿನೋಡಿಕೊಂಡು ಕೂಡಲೆ ಆ ಉಭಯ ಸೇನಾನಾಯಕರಿಗೆ ಯೇನೋ ಆಶ್ಚರ್ಯ ತೋರಿ, ಸ್ವಲ್ಪ ಯೋಚನೆ ಹುಟ್ಟಿತು. ಈ ಯರಡು ಪತ್ರಗಳ ಸಾರಾಂಶವು ಬಹಳ ಮಹಾತ್ಮೆಯುಳ್ಳದ್ದಾಗಿದೆ. ಅದರಲ್ಲಿ ಗವರ್ನರ್ ಜನರಲ್ ಮತ್ತು ಕಮ್ಯಾಂಡರ್ ಇನ್ ಛೀಫ ಸಾಹೇಬರುಗಳ ಧಾರಾಳವಾದ ಅಂತಃಕರುಣ

---

ನಿಶ್ಚಯಿಸಿ, ಬಹಳ ಮಾತ್ಸರ್ಯದಿಂದ ತಮ್ಮ ಕೈಗೆ ಶಿಕ್ಕಿದವರನ್ನೆಲ್ಲಾ ಹೊಡೆದುಹಾಕಿದರು. ಆ ಸಮಯದಲ್ಲಿ ಅವರಬಾಯಿಂದ ಹೊರಟಮಾತನ್ನು ಕುರಿತು ಡಾಕ್ಟರ್ ಲೋಸಾಹೇಬನು ಹೀಗೆ ಬರೆಯುತ್ತಾನೆ:—

"Sure they had had a thdram, and the raal blood was up, and by St. Patrick they couldn't spare one of the murtheres!" "Why should they, when they remembered the little babbies and the poor ladies who were butchered in Cawnpore and Jhansi?"

ಮನಸ್ಸು ಮತ್ತು ಪ್ರಾಮಾಣಿಕತೆ ಸಹ ಉತ್ತಮರೀತಿಯಲ್ಲಿ ಕಂಡು ಬರುತ್ತದೆ. ಆ ಪತ್ರದಲ್ಲಿ ಸರ್‌ಹ್ಯೂರೋಸ್ ಸಾಹೇಬನಿಗೆ ಈ ರೀತಿಯಲ್ಲಿ ತಿಳಿಸಿತ್ತು:—ಬುಂದೇಲ್ ಖಂಡದಲ್ಲಿ ಚರ್ಖಾರಿ ಸಂಸ್ಥಾನದ ರಾಜಾರತ್ನ ಸಿಂಗನು, ಬ್ರಿಟಿಷ್ ಸರ್ಕಾರದ ಬಹಳ ಸ್ನೇಹಿತನಾಗಿದ್ದು, ಅವನಮೇಲೆ ತಾತ್ಯಟೋಪಿಯು ದಂಡೆತ್ತಿ ಹೋಗಿ ಚರ್ಖಾರಿಗೆ ಮುತ್ತಿಗೆ ಹಾಕಿದ್ದಾನೆ. ಆದಕಾರಣ ಪ್ರಥಮದಲ್ಲಿ ಆತನ ಸಂಕಟವನ್ನು ನಿವಾರಣೆ ಮಾಡಿದ ನಂತರ ಝಾಂಸೀ ಮೇಲೆ ಪ್ರಯಾಣ ಮಾಡಬೇಕು. * ಗವರ್ನರ್ ಜನರಲ್ ಸಾಹೇಬನ ಈ ಅಪ್ಪಣೆಯನ್ನು ನೋಡಿ, ಸರ್ ಹ್ಯೂರೋಸ್ ಮತ್ತು ಸರ್ ರಾಬರ್ಟ್, ಸಾಹೇಬರುಗಳು ಘಾಬರಿಯಾದರು. ಯಾಕಂದರೆ ಚರ್ಖಾರಿ ಸಂಸ್ಥಾನವು ಸುಮಾರು ಇಲ್ಲಿಂದ 80 ಮೈಲಿಗಳ ದೂರದಲ್ಲಿಧೆ. ಝಾಂಸಿ ಬಹಳಮಟ್ಟಿಗೆ 14 ಮೈಲಿಗಳೊಳಗೆ ಇತ್ತು, ಹೀಗಿರುತ್ತಾ ಝಾಂಸಿ ಸಮೀಪಕ್ಕೆ ಬಂದು ಅದನ್ನು ಸ್ವಾಧೀನಪಡಿಸಿಕೊಳ್ಳದೇ, ಮುಂದೆ ಹೋಗುವದು ಯಾವನಿಪುಣ ಯುದ್ಧಶಾಲಿಗಾದರೂ ಸಮಾಧಾನವು ತೋರಲಿಕ್ಕಿಲ್ಲ, ಈ ಸಮಯದಲ್ಲಿ, ಸರ್‌ರಾಬರ್ಟ್ ಹ್ಯಾಮಿಲ್ಟನ್ ಸಾಹೇಬನು, ಸರ್ವ ಭಾರವನ್ನೂ ತನ್ನ ತಲೆಯಮೇಲೆ ತೆಗದುಕೊಂಡು, ಗವರ್ನರ್ ಜನರಲ್ ಸಾಹೇಬನಿಗೆ, ಈ ರೀತಿಯಾಗಿ ಪತ್ರ ಬರೆದನು :—"ಚರ್ಖಾರಿಯನ್ನ ಬಿಡಿಸಲಿಕ್ಕೆ ನಾವು ಹೋದರೆ ಝಾಂಸಿ ತೆಗೆದುಕೊಳ್ಳುವ ಯೋಚನೆಯನ್ನ ಕೆಲವುಕಾಲ ಸುಮ್ಮನೆ ನಿಲ್ಲಿಸಬೇಕಾದೀತು. ಕಾಲ್ಪೀ ತೆಗದುಕೊಳ್ಳಬೇಕಾದ್ದು ಸರ್ ಹ್ಯೂ ಸಾಹೇಬನಿಗೆ, ಅವಶ್ಯವಾದ ಕೆಲಸವಾಗಿದೆ. ಚರ್ಖಾರಿ ರಾಜನಿಗೆ ಸಹಾಯ ಮಾಡಬೇಕಾದ್ದು ನಮಗೆ ಹೆಚ್ಚು ಅಪೇಕ್ಷೆ ಯಿರುವ ಪಕ್ಷದಲ್ಲಿ ನನ್ನ ಅಭಿಪ್ರಾಯವೇನಂದರೆ :—ಝಾಂಸಿಯಮೇಲೆ ಸೈನ್ಯ ತೆಗೆದುಕೊಂಡುಹೋದರೆ, ಅತ್ತಕಡೆ ದಂಗೇಖೋರರು ತಮ್ಮಷ್ಟಗೆ ತಾವೇ ಈ ದಿಕ್ಕಿಗೆ ಬಂದುಬಿಡುವರು. ಝಾಂಸಿ ಕೋಟೆಯು ಕೈವಶವಾಗುವದ್ದರಿಂದ ಅಲ್ಲಿನ ದಂಗೇಖೋರರ ಸೇರುವಿಕೆಯು ಇಲ್ಲದಂತೆ ಆಗಬಹುದು ; ಮತ್ತು ಪುನಃ ಅವರು ಸೇರುವಹಾಗೆ ಇಲ್ಲ ; ಈಚೆಗೆ ಯಾರ ಹೆಸರು ದಂಗೆ ಉತ್ಪನ್ನವಾಗುವದಕ್ಕೆ ಕಾರಣವಾಗಿದೆಯೋ ಆ ರಾಣಿಯ ಸರ್ವಶಕ್ತಿ

---

* ಆ ಪತ್ರದಲ್ಲಿ ಗೌರ್ನಮೆಂಟ್‌ಕಡೆ ಕಾರ್ಯದರ್ಶಿಯು ಬರೆದಿರತಕ್ಕ ಮಾತನ್ನು ಇಲ್ಲಿ ತಿಳಿಸುವದು ಯೋಗ್ಯವಾಗಿಧೆ.

"It is the Governor General's wish that this object should for the present be considered paramount to the operations before Jhansi, and that Sir Hugh Rose should take such steps as may most effectually contribute to its accomplishment."

ಮತ್ತು ಭಾರದಡಿ ಇದರಿಂದ ಇಲ್ಲದಂತೆ ಆದೀತು.” * ಅದೇ ರೀತಿಯಾಗಿ ಸರ್ ಹ್ಯೂರೋಜ್ ಸಾಹೇಬನು ಮಾರ್ಚಿ ತಾರೀಖು 19 ನೇ ದಿವಸ ಗವರ್ನರ್ ಜನರಲ್ ಸಾಹೇಬನಿಗೆ ಮೇಲೆ ಬರೆದ ಅಭಿಪ್ರಾಯವನ್ನು ತೋರಿಸಿ, ಕಾಗದ ಬರೆದನು. ಅದಕ್ಕೆ ಲಾರ್ಡ ಕ್ಯಾನಿಂಗು ಸಾಹೇಬನ ಅನುಮತಿ ಸಿಕ್ಕಿತು. ಈ ರೀತಿಯಾಗಿ ಮಧ್ಯದಲ್ಲಿ ಬಂದ ಕಷ್ಟವನ್ನ ದೂರಮಾಡಿ, ಸರ್ ಹ್ಯೂರೋಜ್ ಸಾಹೇಬನ ಸೈನ್ಯವು, ಮಾರ್ಚಿ ತಾರೀಖು 20 ನೇ ದಿವಸ ಬೆಳಗ್ಗೆ 8 ಘಂಟೆ ಹೊಡಿಯುವ ಸಮಯದಲ್ಲಿ ಝಾನ್ಸಿಗೆ ಬಂದು ಸೇರಿತು ; ಮತ್ತು ಸರ್ ಹ್ಯೂರೋಜ್ ಸಾಹೇಬನು ಸ್ವತಃ ಕೆಲವು ಜನಗಳನ್ನ ಸಂಗಡ ತೆಗೆದುಕೊಂಡು ಹೋಗಿ, ಝಾನ್ಸಿಯ ಸ್ಥಿತಿಯನ್ನ ಚನ್ನಾಗಿ ಲಕ್ಷೆ ಪೂರ್ವಕ ನೋಡಿ

---

* ಸರ್ ರಾಬರ್ಟ ಹ್ಯಾಮಿಲ್ಟನ್ ಸಾಹೇಬನು, ಲಾರ್ಡ ಪಾಲ್ಮರ್ಸ್ಟನ್ ಸಾಹೇಬನಿಗೆ 1862 ನೇ ಇಸ್ವಿ ಮಾರ್ಚಿ ತಾರೀಖು 20ನೇ ದಿವಸ ಮಾಡಿದ ವಿಜ್ಞಾಪನೆ ಪತ್ರಿಕೆಯಲ್ಲಿ ಈ ರೀತಿ ಬರದಿರುತ್ತಾನೆ:—

“Sir Hugh Rose considered the order of the Commander-in-chief imperative : there was not any thing left to my discretion in my letter from the Governor General ; it was clear to me it would be a great political mistake to draw off from Jhansi, which our Cavalry were investing, and our force within fourteen miles: moreover, supposing the force moved on Charkhari, it was not possible to march the eighty miles before the rebels had carried the fort, the Rajah having provisions and having lost the outworks, according to my intelligence. I, therefore took on myself the responsibility of proceeding with our operations against Jhansi, trusting to that course as the most effective to draw the enemy from Charkhari, and so I wrote to the Governor General.”

ಇದರಿಂದ ಸಂದರ್ಭಾನುಸಾರವಾಗಿ ಇಂಗ್ರೇಜಿ ಜನಗಳು ಎಷ್ಟರಮಟ್ಟಿಗೆ ತಮ್ಮಮೇಲೆ ಭಾರವನ್ನು ವಹಿಸಲು ಸಿದ್ಧರಾಗಿರುತ್ತಾರೆಂಬುವದು ಸ್ಪಷ್ಟವಾಗಿ ತೋರುತ್ತದೆ.

ಕೊಂಡು ಬಂದು ಮುಂದಿನ ಯೇರ್ಪಾಟುಗಳನ್ನ ಮಾಡ ಉದ್ಯುಕ್ತನಾದನು. ಇಂಗ್ರೇಜಿ ಸೈನ್ಯವು ಝಾಸಿ ಮೇಲೆ ದಂಡೆತ್ತಿ ಬಂದಿದೆ ಎಂಬ ವರ್ತಮಾನವು ಝಾಸಿ ದರ್ಬಾರಿನಲ್ಲಿ ತಿಳಿದ ಕೂಡ್ಲೆ ದಿವಾಣ ಲಕ್ಷ್ಮಣರಾವು ಮುಂತಾದ ಪ್ರಮುಖ ಮಂಡಲಿಯವರಲ್ಲಿ, ಘಾಬರಿ ಎದ್ದು ಹೋಯಿತು. ಝಾಸಿ ದರ್ಬಾರಿನಲ್ಲಿ ಯಾರೂ ಬುದ್ಧಿವಂತರಾದ ಮುತ್ಸದ್ದಿಯರು ಇರಲಿಲ್ಲವಾದಕಾರಣ, ಯಾರಿಗೆ ಹ್ಯಾಗೆ ಮನಸ್ಸು ಬಂತೋ ಆ ರೀತಿ ಮಾಡಲಿಕ್ಕೆ ಪ್ರಾರಂಭಿಸಿದರು. ನಾನಾಭೂಪಾಲ್‌ಕರ್ ಮುಂತಾದ ಹೊಸಮಂಡಲಿಯವರು ಗ್ವಾಲಿಯರ್‌ಗೆ ವರ್ತಮಾನ ಕಳುಹಿಸಿ, ಅಲ್ಲಿನ ವಕೀಲರುಗಳ ಸಲಹೆಯನ್ನು ವಿಚಾರಿಸಿದರು. ಅವರು ಇಂಗ್ರೇಜಿ ಸೈನ್ಯದವರಿಗೆ ಯಾವ ಅಡ್ಡಿಯೂ ಮಾಡದೆ, ಇಂಗ್ರೇಜಿ ಸೈನ್ಯದ ಮುಖ್ಯ ಅಧಿಕಾರಿಗಳನ್ನ ಕಂಡು, ಅವರಿಗೆ ಯಿದ್ದ ತಪ್ಪು ತಿಳುವಳಿಕೆಯನ್ನ ಹೋಗಲಾಡಿಸಿ, ಪೂರ್ವದ ಪ್ರಕಾರ ಸ್ನೇಹ ವಿಡಬೇಕೆಂತ ಒಳ್ಳೇ ಸಲಹೆ ಕೊಟ್ಟರು. ಆದರೆ ಅದು ಯಾರಿಗೂ ಪಥ್ಯವಾಗಲಿಲ್ಲ. ನಾಥೇಖಾನನನ್ನ ಎದುರಿಸುವದಕ್ಕೋಸ್ಕರವೂ ಮತ್ತು ಝಾಸಿ ಪ್ರಾಂತ್ಯವನ್ನ ರಕ್ಷಣೆ ಮಾಡುವದಕ್ಕೋಸ್ಕರವೂ, ಸೈನ್ಯದಲ್ಲಿಟ್ಟದ್ದ ಹೊಸಜನಗಳು ಪೂರ್ವದಲ್ಲಿ ಸಂಸ್ಥಾನದಲ್ಲಿದ್ದವರನ್ನ, ಝಾಸಿ ಸರ್ಕಾರಕ್ಕೆ ಸೇರಿಸಿಕೊಳ್ಳುವ ಸಮಯದಲ್ಲಿ, ಇಂಗ್ರೇಜಿ ಸರ್ಕಾರದವರು ತೆಗೆದುಹಾಕಿದವರಾಗಿದ್ದರು. ಆದಕಾರಣ ಅವರ ಮನಸ್ಸಿನಲ್ಲಿ ಇಂಗ್ರೇಜಿ ಸರ್ಕಾರದವರ ಮೇಲೆ ಈರ್ಷ್ಯ ಬುದ್ಧಿ ಇದ್ದೇ ಇತ್ತು.* ಅವರಿಗೆ ಇಂಗ್ರೇಜಿಯವರ ಸೈನ್ಯವು ಝಾಸಿ ಸಮೀಪಕ್ಕೆ ಬಂದ ವರ್ತಮಾನವು ತಿಳಿದಕೂಡ್ಲೆ, ಏಕಪ್ರಕಾರವಾಗಿ ದ್ವೇಷ ಹುಟ್ಟಿ, ಇಂಗ್ರೇಜಿ ಸೈನ್ಯದ ಸಂಗಡ ಯುದ್ಧ ಮಾಡಬೇಕೆಂತ ನಿಶ್ಚಯಿಸಿದರು.

---

* ನೇಟಿವ್ ಸಂಸ್ಥಾನವನ್ನ ಸರ್ಕಾರಕ್ಕೆ ಸೇರಿಸಿ ಕೊಂಡದ್ದರಿಂದ, ಅಲ್ಲಿ ಸೈನ್ಯದ ಮನಸ್ಸು ಕೆಟ್ಟುಹೋಗಿತ್ತೆಂಬುವದು 1857 ನೇ ಇಸ್ವಿಯ ದಂಗೆಯಲ್ಲಿ ವಿಶೇಷವಾಗಿ ಕಣ್ಣಿಗೆ ಬಿತ್ತು. ಅಯೋಧ್ಯಾ ಪ್ರಾಂತ್ಯದಲ್ಲಿ ಅದೇರೀತಿಯಾಯಿತು; ಮತ್ತು ಝಾಸಿ ಸಂಸ್ಥಾನದ ಸ್ಥಿತಿಯೂ ಅದೇ ಆಯಿತು. ಸಂಸ್ಥಾನ ಸರಕಾರಕ್ಕೆ ಸೇರಿಸಿಕೊಂಡು ಸೈನ್ಯವುಮಾತ್ರ ಇದ್ದದ್ದು ಇದ್ದಹಾಗೆ ಇಟ್ಟವರ ಸ್ಥಿತಿಯು ಅದೇ ಆಯಿತು. ಯಾವಸಂಸ್ಥಾನದ ಸೈನ್ಯಕ್ಕೆ ನಿರಂತರ ವಿಶ್ರಾಂತಿಕೊಟ್ಟಿತ್ತೋ ಅದರ ಮನಸ್ಸು ಎಷ್ಟರ ಮಟ್ಟಿಗೆ ವಿರೋಧವಾಗಿತ್ತು ಎಂಬುವದನ್ನ ಹೇಳಬೇಕಾದ್ದಿಲ್ಲ. ಅಯೋಧ್ಯ ಪ್ರಾಂತ್ಯವನ್ನ ಸರ್ಕಾರಕ್ಕೆ ಸೇರಿಸಿಕೊಂಡ ವಿಷಯದಲ್ಲಿ ದಂಗೆಯಾಗುವದಕ್ಕಿಂತ ಪೂರ್ವ ಸರ್ ಹೆನ್ನರಿ ಲಾರೆನ್ಸ್ ಸಾಹೇಬನು ತನ್ನ ಅಭಿಪ್ರಾಯವನ್ನ ಬರೆದಿಟ್ಟದ್ದನು. ಅದರಲ್ಲಿ ಅವನು ಎಲ್ಲಾ ಸೈನ್ಯದ ವಿಷಯವಾಗಿಯೂ ಹೀಗೇಹೇಳಿರುತ್ತಾನೆ:—

"The Sepoy is not the man of consequence he was. He dislikes annexations—among other reasons,

ರಾಣಿಸಾಹೇಬಳು ಕೋಟೆಯಲ್ಲಿರುತ್ತಿದ್ದ ಕಾರಣ, ಆಕೆಯ ಸಮೀಪಕ್ಕೆ ಈ ಚತುರ ಪ್ರಧಾನಮಂಡಲಿಯ ವಿನಹ ಇತರರು ಯಾರಿಗೂ ಹೋಗುವದಕ್ಕೆ ಅಪ್ಪಣೆ ಇಲ್ಲದ್ದರಿಂದ ಅವಳಿಗೆ ಇಂಗ್ರೇಜಿ ಸರ್ಕಾರದವರ ಕಡೆ ವರ್ತಮಾನವೇನೂ ತಿಳಿಯುತ್ತಿರಲಿಲ್ಲ. ಮತ್ತು ಇಂಗ್ರೇಜಿಯವರ ಡೇರೆ ಮಧ್ಯದಲ್ಲಿಯೂ ರಾಣಿಸಾಹೇಬಳ ವರ್ತಮಾನವು ಸಿಕ್ಕುತ್ತಿರಲಿಲ್ಲ. ಅವರಿಗೆ ರಾಣೀಸಾಹೇಬಳ ನಿಜವಾದ ಸಮಾಚಾರವು ಕೊನೆಯವರಿಗೂ ತಿಳಿಯಲೇ ಇಲ್ಲ. ಕೆಲವರು ಇಂಗ್ರೇಜಿ ಸೈನ್ಯದಿಂದ ರಾಣಿಸಾಹೇಬಳಿಗೆ, ಈ ರೀತಿಯಾದ ಪತ್ರವು ಬಂದಂತೆ ಹೇಳುತ್ತಾರೆ:—"ತಾವು ಸ್ವತಃ ದಿವಾನ್ ಲಕ್ಷ್ಮಣರಾವ್, ಲಾಲೂ ಭಾವೂ ಭಕ್ಷೀಮುಂತಾದ ಅಷ್ಟಪ್ರಧಾನಿಗಳ ಸಹಿತ ನಿಶ್ಶಸ್ತ್ರವಾಗಿ ಬಂದು, ನಮಗೆ ದರ್ಶನಕೊಡಬೇಕು." ಪರಂತು, ಈ ಮಾತು ಸ್ವಾಭಿಮಾನವುಳ್ಳ ರಾಣೀ ಸಾಹೇಬಳಿಗೆ ಸಹಿಸದೇ ಯುದ್ಧಕ್ಕೆ ಪ್ರಾರಂಭ ಮಾಡಿದಳು. ಕೆಲವರು, ರಾಣೀಸಾಹೇಬಳು ಮತ್ತು ಆಕೆಯ, ಸರದಾರುಗಳು ಸಹ ದಂಗೇಖೋರರಿಗೆ ಸಹಕಾರಿಗಳಾಗಿದ್ದಾರೆ ಎಂಬದಾಗಿ ಇಂಗ್ರೇಜಿಯವರು ತಿಳುಕೊಂಡು, ಅವರು ಆಕೆಯನ್ನು ಹಿಡಿದು ಸೆರೆಮನೆಯಲ್ಲಿಡಬೇಕೆಂತ ನಿಶ್ಚಯ ಮಾಡಿದರು. ಈ ವರ್ತಮಾನವು ರಾಣಿಸಾಹೇಬಳಿಗೆ ತಿಳಿದಕೂಡಲೆ, ಕವಿ ಮೋರೋಪಂತನು ಹೇಳಿರುವ ಪ್ರಕಾರ:—

ಆರ್ಯಾರ್ಧ.

ಮರಣರುಚೆ ವೀರಾಲಾ, ನರುಚೆಕ್ಷಣಮಾತ್ರ ಅಪಯಶೀಮಳಣೀ॥
(ಶೂರರಿಗೆ ಒಂದು ಕ್ಷಣವಾದರೂ ಅಪಯಶಸ್ಸಿನ ಕಲೆ ಸೇರುವದಕ್ಕಿಂತಲೂ
ಮರಣವೆ ಉತ್ತಮವು.)

ಇಂಥಾ ಕ್ಷತ್ರಿಯ ಧರ್ಮವನ್ನನುಸರಿಸಿ, ಆಕೆಯು ದೀನಳಾಗಿ ಇಂಗ್ರೇಜಿಯವರಿಗೆ ಶರಣಾಗದೇ ತನ್ನ ಶಸ್ತ್ರವನ್ನು ಕೈಯಲ್ಲಿ ಧರಿಸಿದಳು; ಮತ್ತು ಇವತ್ತಿನ ಪರ್ಯಂತರ

---

because each new province added to the Empire widens his sphere of service, and at the same time decreases our foreign enemies, and thereby the Sepoy's importance. The other day an old Sepoy of the Bombay Cavalry at Neemuch being asked if he liked annexation, replied, 'No!' I used to be a great man when I went home; the best in the Village rose as I approached; now the lowest puff their pipes in my face."

*Kaye's Lives of Indian Officers. Vol. P.* 216.

ತೋರಿಸಿದ ರಾಜನಿಷ್ಟತೆಯು ಸರಿಬೀಳುವದಿಲ್ಲವೆಂತ ತಿಳಿದು ಬಹಳ ದುಃಖ ಮತ್ತು ಸಂತಾಪ ಮನಸ್ಸಿನಿಂದ, ಶೀಘ್ರದಲ್ಲಿ ತನ್ನ ಹಗೆಯನ್ನು ತೀರಿಸಿಕೊಳ್ಳಲು ಮನಸ್ಸಿನಲ್ಲಿ ನಿಶ್ಚಯಿಸಿ ಕೊಂಡಳು; ಎಂತ ಹೇಳುತ್ತಾರೆ. ಕೆಲವರು, ಇಂಗ್ರೇಜಿಯವರ ಸೈನ್ಯವು ಝಾಸೀಸಮೀಪಕ್ಕೆ ಬಂದ ವರ್ತಮಾನವು ಝಾಸಿಯಲ್ಲಿ ತಿಳಿದಾಗ ಅಲ್ಲಿನ ಜನಗಳು ಈ ಸೈನ್ಯವು ನಾಥೇಖಾನ್‌ನದಾಗಿದೆ. ಅವರ ಮುಖಕ್ಕೆ ಬಣ್ಣವನ್ನು ಹಚ್ಚಿ, ಬೇರೆಬಟ್ಟೆ ಧರಿಸಿಕೊಂಡು ಝಾಸಿಯನ್ನ ತೆಗೆದು ಕೊಳ್ಳಲು ಪುನಃ ಬಂದಿದ್ದಾರೆಂತ, ಅಭಿಪ್ರಾಯ ಕೊಟ್ಟರು. ಆ ತಿಳುವಳಿಕೆಯ ಮೇಲೆ, ಅವರಸಂಗಡ ಯುದ್ಧ ಮಾಡುವದಕ್ಕೆ, ಝಾಸಿ ದರ್ಬಾರಿನಿಂದ ಅಪ್ಪಣೆ ಹುಟ್ಟಿತುಎಂತ ಹೇಳುತ್ತಾರೆ. ಕೆಲವರು ಝಾಸೀಗೆ, ಕಾಯುವದಕ್ಕೆ ಬಂದಿದ್ದ ಇಂಗ್ರೇಜಿ ಸವಾರರಮೇಲೆ ಕೋಟೆಯಲ್ಲಿನ ಜನಗಳು ಗುಂಡುಬಿಟ್ಟರು. ಆದಕಾರಣ ಯುದ್ಧಕ್ಕೆ ಪ್ರಾರಂಭವಾಯಿತು; ಮತ್ತು ಇಂಗ್ರೇಜಿ ಸೈನ್ಯದವರು ಕೇಳಲಿಲ್ಲ ವೆಂಬುವದನ್ನು ನೋಡಿ, ರಾಣಿಸಾಹೇಬಳಿಗೆ, 'ವಿನಾಶಕಾಲೆ ವಿಪರೀತಬುದ್ಧಿಃ,' ಎಂತ ಆಗಿ ಆಕೆಯು ಯುದ್ಧಕ್ಕೆ ಅಪ್ಪಣೆ ಮಾಡಿದಳು. ಆ ಸಮಯದಲ್ಲಿ ಠಾಕೂರ ಜನಗಳು, ಇಂಗ್ರೇಜಿಯವರ ಮುಂದೆ ತಮ್ಮ ದೇನೂ ಸಾಗುವದಿಲ್ಲ; ಆದ್ದರಿಂದ, ಅವರಲ್ಲಿ ವಿರೋಧ ಬೆಳೆಸುವದು ನಮಗೆ ಇಷ್ಟ ವಿಲ್ಲವೆಂತ ಹೇಳಿದರು; ಮತ್ತು ಬಾಣಪುರದ ರಾಜನು ಮಾಲ್ಥೋನದ ಯುದ್ಧದಲ್ಲಿ ತನಗೆ ಯಶಸ್ಸು ಬರಲಿಲ್ಲ ವೆಂತ ಹೇಳಿದನು. ಆದರೆ ಅದು ಏನೂ ಉಪಯೋಗಕ್ಕೆ ಬರಲಿಲ್ಲವೆಂತ ಹೇಳುತ್ತಾರೆ. ಕೆಲವರು, ರಾಣಿಸಾಹೇಬಳು ರಾಜಿಮಾಡಿಕೊಳ್ಳುವದಕ್ಕೋಸ್ಕರ, ಇಂಗ್ರೇಜಿಯವರ ಕಡೆಗೆ, ಯಾರೋ ಒಬ್ಬ ಸರದಾರನನ್ನು ಕಳುಹಿಸಿಕೊಟ್ಟಳು. ಆದರೆ ಅದು ಏನೂ ಉಪಯೋಗಕ್ಕೆ ಬಾರದೇ ಹೋಗಿ ಅವರು ಆತನನ್ನು ಗಲ್ಲಿಗೆಹಾಕಿದರು. ಆದಕಾರಣ, ಪರಸ್ಪರವಾಗಿ ಮನಸ್ಸು ಶುದ್ಧವಾಗಿಲ್ಲವೆಂತ ತೋರಿಬಂದು, ಯುದ್ಧಕ್ಕೆ ಪ್ರಾರಂಭವಾಯಿತೆಂತ ಹೇಳುತ್ತಾರೆ. ತಾತ್ಪರ್ಯವೇನಂದರೆ, ಆಸಮಯದಲ್ಲಿ ಈ ಸಮ್ಮಂಧವಾಗಿ ಹ್ಯಾಗೆ ನಡೆಯಿತು ಎಂಬುವದರ ನಿಜವಾದ ಕಾರಣವು ತಿಳಿಯಬರುವದಿಲ್ಲ; ಮತ್ತು ಅದನ್ನು ತಿಳುಕೊಳ್ಳುವದಕ್ಕೆ ಮಾರ್ಗವೇನೂ ಇಲ್ಲ; ತಥಾಪಿ, ಝಾಸಿಯು ದಂಗೇಖೋರರಿಗೆ ಆಶ್ರಯಸ್ಥಾನವಾಗಿದೆ ಮತ್ತು ಅಲ್ಲಿನ ರಾಣಿಸಾಹೇಬಳು ತಮಗೆ ವಿರುದ್ಧವಾಗಿದ್ದಾಳೆ ಎಂತ ಇಂಗ್ರೇಜಿ ಅಧಿಕಾರಿಗಳಿಗೆ ತಪ್ಪು ತಿಳುವಳಿಕೆ ಹುಟ್ಟಿ, ಅವರು ಝಾಸಿಮೇಲೆ ದಂಡೆತ್ತಿ ಹೋದರು; ಮತ್ತು ಝಾಸಿ ದರ್ಬಾರಿನಲ್ಲಿನ ಮುತ್ಸದ್ದಿಗಳ ರಾಜಕಾರ್ಯದ ಅಜ್ಞಾನತೆಯಿಂದಲೂ ಮತ್ತು ಅಲ್ಲಿನ ಸೈನ್ಯದ ಅಂತರಂಗ ದ್ವೇಷದಿಂದಲೂ ಸರ್ವಪ್ರಕಾರದಲ್ಲಿಯೂ ತೊಡಕುಬಿದ್ದು, ತಪ್ಪುತಿಳುವಳಿಕೆ ಹುಟ್ಟಿ, ರಾಣಿಸಾಹೇಬಳಿಗೆ ಕೃಪಾಳು ಇಂಗ್ರೇಜಿ ಸರ್ಕಾರದವರ ಸಂಗಡ ಯುದ್ಧಮಾಡಬೇಕಾದ ಪ್ರಸಂಗಬಂತು. ಇದು ಅತ್ಯಂತದುಃಖಕರವಾದ ಮಾತಾಗಿದೆ. ನಿಜವಾಗಿ, ಅಂಥಾಪ್ರಸಂಗ ಬಾರದೇ, ರಾಣಿಸಾಹೇಬಳಿಗೆ ಬ್ರಿಟಿಷ್ ಸರ್ಕಾರದವರಲ್ಲಿದ್ದ ರಾಜನಿಷ್ಟತೆ ಮತ್ತು ಪ್ರೇಮಭಾವವು

ಸಹ ವ್ಯಕ್ತಪಟ್ಟಿದ್ದರೆ, ಆಕೆಗೆ ಬ್ರಿಟಿಷ ಸರ್ಕಾರದವರ ಕಡೆಯಿಂದ ಎಷ್ಟು ಸನ್ಮಾನವಾಗುತ್ತಿತ್ತು* !

ಆದರೆ ಯಾವದು ನಡೆಯಲೇಬೇಕೋ ಅದರ ಮುಂದೆ ಉಪಾಯವಿಲ್ಲ !! ಒಬ್ಬ ಸಂಸ್ಕೃತ ಕವಿಯು ಹೀಗೆ ಹೇಳಿದ್ದಾನೆ:—

'ಲಿಖಿತಮಪಿ ಲಲಾಟೆ ಪ್ರೋಜ್ಝಿತುಂ ಕಃ ಸಮರ್ಥಃ'
(ಹಣೆಯಲ್ಲಿ ಬರೆದಿದ್ದನ್ನು ಅಳಿಸುವದಕ್ಕೆ ಯಾರು ಸಮರ್ಥರು ?)

---

* ಡಾಕ್ಟರ್ ಲೋ ಸಾಹೇಬನು ಇಂಗ್ರೇಜಿ ಗೃಹಸ್ಥನಾಗಿದ್ದ ಕಾರಣ ಪ್ರಾರಂಭದಿಂದಲೂ, ರಾಣಿಸಾಹೇಬಳು, ದಂಗೇಖೋರರಿಗೆ ಸಹಕಾರಿಯಾಗಿದ್ದಾಳೆಂತ ಆತನ ತಿಳುವಳಿಕೆಯಾಗಿತ್ತು; ಆದರೆ, ಆತನು ರಾಣಿಸಾಹೇಬಳು, ಇಂಗ್ರೇಜಿ ಸೈನ್ಯದ ಎದುರು ನಿಲ್ಲಲು ಉದ್ಯುಕ್ತಳಾದದ್ದನ್ನು ನೋಡಿ ಹೇಳಿರುವದೇನಂದರೆ:—

"This she well knew, and—not one iota undaunted—prepared a commensurate resistance. *Such as one, indeed, as would have shed honour and fame upon the name of any princess*, whose hands were unstained by the blood of the innocent and un-offending."

*Central India P.* 237.



# ೧೦ನೇ ಪ್ರಕರಣ.

## ಝಾರ್ನ್ಸಿಗೆ ಮುತ್ತಿಗೆಹಾಕಿದ್ದು ಮತ್ತು ತಾತ್ಯಾಟೋಪಿಸಂಗಡ ಯುದ್ಧ.

ಝಾರ್ನ್ಸಿ ಕೋಟೆಯು ಬಹಳ ಪುರಾತನವಾಗಿಯೂ ಮತ್ತು ಬಲವಾಗಿಯೂ ಇದ್ದು, ಪಟ್ಟಣದ ಪಶ್ಚಿಮದಿಕ್ಕಿಗೆ, ಒಂದು ಸಣ್ಣ ಗುಡ್ಡದಮೇಲೆ ಕಟ್ಟಲ್ಪಟ್ಟದ್ದಾಗಿದೆ. ಅದು ಮೊದಲೇ ಸ್ವಭಾವತಃ ಗುಡ್ಡವಾಗಿದ್ದು, ಅದರಮೇಲೆ, ಶಾಶ್ವತವಾಗಿರತಕ್ಕಂಥಾ ಬಲವಾದ ಸುಣ್ಣದ ಕೆಲಸವನ್ನ ಮಾಡಿದ್ದಕಾರಣ; ಅದು ಬಹಳ ಭದ್ರವಾಗಿತ್ತು. ಕೋಟೆಯ ಸುತ್ತಲೂ, 16 ಹೆಜ್ಜೆಯಿಂದ 20 ಹೆಜ್ಜೆಗಳ ಪರ್ಯಂತರ ಅಗಲವಾದ ಗೋಡೆಯಿದ್ದಕಾರಣ, ಅದರಮೇಲೆ ಬೇಕಾದಷ್ಟು ತೋಫುಗಳನ್ನ ತೆಗೆದುಕೊಂಡು ಹೋಗಬಹುದಾಗಿತ್ತು. ಆ ಗೋಡೆಯಲ್ಲಿ, ತೋಫು ಹೊಡೆಯುವಗೋಸ್ಕರ ಮಾಡಿದ ಅನೇಕ ದ್ವಾರಗಳು ಮತ್ತು ದೊಡ್ಡ ದೊಡ್ಡ ಬುರುಜುಗಳೂ ಸಹ ಇದ್ದವು. ಆ ಬುರುಜುಗಳ ಮಧ್ಯದಲ್ಲಿ ಗರಗಂಜ್ ಯೆಂಬ ಒಂದು, ನಾಲ್ಕು ಮೂಲೆಗಳ ಬುರುಜು ಇತ್ತು. ಅದು 40 ಮೊಳ ಉದ್ದ, ಮತ್ತು ಅಷ್ಟೇಮೊಳ ಅಗಲ ಇದ್ದದ್ದಲ್ಲದೆ ಅದರ ಮೇಲಿನ ಭಾಗವು ಬಹಳ ಎತ್ತರವಾಗಿ, ಕೈ ಇಟ್ಟರೆ ಜಾರುವಹಾಗೆ ಇತ್ತು. ಅದರ ನಾಲ್ಕು ಮೂಲೆಗಳಲ್ಲಿಯೂ ತೋಫುಗಳು ಇಡಲ್ಪಟ್ಟದ್ದವು. ಅದರ ಮಧ್ಯಭಾಗ ದಲ್ಲಿ, ಝಾರ್ನ್ಸಿ ಸುಭೇದಾರ್ ರಾಮಚಂದ್ರರಾಯನು ಬ್ರಿಟಿಷ್ ಸರ್ಕಾರದವರಕಡೆಯಿಂದ ಸಂಪಾದಿಸಿಕೊಂಡಿದ್ದ, 'ಯೂನಿಯನ್‌ಜಾಕ್' ಎಂಬ ನಿಶಾನೆಯು ಘಾಳಿಗೆ ಹಾರು ತ್ತಿತ್ತು. ಕೋಟೆಯ ಮಧ್ಯದಲ್ಲಿ, ಅಲ್ಲಲ್ಲಿ ಪ್ರಚಂಡವಾದ ತೋಫುಗಳನ್ನು ಇಟ್ಟಿ ದ್ದರು. ಅದರ ಒಟ್ಟು ಸಂಖ್ಯೆ 51. ಅದರಲ್ಲಿ, ಭವಾನಿಶಂಕರ್, ಖಡಕ್ ಬಿಜಿಲಿ, ಘನಗರ್ಜ್, ನಾಲದಾರ್ ಮುಂತಾದ ಹೆಸರುವಾಸಿಯಾದ ತೋಫುಗಳು ಅಸಂಖ್ಯಾಕ ವಾದ ಶತೃಗಳನ್ನ ಸಂಹಾರಮಾಡಲು ಪೂರ್ಣ ಸತ್ವವುಳ್ಳವಳಾಗಿದ್ದವು. ನಮ್ಮೇರ್ಖಾ ಯುದ್ಧವನ್ನಾರಂಭಿಸಿಕೊಂಡು ಮಹಾರಾಣಿ ಲಕ್ಷ್ಮೀಬಾಯಿ ಸಾಹೇಬಳು, ಆ ಎಲಾ ತೋಫುಗಳ ವ್ಯವಸ್ಥೆಯನ್ನ ಒಳ್ಳೇ ರೀತಿಯಿಂದ ಇಟ್ಟಿದ್ದಳು. ಕೋಟೆಯಲ್ಲಿ ಸ್ಥಳವು ವಿಸ್ತೀರ್ಣವಾಗಿದ್ದದ್ದರಿಂದ, ಅಲ್ಲಲ್ಲಿ ನೀರಿನ ಕೊಳಗಳನ್ನು ಮಾಡಿದ್ದರು. ಸರ್ಕಾರದ ಮುಖ್ಯವಾದ ಅರಮನೆ ಅಲ್ಲಿಯೇ ಇತ್ತು. ಉದ್ಯೋಗಸ್ಥರ ಮನೆ ಗಳು ಅರಮನೆಯ ಸಮೀಪದಲ್ಲಿಯೇ ಯಿದ್ದವು. ಅರಮನೆಯಲ್ಲಿ, ದೊಡ್ಡ ದೊಡ್ಡ ನೆಲಮಾಳಿಗೆ ಮನೆಗಳು ಇದ್ದು, ಅದರಲ್ಲಿ 100, 200 (ನೂರು, ಇನ್ನೂರು) ಜನ

ಗಳು ಇರುವಹಾಗೆ, ಅನುಕೂಲಪಡಿಸಿತ್ತು. ಕೋಟೆಯೊಳಗೆ ಶತ್ರುಗಳ ಪ್ರವೇಶವಾಗದಹಾಗೆ, ಅದರ ಸುತ್ತಲೂ, ದೊಡ್ಡ ಕಂದಕವು ತೆಗೆಯಲ್ಪಟ್ಟಿತ್ತು. ತಾತ್ಪರ್ಯವೇನಂದರೆ, ಕೋಟೆಯೊಳಗೆ ಎಲ್ಲಾ ವ್ಯವಸ್ಥೆಗಳೂ ಉತ್ತಮವಾಗಿದ್ದ ಕಾರಣ, ಯುದ್ಧ ಕಾರ್ಯಕ್ಕೆ ಬಹಳ ಉಪಯೋಗವಾಗಿತ್ತು. ಕೋಟೆಯ ನೈರುತ್ಯದಿಕ್ಕಿನ ಮೂಲೆಯಿಂದ, ದಕ್ಷಿಣಭಾಗದಲ್ಲಿ ಪೂರ್ವಕಡೆವರಿಗೂ ಮತ್ತು ವಾಯುವ್ಯದಿಕ್ಕಿನ ಮೂಲೆಯಿಂದ, ಉತ್ತರಪಾರ್ಶ್ವದಲ್ಲಿ ಪಶ್ಚಿಮದಿಕ್ಕಿನ ವರೆಗೂ ಪಟ್ಟಣದ ಗೋಡೆಯು ಹೋಗಿತ್ತು. ಅದು ಉದ್ದವಾಗಿಯೂ, ಅಗಲವಾಗಿಯೂ ಇದ್ದು, ಚನ್ನಾಗಿಯೂ ಮತ್ತು ಬಲವಾಗಿಯೂ ಇತ್ತು. ಅದಕ್ಕೂನೂ, ಕೋಟೆಯ ಗೋಡೆಗಳಹಾಗೆಯೇ, ಅಲ್ಲಲ್ಲಿ ಬಳ್ಳೇ ಬುರುಜುಗಳು ಇದ್ದು, ಅದರಮೇಲೆ ತೋಪುಗಳನ್ನಿಟ್ಟಿದ್ದರು. ಅದಕ್ಕೆ ಆನೆಯಮೇಲೆ ಅಂಬಾರಿಯನ್ನು ಹಾಕಿಕೊಂಡು ಹೋಗುವಹಾಗೆ, 5 ದೊಡ್ಡ ದೊಡ್ಡ ಬಾಗಲುಗಳಿದ್ದವು. ಕೋಟೆಯ ಪೂರ್ವದಿಕ್ಕಿನ ಗೋಡೆಯೊಳಗೆ, ಬಂದು ಪಕ್ಕದಲ್ಲಿ ಬಂದು ವಿಸ್ತೀರ್ಣವಾದ ಬಯಿಲಾದ ಜಾಗವಿತ್ತು. ಅದರ ಆಚೇಕಡೆಗೆ ಪಟ್ಟಣವು ಪ್ರಾರಂಭವಾಗಿತ್ತು. ಪಟ್ಟಣದ ಸುತ್ತಳತೆ $4\frac{1}{2}$ ಮೈಲಿಗಳಿದ್ದು, ಅದು ಈ ಬಲವಾದ ಗೋಡೆಗಳ ಯೋಗದಿಂದ, ಬಳ್ಳೇ ಶೋಭಾಯಮಾನವಾಗಿತ್ತು. ಕೋಟೆಯ ಪೂರ್ವದಿಕ್ಕಿಗೆ, ಹೊರಗಿನ ಪಕ್ಕದಲ್ಲಿ, ಸುಂದರವಾದ ಕೊಳಗಳು ಮತ್ತು ಹುಣಸೇ ಮರಗಳೂ ಸಹ ಪುಷ್ಕಳವಾಗಿದ್ದವು. ಅದರ ದಕ್ಷಿಣದಿಕ್ಕಿನಲ್ಲಿ ಸರ್ 1857 ನೇ ಇಸವಿ ಜೂನ್ ತಿಂಗಳಲ್ಲಿ ದಂಗೇಖೋರ ಜನಗಳು ಸಂಹಾರಮಾಡಿದ ಯುರೋಪಿಯನ್ ಜನಗಳ ಬಂಗಲೆಗಳಿದ್ದು, ಅಲ್ಲಿಯೇ ಇಂಗ್ರೇಜಿ ಸೈನ್ಯದ ಕಂಟೋನ್ಮೆಂಟಿತ್ತು.

ಇಂಗ್ರೇಜಿ ಸೈನ್ಯವು ಝಾಂಸಿಯಮೇಲೆ ಬೀಳಲು, ಪಟ್ಟಣದ ಸಮೀಪಕ್ಕೆ ಬಂದು ಇಳಿದಿದೆ ಎಂಬ ಸಮಾಚಾರವು, ಝಾಂಸಿಗೆ ಬಂದು ತಲ್ಪಿತು. ಆ ಸಮಯದಲ್ಲಿ ರಾಣೀಸಾಹೇಬಳ, ಕಾರಭಾರೀ ಮತ್ತು ಇತರ ಮಂತ್ರಿಮಂಡಲಿಯು, ಪೂರ್ವಾಪರ ವಿಚಾರ ಶೂನ್ಯತೆ ಯಿಂದಲೋ ಅಥವಾ ಇನ್ನ್ಯಾವಕಾರಣದಿಂದಲೋ, ರಾಣಿಸಾಹೇಬಳಿಗೆ ಇಂಗ್ರೇಜಿ ಸೈನ್ಯದ ಉದ್ದೇಶ್ಯವು ಸರಿಯಾಗಿ ತಿಳಿಯಲಿಲ್ಲ. ಮತ್ತು ಇಂಗ್ರೇಜಿ ಸೈನ್ಯದ ಅಧಿಕಾರಿಗಳಾದ ಸರ್‌ಹ್ಯೂರೋಜ್ ಮತ್ತು ಸರ್ ರಾಬರ್ಟ್ ಹ್ಯಾಮಿಲ್ಟನ್ ಸಾಹೇಬರುಗಳಿಗೆ, ರಾಣೀಸಾಹೇಬಳ ತುಂಬಾ ರಾಜನಿಷ್ಠಾ ಮತ್ತು ಹಿತಚಿಂತನೆಯ ಮನಸ್ಸು, ಮೂಲತಃ ತಿಳಿಯ ಬರಲಿಲ್ಲವಾದಕಾರಣ, ಪರಸ್ಪರ ತಪ್ಪು ತಿಳುವಳಿಕೆ ಹುಟ್ಟಿ, ಯುದ್ಧಕ್ಕೆ ಸನ್ನದ್ಧರಾದರು. ರಾಣಿಸಾಹೇಬಳು ಝಾಂಸಿಪ್ರಾಂತ್ಯದ ಸಂರಕ್ಷಣೆಗೋಸ್ಕರ, ಇಟ್ಟಿದ್ದ ಸೈನ್ಯದವರು ಬಹಳಮಟ್ಟಿಗೆ, ಅರಾಜನಿಷ್ಠೆಯುಳ್ಳವರಾಗಿದ್ದು, ಇಂಗ್ರೇಜಿ ಸರ್ಕಾರದವರ ವಿಷಯದಲ್ಲಿ, ಅವರಮನಸ್ಸಿನಲ್ಲಿ ಈರ್ಷ್ಯ ಭಾವವಿತ್ತು. ಅವರಿಗೆ ಚಂದೇರಿಯಿಂದ ಓಡಿಬಂದ ದಂಗೆಖೋರ ಜನಗಳು ಬಳ್ಳೇ ಪ್ರೋತ್ಸಾಹ ಕೊಟ್ಟಕಾರಣ, ವಿಶೇಷ ಈರ್ಷ್ಯ ಎದ್ದು, ಯುದ್ಧ ಮಾಡುವದಕ್ಕೆ ಉದ್ಯುಕ್ತರಾದರು. ಅದರಲ್ಲಿ, ಅವರಿಗೆ ರಾಣಿಸಾಹೇಬಳ ಅನುಕೂಲ

ಶಿಕ್ಷಿಸುತ್ತಲೆ, ಬಹಳ ಪ್ರೋತ್ಸಾಹವು ಸಿಕ್ಕಿ, ಬಹುತ್ವರೆಯಿಂದ ಯುದ್ಧಸನ್ನಾಹಗಳನ್ನು ನಡಸಿದ್ದರು.

ರಾಣಿಸಾಹೇಬಳು ಸ್ವತಃ, ಜಾತಿಯಲ್ಲಿ ಸ್ತ್ರೀಯಾಗಿದ್ದಾಗ್ಯೂ, ಅವಳಲ್ಲಿ ಅಸಮಾನವಾದ ಧೈರ್ಯವು ಮತ್ತು ಅಸದೃಶವಾದ ಸ್ವಾಭಿಮಾನವೂ, ಮತ್ತು ಅಲೌಕಿಕವಾದ ಧೃಡಮನಸ್ಸು ಮುಂತಾದ ಗುಣಗಳು, ಸಂಪೂರ್ಣವಾಗಿ ವಾಸವಾಗಿದ್ದವು. ನಡೇ ಝಾನ ಯುದ್ಧ ಪ್ರಸಂಗದಲ್ಲಿ, ಆಕೆಯು ಸ್ವಲ್ಪವೂ ಧೈರ್ಯಗುಂದದೆ, ತನ್ನ ಗುಣಗಳನ್ನ ಸ್ಪಷ್ಟವಾಗಿ ತೋರಿಸಿ ಸರ್ವರಿಗೂ, ವಿಸ್ಮಯವಾಗುವಂತೆ ಮಾಡಿಬಿಟ್ಟಿದ್ದಳು. ಅವಳಿಗೆ ಇತಿಹಾಸ ಪ್ರಸಿದ್ಧವಾದ, ಮನೆತನದ ಅಭಿಮಾನವು ತುಂಬಾ ಇದ್ದು, ಸ್ವತಃ ತಾನು, “ಶಿವರಾಂಭಾವೂನ ಸೊಸೆ” ಎಂತ ಹೆಸರುವಾಸೀ ತೆಗದುಕೊಳ್ಳುವದು ತನಗೆ ಬಹಳ ಭೂಷಣವೆಂತ ತಿಳುಕೊಂಡಿದ್ದಳು. ಆಕೆಯು ಸ್ವಭಾವತಃ ಅತ್ಯಂತ ತೇಜಸ್ವಿನಿಯಾಗಿಯೂ ಮತ್ತು ಸ್ವಾಭಿಮಾನಿಯಾಗಿಯೂ ಇದ್ದ ಕಾರಣ, ಆಕೆಗೆ ಅಪಮಾನವಾದರೆ, ಸಲ್ಪವೂ ಸಹನವಾಗುತ್ತಿರಲಿಲ್ಲ. ಇಂಗ್ರೇಜಿ ಸರ್ಕಾರದವರ ಸಂಗಡ, ಸತ್ಯದಿಂದ ತಾನು ನಡಕೊಂಡಾಗ್ಯೂ, ಕಡೆಗೆ ಅವರು ತನ್ನಮೇಲೆ ಎದ್ದಿದ್ದಾರೆ. ಇಷ್ಟೇ ಅಲ್ಲದೆ, ಝಾಂಸಿಮೇಲೆ ಬಿದ್ದು, ತನ್ನನ್ನ ನಿಶ್ಚಯವಾಗಿ ಶೆರೆಮನೆಯಲ್ಲಿಡುವವರಾಗಿದ್ದಾರೆಂತ ಆಕೆಯಮನಸ್ಸಿನಲ್ಲಿ ನಂಬಿಕೆ ಹುಟ್ಟಿದಕೂಡ್ಲೆ, ‘ಈ ತಪ್ಪುತಿಳುವಳಿಕೆ ಯಿಂದಲೂ, ಮತ್ತು ಮಂತ್ರಿಮಂಡಲಿಯವರ ಅವಿವೇಕಬೋಧನೆ ಯಿಂದಲೂ, ಆಗಿರಬಹುದು,’ ಆಕೆಯು ‘ಕ್ಷಣವಿಧ್ವಂಸಿನಿಯೋ ಏನೋ, ರಣದಲ್ಲಿ ಸಾಯುವದಕ್ಕೆ ಚಿಂತೆಏಕೆ’ ಎಂತ ವಿಚಾರಮಾಡಿ, ತನ್ನ ಕ್ಷತ್ರಿಯ ಕುಲಕ್ಕೆ ದೋಷಬಾರದಂತೆ, ಪ್ರಯತ್ನಮಾಡಿದ್ದು, ಕೇವಲ ಸಹಜವಾಗಿದೆ ಇದುಹಾಗಿರಲಿ. ಇಂಗ್ರೇಜಿಸೈನ್ಯದ ಸಂಗಡ ಯುದ್ಧಮಾಡುವದಕ್ಕೆ, ಈ ಪ್ರಕಾರವಾಗಿ ರಾಣೀಸಾಹೇಬಳು ನಿಶ್ಚಯಮಾಡಿದಮೇಲೆ, ಅವಳು ತನ್ನ ಸೈನ್ಯದ ವ್ಯವಸ್ಥೆಯನ್ನೆಲ್ಲಾ ಸರಿಪಡಿಸುವದಕ್ಕೆ ಆರಂಭಿಸಿದಳು. ಅವಳಸೈನ್ಯದಲ್ಲಿ ಅನೇಕ ವಿಲಾಯತೀ ಅಫ಼ಗಾನ ಜನಗಳೂ ಮತ್ತು ಬುಂದೇಲೆ ಜನಗಳು ಸಹ ಬಹಳಶೂರರು ಇದ್ದರು. ಆದರೆ ಆ ಯೆಲ್ಲಾ ಸೈನ್ಯಕ್ಕೂ, ಯುದ್ಧ ಶಿಕ್ಷಾ ಚನ್ನಾಗಿಲ್ಲದ್ದರಿಂದ, ಅವ್ಯವಸ್ಥೆ ಬಹಳವಾಗಿತ್ತು. ಕೋಟೆಯ ಗೋಡೆಗಳಮೇಲೆ ಸ್ವತಃ ಮೇಲೆ ವಿಚಾರಣೆಮಾಡಿ, ಅದನ್ನು ಚನ್ನಾಗಿ ಸರಿಪಡಿಸಿದಳು. ಮತ್ತು ಎಲ್ಲಾ ಬುರಜಿನಮೇಲೆ ವ್ಯೂಹಗಳನ್ನ ಕಟ್ಟಿ, ಗುರಿಗೆಸರಿಯಾಗಿ ತೋಫುಗಳನ್ನಿಡಿಸಿದಳು ಮತ್ತು ಅದರಮೇಲೆ ಬಳ್ಳೇ ತಿಳುವಳಿಕೆಯುಳ್ಳ ಸೈನ್ಯವನ್ನ ನೇಮಿಸಿದಳು. * ಪಟ್ಟಣದ ಗೋಡೆಯ ಮೇಲೆ, ಅಲ್ಲಲ್ಲಿ ಕಡದು

---

* ಸರ್ ಹ್ಯೂರೋಜ್ ಸಾಹೇಬನು ಹೇಳಿರುವದೇನಂದರೆ;— ಕೋಟೆಯನ್ನು ಭದ್ರಪಡಿಸಿಕೊಂಡು, ಯುದ್ಧದ ಸಿದ್ಧತೆ ಮಾಡುವ ಕೆಲಸವನ್ನ ಹೆಂಗಸರು ಮಾಡುತ್ತಿದ್ದರು. ಆತನು ಹೀಗೆ ಹೇಳುತ್ತಾನೆ:—

ಸ್ಥಳಗಳನ್ನ ಮಾಡಿ, ಶಿಪಾಯಿಗಳನ್ನ ನಿಲ್ಲಿಸಿದಳು. ಝಾಁಸಿಸಂಸ್ಥಾನದ, ಉತ್ತಮ ಕುಲೋತ್ಪನ್ನರಾದ, ವಿಶ್ವಾಸಿಗಳಾದ ಮತ್ತು ದಕ್ಷರಾದ ಠಾಕೂರ್ ಮತ್ತು ಬುಂದೇಲೆ ಸರದಾರರುಗಳನ್ನ ಸೇರಿಸಿಕೊಂಡು, ಅವರಕಡೆಗೆ ತನ್ನ ಸೈನ್ಯವನ್ನ ಕೆಲವು ಭಾಗಮಾಡಿ, ಹಂಚಿ ಕೊಟ್ಟಳು; ಮತ್ತು ಅಲ್ಪಕಾಲದಲ್ಲಿಯೇ, ಝಾಁಸಿ ಪಟ್ಟಣವನ್ನು ಮತ್ತು ಕೋಟೆಯನ್ನು ಸಹ ಬಹಳ ಚಾತುರ್ಯದಿಂದ ಉತ್ತಮಪ್ರಕಾರವಾಗಿ ಭದ್ರಪಡಿಸಿದಳು. †

ಇತ್ತಲಾಗಿ ಇಂಗ್ರೇಜಿ ಸೇನಾಧಿಪತಿ ಸರಹ್ಯೂರೋಜ್ ಸಾಹೇಬನು ಮಾರ್ಚ್ ತಾರೀಖು 21 ನೇ ದಿವಸ ಸಾಯಂಕಾಲವವರೆಗೆ, ಝಾಁಸಿಕೋಟೆ ಮತ್ತು ಪಟ್ಟಣಾವನ್ನ ಸೂಕ್ಷ್ಮದೃಷ್ಟಿಯಿಂದ ನೋಡಿಕೊಂಡು ಬಂದು, ಹೊಡೆಯುವದಕ್ಕೆ ನಿಲ್ಲುವ ಸ್ಥಳವನ್ನು ಹುಡುಕಿ ತೆಗೆದು, ಅಲ್ಲಿ ತನ್ನ ಸೈನ್ಯವನ್ನು ಮತ್ತು ತೋಫುಗಳನ್ನು ಇಡಿಸುವದಕ್ಕೆ ಉದ್ಯುಕ್ತನಾದನು. ಝಾಁಸಿಯ ಕೋಟೆ ಮತ್ತು ಪಟ್ಟಣವು ಬಹಳ ಬಲವಾಗಿದ್ದಕಾರಣ, ಹೊರಗಿನಿಂದ ಅವರಿಗೆ ಸಹಾಯ ಮಾಡುವದಕ್ಕೆ ಪುಷ್ಕಳ ಮಾರ್ಗವಿತ್ತು. ಅದನ್ನ ನಿಲ್ಲಿಸ ಪಟ್ಟಣದ ಸರ್ವಭಾಗಗಲಿಗೂ, ನಿರ್ಬಂಧ ಮಾಡುವ ನಿಮಿತ್ತವಾಗಿ ಕುದುರೆ ಸವಾರರುಗಳನ್ನು ಮತ್ತು ತೋಫುಖಾನೆಗಳನ್ನು ಪ್ರತ್ಯೇಕ ಪ್ರತ್ಯೇಕ

---

"The women were seen working in the batteries, and Carrying ammunition. The garden battery was fought under the black flag of the fakirs. Everything indicated a general and determined resistance."

† ಡಾಕ್ಟರ್ ಲೋ ಸಾಹೇಬನು, ಈ ಸಂಬಂಧದಲ್ಲಿ ಮುಂದೆ ಬರೆದಂತೆ ವರ್ಣಿಸಿ ಇರುತ್ತಾನೆ:—

"Soon after our arrival we saw them busily engaged in constructing a three-gun battery on the wall a little to the east of the south face of the fort. *They worked liked bees, and quicker than I ever saw natives before. The Battry was soon made and finished off in a proper engineering style.*"

ಈ ವರ್ಣನೆಯು ರಾಣೀ ಸಾಹೇಬಳ ಚಾತುರ್ಯವನ್ನು ಕುರಿತು, ಮಾಡಿದ ಪ್ರಸಂಶದಲ್ಲಿ ಬಂದು ಇತ್ತಂತ, ಯಾರೂ ಹೇಳತಕ್ಕವರಿಲ್ಲ.

ನಾಶವಾದವು. ಪಟ್ಟಣದ ವ್ಯಾಪಾರವು ಶುದ್ಧಾಂಗವಾಗಿ ನಿಂತುಹೋಯಿತು. ಮನುಷ್ಯರಿಗೆ ದಾರಿಯಲ್ಲಿ ಓಡ್ಯಾಡುವದಕ್ಕೆ ಧೈರ್ಯವು ತಪ್ಪಿತು. ಯಮದೂತರು ತಮ್ಮ ಭಯಂಕರವಾದ ಸ್ವರೂಪವನ್ನ, ಆ ಕಾಲದಲ್ಲಿ ಪಟ್ಟಣದಲ್ಲಿಯೂ ಮತ್ತು ಕೋಟೆಯಲ್ಲಿಯೂ ಸಹ ತಕ್ಷಣವೇ ತೋರಿಸಿಬಿಟ್ಟರು ; ಮತ್ತು ನಾಲ್ಕು ದಿಕ್ಕುಗಳಲ್ಲಿಯೂ, ಹಾಹಾಕಾರವು ಎದ್ದಿತು. ಪಟ್ಟಣದಲ್ಲಿನ ಅನೇಕ ಮನೆಗಳಿಗೆ ಬೆಂಕಿಹತ್ತಿ, ಅವರ ವಿಶೇಷವಾದ ಜ್ವಾಲೆಯು ಆಕಾಶಮಂಡಲಕ್ಕೆ ವ್ಯಾಪಿಸಿತು. ಇಂಥಾ ಅನರ್ಥ ಪ್ರಕರಣವನ್ನು ರಾಣೀ ಸಾಹೇಬಳು ನೋಡಿ ಬಹಳ ದುಃಖಪಟ್ಟಳು ; ಮತ್ತು ಇದು ನಿರಾಶೆಗೆ ಮೊದಲನೇ ಮೆಟ್ಟಲಾಗಿದೆಯಂತ ತಿಳುಕೊಂಡಳು. ತಥಾಪಿ ಆಕೆಯು ಸ್ವಲ್ಪವೂ ಧೈರ್ಯಗುಂದದೆ, ಅಲ್ಲಲ್ಲಿ ಜನಗಳನ್ನಿಟ್ಟು ಬಳ್ಳೇ ವ್ಯವಸ್ಥೆಯನ್ನು ಮಾಡಿದಳು. ಅಗ್ನಿ ನಾರಾಯಣ ದೇವರ ಪ್ರತಾಪದಿಂದ, ಝಾಂಸಿಯಲ್ಲಿನ ಪ್ರಜೆಗಳು ಕೇವಲ ದೀನರಾಗಿ ಹೋಗಿದ್ದರು. ಆದಕಾರಣ, ರಾಣೀ ಸಾಹೇಬಳಿಗೆ ಕರುಣವು ಹುಟ್ಟಿ, ಆ ಸರ್ವ ಅನಾಥ ಜನಗಳಿಗೆ ಅನ್ನದಾನ ಕೊಡುವದಕ್ಕೆ ಪ್ರಯತ್ನ ಮಾಡಿದಳು. ದಕ್ಷಿಣ ಬ್ರಾಹ್ಮಣರಗೋಸ್ಕರ ಗಣಪತಿ ದೇವಾಲಯದಲ್ಲಿ ಅನ್ನಛತ್ರ ವಿಟ್ಟು, ಇತರ ಜನಗಳಿಗೆ ಸೀದಾ ಕೊಡುವದಕ್ಕೆ ಏರ್ಪಾಟು ಮಾಡಿದ್ದಲ್ಲದೆ ಶುದ್ಧಾಂಗ ನಿರಾಶ್ರಯ ಜನಗಳಿಗೆ, ಕಡ್ಲೇಮಂಡಕ್ಕಿ ಹಂಚುವದಕ್ಕೆ ಏರ್ಪಾಟು ಇಟ್ಟಳು.

ರಾಣೀಸಾಹೇಬಳ ಕಡೆಯಿಂದ ಸೈನ್ಯದಲ್ಲಿನ ಜನಗಳಿಗೆ, ಆಗಾಗ್ಯೆ ಪ್ರೋತ್ಸಾಹ ಸಿಕ್ಕುತ್ತಿತ್ತು; ಆದಕಾರಣ ಅವರು ಇಂಗ್ರೇಜಿ ಸೈನ್ಯದಿಂದ ಬರುತ್ತಿದ್ದ ಗೋಲಿಗಳು ಫೆಟ್ಟುಗಳು ಅಸಾಧ್ಯವಾಗಿದ್ದಾಗ್ಯೂ, ತಮ್ಮ ಬಂಪೂಕಿನ ಹೊಡತವನ್ನು ಏಕಪ್ರಕಾರವಾಗಿ ನಡಿಸುತ್ತಿದ್ದರು. ಇಂಗ್ರೇಜಿಸೈನ್ಯವು ಬಹಳ ಸೋತುಹೋಗಿ, ಕೋಟೆಯ ಹತ್ತರಬಂದು ಸೇರಿಕೊಂಡಿತು. ಈ ಯುದ್ಧದಲ್ಲಿ ಉಭಯ ಪಕ್ಷದಲ್ಲಿನ ಪುಷ್ಕಳ ಜನಗಳಿಗೆ ಘಾಯವಾಯಿತು; ಮತ್ತು ಬಹಳ ಜನಗಳು ಸತ್ತುಹೋದರು. ನಾಲ್ಕನೇ ದಿವಸ ಅಂದರೇ ತಾರೀಖು 25 ನೇ ಮಾರ್ಚಿದಿನ, ಚಂದೇರಿ ಯುದ್ದದಲ್ಲಿ ಜಯಹೊಂದಿದ 1ನೇ ಬ್ರಿಗೇಡಿನ ಸೈನ್ಯದವರು ಬಹಳ ಬಲವಾಗಿ ಯುದ್ಧಮಾಡಿದರು. ಆ ಬ್ರಿಗೇಡ್ ಮಧ್ಯೆ, ಕ್ಯಾಪ್ಟನ್ ಫೆನ್ವಿಕ್ ಸಾಹೇಬನ ಕೈಕೆಳಗಿನ ರಾಯಲ್ ಇಂಜನಿಯರ್‌ನ ಒಂದು ತುಕಡಿ, ಬೊಂಬಾಯಿ ಶಾಪರ್‌ಸ್ನ ಒಂದು ಪಟಾಲಂ, ಕುದುರೆಯ ಸವಾರರ ಒಂದು ಇರಸಾಲೆ ಮತ್ತು ಎತ್ತುಗಳಮೇಲಿನ ತೋಫುಖಾನೆ ಮುಂತಾದ, ತುಂಬಾ ಸೈನ್ಯವಿತ್ತು. ಆದಕಾರಣ ಝಾಂಸಿಯಲ್ಲಿನ ಸೈನ್ಯವು ಆಗಲೇನೆ ಕೈವಶ ವಾದೀತೆಂತ ಸರ್‌ಹ್ಯೂರೋಜ್ ಸಾಹೇಬನಿಗೆ ಬಹಳ ಆಶೆ ತೋರುತ್ತಿತ್ತು.

ಆ ದಿವಸ ಬಹಳ ಶಕೆಯಾಗಿತ್ತಾದ್ದರಿಂದ ಇಂಗ್ರೇಜಿ ಸೈನ್ಯದವರಿಗೆ ಶತ್ರುಗಳ ಗೋಲಿಗಳಿಗಿಂತಲೂ, ಬಿಸಲಿನ ತಾಪವು ಮನಸ್ವೀ ಆಗಲಿಕ್ಕೆ ಪ್ರಾರಂಭಿಸಿತು. ಅಂಥಾ ತಾಪದಲ್ಲಿಯೂ ಅವರು ಸ್ವಲ್ಪವೂ ಹಿಂಜರಿಯದೆ, ಬಹಳ ಉತ್ಸಾಹದಿಂದ, ಯುದ್ಧ

ಕೆಲಸವನ್ನ ಜರಿಗಿಸಿದರು. ತಾರೀಖು 24 ನೇ ದಿವಸ ಬೆಳಿಗ್ಗೆ, 26 ನೇ ಮದ್ರಾಸ್ ಸ್ಯಾಪರ್ಸ್ ಪಟಾಲಂ, ರಾಯಲ್ ಇಂಜನಿಯರ್ಸ ಸಹಾಯಕ್ಕೆ ಹೋಗಿ ಸೇರಿ, ಅವರು ದಕ್ಷಿಣದಿಕ್ಕಿನ ಪಕ್ಕದಲ್ಲಿ ಯುದ್ಧಮಾಡುತ್ತಿದ್ದವರಿಗೆ ಧೈರ್ಯ ಬರುವಗೋಸ್ಕರ ಒಂದು ಎತ್ತರವಾದ ಗುಡ್ಡದಮೇಲೆ, ಒಂದು ಹೊಸ ಮೋರ್ಚೆಯನ್ನು ಕಟ್ಟಿದರು. ಈ ಜಾಗವು ಕೋಟೆಯ ಮಧ್ಯದಲ್ಲಿ ಮಾಡಿದ್ದ ನವೀನ ಮೂರು ತೋಫುಗಳ ಮೋರ್ಚಾದಿಂದ 400 ಗಜಗಳ ದೂರದಲ್ಲಿತ್ತು. ಅಲ್ಲಿ ಶತ್ರುಗಳ ಕಡೆ ತೋಫಿನ ಏಟುಗಳು ಏಕಪ್ರಕಾರವಾಗಿ ಬೀಳುತ್ತಿದ್ದವು. ಆ ಗುಡ್ಡದ ಕೆಳಗೆ ಒಂದು ಹಾದಿಯು ಮತ್ತು ಅದರ ಆಚೆಗೆ ಉದ್ದವಾದ ಒಂದು ಬಯಲು ಸಹ ಇದ್ದವು. ಅದರಮೇಲೆ ಕೋಟೆಯ ಒಳಗಿನ ತೋಫುಗಳ ಏಟುಗಳು ಒಂದೇ ಪ್ರಕಾರವಾಗಿ ಬೀಳುತ್ತಿರುವಾಗ, ಆ ಸ್ಥಳವನ್ನ ಇಂಗ್ರೇಜಿಸೈನ್ಯದವರು ಬಹಳ ಶೌರ್ಯದಿಂದ ತೆಗೆದುಕೊಂಡರು. ರಾಯಲ್ ಆರ್ಟಿಲೆರಿ ಅಧಿಕಾರಿ, ಕ್ಯಾಪ್ಟನ್ ಒವ್ಯಾನಿ ಸಾಹೇಬನು ಹತ್ತು ಇಂಚುಗಳ ಜಂಝಾಳವೆಂಬ ತೋಫನ್ನು ಬಿಡಲು ಪ್ರಾರಂಭ ಮಾಡಿದನು; ಮತ್ತು ಹೈದರಭಾದ್ ಆರ್ಟಿಲೇರಿಯವರು ಸಣ್ಣ ಸಣ್ಣ ತೋಫುಗಳನ್ನು ತಂದು, ಶತ್ರುಗಳಮೇಲೆ ಗುಂಡುಗಳ ಮಳೆಯನ್ನು ಕರೆದರು. ಈ ಹೊಡೆಯುವಸ್ಥಳ ಸಂರಕ್ಷಣೆಗೋಸ್ಕರ, 86 ನೇ ರಾಯಲ್ ಕಾಂಟ್ಟಿಫಾನ್ಸ್, 25 ನೇ ಬೊಂಬಾಯಿ ನೇಟಿವ್ ಪಾಯಿದಳ ಮತ್ತು 5 ನೇ ಹೈದರಾಬಾದ್ ಕಂಟಿಂಜೆಂಟ್ ಇನ್ಫೆಂಟರಿ, ಈ ಸೈನ್ಯವು ಯಥೇಚ್ಛವಾಗಿ ಸಹಾಯ ಮಾಡಿತು.

"ಎರಡನೇ ಪ್ರಹರದಲ್ಲಿ ಕೋಟೆಯ ದಕ್ಷಿಣದ ಬುರುಜಿನಮೇಲಿನ ತೋಫನ್ನ ಇಂಗ್ರೇಜಿ ಸೇನೆಯವರು ನಿಲ್ಲಿಸಿದರು. ಮತ್ತು ಅದರಮೇಲೆ, ಒಬ್ಬ ಮನುಷ್ಯನೂ ನಿಲ್ಲದಹಾಗಾಯಿತು ಎಂಬುವದನ್ನು ನೋಡಿ, ಕೋಟೆಯೊಳಗಿನ ಜನಗಳು ಕೇವಲ ಧೈರ್ಯಗುಂದಿ ಹೋದರು. ಆಗ ರಾಣೀಸಾಹೇಬಳ ಕಡೆ ಯುದ್ಧಶಾಲಿಗಳು, ಆ ಮೋರ್ಚಾದಿಂದ ತೋಫುಗಳನ್ನು ತೆಗೆದು, ದುರ್ಬಿನ್ನಲ್ಲಿ ಉತ್ತಮವಾದ ಗುರಿನೋಡಿ, ದಕ್ಷಿಣಕಡೆ ಮೋರ್ಚೆಯನ್ನು ಸಿದ್ಧಪಡಿಸಿದರು; ಮತ್ತು ತೋಫುಗಳಿಗೆ ಬತ್ತಿಕೊಟ್ಟು, ಮೂರನೇ ಧ್ವನಿಗಿಂತಲೂ ಹೆಚ್ಚಾಗಿ ಇಂಗ್ರೇಜಿ ಸೈನ್ಯದಲ್ಲಿನ ಉತ್ತಮ ಯುದ್ಧಶಾಲಿಗಳನ್ನು ಸಂಪೂರ್ಣವಾಗಿ ನಾಶಮಾಡಿದರು; ಮತ್ತು ದಕ್ಷಿಣದಿಕ್ಕಿನ ತೋಫನ್ನು ಹೊಡೆಯುತ್ತಲಿದ್ದ, ಇಂಗ್ರೇಜಿ ಕಡೆಯವರ ತೋಫನ್ನ ನಿಲ್ಲಿಸಿಬಿಟ್ಟರು. * ಆ ಸಮಯದಲ್ಲಿ,

---

* ಈ ಸಂಗತಿಯನ್ನು ಉಜ್ಜನ ಪುಸ್ತಕದಲ್ಲಿ ಬರೆದಿದೆ. ಅದನ್ನು ಕುರಿತು ಡಾಕ್ಟರ್ ಲೋ ಸಾಹೇಬನು ಇಷ್ಟೇ ಬರೆದಿದ್ದಾನೆ :—

"The greatest annoyance was experienced from the white tower guns, as from this bastion the enemy

ನಾಶವಾದವು. ಪಟ್ಟಣದ ವ್ಯಾಪಾರವು ಶುದ್ಧಾಂಗವಾಗಿ ನಿಂತುಹೋಯಿತು. ಮನುಷ್ಯರಿಗೆ ದಾರಿಯಲ್ಲಿ ಓಡ್ಯಾಡುವದಕ್ಕೆ ಧೈರ್ಯವು ತಪ್ಪಿತು. ಯಮದೂತರು ತಮ್ಮ ಭಯಂಕರವಾದ ಸ್ವರೂಪವನ್ನ, ಆ ಕಾಲದಲ್ಲಿ ಪಟ್ಟಣದಲ್ಲಿಯೂ ಮತ್ತು ಕೋಟೆಯಲ್ಲಿಯೂ ಸಹ ತಕ್ಷಣವೇ ತೋರಿಸಿಬಿಟ್ಟರು ; ಮತ್ತು ನಾಲ್ಕು ದಿಕ್ಕುಗಳಲ್ಲಿಯೂ, ಹಾಹಾಕಾರವು ಎದ್ದಿತು. ಪಟ್ಟಣದಲ್ಲಿನ ಅನೇಕ ಮನೆಗಳಿಗೆ ಬೆಂಕಿಹತ್ತಿ, ಅದರ ವಿಶೇಷವಾದ ಜ್ವಾಲೆಯು ಆಕಾಶಮಂಡಲಕ್ಕೆ ವ್ಯಾಪಿಸಿತು. ಇಂಥಾ ಅನರ್ಥ ಪ್ರಕರಣವನ್ನು ರಾಣೀ ಸಾಹೇಬಳು ನೋಡಿ ಬಹಳ ದುಃಖಪಟ್ಟಳು ; ಮತ್ತು ಇದು ನಿರಾಶೆಗೆ ಮೊದಲನೇ ಮೆಟ್ಟಲಾಗಿದೆಯಂತ ತಿಳುಕೊಂಡಳು. ತಥಾಪಿ ಆಕೆಯು ಸ್ವಲ್ಪವೂ ಧೈರ್ಯಗುಂದದೆ, ಅಲ್ಲಲ್ಲಿ ಜನಗಳನ್ನಿಟ್ಟು ಒಳ್ಳೇ ವ್ಯವಸ್ಥೆಯನ್ನು ಮಾಡಿದಳು. ಅಗ್ನಿ ನಾರಾಯಣ ದೇವರ ಪ್ರತಾಪದಿಂದ, ಝಾಂಸಿಯಲ್ಲಿನ ಪ್ರಜೆಗಳು ಕೇವಲ ದೀನರಾಗಿ ಹೋಗಿದ್ದರು. ಆದಕಾರಣ, ರಾಣೀ ಸಾಹೇಬಳಿಗೆ ಕರುಣವು ಹುಟ್ಟಿ, ಆ ಸರ್ವ ಅನಾಥ ಜನಗಳಿಗೆ ಅನ್ನದಾನ ಕೊಡುವದಕ್ಕೆ ಪ್ರಯತ್ನ ಮಾಡಿದಳು. ದಕ್ಷಿಣ ಬ್ರಾಹ್ಮಣರಿಗೋಸ್ಕರ ಗಣಪತಿ ದೇವಾಲಯದಲ್ಲಿ ಅನ್ನಛತ್ರ ಇಟ್ಟು, ಇತರ ಜನಗಳಿಗೆ ಸೀದಾ ಕೊಡುವದಕ್ಕೆ ಏರ್ಪಾಟು ಮಾಡಿದ್ದಲ್ಲದೆ ಶುದ್ಧಾಂಗ ನಿರಾಶ್ರಯ ಜನಗಳಿಗೆ, ಕಡ್ಲೆ, ಮಂಡಕ್ಕಿ ಹಂಚುವದಕ್ಕೆ ಏರ್ಪಾಟು ಇಟ್ಟಳು.

ರಾಣೀಸಾಹೇಬಳ ಕಡೆಯಿಂದ ಸೈನ್ಯದಲ್ಲಿನ ಜನಗಳಿಗೆ, ಆಗಾಗ್ಯೆ ಪ್ರೋತ್ಸಾಹ ಸಿಕ್ಕುತ್ತಿತ್ತು; ಆದಕಾರಣ ಅವರು ಇಂಗ್ರೇಜಿ ಸೈನ್ಯದಿಂದ ಬರುತ್ತಿದ್ದ ಗೋಲಿಗಳ ಪೆಟ್ಟುಗಳು ಅಸಾಧ್ಯವಾಗಿದ್ದಾಗ್ಯೂ, ತಮ್ಮ ಬಂದೂಕಿನ ಹೊಡತವನ್ನು ಏಕಪ್ರಕಾರವಾಗಿ ನಡಿಸುತ್ತಿದ್ದರು. ಇಂಗ್ರೇಜಿಸೈನ್ಯವು ಬಹಳ ಸೋತುಹೋಗಿ, ಕೋಟೆಯ ಹತ್ತರಬಂದು ಸೇರಿಕೊಂಡಿತು. ಈ ಯುದ್ಧದಲ್ಲಿ ಉಭಯ ಪಕ್ಷದಲ್ಲಿನ ಪುಷ್ಕಳ ಜನಗಳಿಗೆ ಘಾಯವಾಯಿತು; ಮತ್ತು ಬಹಳ ಜನಗಳು ಸತ್ತುಹೋದರು. ನಾಲ್ಕನೇ ದಿವಸ ಅಂದರೇ ತಾರೀಖು 25 ನೇ ಮಾರ್ಚಿದಿನ, ಚಂದೇರಿ ಯುದ್ದದಲ್ಲಿ ಜಯಹೊಂದಿದ 1ನೇ ಬ್ರಿಗೇಡಿನ ಸೈನ್ಯದವರು ಬಹಳ ಬಲವಾಗಿ ಯುದ್ಧಮಾಡಿದರು. ಆ ಬ್ರಿಗೇಡ ಮಧ್ಯೆ, ಕ್ಯಾಪ್ಟನ್ ಫೆನ್ವಿಕ ಸಾಹೇಬನ ಕೈಕೆಳಗಿನ ರಾಯಲ್ ಇಂಜನಿಯರನ ಒಂದು ತುಕಡಿ, ಬೊಂಬಾಯಿ ಶಾಪರ್ಸನ ಒಂದು ಪಟಾಲಂ, ಕುದುರೆಯ ಸವಾರರ ಒಂದು ಇರಸಾಲೆ ಮತ್ತು ಎತ್ತುಗಳಮೇಲಿನ ತೋಫುಖಾನೆ ಮುಂತಾದ, ತುಂಬಾ ಸೈನ್ಯವಿತ್ತು. ಆದಕಾರಣ ಝಾಂಸಿಯಲ್ಲಿನ ಸೈನ್ಯವು ಆಗಲೇನೆ ಕೈವಶ ಮಾಡೀತೆಂತ ಸರ್‌ಹ್ಯೂರೋಜ್ ಸಾಹೇಬನಿಗೆ ಬಹಳ ಆಶೆ ತೋರುತ್ತಿತ್ತು.

ಆ ದಿವಸ ಬಹಳ ಶಕೆಯಾಗಿತ್ತಾದ್ದರಿಂದ ಇಂಗ್ರೇಜಿ ಸೈನ್ಯದವರಿಗೆ ಶತ್ರುಗಳ ಗೋಲಿಗಳಿಗಿಂತಲೂ, ಬಿಸಲಿನ ತಾಪವು ಮನಸ್ವೀ ಆಗಲಿಕ್ಕೆ ಪ್ರಾರಂಭಿಸಿತು. ಅಂಥಾ ತಾಪದಲ್ಲಿಯೂ ಅವರು ಸ್ವಲ್ಪವೂ ಹಿಂಜರಿಯದೆ, ಬಹಳ ಉತ್ಸಾಹದಿಂದ, ಯುದ್ಧ

ಕೆಲಸವನ್ನ ಜರಿಗಿಸಿದರು. ತಾರೀಖು 24 ನೇ ದಿವಸ ಬೆಳಿಗ್ಗೆ, 26 ನೇ ಮದ್ರಾಸ್ ಸ್ಯಾಪರ್ಸ್ ಪಟಾಲಂ, ರಾಯಲ್ ಇಂಜನಿಯರ್ರ ಸಹಾಯಕ್ಕೆ ಹೋಗಿ ಸೇರಿ, ಅವರು ದಕ್ಷಿಣದಿಕ್ಕಿನ ಪಕ್ಕದಲ್ಲಿ ಯುದ್ಧಮಾಡುತ್ತಿದ್ದವರಿಗೆ ಧೈರ್ಯ ಬರುವಗೋಸ್ಕರ ಒಂದು ಎತ್ತರವಾದ ಗುಡ್ಡದಮೇಲೆ, ಒಂದು ಹೊಸ ಮೋರ್ಚೆಯನ್ನು ಕಟ್ಟಿದರು. ಈ ಜಾಗವು ಕೋಟೆಯ ಮಧ್ಯದಲ್ಲಿ ಮಾಡಿದ್ದ ನವೀನ ಮೂರು ತೋಪುಗಳ ಮೋರ್ಚಾದಿಂದ 400 ಗಜಗಳ ದೂರದಲ್ಲಿತ್ತು. ಅಲ್ಲಿ ಶತ್ರುಗಳಕಡೆ ತೋಫಿನ ಏಟುಗಳು ಏಕಪ್ರಕಾರವಾಗಿ ಬೀಳುತ್ತಿದ್ದವು. ಆ ಗುಡ್ಡದ ಕೆಳಗೆ ಒಂದು ಹಾದಿಯು ಮತ್ತು ಅದರ ಆಚೆಗೆ ಉದ್ದವಾದ ಒಂದು ಬಯಲು ಸಹ ಇದ್ದವು. ಅದರಮೇಲೆ ಕೋಟೆಯ ಒಳಗಿನ ತೋಪುಗಳ ಏಟುಗಳು ಒಂದೇ ಪ್ರಕಾರವಾಗಿ ಬೀಳುತ್ತಿರುವಾಗ, ಆ ಸ್ಥಳವನ್ನ ಇಂಗ್ರೇಜಿಸೈನ್ಯದವರು ಬಹಳ ಶೌರ್ಯದಿಂದ ತೆಗೆದುಕೊಂಡರು. ರಾಯಲ್ ಆರ್ಟಿಲೆರಿ ಅಧಿಕಾರಿ, ಕ್ಯಾಪ್ಟನ್ ಒವ್ಯಾನಿ ಸಾಹೇಬನು ಹತ್ತು ಇಂಚುಗಳ ಜಂಜಾಳವೆಂಬ ತೋಫನ್ನು ಬಿಡಲು ಪ್ರಾರಂಭ ಮಾಡಿದನು; ಮತ್ತು ಹೈದರಬಾದ್ ಆರ್ಟಿಲೇರಿಯವರು ಸಣ್ಣ ಸಣ್ಣ ತೋಪುಗಳನ್ನು ತಂದು, ಶತ್ರುಗಳಮೇಲೆ ಗುಂಡುಗಳ ಮಳೆಯನ್ನು ಕರೆದರು. ಈ ಹೊಡೆಯುವ ಸ್ಥಳ ಸಂರಕ್ಷಣೆಗೋಸ್ಕರ, 86 ನೇ ರಾಯಲ್ ಕೌಂಟಿ ಡೌನ್ಸ್, 25 ನೇ ಬೊಂಬಾಯಿ ನೇಟಿವ್ ಪಾಯಿದಳ ಮತ್ತು 5 ನೇ ಹೈದರಾಬಾದ್ ಕಂಟಿಂಜೆಂಟ್ ಇನ್ಫೆಂಟರಿ, ಈ ಸೈನ್ಯವು ಯಥೇಚ್ಛವಾಗಿ ಸಹಾಯ ಮಾಡಿತು.

"ಎರಡನೇ ಪ್ರಹರದಲ್ಲಿ ಕೋಟೆಯ ದಕ್ಷಿಣದ ಬುರುಜಿನಮೇಲಿನ ತೋಫನ್ನ ಇಂಗ್ರೇಜಿ ಸೇನೆಯವರು ನಿಲ್ಲಿಸಿದರು. ಮತ್ತು ಅದರಮೇಲೆ, ಒಬ್ಬ ಮನುಷ್ಯನೂ ಇಲ್ಲದಹಾಗಾಯಿತು ಎಂಬುವದನ್ನು ನೋಡಿ, ಕೋಟೆಯೊಳಗಿನ ಜನಗಳು ಕೇವಲ ಧೈರ್ಯಗುಂದಿ ಹೋದರು. ಆಗ ರಾಣೀಸಾಹೇಬಳಕಡೆ ಯುದ್ಧಶಾಲಿಗಳು, ಆ ಮೋರ್ಚಾದಿಂದ ತೋಪುಗಳನ್ನು ತೆಗೆದು, ದುರ್ಬಿನ್ನಲ್ಲಿ ಉತ್ತಮವಾದ ಗುರಿನೋಡಿ, ದಕ್ಷಿಣಕಡೆ ಮೋರ್ಚೆಯನ್ನು ಸಿದ್ಧಪಡಿಸಿದರು; ಮತ್ತು ತೋಪುಗಳಿಗೆ ಬತ್ತಿಕೊಟ್ಟು, ಮೂರನೇ ಧ್ವನಿಗಿಂತಲೂ ಹೆಚ್ಚಾಗಿ ಇಂಗ್ರೇಜಿ ಸೈನ್ಯದಲ್ಲಿನ ಉತ್ತಮ ಯುದ್ಧಶಾಲಿಗಳನ್ನು ಸಂಪೂರ್ಣವಾಗಿ ನಾಶಮಾಡಿದರು; ಮತ್ತು ದಕ್ಷಿಣದಿಕ್ಕಿನ ತೋಫನ್ನು ಹೊಡೆಯುತ್ತಲಿದ್ದ, ಇಂಗ್ರೇಜಿ ಕಡೆಯವರ ತೋಫನ್ನ ನಿಲ್ಲಿಸಿಬಿಟ್ಟರು. * ಆ ಸಮಯದಲ್ಲಿ,

---

* ಈ ಸಂಗತಿಯನ್ನು ಉಜ್ಜನ ಪುಸ್ತಕದಲ್ಲಿ ಬರೆದಿದೆ. ಅದನ್ನು ಕುರಿತು ಡಾಕ್ಟರ್ ಲೋ ಸಾಹೇಬನು ಇಷ್ಟೇ ಬರೆದಿದ್ದಾನೆ :—

"The greatest annoyance was experienced from the white tower guns, as from this bastion the enemy

ಬಾಯಿಸಾಹೇಬಳು ಸಂತುಷ್ಟಳಾಗಿ, ಆಶೂರನಿಗೆ ಭಂಗಾರದಬಳೆಯನ್ನ ಬಹುಮಾನ ಕೊಟ್ಟಳು. ಈ ಪ್ರಕಾರವಾಗಿ ಶೂರತನವನ್ನ ತೋರಿಸಿದ ಪುರುಷನ ಹೆಸರು ಗುಲಾಂ ಗೋಷ್ಖಾರ್ ಎಂತ ಆಗಿತ್ತು. ಆತನೇ, ನಥೇಖಾರ್ನ ಯುದ್ಧಸಮಯದಲ್ಲಿ ತನ್ನ ಪರಾಕ್ರಮವನ್ನ ಚನ್ನಾಗಿತೋರಿಸಿದ್ದನು. " ಇದುಹಾಗಿರಲಿ.

ತಾರೀಖು 31 ಸೇ ದಿವಸ ಪರ್ಯಂತರ, ಈ ಘನವಾದ ಘೋರ ಯುದ್ಧವು ಏಕಪ್ರಕಾರವಾಗಿ ನಡೆದು, ಉಭಯಪಕ್ಷದ ಜನಗಳೂನೂ ಬಹಳ ಸೋತುಹೋಗಿದ್ದರು. ಇಂಗ್ರೇಜಿ ಸೈನ್ಯದ ಅಧಿಪತಿಗಳು ಪ್ರತ್ಯೇಕ ಪ್ರತ್ಯೇಕವಾಗಿದ್ದು ತಮ್ಮ ಕೆಲಸದಲ್ಲಿ ವಿಶೇಷ ದಕ್ಷರಾಗಿದ್ದ ಕಾರಣದಿಂದಲೂ ಮತ್ತು ಸರ್ವ ಸೈನ್ಯಕ್ಕೆ ಯುದ್ಧ ಕೆಲಸದಲ್ಲಿ ಪರಿಶ್ರಮವಿದ್ದದ್ದರಿಂದಲೂ, ಅವರ ಪಕ್ಷದಲ್ಲಿ, ಶುದ್ಧಾಂಗ ಅವ್ಯವಸ್ಥ ಆಗದೆ ಅವರು ಯುದ್ಧದ ಕೆಲಸವನ್ನು ಒಳ್ಳೇರೀತಿಯಿಂದ ನಡಿಸಿ, ತಮ್ಮ ಶೌರ್ಯವನ್ನು ತೋರಿಸಿದರು. ರಾಣೀ ಲಕ್ಷ್ಮೀಬಾಯಿ ಸಾಹೇಬಳು ಸ್ವತಃ ತಾನು ಶೂರಳಾಗಿಯೂ ಮತ್ತು ಧೀರಳಾಗಿಯೂ ಇದ್ದಾಗ್ಯೂ, ಆಕೆಯ ಸೈನ್ಯದ ವ್ಯವಸ್ಥೆಯು ಎದುರು ಪಕ್ಷದಲ್ಲಿದ್ದಂತೆ, ಚನ್ನಾಗಿರಲಿಲ್ಲ. ಬುಂದೇಲೆ ಮತ್ತು ಠಾಕೂರ್ ಸರ್ದಾರರು ವಿಲಾಯತಿ (Afghan) ಜನಗಳು, ಮತ್ತು ಇಂಗ್ರೇಜಿ ಸೈನ್ಯದಲ್ಲಿನ ದಂಗೇಖೋರ ಜನಗಳು ಸಹ, ರಾಣೀ ಸಾಹೇಬಳ ಸೈನ್ಯದಲ್ಲಿ ಸೇರಿದ್ದು, ಆ ಪೈಕಿ ಅನೇಕ ಜನಗಳ ಶರೀರದಲ್ಲಿ ರಣಶೌರ್ಯವು ಉತ್ತಮಪ್ರಕಾರವಾಗಿ ವಾಸಮಾಡುತ್ತಿತ್ತು; ಆದರೆ ಅವರ ಮಧ್ಯದಲ್ಲಿ ರಾಣೀ ಸಾಹೇಬಳೊಬ್ಬಳೆ ಹೊರ್ತು, ಧುರೀಣತ್ವವನ್ನು ವಹಿಸಿಕೊಂಡು, ಸರ್ವ ಸೈನ್ಯದಮೇಲೆ ಒಂದೇ ಪ್ರಕಾರವಾದ ದೃಷ್ಟಿಯಿಡತಕ್ಕ ಇತರ ಸೇನಾಧಿಕಾರಿಗಳು ಬಹಳ ಸ್ವಲ್ಪ ವಿದ್ದದ್ದರಿಂದ, ಸೈನ್ಯದ ವ್ಯವಸ್ಥೆಯು ಯೋಗ್ಯವಾಗಿ ನಡೆಯುತ್ತಿರಲಿಲ್ಲ ಆದಕಾರಣ, ಅರ್ಥಾತ್ ರಾಣೀ ಸಾಹೇಬಳ ಯುಕ್ತಿ ಶೂನ್ಯವಾದ ಸೈನ್ಯದ ಸರ್ವಶಕ್ತಿಯೂ ವ್ಯರ್ಥವಾಗಿ ಹೋದದ್ದು ಯೇನೂ ಆಶ್ಚರ್ಯವಲ್ಲ. ತಥಾಪಿ, ಆಕೆಯು ಇಂಗ್ರೇಜಿ ಸರ್ಕಾರದ ಪ್ರಬಲ ಸೈನ್ಯದ ಎದುರು ನಿಂತು, ಬಹಳ ದಿವಸ ರಣವನ್ನು ಮಾಡಿ, ಯುದ್ಧದಲ್ಲಿ ಕುಶಲರಾದ, ಯೂರೋಪಿಯರ್ ಸೇನಾನಾಯಕರ ಕಡೆಯಿಂದ, ತನ್ನ ಅಸದೃಶವಾದ ಶೌರ್ಯವನ್ನು ಕುರಿತು, ಆಶ್ಚರ್ಯಕರವಾದ ವರ್ಣನೆ ಹೊರಡಿಸಿದ ಮಾತು ಆಕೆಗೆ ಬಹಳ ಭೂಷಣಾಸ್ಪದವಾದ್ದಲ್ಲವೆಂತ ಯಾರು ಹೇಳ್ಯಾರು ? ಇದು ಹಾಗಿರಲಿ.

---

quite commanded our position. + + + + A round shot from the fort killed a Subadar, and Havildar of the H. C. Artillery as they were laying a gun."

*Central India Page* 241.

ಯುದ್ಧ ಪಾರಂಗತ ಮತ್ತು ಮಹಾ ಶೌರ್ಯಶಾಲಿಗಳಾದ ಇಂಗ್ರೇಜಿ ಸೈನ್ಯದೊಡನೆ, ಝಾನ್ಸಿ ಸೈನ್ಯವು 31 ನೇ ತಾರೀಖು ಪರ್ಯಂತರವೂ ಎದೆಗೊಟ್ಟು ನಿಂತು ಮಾಡಿದ ರಣಾಗ್ರವನ್ನು ಕುರಿತು, ಡಾಕ್ಟರ್ ಲೋ ಸಾಹೇಬನು, ನಿಷ್ಪಕ್ಷಪಾತವಾಗಿ ವರ್ಣನೆಮಾಡಿರುತ್ತಾನೆ. * ಆತನ ವರ್ಣನೆಗೆ, ಪ್ರತಿ ಒಂದು ಸೇರಿಹೋಗತಕ್ಕ ತಿಳುವ

---

* ಡಾಕ್ಟರ್ ಲೋ ಸಾಹೇಬನು, ಇದೇ ಪ್ರಸಂಗದ ವರ್ಣನೆಯನ್ನು ಮುಂದೆ ಬರೆದಿರುವ ಪ್ರಕಾರ, ಮಾಡಿರುತ್ತಾನೆ :—

"On the 28th there was continued heavy firing from the Batteries on both attacks, and the enemy kept up a very smart fire upon our various works from their guns and from the whole line of the wall reaching from the fort to the right attack. We had silenced several of their guns, and as often as they were silenced so often did they reopen from them to our astonishment. In the midst of this din and roar, flash, and smoke, a great explosion occurred in the fort on the east face. This followed the constant shelling from the right attack. Every ten minutes in the twenty-four hours shell and shot fell in various parts of this doomed place, and fresh fires burst out among the different buildings—each fire greeted with loud hurrahs by the men in our batteries. The excitement frequently became intense and the gunners continued their work in the scorching sun as though it were winter time. By the 29th the parapets of the fort bastions were torn down from the left attack, and the enemy's guns were accordingly rendered useless."

"At the same time a breach was commenced in the town-wall near the fort. The cannonading went on with great spirit, while the enemy continued a

ಳಿಕೆಯನ್ನು ರಾಣಿಸಾಹೇಬಳ ಕಡೆಯಲ್ಲಿ, ಆಕಾಲದಲ್ಲಿ ಪ್ರತ್ಯಕ್ಷವಾಗಿ ಅಲ್ಲಿದ್ದ ಒಬ್ಬ ಗೃಹಸ್ಥನು ಬರೆದಿರುವದನ್ನು ಇಲ್ಲಿ ತೋರಿಸತಕ್ಕದ್ದು ಅವಶ್ಯಕವಾಗಿದೆ.

“ ರಾತ್ರಿಯ ಪ್ರಹಾರದಲ್ಲಿ ಪಟ್ಟಣದಮೇಲೆ ಮತ್ತು ಕೋಟೆಯಮೇಲೆ ಸಹ ಗುಂಡುಗಳು ಬೀಳುತ್ತಿದ್ದವು. ಅದರ ಬಹಳ ಭಯಂಕರವಾದ ನೋಟವು ದೃಷ್ಟಿಗೆ ಬೀಳುತ್ತಿತ್ತು. 50, 60 ಸೇರು ತೂಕದ ಗೋಲಿಗಳು ಗರ್ನಾಳಿಎಂಬ ತೋಫಿನಿಂದ ಹಾರಿದ

---

determined opposition from the garden battery on the west side, and from musketry and light guns along the wall.

“ During the midday heat scarcely a shot was fired by the enemy, but about 3-30 P. M. every evening they reopened upon us with considerable spirit. Round shot of various sizes bounced over our heads and match-lock balls whizzed like hail about us. From this hour till sunset was always a dangerous time, and our poor fellows were severely tried. The “garden battery” and guns on the fort gate pestered us a good deal. Near the former battery we could see scores of the enemy among the trees sauntering about as though they were superintending a quiet every-day matter of business, although our shells occasionally dropped in the midst of them.”

“ The breaching and shelling were continued with unabated spirit on the 30th and 31st, and the enemy kept up a fearful fire upon us. Notwithstanding the damage done to their fort and works upon the wall, their vigilance and determination to resist abated not one iota ; on the contrary, their danger appeared to add to their courage.”

*Central India P.* 242-43-44.

ಮೇಲೆ, ಅವು ಸಣ್ಣ ಚೆಂಡಿನಹಾಗೆ ಕೆಂಪಗೆಕಾಣುತ್ತಿದ್ದವು. ಹಗಲಿನಲ್ಲಿ ಸೂರ್ಯನ ತೇಜಸ್ಸಿನಿಂದ ಗೋಲಿಗಳು ಸಮನಾಗಿ ಕಾಣಿಸುತ್ತಿರಲಿಲ್ಲ. ಪರಂತು ರಾತ್ರಿಯ ಕತ್ತಲೆಯಲ್ಲಿ ಆ ಕೆಂಪು ರಂಗಿನ ಗೋಲಿಗಳು ಚೆಂಡಿನಹಾಗೆ ಇಲ್ಲಿಂದ ಆ ಕಡೆಗೆ ಹಾರುತ್ತಿರುವದು ಕಾಣುತ್ತಿತ್ತು. ಪ್ರತಿ ಮನುಷ್ಯನಿಗೆ, ಅದು ತನ್ನಮೇಲೆ ಬಿದ್ದೀತೆಂತ ತೋರುತ್ತಿತ್ತು. ಪರಂತು ಆ ಗೋಲಿಗಳು 7, 8 ಹೆಜ್ಜೆಗಳು ಮುಂದೆ ಹೋಗಿ ಬೀಳುತ್ತಿದ್ದವು. ಈ ಪ್ರಕಾರವಾಗಿ ಹಗಲು ರಾತ್ರಿ ಯುದ್ಧ ನಡೆದು, ಪಟ್ಟಣವು ಕೇವಲ ನಿರ್ಜಿರ್ಣವಾಯಿತು. 5 ನೆ ಮತ್ತು 6 ನೆ ದಿವಸವೂ ಇದೇ ಪ್ರಕಾರ ಯುದ್ಧ ನಡೆಯಿತು. ಒಂದು, ಒಂದೂವರೆ ಪ್ರಹರದವರೆಗೂ ಬಾಯಿಸಾಹೇಬಳಿಗೆ ಜಯವಾಗಿ, ಇಂಗ್ರೇಜಿ ಸೈನ್ಯವು ಬಹಳ ನಾಶಹೊಂದಿ ಅವರ ತೋಫುಗಳು ಕೆಲವುಕಾಲ ನಿಂತು ಹೋಗುತ್ತಿದ್ದವು. ಅನಂತರ ಕೆಲವುಕಾಲ ಇಂಗ್ರೇಜಿಯವರಿಗೆ ಜಯವಾಗಿ ಅವರ ಸೇನೆಯವರು, ಧೈರ್ಯ ತೆಗದುಕೊಂಡು ಬಾಯಿಸಾಹೇಬಳ ತೋಫನ್ನ ನಿಲ್ಲಿಸುತ್ತಿದ್ದರು. ಅಲ್ಲಿ ಮನುಷ್ಯರು ನಿಲ್ಲಲಿಲ್ಲ. ವಿರೋಧ ಪಕ್ಷದಕಡೆ ತೋಫು, ಮೋರ್ಚೆಯನ್ನು ಕೆಡವಿಹಾಕಿತು. ಅನಂತರ ರಾತ್ರಿಯಲ್ಲಿ ಬುದ್ಧಿಶಾಲಿಗಳಾದ ಕಲ್ಲುಕುಟಿಗ ಜನಗಳನ್ನ ಕರಿಸಿ, ಯುಕ್ತಿಯಿಂದ ಕಂಬಳಿಹಾಸಿ, ಅವರನ್ನ ಮೆಲ್ಲಮೆಲ್ಲಗೆ ಬುರುಜಿನಮೇಲೆ ಹತ್ತಿಸಿದರು. ಮತ್ತು ಇಟ್ಟಿಗೆ ಮುಂತಾದ ಸಾಮಾನನ್ನ ಕೆಳಗಿನಿಂದ ಮನುಷ್ಯರನ್ನ ಒಬ್ಬರಮೇಲೆ ಒಬ್ಬರನ್ನು ಮಾಲಾಕಾರವಾಗಿ ಮಾಡಿ, ಅವರಿಂದ ಮೇಲಕ್ಕೆ ತಲ್ಪಿಸಿದರು. ಅನಂತರ ಆ ಕೆಲಸದವರು ಮಲಗಿಕೊಂಡಿದ್ದ ಹಾಗೇನೆ, ಮೋರ್ಚೆಯನ್ನು ಕಟ್ಟಿದರು. ಈ ಪ್ರಕಾರವಾಗಿ ಇಂಗ್ರೇಜಿಯವರಿಗೆ ತಿಳಿಯದಂತೆ, ಮೋರ್ಚೆಯನ್ನು ಕಟ್ಟನಂತರ ತೋಫನ್ನ ನಡೆಸಿದರು. ಆಗ ಇಂಗ್ರೇಜಿಕಡೆ ಜನಗಳು, ಅಜಾಗ್ರತೆಯಲ್ಲಿದ್ದರು. ಅವರಿಗೆ ಬಹಳ ನಷ್ಟವಾಗಿಹೋಗಿ, ಅವರ ಎರಡು ತೋಫುಗಳೂ, ಬೆಳತನಕ ನಿಂತುಹೋಯಿತು."

"8 ನೇ ದಿವಸ ಬೆಳಗಾದಮೇಲೆ ಇಂಗ್ರೇಜಿ ಫೌಜಿನವರು ಶಂಕರ * ಕೋಟೆಯಮೇಲೆ ಆಗ್ನೆಯಾಸ್ತ್ರ ಪ್ರಯೋಗಕ್ಕೆ ಪ್ರಾರಂಭಿಸಿದರು. ಇಂಗ್ರೇಜಿ ಸರ್ಕಾರದವರ ಹತ್ತರ ಕೋಟೆ ಮತ್ತು ದುರ್ಗವನ್ನ ಮುತ್ತಿಗೆ ಹಾಕಿದಾಗ ಉಪಯೋಗವಾಗೆ

---

ಆ ವರ್ಣನೆಯು ನಮ್ಮ ದೇಶಿಯ ಒಬ್ಬ ಗೃಹಸ್ತನು ಕೊಟ್ಟಿರುವ ವರ್ಣನೆಗೆ ಎಷ್ಟು ಸರಿಯಾಗಿದೆ ಎಂಬುವದು ಸುಜ್ಞರಾದ ವಾಚಕರ ಲಕ್ಷ್ಯದಲ್ಲಿ ಬರಬಹುದು:—

* ಶಂಕರ ಕೋಟೆ ಎಂತ ಬೇರೆ ಕೋಟೆಯು ಝಾಸಿಯಲ್ಲಿಲ್ಲ. ಅಲ್ಲಿನ ಕೋಟೆಯ ಒಂದು ಭಾಗಕ್ಕೆ, ನಾರೋಶಂಕರನ ಭಾಗವೆಂತ ಹೇಳುತ್ತಾರೆ. ಆ ಭಾಗಕ್ಕೆ, ಶಂಕರ ಕೋಟೆ ಎಂತ ಇಲ್ಲಿ ಹೇಳಿರಬಹುದಾಗಿ ತೋರುತ್ತದೆ.

ತಕ್ಕಂಥಾ, ಅತಿ ಬೆಲೆಯುಳ್ಳ ದುರ್ಬಿನ್ ಇತ್ತು. ಅದು ಎಷ್ಟು ಒಳ್ಳೇದಾಗಿತ್ತಂದರೆ, ಅದರಿಂದ ಬಹು ದೂರದಲ್ಲಿರತಕ್ಕ ಪದಾರ್ಥವು ಸ್ಪಷ್ಟವಾಗಿ ಕಾಣುತ್ತಿತ್ತು; ಮತ್ತು ಅಲ್ಲಿ ಯಾವ ಮನುಷ್ಯನು ಎಲ್ಲಿದ್ದಾನೆ, ಏನುಮಾಡುತ್ತಾನೆಂಬುವದು ತಿಳಿಯುತ್ತಿತ್ತು. ಇಂಥಾ ದುರ್ಬಿನ್ ಹಚ್ಚಿ, ಇಂಗ್ರೇಜಿ ಸೈನ್ಯದವರು ಕೋಟೆಯಲ್ಲಿನ ಜಲಾಶ್ರಯದ ಜಾಗದಮೇಲೆ ತೋಫು ಹೊಡೆಯುವದಕ್ಕೆ ಪ್ರಾರಂಭಿಸಿದರು. ಆದಕಾರಣ ಪ್ರಥಮದಲ್ಲಿ 6, 7, ಜನಗಳು ಅಲ್ಲಿಗೆ ಅಡ್ಡಯಮೇಲೆ ನೀರು ತರುವದಕ್ಕೆ ಹೋದವರಲ್ಲಿ, 4 ಜನಗಳಿಗೆ ದೇಹಾಂತ ಪ್ರಾಯಶ್ಚಿತ್ತವಾಗಿ, ಉಳಿದವರು ಕಾವಡಿ ಬಿಸಾಟು, ಓಡಿಹೋದರು. ಈ ಪ್ರಕಾರವಾಗಿ, ಒಂದು ಪ್ರಹರ ಪರ್ಯಂತರ, ನೀರು ಶಿಕ್ಕದೇ ಹೋದಕಾರಣ, ಸ್ನಾನಾದಿ ಕರ್ಮಗಳು ಹಾರಿಹೋಗಿ ಬಿಟ್ಟವು.* ಆಗ ಪಶ್ಚಿಮ ಮತ್ತು ದಕ್ಷಿಣ ಬುರುಜಿನ ಮೇಲಿನ ಆಗ್ನೇಯಾಸ್ತ್ರಧಾರಿಗಳು ಶಂಕರ ಕೋಟೆಯಮೇಲೆ ಗುಂಡುಗಳು ಪ್ರಯೋಗಮಾಡುತ್ತಿದ್ದ ಶಂಕರ ತೋಫಿನಮೇಲೆ, ಒಂದೇಉಸುರಿಗೆ ಏಟುಗಳನ್ನು ಹೊಡೆದು, ಅದನ್ನು ನಿಲ್ಲಿಸಿದರು. ಆ ಮೇಲೆ ನೀರು ತರುವುದಕ್ಕೆ ಅಟಂಕ ತಪ್ಪಿ ಹೋಗಿ, ಸ್ನಾನ ಮತ್ತು ಭೋಜನಕ್ಕೆ ವ್ಯವಸ್ಥೆ ಆಯಿತು. ಅನಂತರ ಭೋಜನವಾಗಿ ಸ್ವಲ್ಪ ಕಾಲವಾಗುವದರೊಳಗೆ, ಒಂದೇ ಉಸುರಿಗೆ ದೊಡ್ಡ ಶಬ್ದವಾಗಿ, ಅಲ್ಲಲ್ಲಿ ಹೊಗೆ ಮತ್ತು ಧೂಳು ಎದ್ದಿತು. ಆದಕಾರಣ ಹತ್ತು ದಿಕ್ಕುಗಳಲ್ಲಿಯೂ ಸ್ತಬ್ಧವಾಗಿ ಹೋಗಿ ಯಾರಿಗೂ ಏನುಮಾಡಬೇಕೆಂಬುವದು ತೋರದಂತಾಯಿತು. ಸರ್ವರ ಹೊಟ್ಟೆಯಲ್ಲಿಯೂ ಧಸ್ ಎಂದು ಹೋಗಿ, ಏನಾಯಿತೋ ಎಂತ ಗಾಬರಿ ಹುಟ್ಟಿತು. ಆ ಮೇಲೆ ಎರಡು ತಾಸಿನಲ್ಲಿ ಹೊಗೆ ಹೋದಮೇಲೆ ವಿಚಾರಿಸುವದರಲ್ಲಿ ಕೋಟೆಯ ಮುಂದಿನ ಬೈಲಿನಲ್ಲಿದ್ದ ಮದ್ದಿನ ಕಾರ್ಖಾನೆಯಲ್ಲಿ, 30 ಜನ ಗಂಡಸರು, ಮತ್ತು 8 ಜನ

---

* ಈ ಮಾತಿನ ವಿಷಯವಾಗಿ, ಡಾಕ್ಟರ್ ಲೋಸಾಹೇಬನು ಬರೆದಿರುವದರಲ್ಲಿ ಏನೂ ಹೇಳಿಲ್ಲ. ತಥಾಪಿ, 'ಗಿಲಿಯರ್' ಸಾಹೇಬನು ತನ್ನ ಪುಸ್ತಕದಲ್ಲಿ ಈ ರೀತಿ ಬರೆದಿರುತ್ತಾನೆ:—

"The experienced old Soldier well knew that day-break in the morning was the most favourable time to attack a native force, for then many of it are necessarily absent, performing their morning ablutions and religious ceremonies requisite at that time and it was consequently half an hour before day dawned that the two storming parties selected from the European Regiments of the force marched off in silence towards the

ಹೆಂಗಸರು ಸತ್ತುಹೋಗಿದ್ದಾರೆ, ಮತ್ತು 40, 45 ಮನುಷ್ಯರಿಗೆ ಘಾಯವಾಗಿದೆ ಎಂತ ತಿಳಿಯಬಂತು. ಹುಣಸೇಮರದ ಬೈಲಿನಲ್ಲಿ ಮದ್ದಿನ ಕಾರ್ಖಾನೆಯು ನಡೆಯುತ್ತಿತ್ತು. ಎರಡು ಮಣ ಮದ್ದು ಆದಕೂಡಲೆ, ಬುರುಜಿನ ಕೆಳಗಿನ ನೆಲಮಾಳಿಗೆಯಲ್ಲಿ ವೈದು ಇಡುವ ಕ್ರಮವನ್ನು ಇಟ್ಟಿದ್ದರು. ಆ ಕಾರ್ಖಾನೆಯೊಳಗೆ ಗುಂಡು ಬೀಳುತ್ತಲೆ ಅದು ಅಲ್ಲಿ ಒಡೆದು, ಮದ್ದಿನಮೇಲೆ ಬಿದ್ದು ಹರವಿ ಥೂಳದ್ದಿತು. 8 ನೇ ದಿವಸ ಬಹಳ ಕಷ್ಟವು ಸಂಭವಿಸಿತು. ಯುದ್ಧವು ಬಹಳ ಬಲವಾಯಿತು. ವೀರರು ದೊಡ್ಡ ದೊಡ್ಡ ಸಿಂಹನಾದವನ್ನು ಮಾಡುತ್ತಿದ್ದರು. ತೋಫು ಮತ್ತು ಫಿರಂಗಿಗಳ ಶಬ್ದವು ಅಪರಿಮಿತವಾಗಿ ಕೇಳಿಸುತ್ತಿತ್ತು. ಇಲ್ಲಿ ಅಲ್ಲಿ, ಕಹಳೆ, ತಮಟೆ, ಬ್ಯೂಗಲ್ ಮುಂತಾದ ವಾದ್ಯಗಳಾಗುತ್ತಿದ್ದವು. ಧೂಳು, ಹೊಗೆ, ಮತ್ತು ನಾನಾವಿಧವಾದ ವಾದ್ಯಗಳ ಧ್ವನಿಗಳು ಸಹ ಸರ್ವ ದಿಕ್ಕುಗಳಲ್ಲಿಯೂ ವ್ಯಾಪಿಸಿದ್ದವು. ಇಂಗ್ರೇಜಿ ಸೈನ್ಯದವರು ಶತ್ರು ಸೈನ್ಯವನ್ನು ಬಹಳ ನಿರ್ಬಲಕ್ಕೆ ತಂದರು. ರಾತ್ರೆಯೆಲ್ಲಾ ಆಕಾಶದಿಂದ ರಕ್ತವರ್ಣವಾದ ಗೋಲಿಗಳ ವೃಷ್ಟಿಯು ಪಟ್ಟಣದಮೇಲೆ ಏಕಪ್ರಕಾರವಾಗಿ, ಆಗುತ್ತಾ ಇತ್ತು. ಪಟ್ಟಣದಲ್ಲಿ ಸಾವಿರಾರು ಜನಗಳು ಮೃತರಾದರು; ಉಳಿದವರು ಜೀವದಾಶೆಯಿಂದ ತಮ್ಮತಮ್ಮ ಮನೆಗಳಲ್ಲಿ ಅಂತರಂಗ ಸ್ಥಳಗಳನ್ನು ನೋಡಿ ಅಚ್ಛಾದಿಸಿಕೊಂಡಿದ್ದರು. ಪ್ರಾಕಾರದ ಮೇಲಿನ ಆಗ್ನೇಯಾಸ್ತ್ರಧಾರಿಗಳಾದ ಶಿಪಾಯಿಗಳು. ಅನೇಕರು, ಮೃತಪಟ್ಟರು. ಮತ್ತು ಅವರ ಸ್ಥಾನದಲ್ಲಿ ಬೇರೆಯವರನ್ನ ನಿಲ್ಲಿಸಿದರು. ಬಾಯಿಸಾಹೇಬಳಿಗೆ ಬಹಳ ಶ್ರಮವಾಗುತ್ತಿತ್ತು. ನಾಲ್ಕು ದಿಕ್ಕುಗಳಲ್ಲಿಯೂ ದೃಷ್ಟಿ ಇಟ್ಟು, ಏನೇನು ಬೇಕಾಗುತ್ತದೋ ಅದನ್ನ ಒದಗಿಸುವದಕ್ಕೆ ಸ್ವತಃ ತಾನೇ ಅಪ್ಪಣೆ ಮಾಡುತ್ತಿದ್ದಳು. ಅದರಿಂದ ಸೈನ್ಯದಲ್ಲಿನ ಜನಗಳಿಗೆ ವಿಶೇಷವಾದ ಆವೇಶವೆದ್ದು, ಅವರು ಮಹಾ ಬಲಿಷ್ಟರಾದ ಇಂಗ್ರೇಜಿ ಸೈನ್ಯದವರ ಸಂಗಡ ಏಕಪ್ರಕಾರವಾಗಿ ಯುದ್ಧ ಮಾಡುತ್ತಿದ್ದರು; ಇಂಗ್ರೇಜಿ ಸೈನ್ಯದವರು ತಮ್ಮ ಪರಾಕ್ರಮವನ್ನ ಚೆನ್ನಾಗಿ ತೋರಿಸಿದರು. ತಥಾಪಿ, ಕೋಟೆಯೊಳಗಿನ ಯುದ್ಧಶಾಲಿಗಳ ಅಸದೃಶವಾದ ದೃಢ ನಿಶ್ಚಯದಿಂದ ತಾರೀಖು 31ರ ಪರ್ಯಂತರ, * ಅವರ ಯುದ್ಧ ಸಾಮಗ್ರಿಯು

---

breaches in the walls—the sappers led by their officers carrying scaling ladders, which it was thought might be required, even though the breaches were pronounced to be practicable."

*The Rane P.* 242.

* ಅದೇರಾತ್ರೆ, ರಾಣಿಸಾಹೇಬಳಿಗೆ ಒಂದು ಚಮತ್ಕಾರವಾದ ಸ್ವಪ್ನಬಿತ್ತು. ಆ ಸ್ವಪ್ನವು ಈ ಪ್ರಕಾರವಾಗಿತ್ತು:—"ಯಾರೋ ಒಬ್ಬ ಮಧ್ಯ ವಯಸ್ಸಿನ, ಗೌರ

ವರ್ಣದ, ನೆಟ್ಟನೆ ಮೂಗುಳ್ಳ, ವಿಶಾಲವಾದ ಬಹಳವಾಗಿ ತೀರಿಹೋಗಿದ್ದಾಗ್ಯೂ, ಶತ್ರುಗಳಿಗೆ ಕೋಟೆಯೊಳಗೆ ಪ್ರವೇಶಮಾಡಲು ಆಸ್ಪದ ಕೊಡಲಿಲ್ಲ. ಇಂಗ್ರೇಜಿ ಮತ್ತು ಝೂರ್ಸಿ ಸೈನ್ಯದ ಯುದ್ಧವು ನಿಕರಾಳವಾಗಿ ನಡೆಯುತ್ತಿರುವಾಗ ಮಧ್ಯದಲ್ಲಿ ಒಂದು ವಿಶೇಷವಾದ ಮಹಾತ್ಮೆಯುಳ್ಳ ಸಂಗತಿ ಬಂದು ಒದಗಿತು. ಮಹಾರಾಣಿ ಲಕ್ಷ್ಮೀಬಾಯಿ ಸಾಹೇಬಳಿಗೆ, ಸಹಾಯಕ್ಕಾಗಿ ಶ್ರೀಮಂತ ನಾನಾಸಾಹೇಬ ಪೇಷ್ವೆಯ ಸೇನಾಪತಿ, ತಾತ್ಯಾಟೋಪಿಯು, ಕಾಲ್ಪಿಯಿಂದ 30,000 ಸೈನ್ಯ ತೆಗದುಕೊಂಡು, ಅಲ್ಲಲ್ಲಿ ನಿಂತುಕೊಳ್ಳುತ್ತಾ ಪ್ರಯಾಣ ಮಾಡಿಕೊಂಡು, ಝೂರ್ಸಿ ಸಮೀಪಕ್ಕೆ ಬಂದು ತಲ್ಪಿದನು. * ಇಂಗ್ರೇಜಿ ಸೇನಾಪತಿ, ಸರ್ ಹ್ಯೂರೋಜ್ ಸಾಹೇಬನು, ಶತ್ರುಗಳ ದೂರದಲ್ಲಿ ನಡಿಸುವ ಸಂಗತಿಗಳು ಶೀಘ್ರವಾಗಿ ಶಿಕ್ಕಬೇಕೆಂಬುವದ್ದರಿಂದ ಝೂರ್ಸಿ ಸಮೀಪ ಒಂದು ಗುಡ್ಡದಮೇಲೆ ತಂತೀ ವರ್ತಮಾನದ ಆಫೀಸ್‌ಇಡಿಸಿದನೆಂತ ಮೇಲೆಯೇ ಹೇಳಿದೆ ; ಅಲ್ಲಿನ ಅಧಿಕಾರಿಗಳಿಗೆ, ಉತ್ತರ ದಿಕ್ಕಿನಲ್ಲಿ ದೊಡ್ಡ ಸೈನ್ಯವು ಬರುವದೆಂತ ದೃಷ್ಟಿಗೆ ಬಿದ್ದಕೂಡಲೆ, ಅವರು ಭಯಸೂಚನಾರ್ಥವಾದ ನಿಶಾನೆಯನ್ನು

---

ಹಣೆಯುಳ್ಳ ಮತ್ತು ವಿಶಾಲವಾದ ಕಾಡಿಗೆಗಣ್ಣಿನ ಅತಿರೂಪವತಿಯಾದ ಒಬ್ಬ ಸುವಾಸಿನಿಯು ಮೈತುಂಬಾ ಮುತ್ತಿನಾಭರಣಗಳನ್ನು ಹಾಕಿಕೊಂಡು, ಕೆಂಪಂಚಿನಶೀರೆಯನ್ನುಟ್ಟುಕೊಂಡು, ಶರಗು ಕಟ್ಟಿಕೊಂಡು, ಕೋಟೆಯ ಬುರುಜಿನಮೇಲೆ ನಿಂತಿದ್ದಾಳೆ; ಮತ್ತು ಒಂದು ದೊಡ್ಡ ಕಠೋರವಾದ ಮುದ್ರೇ ಉಂಗುರದಿಂದ ಫಿರಂಗಿಗಳ ಕೆಂಪು ಗುಂಡುಗಳನ್ನ ಚಲ್ಲುತ್ತಾಯಿದ್ದಾಳೆ. ಗುಂಡುಗಳು ಬೀಳುತ್ತ ಬೀಳುತ್ತ, ಕಪ್ಪಾಗಿಹೋದ, ತನ್ನ ಕೈಯನ್ನ ಬಾಯಿಸಾಹೇಬಳಿಗೆ ತೋರಿಸಿ, ನಾನಾದುದರಿಂದ, ಈ ಗುಂಡುಗಳನ್ನ ಸುಡುತ್ತಿದ್ದೇನೆ.''

ಉಜ್ಜನ ಪುಸ್ತಕ.

* ತಾತ್ಯಾಟೋಪಿಯು ಬಲಾಢ್ಯವಾದ ಸೈನ್ಯವನ್ನು ತೆಗದುಕೊಂಡು ಝೂರ್ಸಿಗೆ ಬಂದನು. ಅವನು ತಾನಾಗಿಯೇ ಝೂರ್ಸಿಯಲ್ಲಿನ ದಂಗೇಖೋರರಿಗೆ ಸಹಾಯ ಮಾಡುವದಕ್ಕಾಗಿ ಬಂದನೆಂತ, ಇಂದೂರು ಪುಸ್ತಕದಲ್ಲಿ ಬರೆದಿದೆ. ಪರಂತು, ಉಜ್ಜನಪ್ರತಿಯಲ್ಲಿ ಬೇರೇ ವಿಧವಾಗಿ ತೋರಿಸಿಧೆ. ಯಾವವೇಳೆಯಲ್ಲಿ ದುರ್ದೈವದಿಂದ ರಾಣೀಸಾಹೇಬಳಿಗೆ, ಇಂಗ್ರೇಜಿಯವರ ಸಂಗಡ ವಿರುದ್ಧಹುಟ್ಟಿ, ಝೂರ್ಸಿಯಲ್ಲಿ ಯುದ್ಧ ಮಾಡಿದಳೋ, ಅದೇ ಸಮಯದಲ್ಲಿಯೇ, ತನಗೆ ಸಹಾಯಕ್ಕೋಸ್ಕರ, ಸೈನ್ಯವನ್ನ ಕಳುಹಿಸಿಕೊಡುವದಕ್ಕಾಗಿ, ಕಾಲ್ಪಿಗೆ, ಶ್ರೀಮಂತ ರಾವ್‌ಸಾಹೇಬ್ ಪೇಷ್ವೆಕಡೆಗೆ 5 ಜನ ಸವಾರರುಗಳನ್ನು ಕಳುಹಿಸಿದಳು. ಇಷ್ಟೇಅಲ್ಲದೆ, ಆ ಕಡೆಯಿಂದ ಶೀಘ್ರವಾಗಿ ಸೈನ್ಯಬರಲಿಲ್ಲವೆಂಬುವದರಿಂದ, ಲಾಲಾಭಾವೂ ಟೆಂಕರೆ ಮತ್ತು ಭಟ್ಟಾ ಇವರು ಸಹಸ್ರ ಬ್ರಾಹ್ಮಣರುಗಳನ್ನ ಗಣಪತಿ ದೇವಸ್ಥಾನದಲ್ಲಿ, ಅನುಷ್ಠಾನಕ್ಕೆ ಕೂಡಿಸಿದ್ದರೆಂತ ಬರೆದಿದೆ. ಸ್ವತಃ ತಾತ್ಯಾ ಟೋಪಿಯು 1859 ನೇ ಇಸ್ವಿ, ಏಪ್ರಿಲ್ 10ರಲ್ಲಿ, ಮುಂಶರೀ ಮೊಕ್ಕಾಂನಲ್ಲಿ

ನಿಲ್ಲಿಸಿದರು. ಅದರಿಂದ, ಇಂಗ್ರೇಜಿ ಸೇನಾಪತಿಗೆ, ಶತ್ರುವಿನ ಆಗಮನದ ವರ್ತಮಾನವು ಶೀಘ್ರವಾಗಿ ತಿಳಿದು ಬಂದು, ಆ ಗೋಪ್ಯ ಸಂಗತಿಯ ವಿಷಯವಾಗಿ, ವಿಚಾರ ಮಾಡಿದನು. ಏಕಂದರೆ, ಇಂಗ್ರೇಜಿ ಸೈನ್ಯಕ್ಕೆ ವಿರೋಧವಾದವರು ಬಹಳ ಸ್ವಲ್ಪ ಇದ್ದು, ಝಾಁಸಿಗೆ ಮುತ್ತಿಗೆ ಹಾಕಿದ ಕಾರಣ ಅವರು, ಪ್ರತಿ ಒಂದು ಸ್ಥಳದಲ್ಲಿಯೂ ಹೋಗಬರಲಿಕ್ಕೆ ಅಟಂಕಪಡಿಸಿತ್ತು. ಕೋಟೆಯೊಳಗಿನ ಜನಗಳಿಗೆ ಶುಲಭವಾಗಿ ಸಿಕ್ಕಿ ತಮ್ಮನ್ನು ತಕ್ಷಣವೇ ಸಂಹಾರ ಮಾಡ್ಯಾರು ಎಂತ ಅವರಿಗೆ ಬಹಳ ಭಯವಿತ್ತು. ಅತ್ತಲಾಗಿ, ಬೇಟವಾನದಿಯ ಮೇಲಿನ ದೊಡ್ಡ ಬೈಲಿನಲ್ಲಿ ತಾತ್ಯಾಟೋಪಿಯ ಮಹಾ ಬಲಾಢ್ಯವಾದ ಸೈನ್ಯವು ದೊಡ್ಡ ಆವೇಶದಿಂದ ಬಂದು ನಿಂತಿತು. ಅದರಲ್ಲಿ ಗ್ವಾಲಿಯರ್‌ನಲ್ಲಿನ ರಣಶೂರ ಕಂಟಿಂಜೆಂಟ್ ಸೇನೆ ಇದ್ದು, ಅದು ಕಾಁಪುರದ ಮೊಕ್ಕಾಂನಲ್ಲಿ, ಜನರಲ್ ವಿಂಡಾಂ ಸಾಹೇಬನ 1 ಭಾಗದ ಸೈನ್ಯವನ್ನು ಸೋಲಿಸಿತ್ತು. ಆದಕಾರಣ, ಆ ವಿಜಯಾನಂದದಿಂದ ಆವೇಶ ಏರಿದ 'ಪೇಷ್ವೆ ಸೈನ್ಯದ ಮುಂದೆ, ಇಂಗ್ರೇಜಿ ಸೈನ್ಯದ್ದು ಏನು ಲಕ್ಷೆ ? ಎಂಬ ಭ್ರಾಂತಿಯಿಂದ ಮದೋನ್ಮತ್ತವಾಗಿ ಹೋಗಿತ್ತು. ಆ ಸೇನೆಯಲ್ಲಿ ಚರ್ಕಾರಿ ಸಂಸ್ಥಾನದಮೇಲೆ ಬಿದ್ದು, ಆ ರಾಜನಿಂದ 3 ಲಕ್ಷ ರೂಪಾಯಿಗಳು ಮತ್ತು 24 ತೋಫುಗಳನ್ನು ಹಸ್ತಗತಮಾಡಿಕೊಂಡು ಬಂದ ತಾತ್ಯಾಟೋಪಿಯ ಕೈಕೆಳಗಿನ ಖಾಸ ಸೈನ್ಯವು ಬಹಳವಾಗಿತ್ತು. ಆದರೆ, ಅದು ಅಲ್ಪ ಯಶಸ್ಸಿನಿಂದಲೇ ಉಬ್ಬಿ ಹೋಗಿತ್ತು. ಇದು ಹಾಗಿರಲಿ. ಒಂದುಕಡೆ ಈ ಪ್ರಕಾರವಾದ ವಿಜಯೋತ್ಸವದಿಂದ ಆವೇಶ ಹುಟ್ಟಿ ನಾನು ಮುಂದೆ ನಾನು ಮುಂದೆ ಎಂತ ಬರುತ್ತಿರುವ ಬಲಾಢ್ಯವಾದ ಸೈನ್ಯವು, ಮತ್ತು ಒಂದುಕಡೆ ಶತ್ರುಗಳಿಗೆ ಎಂದಿಗೂ ಶರಣಾಗಲಿಕ್ಕಿಲ್ಲವೆಂತ ನಿಶ್ಚಯಮಾಡಿ, ಝಾಁಸಿ ಕೋಟೆಯೊಳಗೆ ಸಂಕಲ್ಪ ಹಿಡಿದು ಕೂತಿದ್ದ ರಾಣೀ ಸಾಹೇಬಳ ಪ್ರಬಲವಾದ ಸೈನ್ಯವು ಈ ಎರಡರ ಮಧ್ಯ ಸಂಧಿಯಲ್ಲಿ ತಮ್ಮ ಪರಿಣಾಮ ಮಾಡಿಕೊಂಡು, ಜಯ ಸಂಪಾದನೆ ಮಾಡಿಕೊಳ್ಳುವದು ಬಹಳ ಕಠಿಣವಾದ ಕೆಲಸವಾಗಿದೆ. ಆ ಸಮಯದಲ್ಲಿ ಸರ್ ಹ್ಯೂರೋಜ್ ಸಾಹೇಬನು ತನ್ನ ವಿಶಿಷ್ಟ ಬುದ್ಧಿ ಚಾತುರ್ಯದಿಂದಲೂ, ಮತ್ತು ಯುದ್ಧ ಪ್ರವೀಣತೆಯಿಂದಲೂ, ಸೊಂಟಾ ಕಟ್ಟಬೇಕಾದ ಕಾಲವಾಗಿತ್ತು. ಪರಂತು

---

ಮೇಜರ್ ಆರ್. ಡಿ. ಮೀಡ್‌ಸಾಹೇಬನ ಮುಂದೆಕೊಟ್ಟ ಹೇಳಿಕೆಯಲ್ಲಿ ಈ ರೀತಿ ಬರಕೊಟ್ಟಿರುತ್ತಾನೆ:—

"I received a note from the Queen of Jhansi to the effect that she was waging war with the Europeans, and begging me to come to her aid. I reported the news to the Rao Saheb at Kalpi. The Rao Saheb came to Jaipur, and gave me permission to go to the assistance of the Queen of Jhansi."

ಇಂಥಾದ್ದರಲ್ಲಿಯೂ, ಬಹಳ ಧೈರ್ಯ ಮತ್ತು ಯುಕ್ತಿಯಿಂದ ಆ ಎರಡು ಸೈನ್ಯಕ್ಕೂ ಎದೆಗೊಟ್ಟು ನಿಂತು, ವಿಜಯ ಶ್ರೀಯನ್ನು ವಶಮಾಡಿಕೊಂಡದ್ದು ಬಹಳ ಮಹಾತ್ಮೆಯುಳ್ಳ ಮಾತಾಗಿದೆ.

ಸರ್‌ಹ್ಯೂರೋಜ್ ಸಾಹೇಬನು, ತಾತ್ಯಾಟೋಪಿಯ ಆ ಗಮನವರ್ತಮಾನವನ್ನು ತಿಳಿದಕೂಡಲೆ, ಸರ್ವಥಾ ಘಾಬರಿಯಾಗದೆ, ಬಹಳಸಮಾಧಾನದಿಂದ, ತಾರೀಖು 31 ನೇ ರಾತ್ರೆ 1ನೇ ಬ್ರಿಗೇಡಿಯರ್ ಸೈನ್ಯದಲ್ಲಿನ, ಕೆಲವು ಶೂರಜನಗಳನ್ನು ರಹಸ್ಯದಿಂದ, ಕಾಲ್ಪಿಯ ಮಾರ್ಗದಮೇಲೆ ಕಳುಹಿಸಿದನು. ಅನಂತರ ಕೆಲವು ಆನೆಗಳನ್ನು ತರಿಸಿ, 24 ಘೌಂಡಿನ, 2 ತೋಫುಗಳನ್ನು ಓರ್ಛಾರಸ್ತೆಯ ಮೇಲೆ ಮೈದಾನದಲ್ಲಿ ಇಡಿಸಿದನು; ಮತ್ತು ಅಲ್ಲಿಂದ ಪಟ್ಟಣದೊಳಗೆ ಹೋಗುವದಕ್ಕೆ ಶತ್ರುವಿಗೆ ಮಾರ್ಗವಿಲ್ಲದಂತೆ ಬಂದೋಬಸ್ತಾಗಿ ಕಟ್ಟಿಬಿಟ್ಟನು. ಅದೇಪ್ರಕಾರವಾಗಿ ಸುತ್ತಮುತ್ತಲೂ ಸವಾರರನ್ನು ಕಾವಲಿಗೆ ನೇಮಿಸಿ, ಇಂಗ್ರೇಜಿಸೈನ್ಯವನ್ನು ಚನ್ನಾಗಿ ಸರಿಪಡಿಸಿಕೊಂಡನು. ಇತ್ತಲಾಗಿ ಝಾಸೀ ಸೈನ್ಯಕ್ಕೆ ತಮ್ಮನ್ಯೂನತೆ ಅಥವ ಅಬಲತ್ವಕಂಡು ಬರಬಾರದು ಎಂಬುವದ್ದರಿಂದ, ರಾತ್ರೆಯಲ್ಲಾ ಅವರಮೇಲೆ ಬಹಳ ಬಲವಾಗಿ ತೋಫು ಹೊಡೆಯುವ ಕೆಲಸವನ್ನು ನಡೆಸುತ್ತಲೆ ಇತ್ತು. ಇಂಗ್ರೇಜಿ ಸೈನ್ಯದ ಸಂಖ್ಯೆಯು 1200 * ಆಗಿದ್ದಾಗ್ಯೂ, ಅವರ ಶಕ್ತಿಯು ಮತ್ತು ಶೌರ್ಯದ ವಿಷಯದಲ್ಲಿ ಸರ್‌ಹ್ಯೂರೋಜ್ ಸಾಹೇಬನಿಗೆ ನಂಬಿಕೆ ಇತ್ತು. ಅದೇ ಪ್ರಕಾರವಾಗಿ, ಆ ಸೈನ್ಯಕ್ಕೆ, ತಮ್ಮ ಸೇನಾಪತಿಯ ಯುದ್ಧಕಲಾನಿಪುಣತ್ವ ಮುಂತಾದ ಗುಣದ ವಿಷಯದಲ್ಲಿ ಪೂರ್ಣ ತಿಳುವಳಿಕೆ ಇದ್ದಕಾರಣ, ಅವರೂನೂ, 'ರಣಭೂಮಿಯ ಮೇಲೆ ಪ್ರಾಣತ್ಯಾಗ ಮಾಡೋಣ ಅಥವಾ ಬ್ರಿಟಿಷ್ ರಾಷ್ಟ್ರಕ್ಕೆ ನಿರಂತರ ಭೂಷಣಕೊಡತಕ್ಕಂಥಾ ಅಸದೃಶವಾದ ವಿಜಯವನ್ನು ಸಂಪಾದನೆ ಮಾಡೋಣ' ಎಂತ ಆ ವೇಶದಿಂದ ಶಪಥಮಾಡಿದರು.

ತಾತ್ಯಾಟೋಪಿಯು ವಳ್ಳೇ ಶೂರನಾದ ಅಸ್ತ್ರಪಂಡಿತ ಪುರುಷನಾಗಿದ್ದನು. ಆತನ ವರ್ಣನೆಯು "ಡೆಲ್ಲಿನ್ಯೂಸ್' ವರ್ತಮಾನ ಪತ್ರದಲ್ಲಿ ದಂಗೇ ಸಮಯದಲ್ಲಿ ಪ್ರಸಿದ್ಧವಾಗಿದೆ. ಅದು ಮುಂದೆ ಬರೆದಿರುವ ಪ್ರಕಾರ:—† " ತಾತ್ಯಾನು ಮಹಾರಾಷ್ಟ್ರ

---

* ಈ ಸಂಖ್ಯೆಯ ವಿಷಯದಲ್ಲಿ, ಬಹಳಸಂಶಯಇದೆ. ಏಕೆಂದರೆ, ಆ ವೇಳೆಯಲ್ಲಿ, ಇಂಗ್ರೇಜಿ ಸರ್ಕಾರದವರಿಗೆ, ನಿಜಾಂಸರ್ಕಾರ ದಿಂದಲೂ, ಮತ್ತು ಇತರ ಸಂಸ್ಥಾನಿಕರಿಂದಲೂ ಪುಷ್ಕಳ ಸೇನಾಸಹಾಯ ಸಿಕ್ಕಿತ್ತು. ಹೀಗಿರುವಾಗ, ಆ ಸೈನ್ಯವೆಲ್ಲಾ ಸೇರಿ 1200 ಕ್ಕಿಂತ, ಅನೇಕಸಾರಿ ಪುಷ್ಕಳ ಜಾಸ್ತಿ ಸಂಖ್ಯೆ ಇರಲೇ ಬೇಕು.

† ಈ ವರ್ಣನೆಯು 'ಡೆಲ್ಲಿನ್ಯೂಸ್' ವರ್ತಮಾನ ಪತ್ರದ ಆಧಾರದ ಮೇಲೆ ತಾರೀಖು 4–2–1895 ನೆ ಶುಭಸೂಚಕ ವರ್ತಮಾನ ಪತ್ರದಲ್ಲಿ ಪ್ರಸಿದ್ಧಿಯಾಗಿದೆ. ಆ ಶುಭಸೂಚಕ ಪತ್ರದ ಮೇಲೆ ಅದನ್ನು ನಾವು ಇಲ್ಲಿ ಕೊಟ್ಟಿದ್ದೇವೆ.

ಜಾತಿಯು ಬ್ರಾಹ್ಮಣನಾಗಿದ್ದಾನೆ. ಅವನು ಒಳ್ಳೇ ಕುಲವಂತನಲ್ಲ, ಅವನು ಲೂಟಿತ
ನದ ಲಕ್ಷಣವುಳ್ಳ ಸ್ವಭಾವದವನಾಗಿ, ತನ್ನ ಘಟ್ಟಿಗತನವನ್ನ ತೋರಿಸಿಕೊಳ್ಳುತ್ತಿರು
ವದೇ ಹೊರ್ತು, ಅವನಿಗೆ ವಿದ್ಯಾ ಏನೂ ಇಲ್ಲ. ಅವನಿಗೆ ಬರಹ ಮತ್ತು ಓದು ಏನೂ
ಬರುವದಿಲ್ಲ. ಪರಂತು ಶಿಪಾಯಿಗಿರಿ ಕೆಲಸ ಮಾಡಿ, ತನ್ನ ಪರಾಕ್ರಮವನ್ನ ತೋರಿಸು
ತ್ತಿದ್ದಾನೆ. ಆವಕಾರಣ ಅವನನ್ನ ಹಿಂಬಾಲಿಸುವವರಿಗೆ ಅವನಮೇಲೆ ತುಂಬಾ ವಿಶ್ವಾಸ
ಇದೆ. ಅವನ ಶರೀರವು ಕಟ್ಟಿಗೆಯಹಾಗೆ ಘಟ್ಟಿಯಾಗಿದ್ದು, ಬಲವಂತನಾಗಿಯೂ
ಮತ್ತು ಧೈರ್ಯಶಾಲಿಯಾಗಿಯೂ ಇದ್ದಾನೆ ; ಮತ್ತು ಅವನು ತನ್ನ ಶರೀರ ಬಲದಿಂದ,
ತನಗಿಂತಲೂ ಹೆಚ್ಚಾಗಿ ಎರಡನೆಯವರ ಮನಸ್ಸಿನಲ್ಲಿಯೂ ತನ್ನ ಆಚರಣೆಯಿಂದ
ಪೌರುಷ ಮತ್ತು ಧೈರ್ಯವನ್ನ ವಿಶೇಷವಾಗಿ ಉಂಟು ಮಾಡುತ್ತಾನೆ. ಇಂಗ್ರೇಜಿಯ
ವರ ಸಂಗ್ರಾಮದ ವಿದ್ಯ ಕುಶಲತೆ ವಿಷಯದಲ್ಲಿ, ಆತನಿಗೆ ಒಳ್ಳೇ ಪರಿಶ್ರಮವಿದೆ.
ಅವನು ಸಮರಾಂಗಣ ಯುದ್ಧಕ್ಕೆ ನಿಲ್ಲುತ್ತಿರಲಿಲ್ಲ. ಇಂಗ್ರೇಜಿ ಜನಗಳು ಅವನ ಬೆನ್ನ
ಟ್ಟಿಹೋಗಿ, ದಣಿಸುವದು, ಅವನಿಗೆ ಸಂತೋಷವಾಗಿ ತೋರುತ್ತಿತ್ತು. ಅವನು
ತುಂಬಾ ಧೈರ್ಯಸ್ಥನಾಗಿದ್ದಾನೆ. ಅವನ ವಯಸ್ಸು ಸುಮಾರು 40 ವರುಷಗಳಾ
ಗಿದೆ. ಅವನು ದೊಡ್ಡ ಧೈರ್ಯಶಾಲಿ, ಘಟ್ಟಿಗನು, ತಳತಳಕು ತಿಳುವಳಿಕೆಯವನು,
ಮತ್ತು ರಣವೀರನಾಗಿದ್ದಾನೆ. ಅವನ ಆಕೃತಿಯು, ಶೌರ್ಯವುಳ್ಳದ್ದಾಗಿಯೂ,
ಮತ್ತು ತೇಜಸ್ಸುಳ್ಳದ್ದಾಗಿಯೂ ಇದ್ದು ಮುಖಲಕ್ಷಣ ಚನ್ನಾಗಿದೆ. ಆತನ ಕಣ್ಣು
ಗಳು ಬಹಳ ಸೂಕ್ಷ್ಮ ಮತ್ತು ಉಗ್ರವಾಗಿವೆ, ಮತ್ತು ಅವನ ಹುಬ್ಬುಗಳು ಕಪ್ಪಾ
ಗಿವೆ, ಮತ್ತು ಬಿಲ್ಲಿನಹಾಗೆ ಹಣೆಯು ಉದ್ದವಾಗಿ ನೆಟ್ಟಗಿದೆ, ಮೂಗು ಗರುಡನ ಮೂ
ಗಿನಹಾಗೆ ಇದೆ, ಬಾಯಿ ಸಣ್ಣದು, ತುಟಿಗಳು ತೆಳ್ಳಗೆ, ದಂತಗಳು ಶುಭ್ರ, ಮೀಸೆಯು

---

* ಅವನಶರೀರ ವರ್ಣನೆಯನ್ನ ಇನ್ನೊಂದು ಸ್ಥಳದಲ್ಲಿ ಈ ರೀತಿ ಮಾಡಿದೆ.

"Tantia Topee was nearly fifty years of age ; five feet six inches in height; stout and well made, with an intelligent face and a large head, of great breadth from ear to ear. His piercing black eyes were surmounted by sharply—arched, grey eye-brows ; and the hair, with which his head was abundantly covered as well as that of his beard, moustaches and whiskers, was of the same colour. His look and bearing gave promise of prompt action and dogged fixity of purpose."

*Martin's British India P.* 464.

ಕಪ್ಪು, ಈರೀತಿ ಇದೆ. ಅವನು (ಉಡುಪು) ಸಾಧಾರಣವಾದ ಬಟ್ಟೆಯನ್ನು ಹಾಕಿಕೊಳ್ಳುತ್ತಾನೆ. ಅವನು ಅಟ್ಟಹಾಸಕ್ಕಿಂತಲೂ ಶರೀರ ರಕ್ಷಣೆ ಚನ್ನಾಗಿ ಆಗತಕ್ಕಂಥಾ ವಸ್ತ್ರಧಾರಣಮಾಡಿ ಕೊಳ್ಳುತ್ತಾನೆ. ಅವನು ಯಾವಾಗಲೂ ಉದ್ದವಾದ ಅಂಗಿಯನ್ನು ಹಾಕಿಕೊಂಡು, ಹೆಗಲಮೇಲೆ ತಪ್ಪದೆ, ಬಂದು ಕಾಶ್ಮೀರದ ಶಾಲನ್ನು ಹೊದ್ದುಕೊಳ್ಳುತ್ತಾನೆ. ಅವನ ಸಂಗಡ, 12 ತಿಂಗಳೂನೂ, ಸುಮಾರು 25, 30, ಜನರು ಪಹರೇ ಇರುತ್ತಾರೆ. ಅವನು ಇಷ್ಟೇ ಅಟ್ಟಹಾಸದಿಂದ, ಯುದ್ಧದಲ್ಲಿ ತಪ್ಪಿಸಿಕೊಂಡು ಹೋಗುತ್ತಾನೆ. ಅವನು ಯಾವಾಗಲೂ ಕುದುರೆಯಮೇಲೆ ಇರುತ್ತಾನೆ. ಯಾವದಾದರೂ ವೇಳೆಯಲ್ಲಿ, ದೇಹಕ್ಕೆ ಶ್ರಮ ಅಥವ ಘಾಯವಾದಾಗ ಪಾಲಕಿಯ ಆಶ್ರಯವನ್ನ ಹಿಡುಕೊಳ್ಳುತ್ತಾನೆ. ಅವನು ತಾನು 'ನಾನಾಸಾಹೇಬನ ಪ್ರತಿನಿಧಿ' ಎಂತ ತನಗೆ ಹೆಸರು ತೆಗದುಕೊಂಡಿದ್ದಾನೆ. ಈ ವರ್ಣನೆಯಿಂದ ತಾತ್ಯಾನ ಶೌರ್ಯದ ವಿಷಯವಾಗಿ ಬಹಳ ಸಂಗತಿಗಳು ಊಹಿಸಬಹುದಾಗಿವೆ. ಬ್ರಹ್ಮಾವರ್ತದಲ್ಲಿ ಶ್ರಿಮಂತ ಬಾಜಿರಾವ್ ಸಂಗಡ, ಶಿಪ್ಯತನ ಮಾಡುವಗೋಸ್ಕರ ಹೋಗಿದ್ದ ಈ ಮನುಷ್ಯನು, ಮುಂದೆ ಶಸ್ತ್ರ ಧರಿಸಿಕೊಂಡು ಪ್ರಬಲವಾದ ಇಂಗ್ರೇಜಿ ಸೈನ್ಯದ ಸಂಗಡ ಯುದ್ಧಮಾಡುವದಕ್ಕೆ, ಆಸಕ್ತನಾಗಿ ನಿಂತದ್ದು ಎಷ್ಟು ಆಶ್ಚರ್ಯಕರವಾದ ಮಾತಾಗಿದೆ ಎಂಬುವದು ಯೋಚಿಸತಕ್ಕದ್ದಾಗಿದೆ.

ಶ್ರೀಮಂತ ನಾನಾಸಾಹೇಬ ಪೇಷ್ವೆಗೆ, ಇಂಗ್ರೇಜಿ ಸರ್ಕಾರದವರು ಬಾಜಿರಾವ್ ಸಾಹೇಬನಿಗೆ ನೇಮಕವಾದ ಪೆಂಷನ ದ್ರವ್ಯವನ್ನ ಕೊಡುವದು ನಿಲ್ಲಿಸಿಬಿಟ್ಟರು. *

---

* ಪೇಷ್ವೆ ಬಾಜಿರಾವ್ ಸಾಹೇಬನು, ಮಾಲ್ಕಂ ಸಾಹೇಬನ ಹತ್ತರ ರಾಜ್ಯದ ಖುಲಾಸೆ ಪತ್ರವನ್ನು ಬರಕೊಟ್ಟಾಗ, ತಹಾದಲ್ಲಿ ಈ ಪ್ರಕಾರ ಬಂದು ಕಲಂ ಬರೆದಿತ್ತು:—

"Bajee Row shall, on his voluntarily agreeing to this arrangements, receive a liberal Pension from the Company's Government, for the support of *himself and his family*. The amount of this pension will be fixed by the Governor-General, but Brigadier-General Malcolm takes upon himself to engage that it shall not be less than eight lacs of rupees per annum."

ಆ ಪ್ರಕಾರವಾಗಿ ಬಾಜಿರಾವ್ ಸಾಹೇಬನಿಗೆ 8 ಲಕ್ಷ ರೂಪಾಯಿ ಪೆಂಷನ ಪ್ರಾರಂಭವಾಯಿತು. ಅದರಮೇಲೆ ಅವನು ಬ್ರಹ್ಮಾವರ್ತ ಕ್ಷೇತ್ರದಲ್ಲಿ ಹರಿಹರಿ ಎಂದುಕೊಳ್ಳುತ್ತ ಸ್ವಸ್ಥವಾಗಿ ಕೂತಿದ್ದನು. ಅವನ ರಾಜ್ಯ ಮುಂತಾದ ಸರ್ವಸ್ವವನ್ನ,

ಆದಕಾರಣ, ಆತನಿಗೆ ಬಹಳ ದುಃಖಹುಟ್ಟಿ, ಸನ್ 1857ನೇ ಇಸ್ವಿಯ ಕಾನ್ಪುರದ ದಂಗೆಯಲ್ಲಿ, ತನ್ನ ನಿರಾಶೆ ಮತ್ತು ಕಷ್ಟಪಟ್ಟ ಜಾತ್ಯಾ ನಿರುಪದ್ರವಸ್ವಭಾವದ, ರುದ್ರಸ್ವರೂಪವನ್ನು ತೋರಿಸಿದನು; ಅಂದಿನಾರಭ್ಯ ಉತ್ತರ ಹಿಂದೂಸ್ಥಾನದಲ್ಲಿ ಸರ್ವಸ್ಥಳದ ದಂಗೇಖೋರರಿಗೆ ಅವನ ಅನುಕೂಲತೆಯ ಬಳ್ಳೇಲಾಭ ಸಿಕ್ಕಿತು. ಮತ್ತು ಕೆಲವುಕಾಲ

---

ಇಂಗ್ರೇಜಿಯವರು ತೆಗೆದುಕೊಂಡಾಗ್ಯೂ, ಮುಂದೆ ಆತನು ಆಫ್ಗನ್ ಸ್ಥಾನದಲ್ಲಿ ನಡೆದ ಯುದ್ಧಕ್ಕಾಗಿ, ಇಂಗ್ರೇಜಿ ಸರ್ಕಾರಕ್ಕೆ 6 ಲಕ್ಷರೂಪಾಯಿ ಸಹಾಯಮಾಡಿದನು. ಪಂಜಾಬ್‌ನಲ್ಲಿ ಶಿಕ್‌ಜನಗಳ ಯುದ್ಧ ಸಮಯದಲ್ಲಿ, 1000 ಕುದುರೆ ಸವಾರರು ಮತ್ತು ಲಷ್ಕರ್ ಸಹ ಇಂಗ್ರೇಜಿ ಸರ್ಕಾರಕ್ಕೆ ಕೊಡಲಿಕ್ಕೆ ಒಪ್ಪಿಕೊಂಡನು. ಅಂಥಾ ಸಂದಿಗ್ಧ ಸಮಯದಲ್ಲಿ ಸಹಾಯ ಮಾಡಿರುವಾಗ, ಆತನ ಅಪೇಕ್ಷೆಯ ಪ್ರಕಾರ, ಆತನ ಮಗನಿಗೆ ಸರ್ಕಾರದವರು ಪೆನ್ಷನ್ ಕೊಡಲಿಲ್ಲ. ಬಾಜೀರಾವ್ ಸಾಹೇಬನು ತೀರಿಹೋಗುವಾಗ, ಹದಿನಾರುಲಕ್ಷ ರೂಪಾಯಿ ಆತನ ಹತ್ತರ ಉಳಿದದ್ದು ಸರ್ಕಾರಿ ಖಜಾನೆಯಲ್ಲಿ ಮತ್ತು ಹತ್ತು ಲಕ್ಷ ರೂಪಾಯಿನ ರತ್ನಪಡಿಸಾಮಾನು, ಮೂರುಲಕ್ಷ ರೂಪಾಯಿನ ನಾಣ್ಯ, 80 ಸಾವಿರ ರೂಪಾಯಿನ ಭಂಗಾರ, ಮತ್ತು 20 ಸಾವಿರ ರೂಪಾಯಿನ ಬೆಳ್ಳೀ ಪಾತ್ರೆ ಮುಂತಾದ ಸಾಮಾನು, ಇಷ್ಟು ಆಸ್ತಿ ಇತ್ತು. ಆ ಪದಾರ್ಥವು ಬಹಳವಾಯಿತೆಂತ ಕಾನ್‌ಪುರದ ಕಲೆಕ್ಟರ್ ಮಿ. ಮೋರ್ಲಂಡ್ ಸಾಹೇಬನಿಗೆ ತೋರಿ, ಅವನು ಪೆನ್ಷನ್ ನಡೆಸುವದನ್ನ ತಪ್ಪಿಸಿದನು. ಆದರೆ ಅವರ ಕುಟುಂಬದ ಹೊಟ್ಟೆಬಟ್ಟೆಯು ಆ ಆಸ್ತಿಯಮೇಲೆ ನಡೆಯಬಹುದೆಂತ ವ್ಯಾಜ್ಯಮಾಡಿ, ಸರ್ಕಾರಕ್ಕೆ 2 ಲಕ್ಷ ರೂಪಾಯಿಗಳ ಲಾಭಮಾಡಿದನು. ಶ್ರೀಮಂತ ನಾನಾಸಾಹೇಬನು, ಅದಕ್ಕಾಗಿ ಕಲ್ಕತ್ತೆಗೆ ವಿನಂತಿಮಾಡಿಕೊಂಡಿದ್ದನು. ಅದರಮೇಲೆ, ಲಾರ್ಡ್ ಡಲ್ಹೌಜಿ ಸಾಹೇಬನು ವಿಚಾರಮಾಡಿ, ತೀರ್ಮಾನ ಮಾಡಿದ್ದೇನಂದರೆ:—

"For thirty three years the Peishwa received "an annual clear stipend of £ 80,000 besides the "proceeds of the Jaghire. In that time he received "the enormous sum of more than two millions "and a half sterling. He had no charges to "maintain, he has left no sons of his own, and has "bequeathed property to the amount of twenty-eight "lacs to his family. Those who remain have no "claim whatever on the consideration of the Govern- "ment. Neither have they any claim on its charity, "because the income left to them is amply sufficient.

ಪರ್ಯಂತರ ಬ್ರಿಟಿಷ್‌ರಾಜ್ಯ ಸತ್ವಕ್ಕೆ ಒಳ್ಳೇಘಾಯವು ನಿಂತಿತು. ನಾನಾಸಾಹೇಬ ಪೇಷ್ವೆ ಇಂಗ್ರೇಜಿ ಸರ್ಕಾರಕ್ಕೆ ವಿರೋಧವಾದ ಕಾಲಪ್ರಾರಂಭಿಸಿಕೊಂಡು, ಆತನಪಕ್ಷವನ್ನು ಅಭಿವೃದ್ಧಿಗೆ ತರುವಕೆಲಸದಲ್ಲಿ, ಆತನ ಸ್ವಾಮಿನಿಷ್ಟ ಸೇವಕನಾದ ತಾತ್ಯಾಟೋಪಿಯು, ನಿಜವಾಗಿ ಬಹಳ ಶ್ರಮ ತೆಗೆದುಕೊಂಡನು. ತಾತ್ಯಾನ ಪರಾಕ್ರಮದಿಂದಲೇ

---

"Even if it were not ample, the Peishwa, out of his "vast resources, ought, His Lordship observed, to "have made it so, and the probability is, that the pro-"perty left is in reality much larger than it is avowed "to be."

*Letter of the Secretary to Government of India to the Governor of the N. W. P. dated 24th September* 1851.

ಈ ಇತ್ಯರ್ಥದಮೇಲೆ, ನಾನಾಸಾಹೇಬನು ವಿಲಾಯತಿಯಲ್ಲಿನ ಕೋರ್ಟ್‌ಆಫ್ ಡೈರೆಕ್ಟರ್‌ರವರಿಗೂ ಪ್ರಯತ್ನಮಾಡಿದನು. ಆದರೆ ಅದು ನಿಷ್ಫಲವಾಯಿತು. ಆದಕಾರಣ ಆತನಿಗೆ ನಿರಾಶೆ ಹುಟ್ಟಿ ಕಾರ್ಪುರದ ದಂಗೆಯ ಸಮಯದಲ್ಲಿ ಇಂಗ್ರೇಜಿ ಜನಗಳ ಮೇಲೆ ತನ್ನ ಹಗೆ ತೀರಿಸಿಕೊಂಡನು. ಇದು ಬಹಳ ವ್ಯಸನಕರವಾದ ಮಾತಾಗಿದೆ. ಇದನ್ನು ಕುರಿತು ಈಗ ವಿಚಾರ ಮಾಡತಕ್ಕದ್ದೇನೂ ಉಳಿಯಲಿಲ್ಲ. ದುರ್ದೈವದಿಂದ ಆಗಬೇಕಾದ್ದು ನಡೆದುಹೋಯಿತು. ಇದನ್ನುಕುರಿತು ಒಬ್ಬ ಗ್ರಹಸ್ಥನು ಈರೀತಿ ಹೇಳುತ್ತಾನೆ.

"It need not be discussed now; the parchments are washed out with blood; the well at Cawnpore with its huddled victims—the shrieks of English wives and maidens suffering worse than death—the volleys of murderous musketry on the river—the hacking and slashing in the compound of the Residency—the frantic vengeance of our English Soldiery, who swore to take a life for every hair of the butchered ladies, and did much to keep their promise; and that one fierce phrase of theirs "a Cawnpore dinner," which was long current in our camps for three inches of

ಭಂಡಖೋರ ಜನಗಳ ಪಕ್ಷ ಪ್ರಬಲವಾಗಿ ಹೋಗಿ, ಅದು ಇಂಗ್ರೇಜಿ ಸೈನ್ಯದವರಿಗೆ ಕೆಲವುದಿವಸ ಪರ್ಯಂತರ ಜಯಿಸಲಿಕ್ಕೆ ಅಸಾಧ್ಯವಾದದ್ದಾಗಿ ಕಂಡುಬಂತೆಂತ ಹೇಳಬಹುದು. ಸನ್ 1857 ನೇ ಇಸವಿ ಅಕ್ಟೋಬರ್ ತಾರೀಖು 13 ನೇ ದಿವಸ, ಸಿಂಧ್ಯಾ ಸರ್ಕಾರದ ಅಲ್ಲಿಜಾಬಹದ್ದೂರ್‌ನ ಕಂಟಿಂಜೆಂಟ್ ಸೇನೆಯು, ತಾತ್ಯಾನ ಪ್ರಯತ್ನದಿಂದಲೇ ಪೇಷ್ವೆಗೆ ಸಿಕ್ಕಿತು ; ಮತ್ತು ಅದರ ಯುದ್ಧ ಕೌಶಲ್ಯದಿಂದಲೇ, ಜನರಲ್ ವಿಂಟೂಂ ಸಾಹೇಬನ ಕೆಳಗಿನ ತುಕಡಿಯು ಒಂದು ಭಾಗದ ಸೈನ್ಯವನ್ನ, ಕಾನ್ಪುರದ ಹತ್ತರದ ಯುದ್ಧದಲ್ಲಿ ಜಯಿಸಿದರು. ಇದು ಹಾಗಿರಲಿ. ಈ ಪ್ರಕಾರವಾಗಿ ಆ ಶೂರ * ಸೇನಾಪತಿಯು, ಕಾಲ್ಪಿಯಿಂದ ಪ್ರಚಂಡವಾದ ಸೇನೆಯನ್ನು ತೆಗೆದುಕೊಂಡು, ಝಾರ್ಸಿಯ ಸೈನ್ಯದ ಸಹಾಯಕ್ಕಾಗಿ ಬಂದು ಇಳದಿದ್ದಾನೆಂಬುವದನ್ನ ನೋಡಿ, ಕೋಟೆಯೊಳಗಿನ ಜನಗಳಿಗೆ ಅತ್ಯಾನಂದವಾಗುವದು ; ಮತ್ತು ಎದುರುಪಕ್ಷದ ಜನಗಳಿಗೆ ಅದು ಪ್ರಳಯಕಾಲದ ಯಮನಹಾಗೆ ಭಯಂಕರವಾಗಿ ತೋರುವದು ಸಹಜವಾಗಿದೆ. ಕೋಟೆಯೊಳಗಿನ ಜನಗಳಿಗೆ ತಾತ್ಯಾಟೋಪೆಯ ಸೈನ್ಯವು ದೃಷ್ಟಿಗೆ ಬೀಳುತ್ತಲೇ, ಬರುವಿ

---

keen steel driven into the yielding flesh and shivering nerve of flying Sepoys ; all these make calm examination of the Nana's rights impossible. It is enough to say he was an adopted Hindoo son ; he claimed the city and pension by right of adoption : the first was prolonged to him for a time ; the last was refused him altogether, and Cawnpore told in 1857 how a Hindoo prince's heart regarded Lord Dalhousie's doctrine of expedient escheats."

*Dalhousie's Administration of British India P.* 128.

* ತಾತ್ಯಾನ ಶೌರ್ಯವನ್ನು ನೋಡಿ ಇಂಗ್ರೇಜಿ ಜನಗಳಿಗೆ, ಇಟಲೀದೇಶದಲ್ಲಿನ ಪ್ರಸಿದ್ಧನಾಗಿದ್ದ, ದೇಶಾಭಿಮಾನಿಯು, ಗ್ಯಾರಿಬಲ್ಡಿ ಹ್ಯಾಗೆ ಇದ್ದನೋ ಅದೇಪ್ರಕಾರ ತಾತ್ಯಾನು 'ಹಿಂದು ಗ್ಯಾರಿಬಾಲ್ಡಿ' ಆಗಿದ್ದಾನೆಯೋ ಏನೋ ಎಂತ ಯೋಚಿಸಿದರು. ಒಬ್ಬ ಗ್ರಂಥಕಾರನು ಈರೀತಿ ಹೇಳಿದ್ದಾನೆ:—

"With a little more gallantry, with a few positive exploits added to his negative strategic feats, Tantia Topee would soon have become a Hindoo Garibaldi.

ಕೆಯ ಮರ್ಯಾದಾರ್ಥವಾಗಿ ತೋಫಿನಿಂದ ವಂದನೆ ಮಾಡಿದರು ; ಮತ್ತು ಆನಂದಭರಿತರಾಗಿ ಜಯ ಧ್ವನಿಯನ್ನ ಮಾಡುವದಕ್ಕಾಗಿ, ರಣವಾದ್ಯವನ್ನ ಪ್ರಾರಂಭಿಸಿದರು. ಆಕಾಶ ಮಂಡಲವು ಆ ರಣವಾದ್ಯ ಧ್ವನಿಯಿಂದ ತುಂಬಿಹೋಗಿ, ಕೆಲವುಕಾಲ ಪರ್ಯಂತರ ಭಯದಾಯಕವಾಗಿದ್ದರೂ ಹೃದಯದಲ್ಲಿ ಉತ್ಸಾಹವನ್ನು ಹೆಚ್ಚಿಸುವಂಥ ನೋಟವು ಕಾಣಿಸುತ್ತಿತ್ತು. ಝಾಂಸಿ ರಾಣೀ ಸಾಹೇಬಳು ಮತ್ತು ಆಕೆಯ ಸರ್ದಾರರು ಸಹ ಕೋಟೆಯ ಪ್ರಾಕಾರದ ಮೇಲಿನಿಂದ, ಈ ಸರ್ವ ನೋಟವನ್ನು ನೋಡುತ್ತಿದ್ದರು. ರಾಣೀ ಸಾಹೇಬಳು ಸ್ವತಃ ಪದೇಪದೇ ಎಲ್ಲಾ ಪ್ರಾಕಾರದಮೇಲೂ ತಿರುಗಿ ಸೈನ್ಯದ ಜನಗಳಿಗೆ ಪ್ರೋತ್ಸಾಹವನ್ನುಂಟುಮಾಡುತ್ತಿದ್ದಳು. ಆ ರಾತ್ರಿಯಲ್ಲಾ ಕೋಟೆಯ ಪ್ರಾಕಾರದ ಮೇಲೂ ಮತ್ತು ಇಂಗ್ರೇಜಿಯವರು ಇದ್ದ ಸ್ಥಳದಲ್ಲಿಯೂ ಸಹ ಉರಿಯುತ್ತಿದ್ದ ಹಿಲಾಲುಗಳ ಪ್ರಕಾಶದಿಂದ, ಯುದ್ಧವು ನಡೆಯುತ್ತಿತ್ತು. ತಾತ್ಪರ್ಯ ವೇನಂದರೆ, ಮಾರ್ಚ್ ತಾರೀಖು 31ನೇ ರಾತ್ರಿಯು ಬಹಳ ಭಯಂಕರವಾದ ರೀತಿಯಿಂದ ಕಳೆಯಿತು.*

---

Indeed, about the time of his capture, he was becoming an object of interest in Europe; and a few months more of his daring raid through Central India—even though amounting only to a successful evasion of our forces—would have raised that interest to a much higher pitch: Of course, I would not for a moment compare the deeds or the motives of the Brahmin rebel, with those of the Italian patriot; though I dare say the Pope, the Emperor of Austria, the King of Naples, and their adherants, do not look upon Garibaldi with much more respect and admiration, than we do upon Tantia Topee."

*Empire in India P.* 369.

* ಆ ರಾತ್ರಿಯ ವರ್ಣನೆಯು ಮುಂದಿನ ಪದ್ಯದಲ್ಲಿ, ಇದ್ದದ್ದು ಇದ್ದಹಾಗೆ ಮಾಡಲ್ಪಟ್ಟಿದೆ.

"From camp to camp, through the foul womb of night
The hum of either army stilly sounds,
That the fixed sentinels almost receive

ಏಪ್ರೈಲ್ ತಾರೀಖು 1 ನೇ ದಿವಸ ಪ್ರಾತಃಕಾಲದಲ್ಲಿ ಯುದ್ಧಕ್ಕೆ ಪ್ರಾರಂಭವಾಯಿತು. ಅದಕ್ಕೆ ಹಿಂದಿನ ದಿವಸವೇ ಸರ್‌ಹ್ಯೂರೋಜ್ ಸಾಹೇಬನು, ಝಾನ್ಸಿಯ ಮುತ್ತಿಗೆಗೆ ಸಾಕಾಗುವಷ್ಟು ಸೈನ್ಯವನ್ನು ಆಯಾಯ ಸ್ಥಳದಲ್ಲಿಟ್ಟು, ಉಳಿದಸೈನ್ಯವನ್ನು ಶತ್ರುಗಳಿಗೆ ತಿಳಿಯದಂತೆ, ಬಹಳಧೈರ್ಯದಿಂದ ಪ್ರತ್ಯಪ್ರತ್ಯೇಕ ದಿಕ್ಕುಗಳಿಗೆ ಕಳುಹಿಸಿಕೊಟ್ಟಿದ್ದನು. ತಾತ್ಯಾಟೋಪಿಯ ಸೈನ್ಯಕ್ಕೆ ಇಂಗ್ರೇಜಿಯವರ ಸೈನ್ಯವು ಬಹಳ ಸ್ವಲ್ಪವಿದೆಯಂತ ತೋರಿ, ಅವರು ತಮ್ಮ ಗರ್ವದ ಬಲದಿಂದ ಸ್ವಸ್ಥವಾಗಿದ್ದರು. ಆದಕಾರಣ ಯುದ್ಧಕ್ಕೆ ಪ್ರಾರಂಭವಾಗಿ ಪೇಷ್ವೆಸೈನ್ಯದ ಮೊದಲನೇ ಭಾಗದ ಸೈನ್ಯವು ಒಂದೇ ಸಲ ಝಾನ್ಸೀ ಮುತ್ತಿಗೆಯನ್ನು ತಪ್ಪಿಸುವ ವುದ್ದೇಶ್ಯದಿಂದ, ಮುಂದರಿಸಿದರು. ಅದು ಸಂದಿಗ್ಧ ಸ್ಥಳಕ್ಕೆ ಬರುತ್ತಲೇ, ಸರ್‌ಹ್ಯೂರೋಜ್ ಸಾಹೇಬನು ಬಲಭಾಗದಲ್ಲಿ ಶತ್ರುಗಳ ಮೇಲೆ ಬೀಳುವುದಕ್ಕೋಸ್ಕರ, ಕ್ಯಾಪ್ಟನ್ ಲೈಟ್ ಫುಟ್ ಸಾಹೇಬನ ಕೈಕೆಳಗೆ ಕೊಟ್ಟಿದ್ದ ಇರಸಾಲೆಗೂ ಮತ್ತು ಕ್ಯಾಪ್ಟನ್ ಪ್ರೆಟೇಜರ್ ಸಾಹೇಬನ 14 ನೇ ಲೈಟ್ ಡ್ರಾಗೂನ್ ಸೈನ್ಯಕ್ಕೂ, ಅಪ್ಪಣೆ ಮಾಡಿದ ಪ್ರಕಾರ ಮೇಲೆ ಬಿದ್ದು ಹೊಡೆಯಲು ಪ್ರಾರಂಭ ಮಾಡಿದರು. ಎಡದಕಡೆ ಸರ್ ಹ್ಯೂರೋಜ' ಸಾಹೇಬನ ಕೈಕೆಳಗಿನ ಸೈನ್ಯವು ತೋಫು ಬಿಡಲಿಕ್ಕೆ ಪ್ರಾರಂಭ ಮಾಡಿತು. ಆದಕಾರಣ ಶತ್ರುಗಳು ಕೇವಲ ಚಲ್ಲಾಬಿಲ್ಲಿಯಾಗಿ ಹೋಗಿ, ದಿಕ್ಕೆಟ್ಟು ಓಡಿಹೋಗಿಬಿಟ್ಟರು. ಕುದುರೆಯ ಸವಾರರು ಮತ್ತು ಹಿಂದುಗಡೆ ಉದ್ದೇಶ್ಯಪಟ್ಟು ಇಟ್ಟಿದ್ದ ಪಾಯದಳ ಸಹ ಓಡಿಹೋಗುವವರ ಮೇಲೆ ಬಿದ್ದು ಅವರನ್ನು, ' ಭೂಮಿದೇವಿ, ಇರಲಿಕ್ಕೆ ಸ್ಥಳ ಕೊಡು ' ಯನ್ನುವಂತೆ ಮಾಡಿಬಿಟ್ಟರು. ಆದಕಾರಣ, ತಾತ್ಯಾನಕಡೆ ಸಾವಿರಾರು ಜನಗಳು ಸತ್ತುಹೋಗಿ, ಆ ಸೈನ್ಯಕ್ಕೆ ದುರ್ದಶೆ ಪ್ರಾಪ್ತವಾಯಿತು. ಈ ಮಧ್ಯಕಾಲದಲ್ಲಿ, ತಾತ್ಯಾಟೋಪಿಯ ಕಡೆಯಿಂದ ತೋಫು ಹಾರಿಸಲು ಪ್ರಾರಂಭವಾಗಿ, ಇಂಗ್ರೇಜಿ ಸೈನ್ಯವನ್ನು ಬಹಳವಾಗಿ ನಾಶಮಾಡಿತು ; ಸಾವಿರಾರು ವಿಲಾಯತೀ ಜನಗಳು ದೊಡ್ಡ ದೊಡ್ಡ ಗುಡ್ಡದಮೇಲೆ ಓಡಿಹೋಗುವದಕ್ಕೆ ಪ್ರಯತ್ನ ಮಾಡಿದರು. ಪರಂತು, ಅವರಮೇಲೆ , ಕ್ಯಾಪ್ಟನ್ ನೀಡ್ ಸಾಹೇಬನು ಬಿದ್ದು ಓಡಿಸಿಬಿಟ್ಟನು. ತಾತ್ಪರ್ಯವೇನಂದರೆ, ಮೊದಲನೇಸಲವೇ ಸೈನ್ಯವು ಕೇವಲ ಚಲ್ಲಾಬಿಲ್ಲಿಯಾಗಿ ಹೋಯಿತು. ಒಂದುಕಡೆಯಿಂದ ಇಂಗ್ರೇಜಿ ತೋಫಿನ ಹೊಡತವು ಒಂದು ಕಡೆಯಿಂದ ಕುದುರೆ ಸವಾರರಮೇಲೆ ಬೀಳುವಿಕೆಯು, ಮತ್ತು ಒಂದು ಕಡೆಯಿಂದ ಪಾಯದಳ ಸೈನ್ಯದ ಏಟು, ಈ ರೀತಿ ಆದಕಾರಣ

---

The secret whispers of each other's watch :
Fire answers fire ; and through their paly flames
Each battle sees the other's umbered face :
Steed threatens steed, in high and boastful neighs,
Piercing the night's dull ear."

ಪೇಷ್ವೆಯವರ ಸೈನ್ಯಕ್ಕೆ ಶುದ್ಧಾಂಗವಾಗಿ ಉಪಾಯವಿಲ್ಲದೇ ಹೋಯಿತು. ಈ ರೀತಿ ಅಪಜಯಹೊಂದಿದ ಸೈನ್ಯದ ಹಿಂದಿಕ್ಕಿಗೆ 2 ಮೈಲಿಗಳಲ್ಲಿ, ತಾತ್ಯಾಟೋಪಿಯ ಕೈಕೆಳಗಿನ ಬಹಳ ಸೈನ್ಯವಿತ್ತು. ಅದು ಒಂದು ಅಡವಿ ಪ್ರದೇಶವಲ್ಲಿ ಬೇಟವಾ ನದಿಯ ದಂಡೆಯಮೇಲೆ ನಿಂತಿತ್ತು. ಮುಂದಿನ ರಣಶೂರ ಸೈನ್ಯವು ಓಡಿಹೋಯಿತೆಂಬುವದನ್ನ ನೋಡಿ, ಆ ಸೈನ್ಯಕ್ಕೆ ಧೈರ್ಯಗುಂದಿ ಹೋಯಿತು. ಸರ್ ಹ್ಯೂ ಸಾಹೇಬನು, ‘ ಈಗಲ್‌ಟ್ರುಪ್ಪಿನ ’ 4 ತೋಫುಗಳು ಮತ್ತು ಕ್ಯಾಪ್ಟನ್ ಲೈಟ್ ಸಾಹೇಬನ ಕೈಕೆಳಗಿನ ‘ ಫೀಡಲ್ ಬ್ಯಾಟ್ರಿ ’ ತೆಗದುಕೊಂಡು, ಆ ಸೈನ್ಯವನ್ನ ಅಟ್ಟಿಕೊಂಡು ಹೋದನು. ಶತ್ರು ಸೈನ್ಯದವರು ಅಡವಿಗೆ ಬೆಂಕಿ ಹಾಕಿ, ಇಂಗ್ರೇಜಿ ಸೈನ್ಯವು ಮುಂಬೆ ಬಾರದಂತೆ ಮಾಡುವದಕ್ಕೆ ಪ್ರಯತ್ನಪಟ್ಟರು. ಆದಾಗ್ಯೂ ಇಂಗ್ರೇಜಿ ಸೈನ್ಯವು ಬೇಟವಾನದಿಯವರಿಗೆ ಹೋಯಿತು ಬೇಟವಾನದಿಯ ಆಚೆಕಡೆಗೆ ಇದ್ದ ತೋಫುಖಾನೆ ಮೇಲಿನ ಜನಗಳು, ತೋಫುಗಳಿಗೆ ಬತ್ತಿ ಕೊಟ್ಟು, ಇಂಗ್ರೇಜಿ ಸೈನ್ಯದವರಮೇಲೆ ಬಿಟ್ಟರು. ಪರಂತು, ಇಂಗ್ರೇಜಿ ಸೈನ್ಯವು ಎತ್ತರ ಪ್ರದೇಶದಮೇಲೆ ಇದ್ದಕಾರಣ, ಆ ತೋಫಿನ ಪ್ರಯೋಜನವೇನೂ ಆಗಲಿಲ್ಲ. ಇಂಗ್ರೇಜಿಯವರ ಕಡೆಯಿಂದ ಹೊಡೆಯುತ್ತಿದ್ದ ಏಟುಗಳಿಂದ ಶತ್ರುಸೈನ್ಯದ ಜನಗಳಿಗೆ ಘಾಯವಾಗಿ, ಬೀಳುತ್ತಿದ್ದರು. ಇಂಗ್ರೇಜಿ ಕುದುರೆಯ ಸವಾರರು ಅವರಮೇಲೆ ಬಲವಾಗಿ ಬಿದ್ದಕಾರಣ, ತಮ್ಮ ತಮ್ಮ ದೊಡ್ಡ ದೊಡ್ಡ 22, 23 ಪೌಂಡಿನ ತೋಫುಗಳನ್ನ ರಣ ಭೂಮಿಯಮೇಲೆ ಬಿಟ್ಟುಕೊಟ್ಟು, ಓಡಿಹೋಗಬೇಕಾದ ಸಂಭವ ಬಿತ್ತು. ಆ ತೋಫುಗಳೆಲ್ಲಾ ಬಹಳ ಭಾರವಾಗಿದ್ದಕಾರಣ ಬೇಟವಾನದಿಯ ಮಣ್ಣಿನಲ್ಲಿ ಘಟ್ಟಿಯಾಗಿ ಕೂತುಕೊಂಡಿತು ; ಅವು ಮತ್ತು ಎಲ್ಲಾ ಮದ್ದು ಗುಂಡುಗಳು ಸಹ ಇಂಗ್ರೇಜಿ ಸೈನ್ಯಕ್ಕೆ ಅನಾಯಾಸವಾಗಿ ಸಿಕ್ಕಿತು. ಇಷ್ಟೇ ಅಲ್ಲದೆ, ಮುಂದೆ 16 ಮೈಲಿಗಳ ಪರ್ಯಂತರ ಬೆನ್ನಟ್ಟಿಹೋಗಿ, ಇಂಗ್ರೇಜಿ ಸೈನ್ಯದವರು, ಪೇಷ್ವೆ ಸೈನ್ಯದ ಸರ್ವ ಯುದ್ಧ ಸಾಮಗ್ರಿಯನ್ನು ತಮ್ಮಕೈಗೆ ಬರಮಾಡಿಕೊಂಡರು. ತಾತ್ಪರ್ಯ ವೇನಂದರೆ, ಝಾನ್ಸಿಯ ದುರ್ದೈವಧಿಂದಲೋ ಅಥವ ತಾತ್ಯಾಟೋಪಿಯ ದುರದೃಷ್ಟದಿಂದಲೋ, ಆ ಯುದ್ಧದಲ್ಲಿ ಪೇಷ್ವೆ ಸೈನ್ಯಕ್ಕೆ ಅಪಯಶಸ್ಸು ಬಂದು ಅದರ 1500 ಜನಗಳು, ರಣಭೂಮಿಯಲ್ಲಿ ಬಿದ್ದರು. ಸರ್ ಹ್ಯೂರೋಜ್ ಸಾಹೇಬನ ಸೈನ್ಯಕ್ಕೆ ಜಯ ಪ್ರಾಪ್ತಿಯಾಗಿ ಅವರ ಸರ್ವ ಸೈನ್ಯದಲ್ಲಿಯೂ ಸಂತೋಷ ವಾಯಿತು. ಶತ್ರುಗಳ ಎಲ್ಲಾ ಸಾಮಗ್ರಿಯೂ ಅನಾಯಾಸದಿಂದ ಸಿಕ್ಕಿದಕಾರಣ ಎಲ್ಲರಿಗೂ ಬಹಳ ಪ್ರೋತ್ಸಾಹವು ಹುಟ್ಟಿ ಜಯಧ್ವನಿಯನ್ನು ಮಾಡಿದರು. ಇತ್ತಲಾಗಿ, ಝಾನ್ಸಿಸೈನ್ಯದವರು, 8, 10 ದಿವಸಗಳವರೆಗೂ ಒಂದೇ ಸಮನಾಗಿ ಶತ್ರುಗಳೆದುರಿಗೆ ನಿಂತು, ಯುದ್ಧಮಾಡಿ ಕಡೆಗೆ ಪೇಷ್ವೆಯಕಡೆಯಿಂದ, ತಮಗೆ ಸಹಾಯ ಮಾಡಲಿಕ್ಕೆ ಬಂದ ಸೈನ್ಯವು ಯೇನೂ ಉಪಯೋಗಕ್ಕೆ ಬಾರದೆ, ಹೋಗಿ ಇಂಗ್ರೇಜಿ ಸೈನ್ಯದ, ಸರ್ವ ಯುದ್ಧ ಸಾಮಗ್ರಿಗಳು ತೀರಿಹೋದ್ದಕ್ಕೆ ಬದಲಾಗಿ ಅನಾಯಾಸದಿಂದ ಸಾಮಗ್ರಿ ಸಿಕ್ಕಿ, ಅದಕ್ಕೆ ಮುಂಚಿನಗಿಂತಲೂ, ಎರಡರಷ್ಟು ಧೈರ್ಯಬರುವದಕ್ಕೆ ಕಾರಣವಾಯಿತೆಂಬುವದನ್ನು

ನೋಡಿ, ಅಲ್ಲಲ್ಲಿ ಹಾಹಾಕಾರವು ಹುಟ್ಟಿತು; ಮತ್ತು ಸರ್ವರ ಮನಸ್ಸಿನಲ್ಲಿಯೂ ದುಃಖ, ಭೀತಿ, ಮತ್ತು ನಿರಾಶೆ, ಈ ತಾಪತ್ರಯಗಳು, ಹುಟ್ಟಿದವು. ತಾತ್ಪರ್ಯ ವೇನಂದರೆ, ಆ ಸಮಯದಲ್ಲಿ ತಾತ್ಯಾಟೋಪಿಯ ಹತ್ತರ ಅನೇಕ ಯುದ್ಧದಲ್ಲಿ ವಿಜಯ ಹೊಂದಿದ ಪರಾಕ್ರಮ ಮತ್ತು ರಣಧುರಂಧರ ಪ್ರಚಂಡ ಸೈನ್ಯವಿತ್ತು. ಯುದ್ಧಸಾಹಿತ್ಯವು ತುಂಬಾ ಸಿದ್ಧವಾಗಿತ್ತು; ಮತ್ತು ಸ್ವತಃ ಅವನು ಶೌರ್ಯಗುಣದಿಂದ ಪರಿಪೂರ್ಣನಾಗಿದ್ದು, ಅವನಿಗೆ ಯುದ್ಧ ಚಾತುರ್ಯದಲ್ಲಿ ಒಳ್ಳೇ ಜ್ಞಾನವಿತ್ತು. ಪರಂತು ಈ ಸಮಯದಲ್ಲಿ ಆತನ ದುರ್ದೈವ ಬಂದರಿಂದ, ಸರ್ವವೂ ವ್ಯರ್ಥವಾಗಿ ಹೋಗಿ, ಅವನಿಗೆ, ತನ್ನ ಯುದ್ಧದ ತೋಫುಗಳೂ, ಮದ್ದು ಗುಂಡುಗಳೂ ಮತ್ತು ಇತರ ಸಾಹಿತ್ಯವನ್ನು ಎಲ್ಲೆಲ್ಲಿಇತ್ತೋ, ಅಲ್ಲಲ್ಲಿಯೇ ಬಿಟ್ಟುಬಿಟ್ಟು, ಯುದ್ಧದಲ್ಲಿ ಅಪಯಶಸ್ಸನ್ನು ತೆಗೆದುಕೊಂಡು, ಕಾಲ್ಪಿಮಾರ್ಗಹಿಡಿದು, ಓಡಿಹೋಗುವ ಸಂಭವಬಿತ್ತು. ಕೃಷ್ಣಾವತಾರ ಮುಗಿದಮೇಲೆ ಅರ್ಜುನನಿಗೆ ಬಂದ ದುರ್ದೆಶೆಯನ್ನು ಅವನು ಹೇಗೆ ವ್ಯಸನಪೂರ್ವಕವಾಗಿ ವರ್ಣನೆಮಾಡಿದನೋ, ಆದೇಶಬ್ದದಿಂದಲೇ ತಾತ್ಯಾಟೋಪಿಗೂ ಕಾಲ್ಪಿಗೆ ಹೋಗಿ ವಿವರವಾಗಿ ತನ್ನ ಯಜಮಾನನಿಗೆ ಸಮಾಚಾರವನ್ನು ತಿಳಿಸಬೇಕಾದ ಸಂಭವ ಬಂತು, ಎಂಬುವದರಲ್ಲೇನೂ ಸಂಶಯವಿಲ್ಲ:

ಶ್ಲೋಕ.

ತಏನಾವಿಸಾ ಬಾಣಾಸ್ತದಪಿ ಹರಲಬ್ಧಂ ಧನುರಿದಂ ।
ಸಏವಾಹಂ ಪಾರ್ಥಃ ಪ್ರಮಥಿತ ಸುರಾರಾತಿ ನಿಚಯಃ ॥
ಇಮಾಸ್ತಾ ಸ್ತಾಗೋಪ್ಯೋ ಹರಿಚರಣ ಚಿತ್ತೈಕಶರಣಾಃ ।
ಹ್ರಿಯಂತೆ ಗೋಪಾಲ್ಯೈರ್ವಿಧಿರಪಿ ಬಲಿಯಾನ್ನತುನರಃ ॥ ೧ ॥ *

---

* ಅಕಟಾ—ಇವೇ ಆ ಭಾರತಯುದ್ಧದ ತೀಕ್ಷ್ಣಬಾಣಗಳು. ಇದಾದರೋ ಆ ಪರಮೇಶ್ವರ ದತ್ತ ಬಾಣಾಸನವು. ರಾಕ್ಷಸರನ್ನು ನಾಶಮಾಡಿದ ಪಾರ್ಥನೇ ನಾನು. ಇವರಾದರೋ ಶ್ರೀಹರಿಯ ಪಾದಸೇವಕರಾದ ಸುಪ್ರಸಿದ್ಧ ಗೋಪಿಕಾಸ್ತ್ರೀಯರು ಇಂತಹ ಪರಮ ಪತಿವ್ರತೆಯರನ್ನು ಈ ದುಷ್ಟರಾದ ಯವನರು ಅಪಹರಿಸುವದರಲ್ಲಿ, ಅಹಹಾ, ದೈವವೇ ಬಲವಾದದ್ದೇ ಹೊರತು ಪೌರುಷವು ನಿರರ್ಥಕವು.

# ೧೧ನೇ ಪ್ರಕರಣ.

## ಝಾರ್ಸಿಯು ಘನಘೋರವಾದ ಯುದ್ಧ.

ತಾತ್ಯಾ ಟೋಪಿಯನ್ನು ಸೋಲಿಸಿದ ತರುವಾಯು, ಸರ್ ಹ್ಯೂರೋಜ್ ಸಾಹೇಬನು ಝಾರ್ಸಿಯುಮೇಲೆ ಬಲವಾಗಿ ಬಿದ್ದು, ಅದನ್ನು ಸ್ವಾಧೀನಪಡಿಸಿಕೊಳ್ಳಬೇಕೆಂತ ನಿಶ್ಚಯಿಸಿದನು. ತಾರೀಖು 23 ನೇ ಮಾರ್ಚಿ ಆರಂಭಿಸಿಕೊಂಡು, ಯಪ್ರೇಲ್ ತಾರೀಖು 3 ರ ಪರ್ಯಂತರ, ಒಂದೇ ಪ್ರಕಾರವಾಗಿ 11 ದಿವಸಗಳ ವರಿಗೂ; ಇಂಗ್ರೇಜಿ ಸೈನ್ಯವು ಝಾರ್ಸಿಗೆ ಮುತ್ತಿಗೆಹಾಕಿ, ವಳಗಿನ ಸೈನ್ಯದ ಸಂಗಡ, ದೊಡ್ಡ ಪರಾಕ್ರಮದಿಂದ, ಹಗಲೂ ರಾತ್ರೆ ಸಹಾ ಯುದ್ಧಮಾಡಿ, ಅವರನ್ನ ಸೋಲಿಸುವದಕ್ಕಾಗಿ ಅನೇಕ ಉಪಾಯಗಳನ್ನು ನಡೆಸಿದರು. ಆದಾಗ್ಯೂ, ರಾಣೀ ಸಾಹೇಬಳ ಅಸದೃಶವಾದ ಧೈರ್ಯದ ಮತ್ತು ಧೃಡವಾದ ಮನಸ್ಸಿನ ಮುಂದೆ, ಇಂಗ್ರೇಜಿ ಸೈನ್ಯದ್ದು ಯೇನೂ ಸಾಗಲಿಲ್ಲ. ಯಿಷ್ಟೇ ಅಲ್ಲದೆ, ಮುಂದೆ ಇಂಗ್ರೇಜಿ ಸೈನ್ಯದ ಯುದ್ಧ ಸಾಮುಗ್ರಿಗಳು ತೀರಿಹೋಗಿ, ಅದು ಮುರಿದು ಹೋಗುವದಕ್ಕೆ ಸಮಯ ವದಗಿತ್ತು. ಆದರೆ, ಅದರ ಸುದೈವದಿಂದ ತಾತ್ಯಾಟೋಪಿಯು ಸೈನ್ಯವು, ಝಾರ್ಸಿಯು ಸಹಾಯಕ್ಕೆ ನಾಮಮಾತ್ರ ಬಂದು, ತನ್ನ ಸರ್ವ ಯುದ್ಧ ಸಾಮುಗ್ರಿಯನ್ನು ರಣಭೂಮಿಯಲ್ಲಿ ಬಿಟ್ಟು ವೋಡಿಹೋಯಿತು. ಆದ ಕಾರಣ ಇಂಗ್ರೇಜಿ ಸೈನ್ಯಕ್ಕೆ ಅನಾಯಾಸವಾಗಿ ಒಳ್ಳೇ ಸಹಾಯವು ವದಗಿ ಹೆಚ್ಚು ಬಲ ಬಂತು ; ಮತ್ತು ಏಪ್ರೆಲ್ ತಾರೀಖು 2 ರಲ್ಲಿ, ಸರ್ ಹ್ಯೂರೋಜ್ ಸಾಹೇಬನು ತನ್ನ ಕೈಕೆಳಗಿನ ಸರ್ವ ಸೇನಾಧಿಪತಿಗಳನ್ನು ಸೇರಿಸಿಕೊಂಡು, ಸರ್ವರ ಅನುಮತಿಯಿಂದ, ಈಗ ಝಾರ್ಸಿಗೆ ಮುತ್ತಿಗೆ ಹಾಕಿಕೊಂಡು ಸ್ವಸ್ಥವಾಗಿದ್ದರೆ, ಅದು ಯಂದಿಗೂ ತಮ್ಮ ಕೈಗೆ ಶಿಕ್ಕಲಾರದು. ಆದಕಾರಣ ಪ್ರತ್ಯ ಪ್ರತ್ಯೇಕ ದಿಕ್ಕುಗಳಿಂದ ಅದರಮೇಲೆ ಬಿದ್ದು ಕೈವಶ ಮಾಡಿಕೊಳ್ಳಬೇಕೆಂತ ಸಂಕಲ್ಪ ಮಾಡಿದನು.

ಈ ಮೇಲೆ ಬಿಳುವಿಕೆಯು ಕೊನೇದು ಮತ್ತು ಕೇವಲ ಬಲವಾದ ಯುದ್ಧ ಪ್ರಸಂಗದ್ದಾಗಿದ್ದ ಕಾರಣ, ಅದರ ಏರ್ಪಾಟನ್ನು ಸರ್ ಹ್ಯೂರೋಜ್ ಸಾಹೇಬನು ಬಹಳ ಚಾತುರ್ಯದಿಂದ ಮಾಡಿದನು. ಅವನು ಪ್ರಥಮತಃ ಇಂಗ್ರೇಜಿ ಸೈನ್ಯವನ್ನೆಲ್ಲಾ ಮೂರು ಭಾಗಮಾಡಿ, ಅವುಗಳ ಪೈಕಿ ಯರಡು ಭಾಗಗಳನ್ನು ಪ್ರತ್ಯೇಕವಾಗಿ ಯರಡು ಪಕ್ಕದಲ್ಲಿಯೂ ಮೇಲೆ ಬೀಳಬೇಕೆಂತ ನಿಶ್ಚೈಶಿದನು. ಮತ್ತು ಮೂರನೇ ಭಾಗ

ಸುಳ್ಳಾಗಿ ಮೇಲೆ ಬೀಳುತ್ತದೆ ಯನ್ನುವಹಾಗೆ ಶತ್ರುಗಳಿಗೆ ತೋರಿಸಿಕೊಂಡು, ಝಾರ್ಸಿ
ಒಳಗಿನ ಸೈನ್ಯ ಭದ್ರತೆ ಮತ್ತು ವ್ಯವಸ್ಥೆಯನ್ನು ಮಾಡಬೇಕು ಯಂತ ನೇಮಿಸಿದನು.
ಮೇಜರ್ ಗಾಲ್ ಸಾಹೇಬನನ್ನು, ಈ ಸೈನ್ಯಕ್ಕೆ ಅಧಿಪತಿಯನ್ನಾಗಿ ಮಾಡಿ, ಆತನನ್ನು
ಪಶ್ಚಿಮದ ಕಡೆಯಲ್ಲಿನ ಪ್ರಾಕಾರದ ಮೇಲಿನ ಕೆಲಸಕ್ಕೆ ನೇಮಿಸಿದನು. ಅವನು ಬಂ
ದೂಕಿನ ಶಬ್ದವು ಹೊರಟಕೂಡಲೆ, ಬಲಪಾರ್ಶ್ವದಲ್ಲಿ ಯುದ್ಧಮಾಡತಕ್ಕ ಸೈನ್ಯವು
ಮಂದೇಸಲ ಮುಂದರಿಸಬೇಕೆಂತ ನಿಶ್ಚೈಶಿದ್ದನು. ಆ ಸೈನ್ಯದ ಆಧಿಪತ್ಯವನ್ನು ಲೆಫ್ಟಿ
ನೆಂಟ್ ಕರ್ನಲ್ ಲೀಡೆಲ್, ಕ್ಯಾಪ್ಟನ್ ರಾಬರ್ಟ್ಸನ್ ಮತ್ತು ಬ್ರಿಗೇಡಿಯರ್ ಸ್ಟ್ಯೂವರ್ಟ್ ಸಾಹೇ
ಬರುಗಳ ಕಡೆ ವಹಿಸಿತ್ತು. ಯಡಪಾರ್ಶ್ವದಲ್ಲಿ, ಮೇಲೆ ಬೀಳುವದಕ್ಕೋಸ್ಕರ ನೇಮಿ
ಶಿದ್ದ ಸೈನ್ಯದಲ್ಲಿ, ರಾಯಲ್ ಇಂಜನಿಯರ್ 86 ಮತ್ತು 25 ನೇ ಮುಂಬಾಯಿ ಪಾಯ
ದಳದ ಸೇನೆ ಇದ್ದು, ಅದರಮೇಲೆ ಲೆಫ್ಟಿನೆಂಟ್ ಕರ್ನಲ್ ಲೋಥಾ ಮತ್ತು ಮೇಜರ್
ಸ್ಟ್ಯೂವರ್ಟ ಸಾಹೇಬರುಗಳು ಮುಖ್ಯಾಧಿಕಾರಿಗಳಾಗಿದ್ದರು. ಆ ಸೈನ್ಯದ ಇನ್ನೂ
ಕೆಲವು ಭಾಗಗಳನ್ನು ಒಳಭಾಗಮಾಡಿ ಕೆಲವು ಸೈನ್ಯವನ್ನ ಸಿದ್ಧಪಡಿಸಿಟ್ಟಿದ್ದರು.
3 ನೇ ತಾರೀಖಿನ ದಿವಸ, ಗುಪ್ತರೀತಿಯಿಂದ, ಆ ಸೈನ್ಯವನ್ನು ಸರ್ವ ಸಿದ್ಧತೆಪಡಿಸಿ ಗೊ
ತ್ತುಮಾಡಿದ ಆಯಾಯ ಕಡೆಗೆ, ಮೊಹರೆಯನ್ನು ಕಳುಹಿಸಿದನು. ಮೊದಲನೇ ಭಾಗದ
ಲ್ಲಿನ ಸೈನ್ಯವು ಪ್ರಾಕಾರದಮೇಲೆ ಯೇಣಿಹಾಕಿ ಒಳಗೆ ಪ್ರವೇಶಮಾಡುವದನ್ನ ನಿಶ್ಚಯ
ಮಾಡಿತು. ಯರಡನೇ ಭಾಗದವರು ಬಿಚ್ಚುಕತ್ತಿ ಮತ್ತು ಸನೀನು (ಭರ್ಚಿ) ಗಳನ್ನು
ತೆಗದುಕೊಂಡು ಶತೃಗಳ ಎದುರಾಗಿ ಯುದ್ಧಮಾಡಿ, ಪಟ್ಟಣದ ಯಾವ ಬಾಗಲಲ್ಲಿ
ಪ್ರವೇಶ ಮಾಡಲಿಕ್ಕೆ ಸಾಧ್ಯವಾದೀತೋ ಅಲ್ಲಿಂದಾ ಒಳಗೆ ಹೋಗಬೇಕೆಂತ ಯೋ
ಚಿಸಿಕೊಂಡರು. ಆ ಪ್ರಕಾರ ಮೊದಲನೇ ಭಾಗದ ಸೈನ್ಯದವರು ಪ್ರಾಕಾರದಮೇಲೆ
ಹತ್ತಿ ಹೋಗುವದಕ್ಕೆ ಯೇಣಿಯನ್ನು ಸಂಗಡ ತೆಗದುಕೊಂಡರು ; ಮತ್ತು ಯರ
ಡನೇ ಭಾಗದವರು ಕೈಯ್ಯಲ್ಲಿ ಶಸ್ತ್ರ ಮತ್ತು ಸನೀನುಗಳನ್ನು ಧರಿಸಿಕೊಂಡು,
ಬೆಳಗಿನ ಝಾವದಲ್ಲಿ ಅಪೇಕ್ಷಿಸಿದ ಸ್ಥಳಕ್ಕೆ ಹೊರಟುಹೋದರು. ಆ ಸಮಯದಲ್ಲಿ
ಚಂದ್ರ ಪ್ರಕಾಶವು ಚನ್ನಾಗಿ ಬಿದ್ದದ್ದರಿಂದ ಅವರ ಶಸ್ತ್ರದ ಹೊಳೆಯುವಿಕೆಯು ದೂರ
ದಲ್ಲಿ ಕಾಣಿಸುತ್ತಿತ್ತು.

ಪ್ರಾಕಾರದ ಮುಖ್ಯ ಬಾಗಲುಕಡೆಗೆ ಇಂಗ್ರೇಜಿ ಸೈನ್ಯದವರು ಬರುತ್ತಿದ್ದಾರೆಂತ,
ಝಾರ್ಸಿ ಸೈನ್ಯದಲ್ಲಿನ ಪಹರೇ ಜನಗಳಿಗೆ ತಿಳಿದ ಕೂಡಲೆ ಅವರು ಭಯಸೂಚಕವಾದ
ಕಹಳೆ ಮತ್ತು ರಣವಾದ್ಯವನ್ನ ಬಾರಿಸಿ, ತಮ್ಮ ಸೈನ್ಯದವರಿಗೆ ಯಚ್ಚರಿಕೆಯನ್ನು
ಕೊಟ್ಟರು. ಆದ್ದರಿಂದ ಸರ್ವ ಜನಗಳು ಸಿದ್ಧರಾಗಿ ತಮ್ಮ ತಮ್ಮ ಕೆಲಸಗಳಲ್ಲಿ
ಉದ್ಯುಕ್ತರಾದರು. ಇಂಗ್ರೇಜಿ ಸೈನ್ಯದವರು 11 ದಿವಸಗಳ ಪರ್ಯಂತರ ಝಾರ್ಸಿಯ
ಕೋಟೆಯಮೇಲೆ ಆಗ್ನೇಯಾಸ್ತ್ರಗಳನ್ನು ಬಿಟ್ಟದ್ದಕಾರಣ, ಕೋಟೆಯ ಪ್ರಾಕಾ
ರದ ಬಹು ಭಾಗವು ಕೇವಲ ಸಡಲಿಹೋಗಿ ಇತ್ತು, ಮತ್ತು ರಾಣಿ ಸಾಹೇಳ ಸೈನ್ಯದಲ್ಲಿ

ಬಹಳ ಜನಗಳಿಗೆ ಘಾಯವಾಗಿತ್ತು. ಆದಾಗ್ಯೂ ಆಕೆಯು ಸ್ವಲ್ಪವೂ ಧೈರ್ಯಗೆಡದೆ ಈ ವರೆಗೂ ಯಥಾಪ್ರಕಾರ ಸ್ಥೈರ್ಯವಾಗಿದ್ದಳು. ಆದರೆ ಪೇಶ್ವೇಯ ಸೈನ್ಯವು ಸೋತುಹೋದ ವರ್ತಮಾನವು ಆಕೆಗೆ ತಿಳಿದಾರಭ್ಯ, ಬಹಳ ನಿರಾಶಳಾಗಿದ್ದಳು. ಆ ಬಲವಾದ ಸೈನ್ಯವನ್ನೇ ಸೋಲಿಸಿದಮೇಲೆ ಪ್ರಬಲವಾದ ಇಂಗ್ರೇಜಿ ಸೈನ್ಯದ ಮುಂದೆ ತನ್ನದೇನೂ ಈಗ ನಡಿಯುವದಿಲ್ಲವೆಂತ ಆಕೆಗೆ ತೋರಿಬಂತು. ಅದರಿಂದ ಝಾಁಸಿಯ ಸೈನ್ಯದಲ್ಲಿ ವಂದೇಪ್ರಕಾರದ ಉದಾಶೀನವಾದ ಪ್ರಕೃತಿಯು ತೋರಲಾಯಿತು. ಇಂಥಾ ಸ್ಥಿತಿಯು ರಾಣಿ ಸಾಹೇಬಳ ದೃಷ್ಟಿಗೆ ಬೀಳುತ್ತಲೇ ಆಕೆಯು ನಿರಾಶರಾಗಿದ್ದ ಸರ್ದಾರರುಗಳನ್ನೆಲ್ಲಾ ವಂದೇ ಸ್ಥಳಕ್ಕೆ ಕರಿಶಿಕೊಂಡು, ಅವರಿಗೆ ಆವೇಶ ಹುಟ್ಟುವಂಥಾ ತನ್ನ ವಾಣಿಯಿಂದ ಈ ಪ್ರಕಾರವಾಗಿ ಹೇಳಿದಳು :—"ಈವತ್ತಿನ ದಿವಸದವರಿಗೆ ಝಾಁಸಿಯ ರಾಣಿಯು ಯುದ್ಧಮಾಡಿದ್ದು, ಪೇಶ್ವೆಯ ಬಲದಮೇಲೆ ಮಾಡಲಿಲ್ಲ; ಮತ್ತು ಇನ್ನು ಮುಂದೆಯೂ ಅವಳಿಗೆ ಅವನ ಸಹಾಯವು ಅವಶ್ಯಕವಿಲ್ಲ. ಈವತ್ತಿನ ವರೆಗೆ ನೀವು ನಿಮ್ಮ ಸ್ವಾಭಿಮಾನ, ನಿಮ್ಮ ಬಲ, ನಿಮ್ಮ ಧೈರ್ಯ ಮತ್ತು ಶೌರ್ಯವನ್ನ ಹ್ಯಾಗೆ ಉತ್ತಮ ಪ್ರಕಾರವಾಗಿ ತೋರಿಸಿ, ನಿಮ್ಮ ಹೆಸರನ್ನು ಪ್ರಕಾಶಪಡಿಸಿದಿರೋ, ಅದೇ ಪ್ರಕಾರವಾಗಿ ಇನ್ನು ಮುಂದೆಯೂ ಧೃಡವಾದ ಯುದ್ಧಮಾಡಿ, ಝಾಁಸಿಯನ್ನು ರಕ್ಷಣ ಮಾಡತಕ್ಕದ್ದು ನಿಮ್ಮ ಕಡೆಗೆ ಇದೆ." ಈ ರೀತಿಯಾಗಿ ರಾಣಿ ಸಾಹೇಬಳು, ಪ್ರೋತ್ಸಾಹ ಕೊಡತಕ್ಕಂಥಾ ಮಾತನಾಡಿ, ಸೈನ್ಯದಲ್ಲಿನ ಮುಖ್ಯ ಮುಖ್ಯರಾದ ಜನಗಳಿಗೆ ಸುವರ್ಣದ ಆಭರಣಗಳು ಮತ್ತು ವಸ್ತ್ರಗಳನ್ನ ಬಕ್ಷೀಸ ಕೊಟ್ಟಳು. ಆ ಯೋಗದಿಂದ ಝಾಁಸಿಯ ಸೈನ್ಯದಲ್ಲಿನ ಶೂರ ಮತ್ತು ಸಾಹಸಿಗಳಾದ ಬುಂದೇಲೆ ಮತ್ತು ಮರಾಟೆ ಪ್ರಮುಖ ಸರ್ದಾರರುಗಳಿಗೆ ಅತಿಶಯವಾಗಿ ಆವೇಶ ಹುಟ್ಟಿ ಅವರುಗಳ ಸರ್ವ ನಿರಾಶೆಯು ಇಲ್ಲದಂತೆ ಆಗಿಹೋಗಿ, ಅವರ ಅಂತಃಕರಣದಲ್ಲಿ; ವೀರಶ್ರೀಯುಳು ಉಬ್ಬಿ ಮೇಲಕ್ಕೆ ಹೊರಟಳು. ಝಾಁಸಿಯ ತೋಫುಗಳ ಮೇಲಿನ ಮುಖ್ಯಾಧಿಕಾರಿಯಾದ ಗುಲಾಂ ಗೋಷ್‌ಖಾನನು ತೋಫ್‌ಖಾನೆಯನ್ನ ಉತ್ತಮವಾಗಿ ಭದ್ರಪಡಿಸಿಕೊಂಡು ಪೂರ್ವದಂತೆ ಇಂಗ್ರೇಜಿ ಸೈನ್ಯದಮೇಲೆ ತೋಫ್ ಹೊಡಿಯಲಿಕ್ಕೆ ಪ್ರಾರಂಭ ಮಾಡಿದನು. ಅದೇ ಪ್ರಕಾರವಾಗಿ, ಕುಂವರ್ ಖುದಾಬಕ್ಷ ಮತ್ತು ಇನ್ನೂ ಕೆಲವು ದೊಡ್ಡ ದೊಡ್ಡ ಸರ್ದಾರರುಗಳು ತಮ್ಮ ತಮ್ಮ ಸ್ಥಾನವನ್ನ ರಕ್ಷಿಸಿಕೊಂಡು ಇಂಗ್ರೇಜಿ ಸೈನ್ಯದಮೇಲೆ ಗೋಲಿಗಳನ್ನು ಬಿಡಲು ಆರಂಭಿಸಿದರು. ಬಾಯಿ ಸಾಹೇಬಳು ಸ್ವತಃ ಕೋಟೆಯ ಭದ್ರತೆಗೋಸ್ಕರ ಪುನಃ ಪ್ರಾಕಾರದಮೇಲೆ ವಂದೇ ಪ್ರಕಾರವಾಗಿ ಶ್ರಮಪಡುವದಕ್ಕೆ ಉದ್ಯುಕ್ತಳಾದಳು. ಅದೇ ರಾತ್ರೆ ಇಂಗ್ರೇಜಿ ಸೈನ್ಯದವರು ಪಟ್ಟಣದಮೇಲೆ ಮತ್ತು ಕೋಟೆಯಮೇಲೆ ಸಹ ಕೆಂಪು ಗೋಲಿಗಳನ್ನ ವರ್ಷಋತುವಿನ ಪರ್ಜನ್ಯನಂತೆ ಭಯಂಕರವಾದ ಮಳೆಗರದು ಬಲಹೀನ ಮಾಡಿದ್ದರು. ಆದಕಾರಣ ಪ್ರಾಕಾರಕ್ಕೆ ಅಲ್ಲಲ್ಲಿ ಛಿದ್ರಗಳು ಬಿದ್ದು ಅದರ ಕೆಲವು ಭಾಗವು ಕೇವಲ ಬಲಹೀನ

ವಾಗಿ ಹೋಗಿತ್ತು. ಅರಮನೆಯಮೇಲೆ ಇಂಗ್ರೇಜಿ ಸೈನ್ಯದಕಡೆ ತೋಫಿನ ಗುಂಡುಗಳ ಮಳೆ ಸುರದಿದ್ದರಿಂದ ಅದು ಬಹಳ ಕೆಟ್ಟುಹೋಗಿತ್ತು. ಅದರ ಎರಡನೇ ಅಂತಸ್ತಿನಮೇಲೆ ಗಣಪತಿಯ ಸುಂದರವಾದ ಮಂಟಪವು ಮತ್ತು ಕನ್ನಡಿಯ ಮಹಲುಸಹಾ ಇತ್ತು. ಅದಕ್ಕೆ ಲಕ್ನೋ ದೇಶದ ಬೆಲೆಯುಳ್ಳ ಕನ್ನಡಿಗಳನ್ನು ಹಾಕಿದ್ದು, ಉತ್ತಮ ಪ್ರಕಾರವಾಗಿ ಶೃಂಗಾರಮಾಡಿತ್ತು. ಅಲ್ಲಿ ಭಾದ್ರಪದ ಮಾಸದಲ್ಲಿ ಗಣಪತಿಯ ದೊಡ್ಡ ಉತ್ಸವವು ನಡೆಯುತ್ತಿತ್ತು. ಆ ಮಹಲಿನಲ್ಲಿ ಗೋಲಿಗಳು ಬಿದ್ದು ಕಂಚಿನ ಸಾಮಾನುಗಳೆಲ್ಲಾ ಚೂರು ಚೂರಾಗಿ ಹೋಗಿದ್ದವು. ಅಲ್ಲದೇ ಆ ಗೋಲಿಯೊಳಗಿನ ಕೀಲುಗಳು, ಚರೆ, ಮುಂತಾದ್ದು ಹಾರಿ, ಅರಮನೆಯೊಳಗಿನ ನಾಲ್ಕು ಜನಗಳು ಸತ್ತುಹೋಗಿದ್ದರು. ಆದಕಾರಣ ಇಲ್ಲಿ ಅಲ್ಲಿ ಅಳುತ್ತಿದ್ದರು. ನಿಜವಾಗಿ ಇಂಥಾ ಸ್ಥಿತಿಯಲ್ಲಿ ಯಾರ ಧೈರ್ಯವೇ ಆಗಲಿ ತಗ್ಗಿಹೋಗಿ ಬುದ್ಧಿಯು ಚಂಚಲವಾಗಿ ಹೋಗಿರುತ್ತದೆ. ಆದರೆ, ರಾಣಿ ಸಾಹೇಬಳು ಸ್ವಲ್ಪವಾದರೂ ಧೈರ್ಯ ಗೆಡದೆ, ಸೊಂಟಕ್ಕೆ ಕತ್ತಿ ಕಟ್ಟಿಕೊಂಡು ದೊಡ್ಡ ಆವೇಶದಿಂದ ಕೋಟೆಯ ಪ್ರಾಕಾರದಮೇಲೆ ಉತ್ತಮ ಭದ್ರತೆಪಡಿಸಿ ಸರ್ವ ಸೈನ್ಯಕ್ಕೆ ವಳ್ಳೇ ಪ್ರೋತ್ಸಾಹ ಕೊಟ್ಟಳು. ಆದಕಾರಣ, ಆಕೆಯ ಶಕ್ತಿಯು ಮತ್ತು ಪರಾಕ್ರಮವು ಇಮ್ಮಡಿಯಾಗಿ ತೋರಿಬಂದು ಪುನಃ ಘನಘೋರವಾದ ಯುದ್ಧಕ್ಕೆ ಪ್ರಾರಂಭವಾಯಿತು.

ಇಂಗ್ರೇಜಿ ಸೈನ್ಯದವರು ಝಾಁಸಿಯನ್ನು ತೆಗೆದುಕೊಳ್ಳುವಗೋಸ್ಕರ ಮುಖ್ಯ ಬಾಗಲು ಹಿಡಿದು ಧೃಢ ಧೈರ್ಯದಿಂದ ಬರುತ್ತಾರೆಂತ ಕಂಡಕೂಡ್ಲೆ, ಪಟ್ಟಣದ ಪ್ರಾಕಾರದ ಮೇಲಿನ ಮತ್ತು ಕಿಲ್ಲೆಯಮೇಲಿನ ಮುಖ್ಯವಾದ ಬುರ್ಜುಗಳಮೇಲಿನಿಂದ ತೋಫುಗಳ ಹೊಡೆತಕ್ಕೆ ಪ್ರಾರಂಭವಾಯಿತು. ಕೆಲವು ವೇಳೆಯ ಪರಿಯಂತರ ಇಂಗ್ರೇಜಿ ಸೈನ್ಯದವರ ಮೇಲೆ ಬೆಂಕಿಯ ಕೆಂಪಾದ ಕಿಡಿಗಳ ಹೂವುಗಳುಳ್ಳ ಛಾದರ ಹರವಿದೆಯೋ ಯೇನೋ ಎಂಬುವಹಾಗೆ ತೋರಿಬಂತು. ಬಂದೂಕಿನ ಗೋಲಿಗಳ ಆನೇ ಕಲ್ಲಿನಂತೆ ಬೀಳುವ ಪೆಟ್ಟುಗಳು, ಸಹಿಸಲಿಕ್ಕೆ ಅಸಾಧ್ಯವಾದ ತೋಫಿನ ಗುಂಡುಗಳ ಮಳೆಯು ಮತ್ತು ಇತರ ಅಪಾಯಕರವಾದ ಯೇಟುಗಳು, ಯಿವುಗಳ ದೆಶೆಯಿಂದ ಇಂಗ್ರೇಜಿ ಸೈನ್ಯದ ಅವಸ್ಥೆಯು ಕೇವಲ ಲಿಕಿ ಲಿಕಿಯಾಗಿ ಹೋಯಿತು. ಆದಾಗ್ಯೂ ಅಂಥಾ ಭಯಂಕರವಾದ ಸ್ಥಿತಿಯಲ್ಲಿಯೂ ಲೆ, ಡಿಕ್, ಲೆ, ಮೆಕಲ್‌ಜಾರ್ಜ ಲೆ, ಬೋನಸ್ ಮತ್ತು ಲೆ, ಫಾಕ್ಸ್ ಮುಂತಾದ ಇಂಗ್ರೇಜಿ ಯುದ್ಧಶಾಲಿಗಳು ಪ್ರಾಣದಾಶೆಬಿಟ್ಟು, ದೊಡ್ಡ ಧೀರತನದಿಂದ ಮುಂದರಿತೆ ಪ್ರಾಕಾರದಮೇಲೆ ಯೇಣಿ ಹಾಕುವದಕ್ಕೆ ಪ್ರಯತ್ನಪಟ್ಟರು ; ಪರಂತು ವಳಗಿನ ಶೂರ ಶಿಪಾಯಿಗಳಮುಂದೆ ಯಿವರ ಉಪಾಯವೇನೂ ನಡಿಯಲಿಲ್ಲ. ಕೆಲವುಕಾಲ ಪರಿಯಂತರ, ಝಾಁಸಿ ಪ್ರಾಕಾರದ ಸಂರಕ್ಷಣೆಯನ್ನ ವಳಗಿನ ಸೈನ್ಯದವರು ಬಹಳ ಉತ್ತಮ ಪ್ರಕಾರವಾಗಿ ಮಾಡಿದರು. ಇಂಗ್ರೇಜಿ ಜನಗಳು ಪ್ರಾಕಾರ ತೆಗೆದುಕೊಳ್ಳುವಗೋಸ್ಕರ, ಯೇಣಿ ನಿಲ್ಲಿಶಿ ಮೇಲೆ ಹತ್ತುತ್ತಿದ್ದರು,

ಪರಂತು, ಒಳಗಿನ ಜನಗಳ ಶೂರತ್ವದಿಂದ ಸೋತುಹೋಗಿ ಅವರು ಹಿಂತಿರುಗುತ್ತಿದ್ದರು. ಲೆ, ಡಿಕ್, ಮತ್ತು ಲೆ, ಮೆಕಲ್‌ಜಾನ್ ಈ ಇಬ್ಬರು ಶೂರ ಅಧಿಕಾರಿಗಳು ಬಹಳ ಸಾಹಸದಿಂದ ನುಗ್ಗಿ ಹೋಗಿ ಪ್ರಾಕಾರದಮೇಲೆ ನಿಂತುಕೊಂಡರು ; ಮತ್ತು 3 ನೇ ಯುರೋಪಿಯನ್ ಪಟಾಲಂ ಸೈನ್ಯವನ್ನ ಮೇಲಕ್ಕೆ ಕರದರು. ಪರಂತು ಝಾಂಸಿಯ ಸರದಾರರು, ಅವರನ್ನ ಎಲ್ಲೆಲ್ಲಿದ್ದರೋ ಅಲ್ಲಲ್ಲಿಯೇ ಸಂಹಾರ ಮಾಡಿದರು. ಅದೇ ಪ್ರಕಾರವಾಗಿ ಲೆ, ಬೋನ್ಸ್ ಮತ್ತು ಲೆ, ಫಾಕ್ಸ್‌ನ್ ಸಾಹೇಬರ ಅವಸ್ಥೆಯು ಆಯಿತು. ಇಂಗ್ರೇಜಿ ಸೈನ್ಯದವರು ಪ್ರಾಕಾರದಮೇಲೆ ಹೋಗುವದಕ್ಕೆ ಯಥೇಷ್ಟ ಪ್ರಯತ್ನ ಮಾಡಿದರು. ಆದಾಗ್ಯೂ ಕೋಟೆಯೊಳಗಿನ ಜನಗಳು, ಅವರ ಉದ್ದೇಶ್ಯವನ್ನು ನೆರವೇರಿಸಲು ಆಸ್ಪದ ಕೊಡಲಿಲ್ಲ. ಈ ಸ್ಥಳದಲ್ಲಿ ಉಭಯಪಕ್ಷದ ಸೈನ್ಯವು ಕೈ ಕೈಹಚ್ಚಿ, ಒಳ್ಳೇ ಯುದ್ಧ ಮಾಡಿದರು. ಇಂಗ್ರೇಜಿ ಶಿಪಾಯಿಗಳು ತಮ್ಮ ಧೃಢ ನಿಶ್ಚಯವನ್ನ ಒಂದೇರೀತಿ ಇಟ್ಟುಕೊಂಡು ಪ್ರಾಕಾರದಮೇಲೆ 8 ಸ್ಥಳಗಳಿಂದ ಹತ್ತಿ ಹೋಗುವದಕ್ಕೆ ಯೇಣಿಗಳನ್ನಿಟ್ಟು, ಅಲ್ಲೇ ತಾವು ಪ್ರವೇಶಮಾಡುವದಕ್ಕೆ ಪ್ರಯತ್ನ ಪಟ್ಟರು. ಪರಂತು ಝಾಂಸಿ ಸೈನ್ಯದ ಶೌರ್ಯ ಮತ್ತು ಧೀರತನದ ಮುಂದೆ ಅವರದ್ದೇನೂ ಸಾಗಲಿಲ್ಲ.*

---

* ಈ ನಿಕರವಾದ ಸಂಗ್ರಾಮದ ವರ್ಣನೆಯನ್ನ ಡಾ. ಲೊ ಸಾಹೇಬನು ಯಾವ ರೀತಿಯಲ್ಲಿ ಬರೆದಿದ್ದಾನೆಯೋ ಅದೇಪ್ರಕಾರ ವಾಚಕರಮುಂದೆ ಇಡುವದು ಅವಶ್ಯಕವಾಗಿದೆ.

"No sooner did we turn into the road leading towards the gate than the enemy's bugles sounded, and a fire of indescribable fierceness opened upon us from the whole line of the wall, and from the towers of the fort overlooking this site. For a time it appeared like a sheet of fire, out of which burst a storm of bullets, round shots, and rockets, destined for our annihilation. We had upwards of two hundred yards to march through this fiendish fire, and we did it, and the sappers planted the ladders against the wall in three places for the stormers to ascend, but the fire of the enemy waxed stronger, and amid the chaos of

ಇತ್ತ ಕಡೆ ದಕ್ಷಿಣ ಪಾರ್ಶ್ವದಲ್ಲಿ ಕೇವಲ ಪ್ರತ್ಯೇಕರೀತಿಯಾದ ಸಂಭವಬಂತು. ಲೇಡಿಕ್ ಸಾಹೇಬನ ಕೈಕೆಳಗಿನ ಸೈನ್ಯಕ್ಕೆ ಯಶಸ್ಸು ಬರುವದಿಲ್ಲ ವೆಂಬುವದನ್ನು ನೋಡಿ, ಬ್ರಾಕ್ಬರ್ನ್, ಸಾಹೇಬನು ರಾಣಿಸಾಹೇಬಳ ಸೈನ್ಯದ ಪಂಗಡವನ್ನು ವಡೆದು— ಅದರಶಕ್ತಿ ಇಲ್ಲದಂತೆ ಮಾಡುವ ಪ್ರಯತ್ನ ಪಟ್ಟನು. ಬ್ರಿಗೇಡಿಯರ್ ಸ್ಟೂವರ್ಟ್, ಕರ್ನಲ್ ಲೇಕ್ ಸಾಹೇಬರುಗಳು ತಮ್ಮ ಕೈಕೆಳಗಿದ್ದ 25 ಮತ್ತು 86 ನೇ ಪಟಾಲಂ ಸಹಾಯದಿಂದ ಝಾಂಸೀಪಟ್ಟಣದ ಓರ್ಛಾಬಾಗಲನ್ನ ಕೈವಶ ಮಾಡಿಕೊಂಡು ದಕ್ಷಿಣ ಪಾರ್ಶ್ವವನ್ನ ಆಕ್ರಮಿಸಿಕೊಂಡರು ಆದಕಾರಣ ಪ್ರಾಕಾರದ ಮೇಲಿನ ಮೋರ್ಚೆ ಜನಗಳು ನಿರಾಶರಾಗಿ ಹೋಗಿ ಓಡಿಹೋಗಲುದ್ಯುಕ್ತರಾದರು. ಆಪೈಕಿ ಬಹಳಜನಗಳು ವಿಶೇಷ ಶೌರ್ಯದಿಂದ ಯುದ್ಧಮಾಡಿ ತಮ್ಮದೇಹವನ್ನು ಬಿಟ್ಟರು. ದಕ್ಷಿಣಪಾರ್ಶ್ವದಕಡೆ ಇಂಗ್ರೇಜಿ ಸೈನ್ಯಕ್ಕೆ ಯಶಸ್ಸು ಬಂದವರ್ತಮಾನವು ಬಲಗಡೆ ಪಾರ್ಶ್ವದಲ್ಲಿನ ಸೋತು ಹೋದ ಸೈನ್ಯಕ್ಕೆ ತಿಳಿದಕೂಡಲೆ ಅವರಿಗೆ ಆವೇಶವೇರಿ, ಪುನಃ ಮುಂದರಿಸಿ ಹೋಗಿ

---

sounds of vollies of musketry and roaring of cannon and hissing and bursting of rockets, stink-pots, infernal machines, huge stones, blocks of wood and trees, all hurled upon their devoted heads,—the men wavered for a moment, and sheltered themselves, behind stones. But the ladders were there, and there the Sappers, animated by the heroism of their officers, keeping firm hold until a wound or death struck them down beneath the walls. It seemed as though Pluto and the furies had been loosed upon us; and inside bugles were sounding, and tomtoms beating madly, while the cannon and the musket were booming and rattling, and carrying death among us fast. At this instant on our right three of the ladders broke under the weight of men, and a bugle sounded on our right for the Europeans to retire !! "

*Central India P. 254.*

ಈ ವರ್ಣನೆಯ ಮೇಲಿನಿಂದ ಝಾಂಸಿಯ ಸೈನ್ಯದ ಶೌರ್ಯವನ್ನು ಕುರಿತು, ಸಹಜವಾದ ಊಹೆಯನ್ನು ವಾಚಕರು ಮಾಡಬಹುದಾಗಿದೆ.

ಕೋಟೆಯ ಪ್ರಾಕಾರವನ್ನು ಆಕ್ರಮಿಸಿಕೊಂಡರು. ಕೂಡಲೇ ನಾಲ್ಕು ಕಡೆಗಳಲ್ಲಿಯೂ ಹುಲ್ಲಿನಹೊರೆ ಮತ್ತು ಯೇಣಿಸಹಾ ನಿಲ್ಲಿಸಿ, ಇಂಗ್ರೇಜಿ ಸಿಪಾಯಿಗಳು ಪ್ರಾಕಾರದಮೇಲೆ ಹತ್ತಿಹೋಗಲು ಆರಂಭಿಸಿದರು. ಪ್ರಾಕಾರದ ಸಂರಕ್ಷಣೆ ಗೋಸ್ಕರ ಯಿದ್ದ ಝಾಸಿ ಕಡೆಯುವರ ಬುಂದೇಲ ಜನಗಳು ಇಂಗ್ರೇಜಿ ಸೈನ್ಯದ ಸಹಿಸಲಸಾಧ್ಯವಾದ ಹೊಡತದಲ್ಲಿ ಶಿಕ್ಕಿದ ಕಾರಣ ಅವರು ಘಾಬರಿಬಿದ್ದು ದಿಕ್ಕೆಟ್ಟು ಓಡಿಹೋಗಲು ಪ್ರಾರಂಭಿಸಿದರು. ಈ ಪ್ರಕಾರವಾಗಿ ಸ್ವಲ್ಪ ಅವಕಾಶದಲ್ಲಿಯೇ ಸಾವಿರಾರು ಕೆಂಪುಜನಗಳು ಪಟ್ಟಣದ ದಕ್ಷಿಣಪ್ರಾಕಾರದ ಮೇಲೆ ಬಂದುಶೇರಿದ್ದು ಕಂಡುಬಂತು. *

ಪಟ್ಟಣದ ಪ್ರಾಕಾರದಮೇಲೆ ಪ್ರವೇಶವಾಗುತ್ತಲೇ, ಓರ್ಛಾ ಬಾಗಲಕಡೆಗೆ ಸರ್ ಹ್ಯೂರೋಜ್ ಮತ್ತು ಆತನ ಕೈಕೆಳಗಿನ ಸೈನ್ಯವು ಕೂಡ್ಲೆ ಅಲ್ಲಿಗೆ ಬಂದುಸೇರಿತು; ಮತ್ತು ಅವರು ಪ್ರಾಕಾರದಮೇಲೂ ಬುರ್ಜಿನ ಮೇಲೂ ಇದ್ದ ಝಾಸಿ ಸೈನ್ಯವನ್ನು ಬೆನ್ನಟ್ಟಿ ನಾಶಮಾಡುತ್ತಾ ಪಟ್ಟಣದಕಡೆಗೆ ಹೋದರು. ಝಾಸಿಯ ಪಟ್ಟಣದ ಮಧ್ಯಭಾಗದಲ್ಲಿದ್ದ ಒಂದು ಅರಮನೆಯ ಸಂರಕ್ಷಣೆಗೋಸ್ಕರ ಅಲ್ಲಿ ಕೆಲವುಜನಗಳನ್ನು ಇಟ್ಟಿದ್ದರು. ಅದರಮೇಲೆ ಬಿದ್ದು ಅರಮನೆಯನ್ನು ಸ್ವಾಧೀನ ಪಡಿಸಿಕೊಳ್ಳಬೇಕೆಂತ ಸರ್ ಹ್ಯೂರೋಜ್ ಸಾಹೇಬನು ನಿಶ್ಚೈಸಿದನು.

---

* ಝಾಸಿಪಟ್ಟಣದ ಪ್ರಾಕಾರವನ್ನು ಇಂಗ್ರೇಜಿ ಸರ್ಕಾರದ ಸ್ವಾಧೀನ ಮಾಡುವ ಕೆಲಸದಲ್ಲಿ, ರಾಣೀಸಾಹೇಬಳಕಡೆ ದೂಲಾಜಿ ಠಾಕೂರನೆಂಬ ಒಬ್ಬ ಬುಂದೇಲೆ ಸರದಾರನು ಒಳ್ಳೇಸಹಾಯ ಮಾಡಿದನು. ಆದಕಾರಣ ಓರ್ಛಾ ಬಾಗಲ ಕಡೆಯ ಮೋರ್ಛಾ ನಿಲ್ಲಿಸಿ, ಇಂಗ್ರೇಜಿಸೈನ್ಯಕ್ಕೆ ಪ್ರಾಕಾರದಮೇಲೆ ಸುಲಭವಾಗಿ ಪ್ರವೇಶಮಾಡಲು ಆಸ್ಪದ ಶಿಕ್ಕಿತು ಎಂಬಮಾತು ಸರ್ವತಿಳುವಳಿಕೆ ಕೊಡತಕ್ಕಂಥಾ ಒಬ್ಬನ ಕೇಳಿಕೆಯಲ್ಲಿ ಬಂದಿದೆ. ನಿಜವಾಗಿ ಈ ಮಾತು ಸತ್ಯವಾಗಿದ್ದರೆ ದೂಲಾಜಿ ಠಾಕೂರನು ಇಂಗ್ರೇಜಿಸೈನ್ಯದ ಪ್ರಾಬಲ್ಯವನ್ನು ಮನಸ್ಸಿನಲ್ಲಿ ತೆಗದುಕೊಂಡು ಅವರಿಗೆ ಯುದ್ಧದಲ್ಲಿ ಒಳ್ಳೇಸಹಾಯ ಮಾಡಿದನು; ಮತ್ತು ರಾಣೀಸಾಹೇಬಳಕಡೆ ಸೇರಿದ್ದ ದಂಗೆಖೋರ ಜನಗಳನ್ನು ಜಯಿಸಬೇಕೆಂತ ಮನಸ್ಸಿನಲ್ಲಿ ತಂದುಕೊಂಡು, ಅವರ ಯುದ್ಧಸ್ಥಳವನ್ನ ಇಂಗ್ರೇಜಿ ಸೈನ್ಯಕ್ಕೆ ತೋರಿಸಿದನು. ಮತ್ತು ಆಗಲೇನೆ ಅವರಿಗೆ ಪರಾಭವ ಮಾಡಿಬಿಟ್ಟನು; ಎಂಬಮಾತು ನಿಜವಾಗಿ ನಿರಂತರ ಸ್ಮರಿಸತಕ್ಕದ್ದಲ್ಲವೆಂತ ಯಾರು ಹೇಳುವರು ? ಈ ಅಪೂರ್ವವಾದ ಸಹಾಯಕ್ಕೆ ಪ್ರತಿಫಲವಾಗಿ ಪರಮ ರಾಜನಿಷ್ಠನಾದ ದೂಲಾಜಿ ಠಾಕೂರನಿಗೆ ಇಂಗ್ರೇಜಿ ಸರಕಾರದವರು ಎರಡು ಊರುಗಳನ್ನು ಜಹಗೀರಾಗಿ ಕೊಟ್ಟರೆಂತಲೂ ಕೇಳುವದರಿಂದ ತಿಳಿಯುತ್ತದೆ.

ಬಾಯಿಸಾಹೇಬಳು ಕೋಟೆಯ ಸರ್ವಮೋಹರೆಗಳನ್ನ ಸುಧಾರಿಸಿಕೊಂಡು ಬಹಳ ಭದ್ರತೆಯಿಂದ ಯುದ್ಧ ಮಾಡುತಿದ್ದಳು. ಆಕೆಗೆ ಪಟ್ಟಣದ ದಕ್ಷಿಣ ಪ್ರಾಕಾರವನ್ನ ಇಂಗ್ರೇಜಿಸೈನ್ಯದವರು ಸ್ವಾಧೀನ ಪಡಿಸಿಕೊಂಡರೆಂಬ ವರ್ತಮಾನ ತಿಳಿದಕೂಡಲೆ ಸಹಸ್ರಾರು ಚೇಳು ಕಚ್ಚಿದಂತೆ ದುಃಖಪಟ್ಟಳು. ಸದಾ ಹನ್ನೆರಡು ದಿವಸಗಳ ವರೆಗೂ ಯುದ್ಧಮಾಡಿ ಕೊನೆಗೆ ಇಂಗ್ರೇಜಿ ಜನಗಳು ಝಾಂಸಿ ತೆಗದುಕೊಂಡರೆಂತ ಕೇಳುತ್ತಲೆ, ಆಕೆಯ ನಾಲಿಗೆಯ ಮೇಲಿನ ನೀರೆಲ್ಲಾ ಒಣಗಿಹೋಯಿತು. ಕೋಟೆಯಮೇಲೆ ಬಂದು ಶೋಕದೃಷ್ಟಿಯಿಂದ ಪಟ್ಟಣದ ದಕ್ಷಿಣ ಪಾರ್ಶ್ವದಕಡೆ ನೋಡಲಾಗಿ, ಸಾವಿರಾರು ಕೆಂಪು ಶಿಪಾಯಿಗಳು ಝಾಂಸಿಯೊಳಗೆ ನುಗ್ಗಿ, ಹಾಹಾಕಾರವಾಗಿದೆ ಯಂಬುವದು ಆಕೆಯ ಕಣ್ಣಿಗೆ ಬಿತ್ತು. ಅದರಿಂದ ವಂದು ಕ್ಷಣ ಆಕೆಯ ಧೈರ್ಯವು ಕುಂದಿಹೋಗಿ, ಮುಖಲಕ್ಷಣದಮೇಲೆ ನಿರಾಶೆ ಮತ್ತು ಭಯದ ಚಿನ್ಹೆಗಳು ಕಂಡು ಬಂದವು. ಇಷ್ಟು ದಿವಸಗಳವರೆಗೂ ನಿಕರವಾದ ಯುದ್ಧಮಾಡಿ, ಕಡೆಗೆ ಇಂಗ್ರೇಜಿ ಸೈನ್ಯದವರು ಯಶಸ್ಸಿನ ಯಲ್ಲಾ ಪಾಲನ್ನು ತಮ್ಮ ಕಡೆಗೆ ತೆಂದುಕೊಂಡರೆಂಬುವದನ್ನ ಕಂಡು, ರಾಣೀ ಸಾಹೇಬಳಿಗೆ ವಂದು ಕ್ಷಣಮಾತ್ರ ದುಃಖವಾದದ್ದು ಕೇವಲ ಸಹಜವಾದದ್ದಾಗಿದೆ. ಇದು ಹಾಗಿರಲಿ. ಇಂಥಾ ಬಿಕ್ಕಟ್ಟು ಸಮಯವು ಪ್ರಾಪ್ತಿಯಾಗಿದ್ದಾಗ್ಯೂ ಆಕೆಯು ಪುನಃ ವಿಚಾರಮಾಡಿ ತನ್ನ ನಿರಾಶೆ ಮತ್ತು ಭೀತಿಯನ್ನೆಲ್ಲಾ ಬಿಟ್ಟು ತನ್ನ ಶರೀರದಲ್ಲಿ ಶೂರತ್ವದ ಆವೇಶವನ್ನು ತಂದುಕೊಂಡು ಇಂಗ್ರೇಜಿ ಸೈನ್ಯದವರ ಸಂಗಡ ಕೊನೆವರೆಗೂ ಯುದ್ಧಮಾಡುವದನ್ನ ನಿಶ್ಚೈಶಿದಳು. "ವಿಲಾಯತಿ" ಅಂದರೆ ಮುಸಲ್ಮಾನ್ ಅರಬ್ಬರಹಾಗೆ ಬಹುದಿವಸಗಳಿಂದ ಶೇವಕರಾಗಿದ್ದ ಸುಮಾರು ವಂದುವರೆಸಾವಿರ (1500) ಶಸ್ತ್ರಧಾರಿಗಳಾದ ಅಫ್ಘಗನ ಜನಗಳನ್ನು ಸಂಗಡ ಕರಕೊಂಡು ಸ್ವತಃ ಶಸ್ತ್ರಧಾರಿಯಾಗಿ ಕೂಡ್ಲೇ ಕೋಟೆಯಕೆಳಗೆ ಇಳಿದು, ದೊಡ್ಡ ಬಾಗಲಿನಿಂದ ಹೊರಬಿದ್ದು ದಕ್ಷಿಣಪಾರ್ಶ್ವಕ್ಕೆ ನುಗ್ಗಿದಳು. ಪಟ್ಟಣದ ದಕ್ಷಿಣಕಡೆ ಪ್ರಾಕಾರದಿಂದ ವಳಗೆ ಇಳಿದು ಅಲ್ಲಿಗೆ ಬಂದಿದ್ದ ಸಾವಿರಾರು ಕೆಂಪುಜನಗಳ ಶಸ್ತ್ರಗಳು ಬರೆಯಿಂದ ಹೊರಗೆ ತೆಗೆಯಲ್ಪಟ್ಟವು. ಬಾಯಿಸಾಹೇಬಳು ಯಲ್ಲರಹಿಂದೆ ಹೋಗುತ್ತಿರುವಾಗ, ಆ ವೇಶದಿಂದ ಕೈಯ್ಯಲ್ಲಿ ಕತ್ತಿಯನ್ನು ತೆಗೆದುಕೊಂಡು ಯಲ್ಲರ ಮಧ್ಯ ಭಾಗಕ್ಕೆ ಬಂದಳು. ಕೆಂಪು ಜನಗಳು ಮತ್ತು ರಾಣಿಯ ಜನಗಳು ಸಂಧಿಸುತ್ತಲೇ ಶಸ್ತ್ರದ ಯುದ್ಧ ನಡದು ಯರಡೂಕಡೆ ಜನಗಳು ವಬ್ಬರಲ್ಲಿವಬ್ಬರು ಶೇರಿಹೋದರು, ಆ ಸಮಯದ ಯುದ್ಧಕ್ಕೆ ಭಾರತ ಯುದ್ಧದ ಸಾಮ್ಯವು ಸರಿಬೀಳಬಹುದು. 50 ಯೆಣೀಸುವದರೊಳಗಾಗಿ, ಕತ್ತಿಯೇಟಿನಮೇಲೆ ಯೇಟು ಬಿದ್ದು ಪುಷ್ಕಳ ಯುರೋಪಿಯನ ಜನಗಳು ಕತ್ತರಿಶಿ ಹಾಕಲ್ಪಟ್ಟರು. ಬಾಕಿ ಉಳಿದ ಯುರೋಪಿಯನ ಜನಗಳು ಪಟ್ಟಣದ ಕಡೆಗೆ ವೋಡಿಹೋಗಿ ಮರ ಮತ್ತು ಇತರ ಆಶ್ರಯವನ್ನು ಹಿಡುಕೊಂಡು ಬಂದೂಕು ಹೊಡೆಯಲಿಕ್ಕೆ ಪ್ರಾರಂಭಿಸಿದರು. ಹಿಂದಿನಿಂದ ಬೇರೆ ಕೆಂಪು ಜನಗಳು ಬರುತ್ತಿದ್ದರು.

ಅವರೂನು ಶಸ್ತ್ರ ಯುದ್ಧವನ್ನು ಮಾಡದೆ, ದೂರದಿಂದ ಬಂದೂಕು ಬಿಡುತ್ತಿದ್ದರು. * ಅದರಿಂದ ರಾಣೀ ಸಾಹೇಬಳಿಗೆ ಮತ್ತು ತನ್ನ ವಿಲಾಯತಿ (ಅಂದರೆ ಅಫ್ಗಾನ) ಸೇವಕರಿಗೆ ಪೂರ್ವದಂತೆ ಕೋಟೆಯ ಆಶ್ರಯಕ್ಕಾಗಿ ಹೋಗಬೇಕಾಗಿ ಬಂತು.

---

* ಉಜ್ಜನ ಪುಸ್ತಕದಲ್ಲಿ ಈ ರೀತಿಯಾದ ತಿಳುವಳಿಕೆ ಕೊಟ್ಟಿದೆ. ಅದರಲ್ಲಿ ಇನ್ನೂ ಹೀಗೆಯೂ ಬರೆದಿದೆ:—

‘ಇಂಗ್ರೇಜಿಜನಗಳು ಬಂದೂಕು ಹೊಡೆಯುತ್ತಿರುವಾಗ ಬಾಯಿಸಾಹೇಬಳ ಕಡೆ 75 ವರುಷದ ಒಬ್ಬ ಪೂರ್ವದ ಸರದಾರನು ಮುಂದೆಬಂದು ಬಾಯಿಸಾಹೇಬಳ ಕೈಹಿಡಿದು ಹೇಳಿದ್ದೇನಂದರೆ, ‘ಮಹಾರಾಣಿಯೇ! ಈ ಸಮಯದಲ್ಲಿ ತಾವು ಮುಂದೆ ಹೋಗಿ, ಬಂದೂಕಿನ ಗೋಲಿಯಿಂದ ಸಾಯುವದು ಯೋಗ್ಯವಾದದ್ದಲ್ಲ. ಕೆಂಪು ಜನಗಳು ಕಟ್ಟಡಗಳಹಿಂದೆ ನಿಂತುಕೊಂಡು ಗುಂಡು ಬಿಡುತ್ತಿದ್ದಾರೆ. ಇದುಹೊರತು ನೂರಾರು ಕೆಂಪು ಜನಗಳು ಪಟ್ಟಣದಲ್ಲಿ ಹೊಕ್ಕಿದ್ದಾರೆ. ಪಟ್ಟಣದ ಎಲ್ಲಾ ಬಾಗಿಲುಗಳೂ ತೆರೆದಿರುವದರಿಂದ ಇಲ್ಲಿ ಯುದ್ಧ ಮಾಡುವದರಲ್ಲೇನೂ ಅರ್ಥವಿಲ್ಲ. ಅದಕ್ಕಿಂತಲೂ ತಾವು ಕೋಟೆಯೊಳಗೆ ಹೋಗಿ ಬಾಗಿಲು ಹಾಕಿಕೊಂಡು, ಮುಂದೆ ದೇವರು ಏನು ಯುಕ್ತಿಯನ್ನು ತೋರಿಸುವನೋ ಆ ಪ್ರಕಾರ ಮಾಡಬೇಕು. ಇದುಹಿಂತಿರುಗುವ ಸಮಯವಾಗಿದೆ’ ಎಂತ ಹೇಳಿ, ಅವನು ಬಾಯಿಸಾಹೇಬಳ ಕೈಹಿಡಿದು ಹಿಂತಿರುಗಿಸಿದನು.” ಈಯುದ್ಧದ ವರ್ಣನೆಯನ್ನ ಇಂಗ್ರೇಜಿ ಇತಿಹಾಸಕಾರಕರು ಮಾಡುವದಿಲ್ಲ. ಡಾ. ಲೊ ಸಾಹೇಬನು ಇಷ್ಟುಮಾತ್ರ ಹೇಳಿದ್ದಾನೆ:—

“To the west side of the palace about 1500 men collected in a place called the new Petta, and here they determined to stand or die. After some hard fighting a good many endeavoured to escape, but the Cavalry cut of some 300, and the rest them moved beneath the fort in which the Rani and as reported about 500 followers had taken shelter * * * All the day of the 4th there was a good deal of street fight going on, and we lost great number of men in one way or another.”

*Central India P. 260.*

ಇತ್ತಲಾಗಿ ಕೆಂಪುಜನಗಳು ನಾಲ್ಕು ಕಡೆ ಬಾಗಿಲಿನಿಂದಲೂ ಒಳಗೆ ನುಗ್ಗಿ, 'ಬಿರ್ಜ,' ಮಾಡುತ್ತಾ ಹೋದರು. * 5 ವರುಷಗಳ ಮೇಲ್ಪಟ್ಟು 80 ವರುಷಗಳ ಒಳಗಿನ ಗಂಡಸರು ಯೆಷ್ಟು ಕಾಣುತ್ತಿದ್ದರೋ ಅವರನ್ನು ಗೋಲಿ ಅಥವಾ ಕತ್ತಿಗಳಿಂದ ಸಂಹಾರ ಮಾಡುತ್ತಾ ಹೋದರು. ಮತ್ತು ಬಂದುಕಡೆಯಿಂದ ಪಟ್ಟಣಕ್ಕೆ ಬೆಂಕಿ ಹಚ್ಚಿದರು. ಪ್ರಥಮತಃ ಹಲವಾಯಿಪುರಕ್ಕೆ ಬೆಂಕಿ ಹಚ್ಚಿದರು. ಆ ಕಾಲದಲ್ಲಿ ಪಟ್ಟಣದಲ್ಲಿ ಅಲ್ಲೋಲ ಕಲ್ಲೋಲವಾಗಿ ಎದ್ದ ದುಃಖಕ್ಕೆ ಪಾರವೇ ಇಲ್ಲ. ಕಪ್ಪೆಗಳ ಗುಂಡಿಯಲ್ಲಿ ತೋಳವು ಹಾರುತ್ತಲೇ ಅಲ್ಲಿನ ನೀರಿನ ಸ್ಥಿತಿಯು ಹ್ಯಾಗಾಗುವದೋ, ಆ ರೀತಿಯಾಗಿ ಜನಗಳು ಜೀವದ ಭಯದಿಂದ ಆತುರರಾಗಿಹೋಗಿ ಸ್ವೇಚ್ಛೆಯಾಗಿ ಓಡಿಹೋಗಲು ಪ್ರಾರಂಭಿಸಿದರು. ಕೆಲವರು ಸಂದಿನಲ್ಲಿ ನುಗ್ಗಿದರು. ಕೆಲವರು ಮನೆಯೊಳಗೆ ಅಡಚಣೆ ಸ್ಥಳದಲ್ಲಿ ಅಡಗಿಕೊಂಡರು. ಕೆಲವರು ಗಡ್ಡ ಮೀಶೆಗಳನ್ನು ತೆಗೆದುಹಾಕಿಕೊಂಡು ಸ್ತ್ರೀವೇಷಧಾರಣ ಮಾಡಿಕೊಂಡರು. ಈರೀತಿಯಾಗಿ ಯಾರಿಗೆ ಹ್ಯಾಗೆ ಜೀವ ಉಳಿಸಿಕೊಳ್ಳುವ ಯುಕ್ತಿ ತೋರಿತೋ ಹಾಗೆ ಅವರು ಮಾಡಲು ಪ್ರಾರಂಭಿಸಿದರು.

---

* ಈ ಸಂಗತಿಯು ಉಜ್ಜನ ಪ್ರತಿಯಲ್ಲಿ ಕೊಟ್ಟಿದೆ. ಈ ವಿಷಯವನ್ನು ಝಾಂಸಿಯಲ್ಲಿ ಸಮಕ್ಷಮ ಆಗ ಇದ್ದ ಒಬ್ಬ ಗೃಹಸ್ಥನು ಹೇಳಿರುತ್ತಾನೆ. ಅದು ಎಷ್ಟು ಸತ್ಯವಾಗಿದೆ ಎಂಬುವದನ್ನು ನೋಡುವುದಕ್ಕೆ ಬೇರೆ ಪ್ರಯತ್ನ ಮಾಡಬೇಕಾದ್ದಕ್ಕೇನೂ ಕಾರಣವಿಲ್ಲ. ಇದೇ ಸಮಯದಲ್ಲಿ ಸರ್ ಹ್ಯೂರೋಜ್ ಸಾಹೇಬನ ಸೈನ್ಯದಲ್ಲಿದ್ದ ಡಾ. ಲೋ ಸಾಹೇಬನು ಈ ಸಂಬಂಧದಲ್ಲಿ ಬರೆದಿರುವ ಸಂಗತಿಗೆ ಮೇಲೆ ಹೇಳಿರುವದನ್ನು ಸೇರಿಸಿ ನೋಡಿದರೆ ಪುಷ್ಕಳವಾಗಿ ಬಂದಕೊಂಡು ಸರಿಹೋಗುತ್ತದೆ. ಡಾ. ಲೋ ಸಾಹೇಬನು ಬರೆದಿರುವದೇನಂದರೆ :—

"Death was flying from house to house with mercurial speed; not a man was spared, and the streets began to run with blood. Ere long the houses on both the sides of the street leading to the palace were on fire. The heat from the sun and these flames was fearful; and as we passed from beneath the cover of these burning buildings to get into the palace yard, we had to make a rush, for the gate way was immediately commanded by the fort, into which the enemy had fled, and from which they kept up a constant heavy fire upon this spot. * * * * *

ಕೆಂಪುಜನಗಳು ಪಟ್ಟಣದಲ್ಲಿ ನುಗ್ಗಿ ಸಂಹಾರ ಕೃತ್ಯಕ್ಕೆ ಉದ್ಯುಕ್ತರಾದರೆಂಬುವದು ತಿಳಿದಕೂಡಲೆ, ಪಟ್ಟಣದ ಮಧ್ಯಭಾಗದಲ್ಲಿದ್ದ ಛಿಡ್ಯಾ ತೋಟದೊಳಗೆ ಸಾವಿರಾರು ಜನಗಳು ನಾಲ್ಕು ಕಡೆಗಳಿಂದಲೂ ನುಗ್ಗಿದರು. ಅಲ್ಲಿಗೆ ಕೆಂಪು ಜನಗಳು ಬಂದಕೂಡಲೇ ಅಲ್ಲಿನ ಸರ್ವಜನಗಳೂ ದೀನರಾಗಿ ಭೂಮಿಯಮೇಲೆ ಅವರಿಗೆ ಸಾಷ್ಟಾಂಗ ನಮಸ್ಕಾರಗಳನ್ನು ಮಾಡಿ ಕರುಣ ಸ್ವರದಿಂದ ಹೇಳಿಕೊಂಡಿದ್ದೇನೆಂದರೆ,—" ಸಾಹೇಬ್, ನಾವು ನಿರಪರಾಧಿಗಳಾದ ರೈತರಾಗಿದ್ದೇವೆ; ನಾವು ಯುದ್ಧದ ಜನಗಳಲ್ಲಿ ನಮಗೆ ದಯಾಳುಗಳಾಗಿ ತಾವು ಪ್ರಾಣದಾನ ಕೊಡಬೇಕು," ಯಂತ ಬೇಡಿಕೊಂಡ ಅವರ ದೀನ ಪ್ರಾರ್ಥನೆಯನ್ನು ಕೇಳಿ, ಅವರೆಲ್ಲರ ಅದೃಷ್ಟವಶಾತ್, ಕೆಂಪುಜನಗಳ ಮೇಲಿನ ಮುಖ್ಯಾಧಿಕಾರಿಗೆ ದಯಹುಟ್ಟಿ ಅವನು ಅವರ ಪ್ರಾಣಕ್ಕೆ ಅಭಯಕೊಟ್ಟು, ಆ ತೋಟದಸುತ್ತಲೂ ಪಹರೆ ಇಟ್ಟು ಬಾಗಲಿಗೆ ಬೀಗವನ್ನು ಹಾಕಿಸಿ ವಳಗಿನವರನ್ನ ಹೊರಗೆ ಬಿಡಕೂಡದು ಹೊರಗಿನವರನ್ನ ವಳಗೆ ಬಿಡಕೂಡದೆಂತ ಅಪ್ಪಣೆ ಮಾಡಿದನು. ನಿಜವಾಗಿ ಈ ಮಾತು ಆ ಕೆಂಪು ಅಧಿಕಾರಿಯ ಸಮಾಧಾನವನ್ನು ತೋರಿಸತಕ್ಕದ್ದಾಗಿ ಇದೆ, ಯಂಬುವದಕ್ಕೇನೂ ಸಂದೇಹವಿಲ್ಲ. ಇದು ಹಾಗಿರಲಿ.

---

"The street fighting went on all this time in a terrible way. Those who could not escape threw their women and babes down wells, and then jumped down themselves; they were dragged out, the women and children taken care of and the men then despatched. Every house, almost, had its inmates of rebels, who fought to the death like tigers, so the bayoneting went on till after sunset."

"The fall of Jhansi was more than successful, for not only did the General capture their strong-hold, but he so completely hemmed them in that escape to the mass was next to impossible. Death stared them in the face on every side; no quarter was awarded them as a word of warning to others. I exaggerate not when I say I saw the streets stained with blood, but I also know that the rough and bearded soldier behaved most kindly to the women and children. It was

ಎರಡನೇ ಕಡೆಯಲ್ಲಿ ಕೆಂಪು ಜನಗಳು ಮನೆಗಳನ್ನು ನುಗ್ಗಿ ಮನುಷ್ಯರನ್ನು
ಕೊಂದುಹಾಕಿ, ಬೆಳ್ಳಿ ಭಂಗಾರ ಲೂಟಿಮಾಡಲುದ್ಯುಕ್ತರಾದರು. ಮನೆಯೊಳಗೆ ನುಗ್ಗಿ
ದಕೂಡಲೆ ಕೈಗೆ ಶಿಕ್ಕಿದ ಮನುಷ್ಯನು, ತನ್ನ ದ್ರವ್ಯವನ್ನು ಕೆಂಪುಜನಗಳ ಸ್ವಾಧೀನ
ಮಾಡಿದರೆ, ಅವನು ಜೀವದಿಂದ ಉಳುಕೊಳ್ಳುತ್ತಿದ್ದನು. ದ್ರವ್ಯವು ಕೂಡಲೆ ಹೊರ
ಡದಿದ್ದರೆ ಅವನನ್ನು ನಾನಾವಿಧವಾದ ಹಿಂಸೆಗೆ ಗುರಿಪಡಿಸುತ್ತಿದ್ದರು. ಅನೇಕ ಜನಗ
ಳನ್ನು ಕುತ್ತಿಗೆಗೆ ಅವರ ಧೋತ್ರಗಳಿಂದಲೇ ಉರುಲುಹಾಕಿ ಬೀದಿಗೆ ವೈದು ಹೊಡೆಯು
ತ್ತಿದ್ದರು. ಅವರ ಮನೆಯಲ್ಲಿ ಹುಡಿಕಿ ಗೋಡೇ ವಡದಮೇಲೆ ಅರ್ಥ ಶಿಕ್ಕದರೆ
ಅವನಿಗೆ ಗೋಲಿ ಹೊಡದು ಕೊಂದುಹಾಕುತ್ತಿದ್ದರು. ಯಾವ ಮನುಷ್ಯನು ಸೊತ್ತು
ಕೊಟ್ಟು ಬಿಡಿಶಿಕೊಂಡನೋ, ಆತನು ಬೇರೇ ಕೆಂಪುಜನಗಳ ಕೈಗೆ ಶಿಕ್ಕಿದರೆ ಅವನು
ಬಂದೂಕಿನಿಂದ ಸಾಯಬೇಕು. ಕೆಂಪು ಜನಗಳು ಸ್ತ್ರೀಯರನ್ನ ಬುದ್ಧಿಪೂರ್ವಕವಾಗಿ
ಕೊಲ್ಲಲಿಲ್ಲ. ಆದರೆ ಕೆಲವು ಕುಲವಂತರಾದ ಸ್ತ್ರೀಯರು ಮತ್ತು ಪುರುಷರು ಕೆಂಪು
ಜನಗಳು ಮುಂದೆ ಬರುತ್ತಾರೆ, ಅಂದರೆ ತಮ್ಮನ್ನು ಕೆಡಿಸುವರು ಯೆಂಬ ಭೀತಿಯಿಂದ
ಹಿತ್ತಲು ಬಾಗಿಲುನಿಂದ ಹೋಗಿ ಭಾವಿಯಲ್ಲಿ ಜೀವ ಕೊಡುತ್ತಿದ್ದರು. ಕೆಲವು ಕಡೆಗಳಲ್ಲಿ
ಕೆಂಪು ಜನಗಳು ಮನೆಯಲ್ಲಿ ನುಗ್ಗಿ, ಗಂಡಸರಿಗೆ ಬಂದೂಕಿನಿಂದ ಹೊಡೆಯುತ್ತಿರುವಾಗ
ಅವರ ಹೆಂಗಸರು ಬಂದು ಅವರ ಸೊಂಟ ಕಟ್ಟಿಕೊಳ್ಳುತ್ತಿದ್ದರು. ಆಗ ಗೋಲಿ ಬಂದ
ಕೂಡಲೆ, ಆ ಪತಿವ್ರತಾ ಸ್ತ್ರೀಯರಿಗೆ, ತಗಲಿ ತಮ್ಮ ದೇಹಗಳು ಸಾರ್ಥಕವಾದವೆಂತ
ತೋರಿ, ಸಾಯುತ್ತಿದ್ದರು. ಈಗ ಗೋಲಿಪೆಟ್ಟು ಹೆಂಗಸಿಗೆ ತಗಲಿತೆಂಬುವದನ್ನು ನೋಡಿ,
ಕೆಂಪು ಮನುಷ್ಯನು ಪುನಃ ಗುಂಡುಹಾಕಿ ಆಕೆಯ ಗಂಡನನ್ನು ಕೊಂದುಹಾಕುತ್ತಿ
ದನು. ಈಪ್ರಕಾರವಾಗಿ ಅನೇಕದೃಢವಾದ ಮನಸ್ಸಿನ ಸ್ತ್ರೀಯರುಗಳು ಮರಣವನ್ನೈ
ದಿದರು. ಪರಂತು ಪುನಃ ಪೂರ್ತಿಯಾಗಿ ಕೆಂಪು ಜನಗಳು ಸ್ತ್ರೀಯರ ಪ್ರಾಣ ಅಥವ

---

an awful sight to see these poor creatures follow out of their houses some rebel husband, brother or son, who was at once shot, and then to see them huddled together, pale and trembling, beneath the walls, helpless and alone in the world! But the soldier was as compassionate to these poor wretches as he was unrelenting to all male inhabitants found in arms. Many I saw dividing the contents of their havresacs among these half-starved women and children, and every woman was treated with kindness and respect."

*Central India p. 262-63.*

ಮಾನವನ್ನು ನಾಶಪಡಿಸಲಿಲ್ಲ. ಇಷ್ಟು ಒಳ್ಳೇತನವು ಆ 'ಹಡೇಲ್ ಹಫ' ' ಯನ್ನತಕ್ಕ ಸೋಲ್ಜರ್ ಜನಗಳಿಗೆ ಯಲ್ಲಿ ಬಂದೀತು ? ಯಂಬುವದು ನಿಜ. ಆದರೆ ಇಂಗ್ರೇಜಿ ಅಧಿಕಾರಿಗಳ ವಿಶೇಷವಾದ ನಿರ್ಬಂಧದಿಂದ ಸ್ತ್ರೀಯರ ಮಾನಹಾನಿ ಆಗಲಿಲ್ಲ. ಈ ಮಾತು ಬ್ರಿಟಿಷ್ ಸರ್ಕಾರಕ್ಕೆ ಅತ್ಯಂತ ಭೂಷಣಕರವಾದ್ದಾಗಿದೆ ಯಂಬುವದಕ್ಕೇನೂ ಸಂದೇಹವಿಲ್ಲ. ಇದು ಹಾಗಿರಲಿ, ಈ ಪ್ರಕಾರವಾಗಿ ಸಾಯಂಕಾಲ ಪರ್ಯಂತರ ಸಂಹಾರ ಮತ್ತು ಸುಲಿಗೆ ನಡೆದು, ಆ ಯಮರೂಪಿಗಳಾದ ಕೆಂಪು ಶಿಪಾಯಿಗಳು ರಾತ್ರಿಯ ಬಂದೋಬಸ್ತುಮಾಡಿ, ತಮ್ಮ ಶಿಬಿರಕ್ಕೆ ಹೋದರು."

ಪಟ್ಟಣದಲ್ಲಿ ಇಂಗ್ರೇಜಿ ಸರ್ಕಾರದವರ ಆಳಿಕೆಯಾದನಂತರ, ಸರ್ ಹ್ಯೂರೋಜ್ ಮತ್ತು ಕರ್ನಲ್ ಲೀಕ್ ಸಾಹೇಬರುಗಳು 8(ನೇ ಪಟಾಲಂ ಸೈನ್ಯವನ್ನ ಸಂಗಡ ತೆಗದು ಕೊಂಡು ಅರಮನೆಯನ್ನು ಜಯಿಸಿ ತೆಗದುಕೊಳ್ಳಲು ಅಲ್ಲಿಗೆ ಹೋದರು. ಅರಮನೆಯ ಮಧ್ಯದಲ್ಲಿ ರಾಣೀಸಾಹೇಬಳ ಕೆಲವು ಶೂರಪಹರೇ ಜನಗಳಿದ್ದರು. ಅವರು ಬಹಳ ನಿಕರವಾಗಿ ಯುದ್ಧಮಾಡಿ ಅರಮನೆ ಸಂರಕ್ಷಣೆ ಮಾಡುವದಕ್ಕೆ ಪ್ರಯತ್ನ ಪಟ್ಟರು. ಈ ಯುದ್ಧದಲ್ಲಿ ಬಹಳ ಯುರೋಪಿಯನ್ ಜನಗಳು ಸತ್ತುಹೋದರು. ಮತ್ತು ಘಾಯವಾದರು. ಆದಾಗ್ಯೂ, ಅವರಗುಂಪು ದೊಡ್ಡದಾಗಿದ್ದು ಅರಮನೆಯ ಸುತ್ತಲೂ ಮುತ್ತಿಕೊಂಡದ್ದರಿಂದ ಪಹರೇ ಜನಗಳು ನಿರುಪಾಯರಾದರು. ಇದೇ ಸಮಯದಲ್ಲಿ ಅರಮನೇ ಸುತ್ತಲೂ ಇದ್ದ ಯಲ್ಲಾ ಮನೆಗಳಿಗೂ ಬೆಂಕಿಹಚ್ಚಿದ್ದ ಕಾರಣ ಅದರ ಜ್ವಾಲೆಯ ಅತಿಶಯ ಯೋಗದಿಂದ ಅದೂನೂ ಅವರ ಬೆನ್ನುಹತ್ತಿತ್ತು. ಆದ ಕಾರಣ ಪಹರೇಜನಗಳಿಗೆ ಬಹಳ ತೊಂದರೆ ಸಂಭವಿಸಿತು. ಇಂಗ್ರೇಜಿ ಶಿಪಾಯಿಗಳು ಅವರಮೇಲೆ ಬಂದೂಕು ಹಾರಿಸಿ ಅವರ ಸರ್ವ ಶಕ್ತಿಯನ್ನೂ ಸೆಳಕೊಂಡುಬಿಟ್ಟು ಬಹಳಬಲವಾಗಿ ಅರಮನೆಯಮೇಲೆಬಿದ್ದರು. ಸಿಡಲಿನಿಂದ ಹ್ಯಾಗೆ ಮನೆಯು ದುರ್ದಶೆಗೆ ಬರುವದೋ, ಆ ಪ್ರಕಾರ ಈ ಯುದ್ಧದ ಯೋಗದಿಂದ ಝಾಂಸಿಯವರ ಈ ಇತಿಹಾಸ ಪ್ರಸಿದ್ಧ ಮತ್ತು ವೈಭವ ಸಂಪನ್ನವಾದ ಅರಮನೆಗೆ ನಾಶಕಾಲವು ಒದಗಿತು. ಅರಮನೆಯು ಕೈಗೆಸೇರಿದನಂತರ ಇಂಗ್ರೇಜಿ ಶಿಪಾಯಿಗಳು ಅಲ್ಲಿನ ಸರ್ವ ಜನಗಳನ್ನೂ ಯಮನ ಪಟ್ಟಣಕ್ಕೆ ಕಳುಹಿಸಿದರು. ಪರಂತು, ಅದರ ಸುತ್ತಲುಯಿದ್ದ ಕುದುರೆಯ ಸವಾರರ ಒಂದು ಸಣ್ಣ ತುಕಡಿಯವರಲ್ಲಿನ ಸುಮಾರು 50 ಜನ ವೀರರು ಬಹಳ ಭದ್ರತೆಯಿಂದ ಸ್ಥಳ ಹಿಡಿದುಕೊಂಡು ಇದ್ದರು. ಅವರು ಅಲ್ಲಿ ಇದ್ದದ್ದು ಸುಮಾರು ಯರಡು ತಾಸುಗಳವರೆಗೂ ಗೊತ್ತಾಗಲಿಲ್ಲ. ಆ ಮೇಲೆ ಅವರು ಸಿಕ್ಕದಕೂಡಲೇ 86 ಮತ್ತು ೩ನೇ ಯೂರೋಪಿಯನ್ ಪಟಾಲಂನ ಕೆಲವು ಜನಗಳು ಅವರಮೇಲೆ ಬಿದ್ದರು. ಪರಂತು ಆ ಜನಗಳು ಬಹಳ ಶೂರರಾಗಿದ್ದ ಕಾರಣ ಶಸ್ತ್ರವನ್ನು ಹಿಡಿದು ಕೊಂಡು ಇಂಗ್ರೇಜಿ ಸೈನ್ಯದವರಸಂಗಡ ಚನ್ನಾಗಿಯೇ ಯುದ್ಧಮಾಡಿದರು. ಈ ಯುದ್ಧದಲ್ಲಿ ಇಂಗ್ರೇಜಿ ಸೈನ್ಯದವರಲ್ಲಿ ಬಹಳ ಜನಗಳು ಸತ್ತುಹೋದರು ; ಮತ್ತು

ಪುಷ್ಕಳ ಜನಗಳಿಗೆ ಘಾಯವಾಯಿತು. ಕೊನೆಗೆ ಇಂಗ್ರೇಜಿ ಸೈನ್ಯದವರ ವಿಶೇಷವಾದ ಬಲಪಮುಂದೆ ಆ ಶೂರರು ನಿರೂಪಾಯರಾದರು; ಆದಾಗ್ಯೂ ಆ ಸರ್ವರು ಸಮರಾಂಗಣದಿಂದ ಓಡಿಹೋಗದೆ, ಸಾಯುವವರೆಗೂ ಯುದ್ಧಮಾಡಿದರು. ಈ ವಿಶೇಷ ಸಂಗತಿಯು ಲಕ್ಷ್ಯದಲ್ಲಿಡತಕ್ಕ ಮಾತಾಗಿದೆ. ಈ ಶೂರಜನಗಳು ಸತ್ತುಹೋದನಂತರ ಇಂಗ್ರೇಜಿ ಶಿಪಾಯಿಗಳು ಆ ಭಾಗವನ್ನ ಸ್ವಾಧೀನಪಡಿಸಿಕೊಂಡರು. ಈ ಪ್ರಕಾರವಾಗಿ ಝಾಸಿಯವರ ಅರಮನೆಯೆಲ್ಲಾ ಇಂಗ್ರೇಜಿಯವರ ಸ್ವಾಧೀನವಾಗುತ್ತಲೇ, ಅವರು ಪಳಗಿದ್ದ ಬೆಲೆಯುಳ್ಳ ಸರ್ವ ಅಸಂಖ್ಯಾಕವಾದ ಸಾಮಾನುಗಳನ್ನು ಲೂಟಿಮಾಡಿದರು. ಅದರಲ್ಲಿ ಅವರಿಗೆ ಝಾಸಿಯವರ ಅನೇಕ ಜರ್ತಾರಿ ನಿಶಾನೆಗಳು ಮತ್ತು ಮರಾಟಿ ಸೈನ್ಯದ ಬಿರುದಾವಳಿಗಳು ಸಹ ಸಿಕ್ಕಿದವು. ಝಾಸಿ ಸುಭೇದಾರ್ ರಾಮಚಂದ್ರರಾಯನಿಗೆ ಲಾರ್ಡ್ ವಿಲಿಯಂ ಬೆಂಟಿಂಕ್ ಸಾಹೇಬನು ಕೊಟ್ಟಿದ್ದ ‘ಯೂನಿಯನ್ ಜಾಕ’ ಎಂಬ ಬ್ರಿಟಿಷ್ ರಾಜಚಿನ್ಹೆಯ ಧ್ವಜ ಸಹ ಇದೇ ಸಮಯದಲ್ಲಿ ಇಂಗ್ರೇಜಿ ಸೈನ್ಯದವರ ಕಡೆಗೆ ಸಿಕ್ಕಿತು. ಅದು ದೃಷ್ಟಿಗೆ ಬೀಳುತ್ತಲೆ ರಾಯಲ್ ಕೌಂಟಿಡರ್ಹ್ಯಾಸ್ ಪಟಾಲಂಗೆ ಪರಮಾನಂದವಾಯಿತು. ಅನಂತರ ಬಹಳ ವಿಜಯೋತ್ಸವದಿಂದ ಅವರು ಅದೇ ಧ್ವಜವನ್ನ ಝಾಸಿಯ ಅರಮನೆಯಮೇಲೆ ನಿಲ್ಲಿಸಿ, ಅಲ್ಲಿ ಬ್ರಿಟಿಷ್‌ರಾಜ್ಯ ಸತ್ವವನ್ನ ಪುನಃ ಸ್ಥಾಪನೆ ಮಾಡಿದರು.

ಇತ್ತಲಾಗಿ, ಕೋಟೆಯೊಳಗೆ ಬೇರೇವಿಧವಾದ ಸಂಗತಿ ಸಂಭವಿಸಿತು. ಬಾಯಿಸಾಹೇಬಳು ತನ್ನ ಸೈನ್ಯಕ್ಕೆ ಜಯಪ್ರಾಪ್ತಿಯಾಗುವದಿಲ್ಲವೆಂಬುವದನ್ನು ನೋಡಿ, ಹಿಂತಿರುಗಿ ಅರಮನೆಗೆ ಬಂದಳು; ಮತ್ತು ಅತಿಶೋಕಾತುರಳಾಗಿ ಸುಮ್ಮನೆ ದಿವಾನ್‌ಖಾನೆಯಲ್ಲಿ ಕೂತುಕೊಂಡಳು. ಆ ತೇಜಸ್ವಿನಿಯಾದ ಸ್ತ್ರೀಯು, ಆ ಕಾಲದ ಸ್ಥಿತಿಯನ್ನು ನೋಡಿ, ಮತ್ತು ಆಕೆಯ ಅಮಾನುಷ ಪರಾಕ್ರಮದ ಇಂಥಾ ದುಃಖಕರವಾದ ಪರಿಣಾಮವನ್ನ ಮನಸ್ಸಿನಲ್ಲಿ ತಂದು, ಆಕೆಯ ಆಶ್ರಿತಮಂಡಲಿಗೆ ಅತಿಶಯ ವ್ಯಸನವಾಯಿತು. ಮತ್ತು ಆ ಸರ್ವ ಮಂಡಲಿಯು ಇತ್ತಲಾಗಿ, ಅತ್ತಲಾಗಿ ಚಿಂತಾಕ್ರಾಂತರಾಗಿ ಮುಂದೆ ಏನು ಮಾಡಬೇಕೆಂಬ ವಿಷಯದಲ್ಲಿ ಮೆಲ್ಲಮೆಲ್ಲಗೆ ಮಾತನಾಡಿಕೊಂಡರು. ಒಂದು ಪ್ರಹರದನಂತರ, ಬಾಯಿಸಾಹೇಬಳು ಪಟ್ಟಣದ ಅವಸ್ಥೆಯು ಏನಾಗಿದೆ ಎಂಬುವದನ್ನು ನೋಡುವದಕ್ಕಾಗಿ ಮಹಡಿಯಮೇಲೆ ಹೋದಳು. ಆ ಸಮಯದಲ್ಲಿ ಆ ದುರ್ದೈವ ಪಟ್ಟಣದ, ಹೃದಯವನ್ನು ಕರಗಿಸತಕ್ಕಂಥ ಅವಸ್ಥೆಯು, ಆಕೆಯ ದೃಷ್ಟಿಗೆಬಿದ್ದು, ಅದರಿಂದ ಆಕೆಯ ಅಂತಃಕರಣದಲ್ಲಿ ಕಳವಳ ಉತ್ಪನ್ನವಾಗಿ, ಕಣ್ಣುಗಳಿಂದ ಖಳಖಳೆಯಂತ ನೀರು ಸುರಿಯಲು ಪ್ರಾರಂಭಿಸಿತು. ಹಲವಾಯಿಪುರ ಎಂಬುವದು ಪಟ್ಟಣದ ಒಂದು ದೊಡ್ಡ ಒಳ್ಳೇ ಭಾಗವಾಗಿತ್ತು. ಅದು ಸುಟ್ಟುಹೋದಕಾರಣ ದೊಡ್ಡ ರೋದನ ಹುಟ್ಟಿತು. ಆಗ ಪೂರಾ ದಿವ್ಯ ಬಿಸಲು ಕಾಲವಾದ್ದರಿಂದ ಸೂರ್ಯನ ಕಿರಣಗಳಲ್ಲಿ ಬೆಂಕಿಯ ತೀಕ್ಷ್ಣವಾದ ಜ್ವಾಲೆಯ ತಾಪವು ಸೇರಿದಕಾರಣ, ಹೊಗೆಯು ಸಹಿಸಲಸಾಧ್ಯವಾಗಿ, ಪಟ್ಟಣದಲ್ಲೆಲ್ಲಾ ತುಂಬಿಹೋಗಿತ್ತು. ಎಲ್ಲೆಲ್ಲಿಯೂ ರೋದನವೂ,

ಒದರೋಣವೂ, ಓಡಿಹೋಗೋಣವೂ, ಇವೇ ನಡೆಯುತ್ತಿತ್ತು. ಬಂದೂಕಿನ ನೂರಾರು ಶಬ್ದಗಳು ಒಂದೇ ಪ್ರಕಾರವಾಗುತ್ತಿದ್ದು; ನಿರಪರಾಧಿಗಳ ಜೀವವು ವ್ಯರ್ಥವಾಗಿ ಹೋಗುತ್ತಿತ್ತು. ಇಂಥಾ ಭಯಂಕರವಾದ ನೋಟವನ್ನು ನೋಡಿ, ರಾಣೀಸಾಹೇಬಳ ಕರುಣ ಹೃದಯವು ಶುದ್ಧಾಂಗ ನಿಕ್ಷೇಪ್ಸಿತವಾಯಿತು. ಮತ್ತು ಆಕೆಯ ದುಃಖದ ವೇಗವನ್ನು ನಿಲ್ಲಿಸುವುದಕ್ಕೆ ಆಗದೆಹೋಗಿ, ಆಕೆಯು ಕೆಲವುಕಾಲ ಶುದ್ಧಾಂಗಸ್ತಬ್ಧಳಾಗಿ ಬಿಟ್ಟಳು. ಇಷ್ಟರಲ್ಲಿ, ಕೋಟೆಯ ಮುಖ್ಯಬಾಗಲಿನ ಸಂರಕ್ಷಣೆಮಾಡುತ್ತಿದ್ದ ಶೂರಾಗ್ರಗಣ್ಯ ಸರದಾರರಾದ ತುಂವರ್ ಖುದಾಬಕ್ಸ್ ಮತ್ತು ತೋಪಖಾನೆಯ ಮೇಲಿನ ಪ್ರಮುಖ ಉದ್ಯೋಗಸ್ಥನಾದ ಗುಲಾಂ ಗೋಷ್‌ಖಾನ್ ಈ ಇಬ್ಬರು, ಗೋಲಿಗಳು ತಗಲಿ ಪ್ರಾಣ ಬಿಟ್ಟರೆಂಬ ಅತಿಶಯ ಶೋಕಕರವಾದ ವರ್ತಮಾನ ಕೊಡತಕ್ಕವನು ಬಂದು, ರಾಣೀಸಾಹೇಬಳಿಗೆ ತಿಳಿಸಿದನು. ಅದನ್ನು ಕೇಳಿದಕೂಡಲೇ ರಾಣೀಸಾಹೇಬಳ ಧೈರ್ಯದ ಗಟ್ಟವು ಜಾರಿಬಿದ್ದುಹೋಗಿ, ಆಕೆಗೆ ಈಗ ಇಂಗ್ರೇಜಿಸೈನ್ಯದವರ ಮುಂದೆ, ತಾನು ನಿಲ್ಲಲು ಆಗುವದಿಲ್ಲವೆಂಬುವದು ಪ್ರತ್ಯಕ್ಷವಾಗಿ ಕಂಡು ಬಂತು. ಆಗ ಆಕೆಯು ತನ್ನ ಹತ್ತರಿನ ಮುಖ್ಯಮುಖ್ಯ ಮಂಡಲಿಯವರನ್ನು ಸಮೀಪಕ್ಕೆ ಕರೆದು, ಈ ರೀತಿಯಾಗಿ ಹೇಳಿದಳು:—“ನೀವು ಈ ಹೊತ್ತಿನ ಪರ್ಯಂತರ ಇಂಗ್ರೇಜಿ ಸೈನ್ಯದ ಸಂಗಡ ನಿಕರವಾದ ಯುದ್ಧಮಾಡಿ, ಝಾನ್ಸಿಯನ್ನು ಸಂರಕ್ಷಣೆಮಾಡಿದಿರಿ; ಪರಂತು ಈಗ ನಿಮಗೆ ಯಶಸ್ಸುಬರುವ ಚಿನ್ಹ ತೋರುವದಿಲ್ಲ. ನಿಮ್ಮ ಶೂರಸರದಾರ ಮತ್ತು ಬುದ್ಧಿಶಾಲಿಯಾದ ಫಿರಂಗಿ ಹೊಡೆಯತಕ್ಕವನು ದ್ರೋಹಮಾಡಿದನು; ಆದಕಾರಣ ಪ್ರಾಕಾರದ ಭದ್ರತೆ ಸರಿಯಾಗದೆ ಅದು ಇಂಗ್ರೇಜಿಯವರ ಸ್ವಾಧೀನವಾಗಿದೆ. ಪಟ್ಟಣದ ಮಧ್ಯದಲ್ಲಿ ಇಂಗ್ರೇಜಿ ಸೈನ್ಯದವರು ಇಲ್ಲಿ ಅಲ್ಲಿ ಸಂಹಾರಮಾಡುತ್ತಿದ್ದಾರೆ. ಈಗ ಅವರಿಗೆ ಕೋಟೆಯಮೇಲೆ ಬಿದ್ದು, ಅದನ್ನು ಒಡೆಯುವದು ಕೇವಲ ಸುಲಭವಾಗಿದೆ. ಕೋಟೆಯು ಅವರ ಕೈಸೇರಿದ ಕೂಡಲೆ ಅವರು ನಿಮ್ಮನ್ನು ಸೆರೇಹಿಡಿದು ನಿಮ್ಮ ಪ್ರಾಣವನ್ನು ಯಾವ ರೀತಿಯಲ್ಲಿ ನಾಶಮಾಡುವರೆಂಬುವದು ಗೊತ್ತಾಗುವದಿಲ್ಲ. ಆದಕಾರಣ, ಅರಮನೆಯಲ್ಲಿ ಮದ್ದುಗುಂಡುಗಳನ್ನು ಹಾಕಿ ಬೆಂಕೀ ಹಚ್ಚಿ ನನ್ನ ಜೀವ ಕಳದುಕೊಳ್ಳುವದಕ್ಕೆ ಸಂಕಲ್ಪಮಾಡಿದ್ದೇನೆ. ನಾನು ನನ್ನ ದೇಹಕ್ಕೆ ಕೆಂಪು ಜನಗಳ ಕೈಕೂಡ ಸ್ಪರ್ಶವಾಗಲು ಬಿಡತಕ್ಕವಳಲ್ಲ. ಆದಕಾರಣ, ಯಾರಿಗೆ ಇಲ್ಲಿ ಮರಣವಿದೆಯೋ ಅವರು ಇಲ್ಲಿರಬೇಕು; ಉಳಿದವರು ರಾತ್ರಿಯಾದಕೂಡಲೇ ಕೋಟೆಯನ್ನು ಬಿಟ್ಟು ಪಟ್ಟಣದೊಳಗೆಹೋಗಿ ತಮ್ಮ ಜೀವ ಉಳಿಸಿಕೊಳ್ಳುವ ಮಾರ್ಗವನ್ನು ಹುಡುಕಿಕೊಳ್ಳಬೇಕು.” ರಾಣೀ ಸಾಹೇಬಳ ಈ ಕೊನೆಯ ಕ್ಷಾತ್ರಿಯ ಧರ್ಮದ ಮಾತನ್ನು ಕೇಳಿ, ಕೋಟೆಯೊಳಗಿನ ಒಬ್ಬ ವೃದ್ಧಸರದಾರನಿಗೆ ಬಹಳ ವ್ಯಸನವಾಗಿ ಮುಂದೆ ಬಂದು ನಿಂತು, ಬಾಯಿಸಾಹೇಬಳಿಗೆ ವಿನಯಪೂರ್ವಕವಾಗಿ ಹೇಳಿದ್ದೇನಂದರೆ, “ಮಹಾರಾಣಿ, ತಾವು ಸ್ವಲ್ಪ ಶಾಂತರಾಗಬೇಕು. ಈಶ್ವರನೇ ಈ ದುಃಖವನ್ನು ಈ ಪಟ್ಟಣದಮೇಲೆ ತಂದಿದ್ದಾನೆ. ಇದಕ್ಕೆ ತಮ್ಮ ಯತ್ನವೇನೂ ಇಲ್ಲ. ವಿಶಿಷ್ಟ ಸಂಗತಿಯೂ ಪೂರ್ವಜನ್ಮದ

ಸಂಚಿತ ಕರ್ಮದ ಪ್ರಕಾರ ನಡೆಯುತ್ತದೆ. ಆತ್ಮಹತ್ಯ ಮಾಡಿಕೊಳ್ಳುವದು ಮಹಾ ಪಾತಕವಾಗಿದೆ. ಪೂರ್ವ ಜನ್ಮದ ಪಾಪದ ಫಲವನ್ನ ಈಗ ನೀವು ಅನುಭವಿಸುತ್ತೀರಿ. ಅವರಲ್ಲಿ ಇನ್ನೂ ಹೆಚ್ಚು ಪಾತಕವನ್ನ ಈ ಜನ್ಮದಲ್ಲಿ ಸೇರಿಸಬಾರದು. ಏನು ದುಃಖ ಬರುತ್ತದೆಯೋ ಅದನ್ನು ಸುಮ್ಮನೆ ಸಹಿಸಬೇಕು. ಇದರಿಂದ ಮುಂದೆ ನಿಮಗೆ ಅದರ ಉಪಸರ್ಗವು ಹತ್ತುವದಿಲ್ಲ. ನೀವು ಶೂರರಾಗಿದ್ದೀರಾದಕಾರಣ ಆತ್ಮಹತ್ಯಮಾಡಿಕೊಳ್ಳತಕ್ಕ ವಿಚಾರವನ್ನ ಸರ್ವಥಾ ಮಾಡಬಾರದು. ಸಂಕಟಕಾಲವು ಬಂದಿದೆ. ಅದರಲ್ಲಿಯೂ ಸುಧಾರಿಸಿಕೊಂಡು ದಾಟಿಹೋಗಬೇಕು. ಕೋಟೆಯೊಳಗೆ ಈಗ ಇರುವದು ಅಪಾಯಕರವಾಗಿದ್ದರೆ ನೀವು ಈ ದಿವಸ ರಾತ್ರಿಯಲ್ಲಿ ಶತ್ರುಗಳ ಮುತ್ತಿಗೆಯನ್ನು ಬಿಡಿಸಿಕೊಂಡು, ಪಟ್ಟಣದ ಹೊರಗೆ ಹೊರಟುಹೋಗಿ, ಪೇಷ್ವೆ ಸೈನ್ಯಕ್ಕೆ ಹೋಗಿ ಸೇರಬೇಕು. ಮಧ್ಯಕಾಲದಲ್ಲಿಯೇ ಮೃತ್ಯುಬಂದೊದಗಿದರೆ, ಬಹಳ ಒಳ್ಳೇದಾಯಿತು. ಇಲ್ಲಿ ಆತ್ಮಹತ್ಯವನ್ನು ಮಾಡಿಕೊಂಡು ಪಾಪಕ್ಕೆ ಗುರಿಯಾಗುವದಕ್ಕಿಂತಲೂ ನೆತ್ತರ ಸ್ನಾನಮಾಡಿ ಸ್ವರ್ಗವನ್ನು ಗೆಲ್ಲುವದು ಬಹಳ ಉತ್ತಮವಾಗಿದೆ." ಈ ಮಾತನ್ನು ಕೇಳುತ್ತಲೆ ಬಾಯಿ ಸಾಹೇಬಳಿಗೆ ಸ್ವಲ್ಪ ಸಮಾಧಾನತೋರಿ, ಆಕೆಗೆ ಪುನಹ ಶೂರತ್ವದ ಆವೇಶ ಏರಿತು ; ಮತ್ತು

### ಆರ್ಯಾರ್ಧ.

ಸಮರಕರೂನಿ, ಮರಾವೆ, ಜಾವೆಸ್ವರ್ಗಾಸಿ ಹೇಂಚಿಪರಮಹಿತ ॥
(ರಣಾಗ್ರಮಾಡಿ ಸಾಯಬೇಕು. ಸ್ವರ್ಗಕ್ಕೆ ಹೋಗಬೇಕು, ಇದೇ ಪರಮಹಿತವಾದದ್ದು.)

ಈ ಮಯೂರನ ವಚನವನ್ನು ಅನುಸರಿಸಿ, ಆಕೆಯು ರಣಭೂಮಿಯಲ್ಲಿ ಯುದ್ಧಮಾಡಿ ತನ್ನ ಪ್ರಾಣತ್ಯಾಗ ಮಾಡುವದನ್ನ ನಿಶ್ಚಯ ಮಾಡಿದಳು.* ಸಾಯಂಕಾಲ

---

* ಈ ಸಂಗತಿಯನ್ನ ಉಜ್ಜನಪುಸ್ತಕದ ಆಧಾರದಮೇಲೆ ಬರೆದಿದೆ. ಗ್ವಾಲಿಯರ್ ಪುಸ್ತಕದಲ್ಲಿಯೂ ಇದೇಪ್ರಕಾರವಾದ ತಾತ್ಪರ್ಯವುಳ್ಳ ತಿಳುವಳಿಕೆಯನ್ನು ಕೊಟ್ಟಿದೆ. ಅದರಲ್ಲಿ ರಾಣೀಸಾಹೇಬಳ ಸೈನ್ಯಕ್ಕೆ ಬಹಳ ಕೆಡುಕಾಗಿ ಹೋಗಿ ಅದರ ಬಲ ಕಡಮೆಯಾಯಿತೆಂತ ಪ್ರಥಮದಲ್ಲಿ ಹೇಳಿ, ನಂತರ ಬರೆದಿರುವದೇನಂದರೆ:—"ಮಂಗಳವಾರ ರಾತ್ರೆ ರಾಣೀಸಾಹೇಬಳು ಮದಿನಮೇಲೆಕೂತು ಹಾರಿಹೋಗಬೇಕೆಂತ ಕೋಟೆಯೊಳಗೆ ಆಲೋಚನೆ ಮಾಡುತ್ತಿದ್ದಳು. ಅದನ್ನು ಕೇಳಿ ಠಾಕೂರ್ ಜನಗಳು 'ನೀವು ಕೈಯಲ್ಲಿ ಶಸ್ತ್ರ ಧರಿಸಿಕೊಂಡು ಇಂಥಾ ಯೋಚನೆ ಯಾಕೆ ಮಾಡುತ್ತೀರಿ ? ಎಂತ ವಿಜ್ಞಾಪಿಸಿಕೊಂಡರು. ಅದಕ್ಕೆ ಆಕೆಯು ಹೇಳಿದ್ದೇನಂದರೆ, 'ನಾನು ಯುದ್ಧಮಾಡೇನು, ಮತ್ತು ಯುದ್ಧದಲ್ಲಿ ಪ್ರಾಣಬಿಟ್ಟೇನು. ಆದರೆ, ನನ್ನದು ಸ್ತ್ರೀದೇಹವಾಗಿದೆ. ಆದ್ದರಿಂದ ಶತ್ರುಗಳು ನನ್ನಮಾನ ಹಾನಿ ಪಡಿಸುವರು.' ಅದರಮೇಲೆ ಸರ್ವರೂ, ನಾವು ಯೋಗ್ಯವಾದ ಸಂರಕ್ಷಣೆ ಮಾಡುತ್ತೇವೆಂತ ವಚನ ಕೊಟ್ಟರು. ಆಗ ಆಕೆಯು ತನ್ನ

ವಾದನಂತರ ಬಾಯಿಸಾ ಸಾಹೇಬಳು ತನ್ನ ಹತ್ತಿರಿನ ಸರ್ವ ಮಂಡಲಿಗೆ ಕರಿಸಿ, ಅವರ ಕೊನೆಯ ದರ್ಶನವನ್ನ ತೆಗದುಕೊಂಡಳು ; ಮತ್ತು ಅವರಿಗೆ ಯೋಗ್ಯವಾದ ಭಕ್ಷೀಸನ್ನು ಕೊಟ್ಟು, ಕೋಟೆಯ ಅಂತರಂಗವಾದ ಬಾಗಲಿನಿಂದ ಕಳುಹಿಸಿಕೊಟ್ಟಳು. ಬಾಯಿಸಾ ಸಾಹೇಬಳ ಬಹಳ ದಿವಸದ ಹಳೇ ಶಿಷ್ಯರುಗಳು ಮತ್ತು ದಾಸಿಯರುಗಳು ಮತ್ತು ಇತರ ಆಶ್ರಿತ ಜನಗಳಿಗೆ, ಆಕೆಯ ಈ ಕೊನೆಯ ವಿಯೋಗವು ಬಹಳ ದುಃಖಕರವಾದದ್ದಾಗಿತ್ತು. ಸರ್ವರೂ ಕಣ್ಣಿನಲ್ಲಿ ನೀರು ತುಂಬಿಕೊಂಡು, ತನ್ನ ಪ್ರಿಯ ಸ್ವಾಮಿನಿಯ ಪಾದಕ್ಕೆ ವಂದನೇಮಾಡಿ ತಮ್ಮ ಮಾರ್ಗ ಹಿಡಿದರು. ಕೆಲವು ನಿಸ್ಸೀಮ ಸ್ವಾಮಿಭಕ್ತಸೇವಕರು ರಾಣೀ ಸಾಹೇಬಳ ಸಂಗಡ ಹೋಗುವದಕ್ಕೆ ಸಿದ್ಧರಾಗಿ, ತಮ್ಮ ಉದ್ದೇಶ್ಯವನ್ನು ರಾಣೀ ಸಾಹೇಬಳಿಗೆ ಸ್ಪಷ್ಟವಾಗಿ ತಿಳಿಸಿ, ಆಕೆಯ ಸಮ್ಮತಿ ತೆಗದುಕೊಂಡರು. ಮಧ್ಯರಾತ್ರಿ 12 ಘಂಟೆಯ ಸಮಯದಲ್ಲಿ ಎಲ್ಲಾ ಸಿದ್ಧಪಡಿಸಿಕೊಂಡು ರಾಣೀಸಾಹೇಬಳು

---

ಆಲೋಚನೆಯನ್ನ ಬಿಟ್ಟು ಬಿಟ್ಟಳು." ಈ ಸಮಾಚಾರವು ಉಜ್ವನಪ್ರಸ್ತಕ್ಕೆ ಬಹಳ ಮಟ್ಟಿಗೆ ಸಾಮ್ಯವಾಗುತ್ತದೆ. ಈ ಮಾತಿಗೆ ಡಾ. ಲೋ ಸಾಹೇಬನು ಕೆಲವು ದೃಷ್ಟಾಂತಗಳನ್ನು ಕೊಟ್ಟಿರುತ್ತಾನೆ. ಅವನು ಇಷ್ಟೇ ಬರೆದಿರುತ್ತಾನೆ:—

"A report was circulated that the Ranee intended committing suttee, if she could not escape from the fort."

*Central India P. 260.*

ಇದರಿಂದ ನಾವು ಬರೆದಿರುವ ಸಂಗತಿಗೆ ಬಹಳ ಮಟ್ಟಿಗೆ ಆಧಾರವಿದೆಯೆಂತ ಸ್ಪಷ್ಟವಾಗುತ್ತದೆ. ತಥಾಪಿ ಶ್ರೀಮಂತ ದಾಮೋದರರಾಯನು ಇದೇಮಾತನ್ನು ಬೇರೇ ವಿಧವಾಗಿ ಹೇಳುತ್ತಾನೆ. ಆತನು ಹೇಳುವದೇನಂದರೆ, 'ರಾಣೀ ಸಾಹೇಬಳ ಕಾರಭಾರಿ ಮಂಡಲಿಯವರು ನಿರಾಶರಾಗಿಹೋಗಿ ಮದ್ದಿನಲ್ಲಿ ಪ್ರಾಣತ್ಯಾಗ ಮಾಡಬೇಕೆಂತ ಆಲೋಚನೆ ಮಾಡಿದರು. ರಾಣೀಸಾಹೇಬಳು ಅದನ್ನು ತಿರಸ್ಕಾರಮಾಡಿ ರಣದಲ್ಲಿ ಬೀಳಬೇಕೆಂತ ನಿಶ್ಚಯ ಮಾಡಿದಳು." ಈ ಮಾತು ನಿಜವಾಗಿದ್ದರೆ, ರಾಣೀ ಸಾಹೇಬಳಿಗೆ ಇನ್ನೂ ವಿಶೇಷ ಭೂಷಣವಾಗಿದೆ. ತಥಾಪಿ ಹಾಗೆಇಲ್ಲದೇ ಇದ್ದಾಗ್ಯೂ ರಾಣೀ ಸಾಹೇಬಳ ಗುಣಕ್ಕೇನೂ ಕಡಿಮೆಯಾಗುವದಿಲ್ಲ. ಅರ್ಜುನನಂಥ ಸುಪ್ರಸಿದ್ಧ ಭಾರತ ಯುದ್ಧಶಾಲಿಗೆ ಕೂಡ ಶ್ರೀಕೃಷ್ಣನ ಕಡೆಯಿಂದ:—

ಸ್ವಧರ್ಮಮಪಿ ಚಾವೇಕ್ಷ್ಯ ನ ವಿಕಂಪಿತು ಮರ್ಹಸಿ ।
ಧರ್ಮ್ಯಾದ್ಧಿ ಯುದ್ಧಾಚ್ಛ್ರೇಯೋ ನ್ಯತ್‌ಕ್ಷತ್ರಿಯಸ್ಯ ನವಿದ್ಯತೇ ॥ ೧ ॥
ಯದೃಚ್ಛಯಾ ಚೋಪಪನ್ನಂ ಸ್ವರ್ಗದ್ವಾರ ಮಪಾವೃತಂ ।
ಸುಖಿನಃ ಕ್ಷತ್ರಿಯಾಃ ಪಾರ್ಥ ಲಭಂತೇ ಯುದ್ಧಮೀದೃಶಂ ॥ ೨ ॥

ಇಂಥಾ ಉಪದೇಶ ತೆಗದುಕೊಳ್ಳಬೇಕಾದ ಪ್ರಸಂಗ ಬಂತು. ಹೀಗಿರುವಾಗ ರಾಣೀ ಸಾಹೇಬಳಂಥಾ ಅಬಲೆಗೆ ತನ್ನ ಸೈನ್ಯದ ಮತ್ತು ಪಟ್ಟಣದ ದೀನ ಅವಸ್ಥೆಯನ್ನ ನೋಡಿ, ಅಂಥಾ ಯೋಚನೆ ಮನಸ್ಸಿನಲ್ಲಿ ಹುಟ್ಟಿದ್ದೇನೋ ಆಶ್ಚರ್ಯವಲ್ಲ.

ಕೋಟೆಯ ಹೊರಗೆ ಬೀಳುವುದಕ್ಕೆ ಸಂಕಲ್ಪಮಾಡಿದಳು. ಮೋರೋಪಂತ ಮುಂತಾದ ಆಪ್ತಮಂಡಲಿಯವರು ಆಯುಧಪಾಣಿಗಳಾಗಿ ಕುದುರೆಯಮೇಲೆ ಕೂತುಕೊಂಡು ಹೊರಡಲು ಸಿದ್ಧರಾದರು. ಅವರು ಹಾದಿಯ ಖರ್ಚಿಗೋಸ್ಕರ ಕೋಟೆಯೊಳಗಿನ ಜವಾದಾರ್‌ಖಾನೆಯಲ್ಲಿ ಇದ್ದಷ್ಟು ಸ್ವಲ್ಪ ಹೆಚ್ಚುಕಡಿಮೆ ದ್ರವ್ಯವನ್ನು ಚೀಲದಲ್ಲಿ ತುಂಬಿ, ಸೊಂಟಕ್ಕೆ ಕಟ್ಟಿಕೊಳ್ಳುವುದಕ್ಕೋಸ್ಕರ ನಂಬಿಕೆಯುಳ್ಳ ಶಿಲೇದಾರರ ಮಂಡಲಿಯವರ ಸ್ವಾಧೀನಕ್ಕೆ ಕೊಟ್ಟರು. ಮತ್ತು ಸಂಸ್ಥಾನದ ಪುರಾತನದ ರತ್ನಖಚಿತವಾದ ಆ ಭರಣಗಳನ್ನು ಆನೆಯಮೇಲೆ ಅಂಬಾರಿಯಲ್ಲಿ ತುಂಬಿ, ಆ ಆನೆಯನ್ನು ಮಧ್ಯಭಾಗದಲ್ಲಿ ತೆಗದುಕೊಂಡನು; ಸುಮಾರು ಜೀವಕ್ಕೆ ಜೀವಕೊಡತಕ್ಕಂಥ ದೃಢಮನಸ್ಸಿನ 200 ಸವಾರರು ಮತ್ತು ಅಫ‘ಘನ್ ಜನಗಳನ್ನು ಸಂಗಡ ತೆಗದುಕೊಂಡು, ಮುಖ್ಯ ಸರದಾರನು ಕೋಟೆಯಿಂದ ಹೊರಗೆ ಹೊರಡುವುದಕ್ಕೆ ಉದ್ಯುಕ್ತನಾದನು. ಸ್ವತಃ ಬಾಯಿಸಾಹೇಬಳು ಪುರುಷವೇಷ ಧಾರಣೆ ಮಾಡಿದಳು. ಮಯ್ಯಿಗೆ ತಂತಿಯಿಂದ ಮಾಡಲ್ಪಟ್ಟ ಯುದ್ಧ ಕವಚವನ್ನು ಹಾಕಿಕೊಂಡಳು. ಸೊಂಟಕ್ಕೆ ಆಯುಧಗಳನ್ನು ಕಟ್ಟಿಕೊಂಡು ಒಂದು ಉತ್ಕೃಷ್ಟವಾದ ಕತ್ತಿಯನ್ನು ಇಳೀಬಿಟ್ಟುಕೊಂಡಳು; ಮತ್ತು $1\frac{1}{2}$ ಲಕ್ಷರೂಪಾಯಿ ಬಾಳತಕ್ಕ ರಾಜರತ್ನಕ್ಕೆ ಸಮಾನವಾದ ಬಿಳಿಯ ಕುದುರೆಯ ಮೇಲೆ ಕೂತುಕೊಂಡಳು. ತನ್ನ ಸಂಗಡವೇನೂ ದ್ರವ್ಯ ತೆಗದುಕೊಳ್ಳಲಿಲ್ಲ. ಒಂದು ‘ಬೆಳ್ಳೀಪ್ಯಾಲಾಮಾತ್ರ ಸೆರಿಗಿಗೆ ಕಟ್ಟಿಕೊಂಡಳು; ಮತ್ತು ಒಬ್ಬ ಅಲ್ಪವಯಸ್ಸಿನ ಬಾಲಕನನ್ನ ರೇಷ್ಮೇಅಂಚಿನ ಧೋತ್ರದಿಂದ ತನ್ನಬೆನ್ನಿಗೆ ಕಟ್ಟಿ, ಕೂಡಿಸಿಕೊಂಡಳು. ಈ ಬಾಲಕನು ರಾಣೀಸಾಹೇಬಳ ಪ್ರಾಣಪ್ರಿಯನಾದ ದತ್ತಮಗ ಶ್ರೀಮಂತದಾಮೋದರರಾವ್ ಎಂತ ವಾಚಕರಿಗೆ ಪ್ರತ್ಯೇಕವಾಗಿ ಹೇಳಬೇಕಾದ್ದೇ ಅವಶ್ಯವಿಲ್ಲ.

ಈ ಪ್ರಕಾರವಾಗಿ ಸರ್ವಸಿದ್ಧತೆಯಾದನಂತರ, ‘ಜಯಶಂಕರ್, ಹರಹರ ಮಹದೇವ್’ ಎಂತ ಘರ್ಜನೆಮಾಡಿ, ಸರ್ವಮಂಡಲಿಯು ಕೋಟೆಯಕೆಳಕ್ಕೆ ಇಳಿದರು. ಪ್ರಥಮತಃ ಅವರು ನಾರೋಶಂಕರರ ಭಾಗದ ಮನೆಯನ್ನು ಒಡೆದು, ಕೋಟೆಯೊಳಗಿನಿಂದ ದಾರಿಮಾಡುವುದಕ್ಕೆ ಪ್ರಾರಂಭಮಾಡಿದರು. ಪರಂತು ಮಧ್ಯರಾತ್ರಿಯಾದರೂ ಅದು ಒಡೆಯಲಿಲ್ಲ. ಆದಕಾರಣ, ಅವರು ಬಹಳ ದಕ್ಷತೆಯಿಂದ ಕೋಟೆಯ ಬುರ್ಜಿನ ಮೇಲಿನ ಇಂಗ್ರೇಜಿ ಸೈನ್ಯದ ಸ್ಥಿತಿಯನ್ನು ಲಕ್ಷ್ಯದಲ್ಲಿ ತಂದು, ತುಂಬದ ಪಟ್ಟಣದಿಂದ ಉತ್ತರದಿಕ್ಕಿನ ಬಾಗಲಿನಲ್ಲಿ * ಹೊರಬೀಳುವದಕ್ಕೆ ಯೋಚಿಸಿದರು. ಆ ಸಮಯದಲ್ಲಿ ಬಾಯಿಸಾಹೇಬಳು ಝಾಶಿಗೆ ಕೊನೇ ನಮಸ್ಕಾರವನ್ನ ಹಾಕಿ, ಸರ್ವಸೈನ್ಯದಮುಂದೆ

---

* ಈಬಾಗಲಿಗೆ ಇಂದೂರು ಪ್ರತಿಯಲ್ಲಿ ‘ ಖಂಡೇರ ’ ಎಂತ ಹೆಸರು ಕೊಟ್ಟಿದ್ದಾರೆ ಮತ್ತು ಇತರ ಪ್ರತಿಯಲ್ಲಿ ‘ ಭಾಂಡೇರ ’ ಎಂತ ಹೇಳಿದ್ದಾರೆ.

ತನ್ನ ಕುದುರೆಯನ್ನ ಓಡಿಸಿದಳು. ಆ ಸಮಯದಲ್ಲಿ ಸರ್ವಜನಗಳೂ ಬಾಯಿಸಾಹೇಬಳಿಗೆ ತಮ್ಮ ಕೊನೆಯ ವಂದನೆ ಮಾಡುವುದಕ್ಕೆ ಕೋಟೆಯ ಮಾರ್ಗದಲ್ಲಿ ಎರಡು ಕಡೆಗೂ ನಿಂತಿದ್ದರು. ಆಸಮಯದಲ್ಲಿ ಆ ಶೂರಜನಗಳ ಅವಸಾನವನ್ನು ನೋಡಿ, ಮೃತ್ಯುವಿನ ಬಾಯಲ್ಲಿ ಕೈಯನ್ನು ಹಾಕತಕ್ಕಂಥ ಈ ವೀರಪುರುಷರು, ಶತ್ರುಗಳ ಸೈನ್ಯವನ್ನ ಒಡೆದು, ಮಾರ್ಗಮಾಡಿಕೊಂಡು ದಾಟಹೋಗುತ್ತಾರೆಂತ ನೋಡುವವರಿಗೆ ನಂಬಿಕೆಹುಟ್ಟಿತು. ರಾಣೀಸಾಹೇಬಳು ಪ್ರೇಮದಿಂದ ಸರ್ವರ ಅಪ್ಪಣೆಯನ್ನೂ ತೆಗೆದುಕೊಂಡು, ಬಹಳ ತ್ವರ್ಯದಿಂದ ಉತ್ತರದ ಬಾಗಲಲ್ಲಿ ಕೆಲವು ಸವಾರರು ಸಹಿತ ತನ್ನ ಕುದುರೆಯನ್ನು ಹೊರಗೆ ಹೊರಡಿಸಿದಳು.* ಆ ಬಾಗಲಿನ ಹೊರಗೆ ತೆಹರೀ ಸಂಸ್ಥಾನದ ಸೈನ್ಯದ ಮೋರ್ಛಾಯಿತ್ತು. ಆ ಮೋರ್ಛೆಯವರು ಅಡ್ಡಗಟ್ಟುತ್ತಲೇ, 'ತೆಹರಿಯ ಇದೇ ಸೈನ್ಯ ರೋಜ್ ಸಾಹೇಬನ ಸಹಾಯಕ್ಕೆ ಹೋಗುತ್ತದೆ' ಎಂತಹೇಳಿ ಬಹಳ ಯುಕ್ತಿಯಿಂದ ತಪ್ಪಿಸಿಕೊಂಡು ಮುಂದೆ ನಡೆದರು. ಅವರಹಿಂದೆ ಉಳಿದ ಸರದಾರರು ತಮ್ಮ ಸೈನ್ಯದೊಡನೆ ಬರುತ್ತಿದ್ದರು. ರಾಣೀ ಸಾಹೇಬಳು ಹೊರಟುಹೋದನಂತರ ಅವಳ ಬೆನ್ನುಹಿಂದಿನ ಸೇನೆಗೆ ಇಂಗ್ರೇಜಿ ಸೈನ್ಯದವರು ತಡದರು ; ಮತ್ತು ಅವರಿಗೂ ಇಂಗ್ರೇಜೀ ಸೈನ್ಯದವರಿಗೂ ಗುಂಡು ಹಾರಿಸುವದು ಪ್ರಾರಂಭವಾಗಿ ಒಳ್ಳೇ ಯುದ್ಧ ನಡೆಯಿತು. ಇತ್ತಲಾಗಿ ರಾಣೀಸಾಹೇಬಳು ಒಬ್ಬ ದಾಸಿ, ಒಬ್ಬ ಕೋವಿಯನು ಮತ್ತು 10—15 ಜನ ಸವಾರರುಗಳನ್ನು ಸಹ ತೆಗದುಕೊಂಡು, ಶತ್ರುಗಳ ಸೈನ್ಯದ ಗುಂಪನ್ನು

---

* ರಾಣೀ ಸಾಹೇಬಳು ಕೋಟೆಯಿಂದ ಹೊರಗೆ ಹೊರಟಾಗ, ಆಕೆಯ ಹತ್ತಿರ ಎಷ್ಟು ಸೈನ್ಯವಿತ್ತು ಮತ್ತು ಆಕೆಯು ಯಾವರೀತಿಯಿಂದ ತನ್ನ ಯುಕ್ತಿಯನ್ನ ಸಾಧಿಸಿಕೊಂಡಳೆಂಬದನ್ನ ಕುರಿತು, ಒಬ್ಬ ಇಂಗ್ರೇಜಿ ಗ್ರಂಥಕಾರನು ಪ್ರತ್ಯೇಕ ಬರೆದಿರುತ್ತಾನೆ.

"The next day, April 4th, the remainder of the city was captured and occupied. In the evening, the Rani, accompanied by 300 Valaitis and 25 troopers, left the fort and fled towards Kalpi. It was afterwards discovered that her horse had been brought into the fort ditch, with the connivance of a native contingent serving with Sir Hugh Rose, and that after being let down from a window in the turret she was placed in the saddle, with her stepson in her lap, and thus escaped"

*Clyde and Straithnairn* P. 123.

ಒಡೆದು, ಹೊರಗೆ ಹೊರಟು ನೆಟ್ಟಗೆ ಕಾಲ್ಪೀಮಾರ್ಗ ಹಿಡಿದು ಪ್ರಯಾಣ ಮಾಡಿದಳು. ಇಂಗ್ರೇಜೀ ಸೇನಾಪತಿಯಾದ ಸರ್ ಹ್ಯೂರೋಜ್ ಸಾಹೇಬನಿಗೆ ರಾಣೀ ಸಾಹೇಬಳು ಓಡಿ ಹೋದ ವರ್ತಮಾನವು ಆ ಕೂಡಲೆ ತಿಳಿಯಿತು. ಅದನ್ನು ಕೇಳಿ ಆತನಿಗೆ ಆಕೆಯ ಚಾತುರ್ಯ ವಿಷಯದಲ್ಲಿ ಪರಮಾಶ್ಚರ್ಯ ತೋರಿತು. ಅವನು ಅವಳನ್ನು ಬೆನ್ನಟ್ಟಿ ಹೋಗುವುದಕ್ಕೋಸ್ಕರ ಲೆಫ್ಟಿನೆಂಟ್ ಬೌಕರ್ ಸಾಹೇಬನ ಕೈಕೆಳಗೆ ಕೆಲವು ಸವಾರ ರನ್ನು ಕೊಟ್ಟು, ಅವನನ್ನು ಶೀಘ್ರವಾಗಿ ಅತ್ತಕಡೆ ಕಳುಹಿಸಿಕೊಟ್ಟನು. ರಾಣೀ ಸಾಹೇಬಳ ಕುದುರೆಯು ಬಹಳ ಚುರುಕಾಗಿದ್ದಕಾರಣ ಅದು ಸ್ವಲ್ಪಕಾಲದಲ್ಲಿಯೇ ಘಾಳಿಯಹಾಗೆ ಓಡಿಹೋಗಿ ಇಂಗ್ರೇಜಿ ಸವಾರರ ಕಣ್ಣಿಗೆ ಕಾಣದಂತೆ ಆಯಿತು. ಇಂಗ್ರೇಜಿ ಸವಾರರು ಅವಳ ಹಿಂದೆ ಬಂದೇ ಪ್ರಕಾರವಾಗಿ ಓಡುತ್ತಿದ್ದರು. ಪರಂತು, ರಾತ್ರಿಯ ಸಮಯವಾದ್ದರಿಂದ ಅವರಿಗೆ ಅವಳು ಇಂಥಾ ಕಡೆಗೆ ಹೋದಳೆಂಬುವದು ಗೊತ್ತಾಗಲಿಲ್ಲ. ನಿಜವಾಗಿಯೂ ಶತ್ರುಗಳ ಸೈನ್ಯದಲ್ಲಿ ನುಗ್ಗಿಹೋಗುವದು ಶೂರ ರಾದ ವೀರರಿಗೆ ಕೂಡ ಅಶಕ್ಯವಾದದ್ದು, ಅಂಥಾದ್ದರಲ್ಲಿ ಇಂಗ್ರೇಜಿ ಬಲಾಢ್ಯ ಸೈನ್ಯ ದಿಂದ ದಾಟಿಹೋಗುವದು ಬಹಳ ಅಸಾಧ್ಯವಾದ ಕೆಲಸವಾಗಿದೆ. ಹಾಗಿದ್ದಾಗ್ಯೂ ಮಹಾರಾಣಿ ಲಕ್ಷ್ಮೀಬಾಯಿ ಸಾಹೇಬಳು ತನ್ನ ಅಸದೃಶವಾದ ಬುದ್ಧಿ ಚಾತುರ್ಯ ದಿಂದ ಪ್ರಚಂಡವಾದ ಸೈನ್ಯದಿಂದ ಹೊರಗೆಹೊರಟುಹೋದ ಮಾತು ಎಷ್ಟು ಅಮಾನುಷ ಮತ್ತು ಆಶ್ಚರ್ಯಕರವಾದದ್ದಾಗಿದೆ? ಅಂತಃಪುರದಲ್ಲಿ ಸದಾ ವಾಸವಾಗಿರತಕ್ಕಂಥ ಅನೇಕ ಸೇವಕಜನ ಸಹಿತವಾಗಿ, ಅಟ್ಟಹಾಸದಿಂದ ಪಾಲಕ್ಕಿಯಲ್ಲಿ ಹೋಗತಕ್ಕಂಥ, ತನ್ನ ಉಗುರನ್ನು ಕೂಡ ಯಾರ ಕಣ್ಣಿಗೂ ತೋರಿಸದಂಥ ಬಬ್ಬ ರಾಣಿಯು, ಬಲಾಢ್ಯವಾದ ಇಂಗ್ರೇಜಿ ಸೈನ್ಯದ ಕೈಮೇಲೆ ಕೊಂಬುಕೊಟ್ಟು ದಾಟಿ ಹೊರಟುಹೋದಳು ಎಂಬುವ ದನ್ನು ಕೇಳಿ ಯಾರ ಮನಸ್ಸು ಥಟ್ಟನೆ ನಿಂತುಹೋಗದೆ ಇದ್ದೀತು? ಖಳ್ಳೇದು! * ಇದು ಹಾಗಿರಲಿ.

---

* ಈ ಸಂಬಂಧದಲ್ಲಿ ಬರೆಯುವಾಗ ಕರ್ನಲ್ ಮೇಡೋಜ್ ಟೇಲರ್ ಸಾಹೇಬನು ಈ ಪ್ರಕಾರವಾಗಿ ಬರೆದಿರುತ್ತಾನೆ:—

"At last, while yet much of night remained, one of the gates in a secluded part of the fortifications was opened and a sad procession issued forth. The Ranee and her sister, or companion, dressed like men, with a few of her chosen retainers, rode silently from the

ವನು ದಶಿಯಾ ದಿವಾನನಾಗಿ ಇದ್ದನು. ಅವನು ಮೋರೋಪಂತನ ಹತ್ತಿರಿದ್ದ ಸರ್ವ ದ್ರವ್ಯವನ್ನೂ ಹುಡುಕಿ ತೆಗೆದುಕೊಂಡು. ತನ್ನ ಸೈನ್ಯದಸಂಗಡ ಅವನನ್ನ ಝಾಸಿಗೆ ಕಳುಹಿಸಿಕೊಟ್ಟನು. ಅಲ್ಲಿಗೆ ಹೋದಕೂಡಲೆ ಝಾಸೀ ಪ್ರಮುಖಾಧಿಕಾರಿಗಳಾದ, ಸರ್ ಹ್ಯೂರೋಜ್ ಮತ್ತು ಸರ್ ರಾಬರ್ಟ್ ಹ್ಯಾಮಿಲ್ಟನ್ ಸಾಹೇಬರುಗಳು ಅವನನ್ನು ಅರಮನೇ ಮುಂದೆ ಮಧ್ಯಾಹ್ನ 2 ಘಂಟೇ ಸಮಯದಲ್ಲಿ ಗಲ್ಲಿಗೆಹಾಕಿಸಿದರು. ಈ ಪ್ರಕಾರವಾಗಿ ಮೋರೋಪಂತನ ವ್ಯಾಪಾರವು ಅಂತ್ಯವಾಯಿತು.



# ೧೨ನೇ ಪ್ರಕರಣ.

## ಝಾಂಸಿಯಲ್ಲಿನ ಪ್ರಳಯ.

ಮಹಾರಾಣಿ ಲಕ್ಷ್ಮೀಬಾಯಿ ಸಾಹೇಬಳು ಝಾಂಸಿಬಿಟ್ಟು ಹೋದನಂತರ, ಪಟ್ಟಣ ಮತ್ತು ಕೋಟೆ ಸಹ ಇಂಗ್ರೇಜಿ ಸರ್ಕಾರದವರ ಸ್ವಾಧೀನಕ್ಕೆ ಬಂದವು. ಆದಕಾರಣ ಸರ್ವ ಇಂಗ್ರೇಜಿ ಸೈನ್ಯದವರು ವಿಜಯಾನಂದದಲ್ಲಿ ಮಗ್ನರಾದರು. ಮತ್ತು ಅವರಿಗೆ ಸನ 1857ನೆ ಇಸವಿ ಜೂನ ತಿಂಗಳಲ್ಲಿ ನಡೆದ ಇಂಗ್ರೇಜಿ ಜನಗಳ ಕೊಲೆ ಪಾತಕದ ವಿಷಯವಾಗಿ, ಝಾಂಸಿಯಮೇಲೆ ಪೂರ್ಣವಾದ ತಮ್ಮ ಹಗೆತನವನ್ನು ತೀರಿಸಿಕೊಳ್ಳ ಬೇಕೆಂತ, ವಿಶೇಷವಾದ ಅಪೇಕ್ಷೆ ಹುಟ್ಟಿತು. ವಿಜಯೋತ್ಸವದಿಂದ ಕೆಂಪು ಶಿಪಾಯಿ ಗಳ ಅಂತಃಕರಣವು ತುಂಬಿಹೋಗಿದ್ದಕಾರಣ, ಅವರ ದಯಾಶೀಲತೆಯಲ್ಲಾ ವ್ಯರ್ಥ ವಾಗಿ ಹೋಗಿತ್ತು; ಮತ್ತು ಅವರ ಹೃದಯದಲ್ಲಿ ಕ್ರೂರತನದ ಘಾಳಿಯು ಉತ್ಪನ್ನವಾಗಿ, ಅದಕ್ಕೆ ಒಂದು ವಿಲಕ್ಷಣವಾದ ರೋಷವೆದ್ದಿತು. ತಾರೀಖು 5ನೇ ದಿವಸ, ಲೆ. ಬೇಗ್ರಿ ಸಾಹೇಬನು ಝಾಂಸೀ ಕೋಟೆಯನ್ನ ಸ್ವಾಧೀನಪಡಿಸಿಕೊಂಡನಂತರ, ಇಂಗ್ರೇಜಿ ಸೈನ್ಯ ದವರು, ನಿರ್ಭಯದಿಂದ ಯಲ್ಲಾ ಸ್ಥಳದಲ್ಲಿಯೂ, ಪ್ರವೇಶಮಾಡಿದರು. ಝಾಂಸಿ ಯುದ್ಧಶಾಲಿ ಜನಗಳು ಕಂಡಾಬಟ್ಟೆಯಾಗಿ ಹೋದಕಾರಣ, ಇಂಗ್ರೇಜಿ ಸೈನ್ಯದವರಿಗೆ, ಅಟಂಕಪಡಿಸತಕ್ಕವರ್ಯಾರೂ ಇರಲಿಲ್ಲ. ನಿರಾಪರಾಧಿ ಮತ್ತು ನಿರುಪದ್ರವಿಗಳಾದ, ಪಟ್ಟಣವಾಸಿಗಳಾದ ಜನಗಳು ಯಾರಿದ್ದರೋ, ಅವರು ಮಾತ್ರ ಇಂಗ್ರೇಜಿಸೈನ್ಯದ ಕೈಗೆ ಸಿಕ್ಕರು. ಕೆಂಪು ಶಿಪಾಯಿಗಳು, ಝಾಂಸಿ ಪಟ್ಟಣವು ತಮ್ಮ ಸ್ವಾಧೀನಕ್ಕೆ ಬಂದಾ ರಭ್ಯ, ದೀನರಾಗಿ ಜೀವದಾನಕೊಡಬೇಕೆಂತ ಅವರ ಸಮಾಪಕ್ಕೆ ಬಂದು ಕೇಳಿಕೊಂಡ ಜನಗಳನ್ನೆಲ್ಲಾ, ಗೋಲಿಗಳಿಂದ ಹೊಡೆದು, ಕೊಂದು ಹಾಕುವುದು ಒಂದೇ ಕೆಲಸ ಮಾಡಿದರು. ಆ ಸಮಯದಲ್ಲಿ ಜನಗಳ ದುರ್ದಶೆ ಯಾವ ಸ್ಥಿತಿಯಲ್ಲಿತ್ತೆಂಬುವುದು ವರ್ಣನೆಮಾಡಲು, ಕಷ್ಟವಾಗಿದೆ. ಒಂದು ಕಡೆಯಿಂದ ಅಗ್ನಿನಾರಾಯಣನು, ತನ್ನ ಪ್ರಭಾವವನ್ನು ತೋರಿಸುವ ಕೆಲಸವನ್ನು ಬಲವಾಗಿ ನಡಿಸಿಕೊಳ್ಳುತ್ತಾ ಹೋಗುತ್ತಿ ದನು. ಒಂದು ಕಡೆಯಿಂದ, ಕೆಂಪು ಯಮದೂತರು ಮನುಷ್ಯರ ಜೀವಗಳನ್ನು ಕ್ಷಣ ಮಾತ್ರದಲ್ಲಿ ಕಟ್ಟಿ, ತೆಗೆದುಕೊಂಡುಹೋಗುವ ಕ್ರಮವನ್ನು ನಡಿಸುತ್ತಿದ್ದರು. ಒಂದು ಕಡೆಯಲ್ಲಿ, ಇಂಗ್ರೇಜಿ ಪಟಾಲಂನವರು, ಝಾಂಸಿ ಪಟ್ಟಣದ ಪೂರ್ವದ ಅಪಾರ ವೈಭವ ವನ್ನು ಪ್ರತ್ಯಕ್ಷವಾಗಿ ಅನುಭವಿಸುವುದಕ್ಕಾಗಿ, ಏಕ ಪ್ರಕಾರವಾಗಿ ಸುಲಿಗೆ ಮಾಡುತ್ತಿ ದ್ದರು. ಈ ಪ್ರಕಾರವಾಗಿ, ಝಾಂಸೀ ಪಟ್ಟಣಕ್ಕೆ, ಅನರ್ಥದಮೇಲೆ ಅನರ್ಥವು ವ್ಯಾಪಿ ಸಿಕೊಂಡು ಹೋಗಿತ್ತೆಂತ ಹೇಳುವದಕ್ಕೇನೂ ಅಡ್ಡಿಯಿಲ್ಲ. ಆ ಕಾಲದಲ್ಲಿ, ಪ್ರತಕ್ಷ್ಯ

ವನು ದಶಿಯಾ ದಿವಾನನಾಗಿ ಇದ್ದನು. ಅವನು ಮೋರೋಪಂತನ ಹತ್ತಿರಿದ್ದ ಸರ್ವ ದ್ರವ್ಯವನ್ನೂ ಹುಡುಕಿ ತೆಗೆದುಕೊಂಡು. ತನ್ನ ಸೈನ್ಯದಸಂಗಡ ಅವನನ್ನ ಝಾಂಸಿಗೆ ಕಳುಹಿಸಿಕೊಟ್ಟನು. ಅಲ್ಲಿಗೆ ಹೋದಕೂಡಲೆ ಝಾಂಸೀ ಪ್ರಮುಖಾಧಿಕಾರಿಗಳಾದ, ಸರ್ ಹ್ಯೂರೋಜ್ ಮತ್ತು ಸರ್ ರಾಬರ್ಟ್ ಹ್ಯಾಮಿಲ್ಟನ್ ಸಾಹೇಬರುಗಳು ಅವನನ್ನು ಅರಮನೇ ಮುಂದೆ ಮಧ್ಯಾನ್ಹ 2 ಘಂಟೇ ಸಮಯದಲ್ಲಿ ಗಲ್ಲಿಗೆಹಾಕಿಸಿದರು. ಈ ಪ್ರಕಾರವಾಗಿ ಮೋರೋಪಂತನ ವ್ಯಾಪಾರವು ಅಂತ್ಯವಾಯಿತು.



# ೧೩ನೇ ಪ್ರಕರಣ.

## ಝಾಁಸಿಯಲ್ಲಿನ ಪ್ರಳಯ.

ಮಹಾರಾಣಿ ಲಕ್ಷ್ಮೀಬಾಯಿ ಸಾಹೇಬಳು ಝಾಁಸಿಬಿಟ್ಟು ಹೋದನಂತರ, ಪಟ್ಟಣ ಮತ್ತು ಕೋಟೆ ಸಹ ಇಂಗ್ರೇಜಿ ಸರ್ಕಾರದವರ ಸ್ವಾಧೀನಕ್ಕೆ ಬಂದವು. ಆದಕಾರಣ ಸರ್ವ ಇಂಗ್ರೇಜಿ ಸೈನ್ಯದವರು ವಿಜಯಾನಂದದಲ್ಲಿ ಮಗ್ನರಾದರು. ಮತ್ತು ಅವರಿಗೆ ಸನ್ 1857ನೆ ಇಸವಿ ಜೂನ್ ತಿಂಗಳಲ್ಲಿ ನಡೆದ ಇಂಗ್ರೇಜಿ ಜನಗಳ ಕೊಲೆ ಪಾತಕದ ವಿಷಯವಾಗಿ, ಝಾಁಸಿಯಮೇಲೆ ಪೂರ್ಣವಾದ ತಮ್ಮ ಹಗೆತನವನ್ನು ತೀರಿಸಿಕೊಳ್ಳ ಬೇಕೆಂತ, ವಿಶೇಷವಾದ ಅಪೇಕ್ಷೆ ಹುಟ್ಟಿತು. ವಿಜಯೋತ್ಸವದಿಂದ ಕೆಂಪು ಶಿಪಾಯಿ ಗಳ ಅಂತಃಕರಣವು ತುಂಬಿಹೋಗಿದ್ದಕಾರಣ, ಅವರ ದಯಾಶೀಲತೆಯಲ್ಲಾ ವ್ಯರ್ಥ ವಾಗಿ ಹೋಗಿತ್ತು; ಮತ್ತು ಅವರ ಹೃದಯದಲ್ಲಿ ಕ್ರೂರತನದ ಘಾಳಿಯು ಉತ್ಪನ್ನವಾಗಿ, ಅದಕ್ಕೆ ಒಂದು ವಿಲಕ್ಷಣವಾದ ರೋಷವೆದ್ದಿತು. ತಾರೀಖು 5ನೇ ದಿವಸ, ಲೆ. ಬೇಗ್ರಿ ಸಾಹೇಬನು ಝಾಁಸೀ ಕೋಟೆಯನ್ನ ಸ್ವಾಧೀನಪಡಿಸಿಕೊಂಡನಂತರ, ಇಂಗ್ರೇಜಿ ಸೈನ್ಯ ದವರು, ನಿರ್ಭಯದಿಂದ ಯಲ್ಲಾ ಸ್ಥಳದಲ್ಲಿಯೂ, ಪ್ರವೇಶಮಾಡಿದರು. ಝಾಁಸಿ ಯುದ್ಧಶಾಲಿ ಜನಗಳು ಕೆಂಡಾಬಟ್ಟೆಯಾಗಿ ಹೋದಕಾರಣ, ಇಂಗ್ರೇಜಿ ಸೈನ್ಯದವರಿಗೆ, ಅಟಂಕಪಡಿಸತಕ್ಕವರ್‍ಯಾರೂ ಇರಲಿಲ್ಲ. ನಿರಾಪರಾಧಿ ಮತ್ತು ನಿರುಪದ್ರವಿಗಳಾದ, ಪಟ್ಟಣವಾಸಿಗಳಾದ ಜನಗಳು ಯಾರಿದ್ದರೋ, ಅವರು ಮಾತ್ರ ಇಂಗ್ರೇಜಿಸೈನ್ಯದ ಕೈಗೆ ಸಿಕ್ಕರು. ಕೆಂಪು ಶಿಪಾಯಿಗಳು, ಝಾಁಸಿ ಪಟ್ಟಣವು ತಮ್ಮ ಸ್ವಾಧೀನಕ್ಕೆ ಬಂದಾ ರಭ್ಯ, ದೀನರಾಗಿ ಜೀವದಾನಕೊಡಬೇಕೆಂತ ಅವರ ಸಮೀಪಕ್ಕೆ ಬಂದು ಕೇಳಿಕೊಂಡ ಜನಗಳನ್ನೆಲ್ಲಾ, ಗೋಲಿಗಳಿಂದ ಹೊಡೆದು, ಕೊಂದು ಹಾಕುವುದು ಒಂದೇ ಕೆಲಸ ಮಾಡಿದರು. ಆ ಸಮಯದಲ್ಲಿ ಜನಗಳ ದುರ್ದೆಶೆ ಯಾವ ಸ್ಥಿತಿಯಲ್ಲಿತ್ತೆಂಬುವುದು ವರ್ಣನೆಮಾಡಲು, ಕಷ್ಟವಾಗಿದೆ. ಒಂದು ಕಡೆಯಿಂದ ಅಗ್ನಿನಾರಾಯಣನು, ತನ್ನ ಪ್ರಭಾವವನ್ನು ತೋರಿಸುವ ಕೆಲಸವನ್ನು ಬಲವಾಗಿ ನಡಿಸಿಕೊಳ್ಳುತ್ತಾ ಹೋಗುತ್ತಿ ದನು. ಒಂದು ಕಡೆಯಿಂದ, ಕೆಂಪು ಯಮದೂತರು ಮನುಷ್ಯರ ಜೀವಗಳನ್ನು ಕ್ಷಣ ಮಾತ್ರದಲ್ಲಿ ಕಟ್ಟ, ತೆಗೆದುಕೊಂಡುಹೋಗುವ ಕ್ರಮವನ್ನು ನಡಿಸುತ್ತಿದ್ದರು. ಒಂದು ಕಡೆಯಲ್ಲಿ, ಇಂಗ್ರೇಜಿ ಪಟಾಲಂನವರು, ಝಾಁಸಿ ಪಟ್ಟಣದ ಪೂರ್ವದ ಅಪಾರ ವೈಭವ ವನ್ನು ಪ್ರತ್ಯಕ್ಷವಾಗಿ ಅನುಭವಿಸುವುದಕ್ಕಾಗಿ, ಏಕ ಪ್ರಕಾರವಾಗಿ ಸುಲಿಗೆ ಮಾಡುತ್ತಿ ದ್ದರು. ಈ ಪ್ರಕಾರವಾಗಿ, ಝಾಁಸೀ ಪಟ್ಟಣಕ್ಕೆ, ಅನರ್ಥದಮೇಲೆ ಅನರ್ಥವು ವ್ಯಾಪಿ ಸಿಕೊಂಡು ಹೋಗಿತ್ತೆಂತ ಹೇಳುವದಕ್ಕೇನೂ ಅಡ್ಡಿಯಿಲ್ಲ. ಆ ಕಾಲದಲ್ಲಿ, ಪ್ರತ್ಯಕ್ಷ

ಅಲ್ಲಿದ್ದು, ಉಳಿದುಕೊಂಡ ಒಬ್ಬ ವೃದ್ಧ ಗೃಹಸ್ಥನು ಆ ವಿಷಯವಾಗಿ ತನ್ನ ಸ್ವಂತ ಅನುಭವವನ್ನು ತಿಳಿಸಿರುತ್ತಾನೆ. ಅದರ ಸಾರಾಂಶವನ್ನು ಕೆಳಗೆ ನಾವು ಇಲ್ಲಿ ತೋರಿಸುತ್ತೇವೆ.

"ಬಾಯಿಸಾಹೇಬಳು ಝಾಂಸಿ ಬಿಟ್ಟು ಹೋದನಂತರ, ಆ ಪಟ್ಟಣಕ್ಕೆ ಸ್ಮಶಾನ ಸ್ವರೂಪವು ಬಂದು ಪ್ರಾಪ್ತಿಯಾಯಿತು. ನಗರವಾಸಿ ಜನಗಳು, ಕೆಂಪು ಯಮದೂತರ ಪಾಶದಿಂದ ಪ್ರಾಣ ಸಂರಕ್ಷಣೆ ಮಾಡಿಕೊಳ್ಳುವಗೋಸ್ಕರ, ತಮ್ಮ ಮನೆಗಳ ಗೋಡೆಗಳ ಮಧ್ಯದಲ್ಲಿ ಮಾಡಿದ್ದ ಗುಪ್ತಜಾಗಗಳಲ್ಲಿ ಅಡಗಿಕೊಂಡು ಕೂತರು. ಪ್ರತಿ ಬೀದಿಯಲ್ಲಿಯೂ, ಹೆಣಗಳರಾಶಿಯು ಬಿದ್ದಿತ್ತು. ಆಪ್ತಜನಗಳು ದುಃಖದಿಂದ ಹುಚ್ಚು ಹಿಡಿದು, ಕರುಣಸ್ವರದಿಂದ ಅತ್ತು, ದುಃಖಪಡುತ್ತಿದ್ದರು. ಬಡ ಜನಗಳು ಅನ್ನವಿಲ್ಲದೆ, ಕೂಗಿಕೊಳ್ಳುತ್ತಾ, ಅಳುತ್ತಾ ತಿರುಗುತ್ತಿದ್ದರು. ಆನೆಗಳು, ವಂಟೆಗಳು ಮುಂತಾದ ಪಶುಗಳು ದಿಕ್ಕಿಲ್ಲದೆ, ನಾಲ್ಕು ಕಡೆಗಳಲ್ಲಿಯೂ ಸ್ವೇಛೆಯಾಗಿ ತಿರುಗುತ್ತಿದ್ದವು. ಸರ್ವ ನಗರದ ಮಧ್ಯದಿಂದ ಅಗ್ನಿಜ್ವಾಲೆಯು ಎದ್ದು ಆಕಾಶವನ್ನೆಲ್ಲಾ ವ್ಯಾಪಿಸಿಕೊಂಡಿತ್ತು. ಮಿಠಾಯಿಮಾರುವ ಬೀದಿಯಲ್ಲಿನ, ಸರ್ವಧನವಂತರ ಮನೆಗಳೆಲ್ಲಾ, ಅಗ್ನಿಯಬಾಯಿಗೆ ಬಿದ್ದಕಾರಣ, ಅಲ್ಲಿ ದೊಡ್ಡ ಬಲೋದ್ಬಂದಿ ಕೆಲಸವೆದ್ದಿತ್ತು. ಮೊದಲನೇ ದಿವಸ ಸಾಯಂಕಾಲ ಸಮಯದಲ್ಲಿ ಶತ್ರುಸಂಹಾರ ಕೆಲಸವನ್ನ ನಿಲ್ಲಿಸಿ ಕೆಂಪು ಸಿಪಾಯಿಗಳು ತಮ್ಮ ಸ್ವಸ್ಥಾನಕ್ಕೆ ವಿಶ್ರಾಂತಿ ತೆಗೆದುಕೊಳ್ಳುವದಕ್ಕಾಗಿ ಹೋದಕಾರಣ, ಕೆಲವುಕಾಲ ಪರ್ಯಂತರ ಜನಗಳಿಗೆಲ್ಲಾ ಜೀವ ಬಂದಿತ್ತು.

ಮಾರನೇದಿವಸ ಪುನಃ ಬೆಳಗಾದನಂತರ ಸರ್ವರಿಗೂ, ಭೀತಿ ಮತ್ತು ವ್ಯಸನಗಳು ಹುಟ್ಟಿತು. ಬೆಳಕು ಹರಿಯುತ್ತಲೇ, ಪುನಃ ನೂರಾರು ಬಂದೂಕಗಳ ಶಬ್ದವು ಕೇಳಿಸಿತು. ಪುನಃ ಮೃತ್ಯು ಬಂದೊದಗಿದ ಸಮಯದಲ್ಲಿ, ಹೃದಯವನ್ನು ಕರಗಿಸತಕ್ಕಂಥಾ ದುಃಖಕರವಾದ ಧ್ವನಿಯು ಕಿವಿಗೆಬೀಳಲು ಪ್ರಾರಂಭವಾಯಿತು. ಸರ್ವಜನಗಳೂ ಭೀತಿಯಿಂದ, ಕೇವಲ ಮರಣದ ಮುಖದಕಡೆಗೆ ತಿರುಗಿಹೋದರು. ಕೆಲವರಿಗೆ ಅನ್ನ ನೀರು ಸ್ವಲ್ಪವೂ ಶಿಕ್ಕುವ ಆಶೆ ಉಳಿಯಲಿಲ್ಲ. ಪ್ರತಿ ಒಂದು ಮಾರ್ಗದಲ್ಲಿಯೂ ಹೆಣಗಳರಾಸಿಗಳು ಕಂಡವು. ಸ್ವಕೀಯ ಜನಗಳು ಶವವನ್ನ ತಮ್ಮ ಮನೆಗಳ ಮುಂದೆ ತಂದು, ತಮ್ಮ ತುಳಸಿಯ ಅಂಗಳಗಳಲ್ಲಿ ದಹನವಿಧಿಯನ್ನು ಮಾಡುತ್ತಿದ್ದರು. ಇಷ್ಟರಲ್ಲಿ ಕೆಂಪುಶಿಪಾಯಿಗಳ ವಕ್ರದೃಷ್ಟಿಯು ಆ ಕಡೆಗೆಬಿದ್ದರೆ, ಆ ಜನಗಳನ್ನ ಕೂಡ ಶವದಸಂಗಡಲೇ ಸ್ವರ್ಗವಾಸಕ್ಕೆ ಕಳುಹಿಸಿ ಕೊಡುತ್ತಿದ್ದರು. ಈ ಭಯಂಕರವಾದ ಪ್ರಸಂಗದಲ್ಲಿ ಸ್ತ್ರೀಯರ ಅವಸ್ಥೆಯು ಬಹಳವಾಗಿ ಹೃದಯವನ್ನು ಕರಗಿಸತಕ್ಕದ್ದಾಗಿ ಹೋಗಿತ್ತು. ಅವರ ಶೋಕವನ್ನು ಕೇಳಿ, ಗೋಡೆಗಳಲ್ಲಿ ಅಡಗಿಕೊಂಡು ಕೂತಿದ್ದ ಜನಗಳ ಅಂತಃಕರಣವು ಕೇವಲ ಕರಗಿಹೋಗುತಿತ್ತು. ಆ ಅವಸ್ಥೆಯ ವರ್ಣನೆಯನ್ನ ಬಾಯಿಂದ ಹ್ಯಾಗೆ ಮಾಡಬೇಕು ?

ಕೆಲವು ಜನಗಳು ಹುಲ್ಲಿನ ರಾಶಿಯಲ್ಲಿ ಹೋಗಿ ಅಡಗಿಕೊಂಡು ಕೂತಿದ್ದರು. ಅಲ್ಲಿಗೆ ಕೆಂಪು ಜನಗಳು ಹೋಗಿ, ಅವರನ್ನ ಅದೇ ಸ್ಥಳದಲ್ಲಿಯೇ, ಬೆಂಕಿಹಚ್ಚಿ ಸುಟ್ಟುಬಿಟ್ಟರು. ಅದರಿಂದ ಆ ಜನಗಳಮೇಲೆ ತನ್ನಷ್ಟಕ್ಕೆ ತಾನೆ ಅಗ್ನಿನಾರಾಯಣನ ಕೃಪೆಯಾಗಿ, ಅವರಿಗೆ ಸ್ವರ್ಗದ ಬಾಗಲು ತೆಗೆಯಲ್ಪಟ್ಟಿತು. ಕೆಲವುಜನಗಳು, ಕೆಂಪುಜನರು ದೃಷ್ಟಿಗೆ ಬೀಳುತ್ತಲೆ, ಭಾವಿಯೊಳಗೆ ಹಾರಿಬಿಟ್ಟರು. ಪರಂತು, ಕೆಂಪುಜನಗಳು ಭಾವಿಯಮೇಲೆ ಕೂತುಕೊಂಡಿದ್ದು, ನೀರಿನಮೇಲೆ ತಲೆ ಕಂಡಕೂಡಲೆ, ಬಂದೂಕು ಹೊಡೆದು, ಅಲ್ಲಿಯೇ ಅವರನ್ನ ಮುಗಿಸಿಬಿಟ್ಟರು. ತಾತ್ಪರ್ಯವೇನಂದರೆ, ಪ್ರಾಣವನ್ನುಳಿಸಿಕೊಳ್ಳುವ ಗೋಸ್ಕರ ಯಾರು ಎಲ್ಲಿ ಅಡಗಿಕೊಂಡಿದ್ದರೋ, ಅವರನ್ನ ಒಳಗಿನಿಂದ ಹುಡಿಕಿತಂದು, ಅವರಿಗೆ ಯಮಪುರಕ್ಕೆ ದಾರಿ ತೋರಿಸುತ್ತಿದ್ದರು.

ಈ ಪ್ರಕಾರವಾಗಿ 3 ದಿವಸಗಳು ಶತ್ರುಸಂಹಾರ ಕೆಲಸವಂದರೆ: ಕೊಲೆಪಾತಕವು ಜರಗಿತು; ಮತ್ತು ಸೈನ್ಯದ ಪರಾಕ್ರಮಕ್ಕಾಗಿ, ಅವರಿಗೆ ಸುಲಿಗೆಗೆ ಅಪ್ಪಣೆ ಸಿಕ್ಕಿತು. ಮೊದಲಿಂದಲೇ, ಕೆಂಪು ಜನಗಳು ಏಕಪ್ರಕಾರವಾಗಿ ಸುಲಿಗೆ ಮಾಡುತ್ತಲೇ ಇದ್ದರು, ಅಪ್ಪಣೆ ಸಿಕ್ಕಮೇಲಂತೂ ಕೇಳತಕ್ಕದ್ದೇನು! ಅವರು ಭಂಗಾರ, ಬೆಳ್ಳಿ, ಮುತ್ತುಗಳು, ಪಚ್ಚೆಗಳು, ಮುಂತಾದವುಗಳನ್ನ ಎಷ್ಟುಕೈಗೆ ಸಿಕ್ಕಿತೋ ಅಷ್ಟು ಲೂಟಿಮಾಡಿ ತೆಗೆದುಕೊಂಡರು. ಆ ಕಾಲವಲ್ಲಿ, ಲಕ್ಷಾಂತರ ರುಪಾಯಿಗಳ ದ್ರವ್ಯವು ಕೆಂಪು ಜನಗಳಿಗೆ ಸಿಕ್ಕಿತು. * ಮೂರನೇ ದಿವಸ ಇಂಗ್ರೇಜಿ ಜನಗಳು ಅರಮನೆಯನ್ನು ನುಗ್ಗಿ, ಅಲ್ಲಿ ಸರ್ವ

---

* ಝಾನ್ಸಿಯಲ್ಲಿ, ಕೆಂಪು ಜನಗಳು ಮಾಡಿದ ಲೂಟಿಯ ವರ್ಣನೆಯು ಇಂಗ್ರೇಜಿ ಇತಿಹಾಸದಲ್ಲಿ ಕಂಡು ಬರುವದಿಲ್ಲ. ಆದಾಗ್ಯು ಸರ್ ಹ್ಯೂರೋಜ್ ಸಾಹೇಬನ ಸೈನ್ಯದಸಂಗಡ ಇದ್ದ ಡಾಲೋಸಾಹೇಬನು ಅದನ್ನುಕುರಿತು ಸ್ವಲ್ಪ ಮಟ್ಟಿಗೆ ಬರೆದಿರುತ್ತಾನೆ. ಅದರ ಪ್ರಕಾರವೇ, ಆ ಯುದ್ಧ ಕಾಲದಲ್ಲಿದ್ದ ಇನ್ನೊಬ್ಬ ಅಸಿಸ್ಟೆಂಟ್ ಸರ್ಜನ್, ಜಾನ್, ಹೆನ್ರಿ, ಸಿಂಹ್ಲೇಸ್ಟರ್ ಸಾಹೇಬನು ಸ್ವಲ್ಪ ಮಟ್ಟಿಗೆ ವರ್ಣನೆ ಮಾಡಿರುತ್ತಾನೆ. ಅದರಲ್ಲಿ ಅವನು ಬಹಳ ವಿನೋದವನ್ನು ತೋರಿಸಿರುತ್ತಾನೆ. ಆತನಹೇಳಿಕೆಯ ಸಾರಾಂಶವು ಈ ರೀತಿಯಲ್ಲಿದೆ:—"ಇಂಗ್ರೇಜಿಜನಗಳು ಝಾನ್ಸಿಯಲ್ಲಿ ಮಾಡಿದ ಸುಲಿಗೆಗೆ, ಸುಲಿಗೆ ಎಂತ ಹೇಳುವದು ಯೋಗ್ಯವಲ್ಲ. ಆದರೆ ಅವರು ತಾವು ಮಾಡಬೇಕಾದ ಶೋಧಕ ತನದ ಕೆಲಸವನ್ನ ಸಂಪೂರ್ಣ ಶ್ರದ್ಧೆಯಿಂದ ಜರುಗಿಸಿದರು. ಸಿಂಹ್ಲೇಸ್ಟರ್ ಸಾಹೇಬನ ಬರವಣಿಗೆಯಲ್ಲಿ ಅನಾಯಸವಾಗಿ ಇನ್ನೊಂದು ಸಂಗತಿ ಹೊರಪಟ್ಟಿದೆ. ಯಾವದಂದರೆ, ಇಂಗ್ರೇಜಿ ಜನಗಳು ತಮ್ಮ ಶೋಧನೆಯ ಕೆಲಸವನ್ನ ತೃಪ್ತಿಕರವಾಗಿ ಮಾಡಿದ್ದರಲ್ಲಿ, ಝಾನ್ಸಿಯಲ್ಲಿನ ಯಲ್ಲಾ ದೇವರ ಮೂರ್ತಿಗಳನ್ನು ಕೂಡ ಇಲ್ಲದಂತೆ ಮಾಡಿದರು. ಇದುಮಾತ್ರ ಅವರು ತಮ್ಮ ಶೋಧನೆಯ ಕೆಲಸವನ್ನ ಪರಿಪೂರ್ಣ ಮಾಡುವದಕ್ಕಾಗಿ,

ಪ್ರಕಾರವಾಗಿ ಸುಲಿಗೆ ಮಾಡಿದರು. ಆ ಅರಮನೆಯು ಬಹಳ ಪ್ರಾಚೀನವಾದದ್ದಾಗಿದ್ದು, ಅಲ್ಲಿ ಪುಷ್ಕಳ ಸಂಪತ್ತಿತ್ತು. ಪೇಷ್ವೆಯವರ ಕಾಲ ದಾರಭ್ಯ, ಬುಂದೇಲ್ ಖಂಡದ ರಾಜರು ಮತ್ತು ರಾಜರ ಅರಮನೆಯ ಕಡೆಯಿಂದ ಶಿಕ್ಕಿದ್ದ ಅಮೌಲ್ಯವಾದ, ರತ್ನಖಚಿತವಾದ ದನಗಗಳು, ಝಾಂಸೀ ಸಂಸ್ಥಾನಿಕರ ಹತ್ತರ ಬಹಳವಾಗಿದ್ದವು. ಅದರಲ್ಲಿ ಪನ್ನದ ಗಣಿಯು ಅಸದೃಶವಾದ ಒಂದು ವಜ್ರವಿತ್ತು. ಅದನ್ನು ಮತ್ತು ಇತರ ಎಲ್ಲಾ ಬೆಳ್ಳಿ ಭಂಗಾರವನ್ನ ಇಂಗ್ರೇಜಿ ಸೈನ್ಯದವರು ಸುಲಿಗೆ ಮಾಡಿಕೊಂಡು, ತಮ್ಮಸ್ಥಳಕ್ಕೆ ತೆಗದುಕೊಂಡು ಹೋದರು. ಇಷ್ಟುಅಲ್ಲದೆ, ಅರಮನೆಯಲ್ಲಿ ಒಂದಾದರೂ ಬೆಲೆಯುಳ್ಳ

---

ಮಾಡಿದರೇ ಹ್ಯಾಗೆ ಎಂಬುವದನ್ನ ವಾಚಕರು ತಮ್ಮ ಲಕ್ಷ್ಯೆಯಲ್ಲಿಡಬೇಕು. ಆತನು ಹೇಳುವದೇನಂದರೆ:—

"So soon as the fighting had ceased Officers and men began to look about them with that spirit of curiosity which pervades one when visiting the shops in Wardour street, Leicester square they dived into every house and searched its dark corners, they pulled down walls, or parts of walls, which looked of recent build, all in this self—same spirit of curiosity—not—to *loot*, of course, because that was forbidden under the strictest punishment. One class of articles, however, seemted to me to be looked on as fair loot by even the mosscrupulous,—these were the Gods found in the temples. They were collected in great numbers, and were strangely sought after by every officer and soldier. There were Gunputtees and Vishnoosinnumerable, and of every metal. Some were really pretty ornaments, silver, with gold bangles on their grotesque limbs, and small enough to be worn on the watch chain; others were of brass and stone, of rare workmanship."

*Re-collections of the Campaign in Malwa and Central India*, *P.* 108.

ಪದಾರ್ಥವನ್ನ ವುಳಿಯಗೊಡಿಸಲಿಲ್ಲ. * ಬಿಲೋರಿ ಸಾಮಾನುಗಳು, ಕುತ್ನಿ ಫರದೆಗಳೂ, ಮಸ್ಲಿನ್ ಗಾದಿಗಳು, ವರಗು ದಿಂಬುಗಳು, ಚಕ್ರದಿಂಬುಗಳು ಮತ್ತು ದಿಂಬುಗಳು, ಬೆಳ್ಳಿ ಮಂಚಗಳು ಮತ್ತು ಕುರ್ಚಿಗಳೂ, ಬೆಳ್ಳಿ ಭಂಗಾರದ ಹಿಡಿಹಾಕಿದ, ಬಿಚ್ಚು ಕತ್ತಿಗಳೂ ಮತ್ತು ಭಲ್ಲೆಗಳೂ, ಭಲ್ಲೇದಾರರ ಬೆಳ್ಳೀ ಕಟ್ಟಿಗೆಗಳೂ, ಆನೆಯ ದಂತದ ಸಾಮಾನುಗಳೂ ಬೆಳ್ಳಿಯ ಕಾಲುದೀಪಗಳು ಮತ್ತು ಗೋಡೆಗೆ ಶಿಗಸತಕ್ಕ ಗಿಡಗಳೂ, ರುಮಾಲುಗಳೂ, ಶೀರೆಗಳೂ ಮತ್ತು ಶಾಲುಜೋಡಿಗಳೂ ಮತ್ತೂ ಸ್ವತಃ ಝಾಂಸಿ ರಾಜನು ಕೂಡತಕ್ಕ ಹಳೇಸಿಂಹಾಸನವೂ, ಮುಂತಾದ ಸಾವಿರಾರು ಪದಾರ್ಥಗಳನ್ನ ಅನೇಕ ವಿಧವಾಗಿ ನಾಶಪಡಿಸಿದರು; ಮತ್ತು ಅದರಲ್ಲಿ ಮನಸ್ಸಿಗೆ ಬಂದ ಸಾಮಾನುಗಳನ್ನ ತೆಗೆದುಕೊಂಡು ಹೋದರು. ಝಾಂಸಿ ಪುಸ್ತಕಶಾಲೆಯು ಬಹಳ ದೊಡ್ಡದಾಗಿಯೂ ಮತ್ತು ಉತ್ತಮರೀತಿಯಲ್ಲಿಯೂ ಇಟ್ಟಿತ್ತು. ಝಾಂಸಿ ಮೊದಲನೇ ಶುಭೇದಾರ್ ದೊಡ್ಡ ರಘುನಾಥರಾಯನ ಕಾಲದಾರಭ್ಯ, ಇತ್ತಲಾಗಿನ, ಅಂತ್ಯದ ಮಹಾರಾಜ ಗಂಗಾಧರರಾವ್ ಬಾಬಸಾಹೇಬನ ಕಾಲಪರ್ಯಂತರ, ಎಲ್ಲಾ ರಾಜರುಗಳು ಪುಸ್ತಕಗಳ ವಿಷಯದಲ್ಲಿ ಬಹಳ ಆಸಕ್ತಿಯನ್ನು ಮತ್ತು ಅಭಿರುಚಿಯನ್ನು ತೆಗೆದುಕೊಂಡಿದ್ದರು. ನಾಲ್ಕು ವೇದಗಳ ಭಾಷ್ಯ ಮತ್ತು ಎಲ್ಲಾ ಶಾಖೆಗಳ ಭಾಷಾಂತರ ಸಹಿತ ಸೂತ್ರಗಳು,

---

* ಈ ಸಂಗತಿಗಳನ್ನೆಲ್ಲಾ, ನಮ್ಮದೇಶದ ಒಬ್ಬ ಗೃಹಸ್ಥನು ಹೇಳಿದಾಗ್ಯೂ, ಅದಕ್ಕೆ ಡಾ. ಲೋಸಾಹೇಬನು ಹೇಳುವದು ಅಪ್ರತ್ಯಕ್ಷ ರೀತಿಯಿಂದ, ದೃಷ್ಟಾಂತರ ತೋರಿಬರುತ್ತದೆ. ಅವನು ಅರಮನೆಯಲ್ಲಿನ ಸುಲಿಗೆಯನ್ನ ಕುರಿತು, ಮುಂದೆ ಬರೆದಿರುವ ಪ್ರಕಾರ ವರ್ಣನೆ ಮಾಡಿದ್ದಾನೆ:—

"In the first moments of excitement our troops smashed and destroyed everything before them. Doors in-laid with plate-glass, mirrors, chandeliers, chairs, and other native furniture, went to a thousand pieces in a moment; every room ransacked and covered with heaps of things broken and torn to atoms; carpets mats, velvet and satin beds, bedsteads with silver feet, velvet cushioned chairs, a brazen throne of excellent old workmanship, golden and silver handled tulwars, spears, silver mounted sticks, silver bird cages, ivory foot stools, lamp shades, marble slabs, dozens of pagrees and shawls silver candlesti cks, Crockery ware and a

ಟೀಕಸಹಿತ ಸ್ಮೃತಿ, ಮತ್ತು ಎಲ್ಲಾ ಪುರಾಣಗಳೂ ಮತ್ತು ಸರ್ವವೇದಗಳ ಶ್ರೌತಸ್ಮಾರ್ತ
ಕರ್ಮ ಮುಂತಾದ ಧರ್ಮವಿಷಯದ ಗ್ರಂಥಗಳನ್ನೂ ಸಹ, ಅವರು ಚನ್ನಾಗಿ ಸೇರಿಸಿ
ಟ್ಟಿದ್ದರು. ಇದುಹೊರ್ತು, ಜೋತಿಷ್ಯ, ವೈದ್ಯ, ನಾಟಕ, ಕಾವ್ಯಮುಂತಾದ ಸರ್ವ
ಶಾಸ್ತ್ರದ ಅನೇಕಗ್ರಂಥಗಳು ಅದರಲ್ಲಿದ್ದವು. ಝಾಁಸಿಯಿಂದ, 4 ಹರದಾರಿಯೊಳಗೆ,
ಹೊಸಗ್ರಂಥವಿದೆ ಎಂತ ತಿಳಿದಕೂಡ್ಲೆ ಕಾಗದ ಬರೆದು ಕಳುಹಿಸಿ, ತಮ್ಮ ಜನಗಳಕಡೆ
ಯಿಂದ, ಆ ಗ್ರಂಥವನ್ನು ಬರೆಸಿ ತರಸಿಕೊಳ್ಳುತ್ತಿದ್ದರು. ಯಾವದಾದರೂ ಸಂದರ್ಭ
ದಲ್ಲಿ ಅವಶ್ಯಬಿದ್ದಾಗ ಗ್ರಂಥವನ್ನು ಕಾಶಿಯವರು ಕೂಡಾ ಝಾಁಸಿಯಿಂದ ತೆಗೆದು
ಕೊಂಡು ಹೋಗುವ ಪದ್ಧತಿಯಿತ್ತು. ಇಂಥಾ ಬೆಲೆಯುಳ್ಳ ಪುಸ್ತಕ ಕಟ್ಟುತಕ್ಕ
ರೇಷ್ಮೇ ವಸ್ತ್ರಗಳೂ ಮತ್ತು ಹಲಿಗೆಗಳನ್ನೂ ಸಹ ಸೋಲ್ಜರುಗಳು ಹುಡುಕಿ ತೆಗೆದು
ಕೊಂಡುಹೋಗಿ, 3 ನೇ ಅಂತಸ್ತಿನಿಂದ ರಾಜಮಾರ್ಗದಲ್ಲಿ ಬಿಸಾಟಬಿಟ್ಟರು. ಇವರಿಂದ
ಆ ಪುಸ್ತಕಗಳ ಹಾಳೆಗಳು ಗಾಳಿಯಲ್ಲಿ ದೂರದೂರ ಹಾರಿ ಹೋಗುತ್ತಿದ್ದವು. ಅದೇ
ಪ್ರಕಾರವಾಗಿ, ಅರಮನೆಯ ಆಲೋಚನೆ ಸಭೆಯಲ್ಲಿನ ಮತ್ತು ಆಶ್ಚರ್ಯ ಪ್ರದರ್ಶಕ
ಮನೆಯಲ್ಲಿನ ಸರ್ವ ಪದಾರ್ಥವನ್ನ ತೆಗೆದುಕೊಂಡರು. ನಗಾರಿಮನೆಗೆ ಹೋಗಿ ನೌಬ
ತ್ತನ್ನ ವಡೆದು ಹಾಕಿದರು. ಈ ಪ್ರಕಾರವಾಗಿ ಆ ಇತಿಹಾಸ ಪ್ರಸಿದ್ಧವಾದ ಅರಮನೆಯು
ಅವಸ್ಥೆಯು ದುರ್ದಶೆಗೆ ಬಂದು, ಸ್ವಲ್ಪಕಾಲದಲ್ಲಿಯೇ ಸರ್ವವೂ ನಾಶವಾಗಿ ಹೋ
ಯಿತು.

ಝಾಁಸಿಪಟ್ಟಣದಲ್ಲಿನ ಸರಕಾರದ ಸ್ಥಳವನ್ನೆಲ್ಲಾ ಸುಲಿಗೆಮಾಡಿದನಂತರ, ಝಾಁ
ಸಿಸಂಸ್ಥಾನದ ಕುಲದೇವತೆಯಾದ, ಶ್ರೀಮಹಾಲಕ್ಷ್ಮಿ ದೇವಸ್ಥಾನದಮೇಲೆ ಕೆಂಪು ಶಿಪಾ
ಯಿಗಳು ಬಿದ್ದು, ಅಲ್ಲಿನಸರ್ವ ಅಲಂಕಾರದ ಮತ್ತು ಬೆಲೆಯುಳ್ಳ ಪದಾರ್ಥಗಳನ್ನು
ಸುಲಿಗೆಮಾಡಿ ತೆಗೆದುಕೊಂಡು ಹೋದರು. ಶ್ರೀಮಹಾ ಲಕ್ಷ್ಮಿಗೆ ತನ್ನ ವೈಭವದ ಅಸ
ಹ್ಯವು ಹುಟ್ಟಿತ್ತೆಂಬುವದರಿಂದಲೇ, ಇಂಥಾಸಂದರ್ಭವು ಬಂದುವದಗಿತೆಂತ ಹೇಳಬೇಕಾ
ಗಿದೆ. ಇದುಹಾಗಿರಲಿ.

---

thousand other things such as a luxurious woman would have lay here and there in chaotic confusion in every part of the building."

"The soldiery went to and frotramping over and threw these things, and kicking them about as they would any heap of rubbish, until order was some what restored."

ಝಾಂಸಿ ಅರಮನೆಯಲ್ಲಿನ ಸಂಪತ್ತೆಲ್ಲಾ, ಇಂಗ್ರೇಜಿ ಅಧಿಕಾರಿಗಳ ಕೈಗೆ ಬಂದಹಾಗೇನೆ, ರಾಣಿಸಾಹೇಬಳ ಆನೆಗಳು ಮತ್ತು ಕುದುರೆಗಳು ಸಹ, ಇಂಗ್ರೇಜಿಸರಕಾರಕ್ಕೆ ಪುಷ್ಕಳವಾಗಿ ಶಿಕ್ಕಿದವು. ಕೋಟೆಯ ವಳಗಿನ ಮದ್ದು ಗುಂಡುಗಳು ಮತ್ತು 40 ಫಿರಂಗಿಗಳು ಸಹ ಅವರ ಕೈವಶವಾದವು. ಕೋವಿಗಳು ಮತ್ತು ಕತ್ತಿಗಳು ಅವರಕೈಗೆ ಎಷ್ಟುಶಿಕ್ಕಿದವು ಎಂಬುವದಕ್ಕೆ ಲೆಖ್ಖವೇಇಲ್ಲ.

ಮೊದಲು ಮೂರುದಿವಸಗಳ ಪರ್ಯಂತರ ಕೆಂಪು ಶಿಪಾಯಿಗಳು ಮಾಡಿದ ಸುಲಿಗೆಯ ಕೆಲಸವು ಮುಗಿದನಂತರ, ನಾಲ್ಕನೇ ದಿವಸ ಮದರಾಸು ಶಿಪಾಯಿ ಪಟಾಲಂನವರು, ತಾಮ್ರ, ಹಿತ್ತಾಳಿ ಮುಂತಾದ ಲೋಹದ ಸಾಮಾನುಗಳನ್ನು ಸುಲಿಗೆ ಮಾಡಲಿಕ್ಕಾಗಿ ಪಟ್ಟಣದೊಳಗೆ ಬಂದರು. ಆ ಜನಗಳು ಭಾವಿಯ ಒಳಗಿನಿಂದ ಪಾತ್ರೆಗಳನ್ನ ತೆಗೆಯಲು, ದೊಡ್ಡ ದೊಡ್ಡ ಪಾತಾಳ ಗರಡೆಗಳನ್ನ ತಂದಿದ್ದರು. ಪಟ್ಟಣದ ಜನಗಳು ತಮ್ಮಪಾತ್ರೆಪಡುಗಗಳನ್ನಾದರೂ ವುಳಿಸಿಕೊಳ್ಳಬೇಕೆಂತ ಅವುಗಳನ್ನು ಭಾವಿಗಳಲ್ಲಿ ಹಾಕಿಬಿಟ್ಟಿದ್ದರು. ಪರಂತು, ಭಾವಿಗಳ ನೀರು ಬತ್ತಿ ಹೋಗಿದ್ದರಿಂದ ಮದರಾಸು ಶಿಪಾಯಿಗಳು ಅದನ್ನೆಲ್ಲಾ ಮೇಲಕ್ಕೆ ತೆಗೆದು ವೈದುಬಿಟ್ಟರು. ಜನಗಳ ಮನೆಗಳೊಳಗೆ ನುಗ್ಗಿ ಕೈಗೆಸಿಕ್ಕಿದ ಪಾತ್ರೆಗಳನ್ನು ಸುಲಿಗೆ ಮಾಡಿ ತೆಗೆದುಕೊಳ್ಳುತ್ತಿದ್ದರು. ಮೂರು ದಿವಸಗಳ ವರೆಗೂ ಶತ್ರುಸಂಹಾರದ ಕೆಲಸವು ಜರುಗಿ, ಅವರಿಗೆ ಶಿಕ್ಕಿದ ಪದಾರ್ಥವನ್ನ ಕೆಂಪು ಜನಗಳಿಗೆ ಬಕ್ಷಿಸ್ ಆಗಿ ಕೊಟ್ಟಿತ್ತು; ಮತ್ತು ಮುಂದೆ ಬಂದೊಂದು ಸುಲಿಗೆಯ ದಿವಸದಲ್ಲಿ ಶಿಕ್ಕಪದಾರ್ಥವನ್ನ ಕಪ್ಪು ಪಟಾಲಂ ನವರಿಗೂ ಮತ್ತು ತಮಗೆ ಸಹಾಯಕ್ಕೆ ಬಂದ ಹಿಂದೂಸ್ಥಾನದ ರಾಜರ ಪಟಾಲಂ ಜನಗಳಿಗೂ, ಹಂಚಿಕೊಟ್ಟರು. ಮೊದಲನೇ ದಿವಸ ಮದರಾಸು ಪಾಟಲಂನವರು ಸುಲಿಗೆ ಮಾಡಿದರು. ಎರಡನೆದಿವಸ 12 ಘಂಟೆಯ ವರಿಗೆ ಹೈದರಬಾದಿನವರ ಪಾಳಿಯಾಯಿತು. ಆದಿವಸ ಬೆಳಗಾದಕೂಡ್ಲೆ ಆ ಜನಗಳು ಬಟ್ಟೆಗಳ ಸುಲಿಗೆ ಮಾಡುತ್ತಾ ಹೋದರು. ಮನೆಯೊಳಗೆ ನುಗ್ಗಿ ಎಷ್ಟು ಪೀತಾಂಬರಗಳಿದ್ದವೋ, ಅಥವ ಛಾದರಗಳು, ಧೋತ್ರಗಳಿದ್ದವೋ ಅವುಗಳನ್ನೆಲ್ಲಾ ಶಿಕ್ಕಷ್ಟು ತೆಗೆದುಕೊಳ್ಳುತ್ತಾ ಹೋದರು. ಎರಡುದಿವಸ ಮನೆಗಳ ಮಧ್ಯಭಾಗದಲ್ಲಿ ಆನೆಗಳನ್ನು

---

" A good many of the jewels had found there way into their pockets, but considering the temptation, one must say that they were more than obedient to the order to keep their hands from picking and stealing under the trying and exciting circumstances."

*Central India P.* 264.

ನಿಲ್ಲಿಸಿ, ಅದರಮೇಲೆ ಹಾಸಿಗೆ ಹೊದ್ದಿಕೆ ಮೊದಲಾದ ಸಾಮಾನುಗಳನ್ನ ಚೀಲಗಳಲ್ಲಿ ತುಂಬಿ, ಹೊರಿಸಿ, ತೆಗೆದುಕೊಂಡು ಹೋಗುತ್ತಿದ್ದರು. ಈರೀತಿಯಾಗಿ ಅವರಿಗೆ ದೊಡ್ಡ ದೊಡ್ಡ ವ್ಯಾಪಾರಸ್ಥರುಗಳ ಮನೆಗಳಲ್ಲಿ ಲಕ್ಷಾಂತರ ರುಪಾಯಿಗಳ ಪದಾರ್ಥಗಳು ಶಿಕ್ಕಿದವು. ಮೂರನೆದಿವಸ ಪಟಾಲಂನ ಎಲ್ಲಾ ಜನಗಳೂ, ಪಟ್ಟಣದೊಳಗೆನುಗ್ಗಿ, ಅಲ್ಲಿನ ಧಾನ್ಯವನ್ನ ಸುಲಿಗೆ ಮಾಡಲಾರಂಭಿಸಿದರು. ಅವರು ತಮ್ಮಸಂಗಡ ದೊಡ್ಡ ದೊಡ್ಡ ಎತ್ತುಗಳನ್ನ ತ ದಿದ್ದರು. ಬಾಗಲಿನಹತ್ತರ ಎತ್ತುಗಳನ್ನು ನಿಲ್ಲಿಸಿ, ಜನಗಳ ಮನೆಗಳಲ್ಲಿ ಶಿಕ್ಕಧಾನ್ಯವನ್ನ ತುಂಬಿ ತೆಗೆದುಕೊಂಡು ಹೋಗುತ್ತಿದ್ದರು. ನಾಲ್ಕನೆದಿವಸ ಸರ್ವಪ್ರಕಾರದ ಲೂಟಿಗೆ ಪ್ರಾರಂಭ ವಾಯಿತು. ಯಾರಿಗೆ ಏನು ತೆಗೆದುಕೊಂಡು ಹೋಗಬೇಕೆಂತ ಮನಸ್ಸಿಗೆ ಕಂಡಿತೋ, ಅದನ್ನು ತೆಗೆದುಕೊಂಡು ಹೋಗುತ್ತಿದ್ದರು. ಜನಗಳ ಮನೆಯಲ್ಲಿ ಉಪಯೋಗ ವಾದ ಒಂದು ಪದಾರ್ಥವೂ ಉಳಿಯಲಿಲ್ಲ. ಈ ಪ್ರಕಾರವಾಗಿ ಝಾಸಿಯ ಅವಸ್ಥೆಯು ಕೇವಲ ದುರ್ದೆಶೆಗೆ ಬಂತು. ಝಾಸಿ ಜನಗಳ, ಪೂರ್ವಜನ್ಮದ ದುಷ್ಕೃತ್ಯಕ್ಕಾಗಿ, ಪರಮೇಶ್ವರನು ಈ ಸರಿಯಾದ ಶಿಕ್ಷೆ ಮಾಡಿದನೋ, ಅಥವಾ ಇಂಗ್ರೇಜಿಯವರಿಗೆ ಅವರನ್ನು ದಂಡಿಸುವಗೋಸ್ಕರ ಪ್ರೇರಣೆಮಾಡಿ, ಅವರ ಮೂಲಕ ಯೋಗ್ಯವಾದ ಶಿಕ್ಷೆಯನ್ನು ಮಾಡಿಸಿದನೋ ಎಂತಲೇ ಹೇಳಬೇಕಾಗಿ ಬರುತ್ತದೆ.

ಇದು ಹಾಗಿರಲಿ. 7 ದಿವಸಗಳಾದನಂತರ 8 ನೇ ದಿವಸ ' ಶುಕ್ಲ ಖುದಾಕ, ಮುಕ್ಲಬಾದಷಹಾಕ ಅಮಲ್ ಅಂಗ್ರೇಜಿ ಸರ್ಕಾರಕಾ' ಎಂತ ಪಟ್ಟಣದಲ್ಲೆಲ್ಲಾ ಡಂಗೂರ ಹೊಡಿಸಿದರು ; ಮತ್ತು ಕ್ಷಮೆಯ ಪ್ರಸಿದ್ಧ ಪತ್ರಿಕೆಯನ್ನ ಹಚ್ಚಿ ಜನಗಳಿಗೆ ನಿರ್ಭಯ ಮಾಡಿದರು. ಅನೇಕ ಜನಗಳ ಶವಗಳು ಮಾರ್ಗದಲ್ಲಿ ಬಿದ್ದಿದ್ದವು. ಅವುಗಳನ್ನ ಅವರ ಸಮ್ಮಂಧೀಕರು ತೆಗದುಕೊಂಡುಹೋಗಿ, ಮಣ್ಣುಗಾಣಿಸಬಹುದೆಂತ ಅಪ್ಪಣೆ ಮಾಡಿದರು. ಸಾವಿರಾರು ಜನಗಳನ್ನ ಪಟ್ಟಣದಲ್ಲಿ ಕಳುಹಿಸಿ, ಮಾರ್ಗವನ್ನ ಸ್ವಚ್ಛಮಾಡಿಸುವದಕ್ಕೆ ಪ್ರಾರಂಭ ಮಾಡಿಸಿದರು. ಮಿಠಾಯಿ ಬೀದಿಯಿಂದ ಹಿಡಿದು ನೆಮಿಗೆಯವರ ಬೀದಿ ಪರ್ಯಂತರ, ಭಯಂಕರವಾದ ಬೆಂಕಿಹತ್ತಿ ಪಟ್ಟಣವು ಸುಡುತ್ತಿತ್ತು. ಅದನ್ನು ನೊಂದಿಸಲು, ನೀರು ಹೊಯ್ಯುವದಕ್ಕೆ ಪ್ರಾರಂಭಿಸಿದರು. ಬೀದಿಯಮೇಲೆ ಎಷ್ಟು ಶವಗಳು ಬಿದ್ದಿದ್ದವೋ, ಅವುಗಳನ್ನೂ ತೆಗಿಸಿ ಸುಡಿಸಿಹಾಕಿ, ಜನಗಳ ಮನೆಗಳಲ್ಲಿ ಶಿಕ್ಕವುಗಳನ್ನ, ಕಟ್ಟಿಗೆ ತರಿಸಿ, ಅವರಮೇಲೆ ಇಡಿಸಿ, ಆ ಚಿತಿಗೆ ಬೆಂಕಿಯನ್ನು ಹಚ್ಚಿಸಿದರು. ಆ ಕಾಲದಲ್ಲಿ ಸರ್ವ ಪಟ್ಟಣವೂ ಸ್ಮಶಾನದಂತೆ ತೋರುತ್ತಿತ್ತು. ಹಾದಿಗಳ ಪಾರ್ಶ್ವಗಳಲ್ಲಿ ಪ್ರೇತಗಳು ಸುಡುತ್ತಿದ್ದವು. ಯಾರಿಗೆ ಪ್ರೇತ ಸಂಸ್ಕಾರ ಮಾಡುವ ಅಪೇಕ್ಷೆ ಇತ್ತೋ ಅವರು ತಮ್ಮ ಆಪ್ತಜನಗಳ ಶವವನ್ನ ಹುಡಿಕಿ ತೆಗೆದುಕೊಂಡು ಹೋದರು. ಉಳಿದವರ ಶವಗಳನ್ನ ಸಾರ್ವಜನಿಕ ಚಿತಿಯಲ್ಲಿ ಹಾಕಿಬಿಟ್ಟರು. ಇದು ಹೊರ್ತು, ಎತ್ತು, ವಂಟೆ, ಆನೆ, ಕುದುರೆ, ಮುಂತಾದ ಪಶುಜಾತಿಗಳು ಸಾವಿರಾರು ಸತ್ತು ಬಿದ್ದಿದ್ದವು. ಅವುಗಳನ್ನೆಲ್ಲಾ ಪಟ್ಟಣದ ಹೊರಗೆ ತೆಗದುಕೊಂಡುಹೋಗಿ, ಅಲ್ಲಿದ್ದ ಒಂದು

ದೊಡ್ಡ ಅಗಳಿನಲ್ಲಿ ಹಾಕಿ, ಅದರಮೇಲೆ ಮಣ್ಣು ಹಾಕಿಸಿದರು. ಆ ದಿವಸ ಈ ಪ್ರಕಾರವಾಗಿ, ಇಂಗ್ರೇಜಿ ಸರ್ಕಾರದವರು ಪಟ್ಟಣವನ್ನೆಲ್ಲಾ ಶುದ್ಧ ಮಾಡಿದರು.

ಮಾರನೆ ದಿವಸ ಸರ್ಕಾರದ ಅರಮನೆಯ ಮುಂದೆ, ಎಲ್ಲಾ ಜಿನಸುಗಳ ಅಂಗಡಿಗಳನ್ನಿಟ್ಟರು. ಆಗ ಸಾವಿರಾರು ಜನಗಳು ಬಂದು, ತಮಗೆ ಉದರ ಭರಣಕ್ಕೆ ಬೇಕಾದ ಪದಾರ್ಥಗಳನ್ನು ತೆಗೆದುಕೊಳ್ಳುತ್ತಿದ್ದರು. ಜನಗಳ ಹತ್ತರ ಏನೂ ದುಡ್ಡು ಉಳಿದಿರಲಿಲ್ಲ. ಆದಾಗ್ಯು ಹೂಡಿದು, ಕದ್ದು, ಬಚ್ಚಿಟ್ಟುಕೊಂಡಿದ್ದ ಸ್ವಲ್ಪ ಹಣವನ್ನ ಹೊರಗೆ ತೆಗೆದು, ಅದರಮೇಲೆ ತಮ್ಮ ಕಾಲಕ್ಷೇಪದ ಪ್ರಯತ್ನ ಮಾಡಬೇಕಾಗಿ ಅವರಿಗೆ ಸಂದರ್ಭ ಬಂತು. ಈ ಪ್ರಕಾರವಾಗಿ ಝಾಸಿಯಲ್ಲಿ ಶಾಂತತೆಯಾಗಿ, ಅಲ್ಲಿ ಜೀವದಿಂದ ಉಳಿದುಕೊಂಡಿದ್ದ ದುರ್ದೈವಿಗಳಾದ ಪ್ರಜೆಗಳಿಗೆ, ಪುನಃ ಹೊಸ ಸಂಸಾರದ ಸಿದ್ಧತೆ ಮಾಡಿಕೊಳ್ಳಬೇಕಾದ ಸಂಭವ ಬಂತು.

ಇತ್ತಲಾಗಿ, ಪಟ್ಟಣದ ಹೊರಗೆ ಇಂಗ್ರೇಜಿಯವರ ವಸತಿಯ ಸ್ಥಳದಲ್ಲಿ, ಅರಮನೆಯಲ್ಲಿನ ಸುಲಿಗೆಯಲ್ಲಿ ಶಿಕ್ಕಿದ ಬೆಲೆಯುಳ್ಳ ಪದಾರ್ಥವನ್ನ ಮಾರಾಟಮಾಡಲು ವಾರು ಕರೆಯಲಿಕ್ಕೆ ಪ್ರಾರಂಭವಾಯಿತು. * ಆನೆಗಳು, ಬುಟಿಗಳು, ಕುದುರೆಗಳು, ಮುಂತಾದ ಯುದ್ಧಕ್ಕೆ ಉಪಯೋಗವಾದ ಸಾಮಾನುಗಳನ್ನು ಶಿಂಧ್ಯಾ ಸರ್ಕಾರದವರು ಕ್ರಯಕ್ಕೆ ತೆಗದುಕೊಂಡರು. ಉಳಿದ ದೊಡ್ಡ ದೊಡ್ಡ ಬೆಲೆಯುಳ್ಳ ಪದಾರ್ಥಗಳನ್ನ ಇತರ ಸಂಸ್ಥಾನಿಕರು ಕೊಂಡುಕೊಂಡರು. ಝಾಸೀ ಸಂಸ್ಥಾನಿಕರ ಹತ್ತರ ಒಬ್ಬ ಕುಶಲ ಚಿತ್ರಗಾರನು ಮಾಡಿದ ಪೂರ್ವಕಾಲದ ಅತ್ಯುತ್ತಮವಾದ ಹಿತ್ತಾಳಿಯ ತೊಟ್ಟಲು ಇತ್ತು. ಅದನ್ನು ಸಿಂಧ್ಯಾ ಸರಕಾರದವರು ಖರೀದಿಗೆ ಕೊಂಡು ಕೊಂಡರು. ಅದೇ ಪ್ರಕಾರ ವಾಗಿ ಶ್ರೀಮಂತ ಗಂಗಾಧರರಾವ್ ಬಾಬಸಾಹೇಬನು, ಕಾಶಿಯಿಂದ ಮಾಡಿಸಿ ತರಿ

---

* ಈ ವಿಷಯವನ್ನು ಕುರಿತು, ಡಾ. ಲೋ ಸಾಹೇಬನು ಇಷ್ಟು ಮಾತ್ರ ಹೇಳಿರುತ್ತಾನೆ:—

The prize agents were busily engaged daily in taking stock of the money, jewels, and other Valuables found in the palace and town, and sales were going on daily in camp for the disposal of prize goods and the property that once belonged to officers who had died in action."

*Central India P.* 265.

ಸಿದ ಭಂಗಾರದ ತಾಮ್ರ ಝಾಮ ಎಂಬ ಪಾಲಕಿ ಮತ್ತು ರಾಣಿಸಾಹೇಬಳು ನಿತ್ಯವೂ ಕೂತುಕೊಳ್ಳುತ್ತಿದ್ದ ಮಂಚಾಲು (ಮ್ಯಾನ) ಇವುಗಳನ್ನ ಬೇರೆ ಸಂಸ್ಥಾನಿಕರು ಕೊಂಡು ಕೊಂಡರು. ಈ ಪ್ರಕಾರವಾಗಿ ಝಾಂಸಿ ಸಂಸ್ಥಾನದ ವೈಭವದ ಪರಿ ಯವ ಸಾನವಾಯಿತು; ಮತ್ತು ಕೃಪಾಳುವಾದ ಬ್ರಿಟಿಷ್ ಸರಕಾರಕ್ಕೆ ಯಥೇಚ್ಛ ದ್ರವ್ಯವು ಪ್ರಾಪ್ತಿಯಾಯಿತು.

ಇದು ಹಾಗಿರಲಿ. ಈ ಪ್ರಕಾರವಾಗಿ ಝಾಂಸಿಯ ಯುದ್ಧದ ಪೂರ್ಣ ಸಮಾಪ್ತಿ ಯಾಗಿ, ಇಂಗ್ರೇಜಿ ಸೈನ್ಯಕ್ಕೆ ಯಶಸ್ಸು ಬಂದನಂತರ, ಸರ್ ಹ್ಯರೋಜ ಸಾಹೇಬನು, ಝಾಂಸಿಯನ್ನ ಸರಿಯಾಗಿ ಭದ್ರಪಡಿಸಿ ತನ್ನ ಸೈನ್ಯಕ್ಕೆ ವಿಶ್ರಾಂತಿ ಕೊಟ್ಟನು. ಸರ್ ರಾಬರ್ಟ್, ಹ್ಯಾಮಿಲ್ಟನ್ ಸಾಹೇಬನು, ದಂಗೇಖೋರ ಜನಗಳನ್ನ ಹುಡಿಕಿ, ಅವರಿಗೆ ದೇಹಾಂತ ಶಿಕ್ಷೆ ಕೊಡುವ ಕ್ರಮವನ್ನ ನಡೆಸಿದನು. ತಾರೀಖು 5 ನೇ ದಿವಸ ಝಾಂಸಿ ರಾಣಿಸಾಹೇಬಳ ತಂದೆ ಮೋರೋ ಪಂತನನ್ನೂ ಮತ್ತು ಝಾಂಸಿಭಕ್ತ ಲಾಲಾ ಭಾವುನನ್ನೂ ಸಹ ಗಲ್ಲಿಗೆ ಹಾಕಿಸಿದರು. ಪ್ರತಿಒಂದು ದಿವಸದಲ್ಲಿಯೂ ಶಿಕ್ಷೆದ ಮುತ್ಸದ್ದಿ ಗಳು ಅಥವಾ ದರ್ಬಾರಿನವರನ್ನ ಅರಮನೆಯ ಮುಂದೆ ಗಲ್ಲಿಗೆಹಾಕುತ್ತಿದ್ದರು, ಸ್ವಲ್ಪ ಕಾಲದಲ್ಲಿಯೇ, ಝಾಂಸಿ ಪಟ್ಟಣದಲ್ಲಿ, ಇಂಗ್ರೇಜಿ ಸರ್ಕಾರದವರ ಆಳ್ವಿಕೆಯು ಪೂರ್ವ ದಂತೆ ನಿಂತು, ದಂಗೇಖೋರ ಜನಗಳ ಲವಲೇಶವೂ ಅಲ್ಲಿ ನಿಲ್ಲಲಿಲ್ಲ.

ಸರ್, ಹ್ಯೂರೋಜ್ ಸಾಹೇಬನು, 25ನೇ ಪಟಾಲಂನ ಅಧಿಕಾರಿಯಾದ ಮೇಜರ್ ರಾಬರ್ಟ್ಸನ್ ಸಾಹೇಬನ ಸ್ವಾಧೀನಕ್ಕೆ ಕೋಟೆಯ ವ್ಯವಸ್ಥೆಯನ್ನು ಕೊಟ್ಟು, ಝಾಂಸಿ ಯಲ್ಲಿ ಉತ್ತಮಪ್ರಕಾರವಾಗಿ ಭದ್ರತೆ ಪಡಿಸಿದನು. ಝಾಂಸಿ ವ್ಯವಸ್ಥೆಯನ್ನ ಸರ್ ಹ್ಯೂರೋಜ್ ಸಾಹೇಬನು ಯಾವರೀತಿ ಉತ್ತಮ ಪ್ರಕಾರದಲ್ಲಿ ಮಾಡಿದನೋ, ಅದೇ ರೀತಿಯಲ್ಲಿ ತನ್ನ ಸೈನ್ಯದಲ್ಲಿ ಘಾಯವಾಗಿದ್ದ ಜನಗಳ ವ್ಯವಸ್ಥೆಯನ್ನ ಚನ್ನಾಗಿ ಮಾಡಿ ದನು. ಅರಮನೆಯ ಮಧ್ಯದಲ್ಲಿಯೇ ಔಷಧಶಾಲೆಯನ್ನು ಸ್ಥಾಪನೆ ಮಾಡಿ, ಘಾಯ ವಾದ ಜನಗಳಿಗೆ ಉಪಚಾರವನ್ನು ನಡಿಸಿದನು ; ಮತ್ತು ಯುದ್ಧ ಮಧ್ಯದಲ್ಲಿ ಮೃತ ಪಟ್ಟ ಲೆ. ಡಿಕ್. ಲೆ. ಮೆಕ್‌ಲಿಜಾನ್, ಲೆ. ಸಿಂಹಕ್ಲೆರ್, ಲೆ. ಸಿಂಪ್ಸನ್ ಮುಂತಾದ ಶೂರ ಯುದ್ಧಶಾಲಿಗಳ ಶವಗಳಿಗೆ ಕ್ರಿಸ್ತರ ಧರ್ಮಪ್ರಕಾರ, ಯೋಗ್ಯರೀತಿಯಾಗಿ ಸಂಸ್ಕಾರ ಮಾಡಿಸಿದನು. ಅದೇಪ್ರಕಾರ ಸನ್ 1857 ನೇ ಇಸ್ವಿ ಜೂನ್ ತಿಂಗಳಲ್ಲಿ, ಭಂಡಖೋರ ಜನಗಳು ಹೊಡೆದುಹಾಕಿದ ಯೂರೋಪಿಯನ್ ಜನಗಳ ಶವಕ್ಕೆ ಸಹ, ತಾರೀಖು 24ನೇ ದಿವಸ, ರೆ. ಸ್ವೇಬ್ ಮತ್ತು ರೆ. ಸ್ಟ್ರಿಕ್ಲೆಂಡ್ ಸಾಹೇಬರ ಕೈಗಳಿಂದ ವಿಧಿ ಪೂರ್ವಕ, ಸಂಸ್ಕಾರ ಮಾಡಿಸಿ, ಮೃತರ ಆತ್ಮಕ್ಕೆ ಶಾಂತತೆಯನ್ನುಂಟುಮಾಡಿಸಿದನು. ಈ ಯುದ್ಧದಲ್ಲಿ ಸರ್‌ಹ್ಯೂರೋಜ್ ಸಾಹೇಬನು ಬಹಳ ಉತ್ತಮ ಶೌರ್ಯವನ್ನ ತೋರಿ ಸಿದ್ದಕ್ಕಾಗಿ ಡ್ಯೂಕ್ ಆಫ್ ಕೆಂಬ್ರಿಡ್ಜ್; ಸರ್ ಕಾಲಿನ್ ಕ್ಯಾಂಬೆಲ್ ಪ್ರಭೃತಿ ಮಂಡಲಿಯು

ವರು ಆತನನ್ನು ಬಹಳವಾಗಿ ಸ್ತೋತ್ರ ಮಾಡಿದ್ದಾರೆ. * ಅದು ಕೇವಲ ಯಥಾರ್ಥವಾಗಿದ್ದು, ಅದಕ್ಕೆ ಯಾರಿಗೂ ಆನಂದ ತೋರದೆ ಇರಲಾರದು. ಇದುಹಾಗಿರಲಿ. ಝಾನ್ಸಿಯನ್ನು ಸ್ವಾಧೀನ ಪಡಿಸಿಕೊಂಡನಂತರ ಸರ್ ಹ್ಯೂರೋಜ್ ಸಾಹೇಬನು ವಿಜಯಾನಂದದಲ್ಲಿ ಸ್ವಸ್ಥವಾಗಿ ಕಾಲಕಳೆಯದೆ, ಕೂಡ್ಲೆ, ಕಾಲ್ಪಿಯಮೇಲೆ ದಂಡೆತ್ತಿಹೋಗುವ ಉದ್ದೇಶ್ಯದಿಂದ, ಕರ್ನಲ್ ಲಿ. ಡೆಲ್ ಸಾಹೇಬನ ಕೈಕೆಳಗೆ ಬಹಳ ಸೈನ್ಯವನ್ನು ಕೊಡುವದಕ್ಕೆ ನಿಶ್ಚಯಮಾಡಿ, ಮುಂದಿನ ವ್ಯವಸ್ಥೆಯನ್ನು ದಕ್ಷತೆಯಿಂದ ನಡಿಸಿದನು.

ಝಾನ್ಸಿಯಲ್ಲಿ ನಡೆದ, ಘನಘೋರ ಯುದ್ಧದಲ್ಲಿ ಉಭಯ ಪಕ್ಷದ ಕಡೆಯಲ್ಲಿ, ಎಷ್ಟು ಜನಗಳು ಮೃತಪಟ್ಟರೆಂಬುವದರ ವಿಷಯದಲ್ಲಿ, ನಂಬಲಿಕ್ಕೆ ಅರ್ಹವಾದ ನಿಜವಾದಸಂಖ್ಯೆ ತಿಳಿಯಬರುವದಿಲ್ಲ. ಆದಾಗ್ಯೂ ಇಂಗ್ರೇಜಿಯವರ ಕಡೆಯಲ್ಲಿ 36 ಸೇನಾಧಿಕಾರಿಗಳೂ ಮತ್ತು 307 ಸೈನಿಕರೂ ಘಾಯವನ್ನು ಹೊಂದಿದರು ಮತ್ತು ಮೃತರಾದರು; ಮತ್ತು ಝಾನ್ಸಿಯವರ ಕಡೆಯಲ್ಲಿ 5,000 ಜನಗಳು ಸತ್ತುಹೋದರೆಂತ ಇಂಗ್ರೇಜಿ ಗ್ರಂಥಕಾರನು ಬರೆದಿರುತ್ತಾನೆ. †

---

* ಡ್ಯೂಕ್ ಆಫ್ ಕೇಂಬ್ರಿಡ್ಜ್ ಸಾಹೇಬನು, ಅವನನ್ನು ಕುರಿತು ಈ ರೀತಿಯಾಗಿ ಬರೆದಿರುವನು:—

"This operation is highly satisfactory. and it only proves how much can be done with a small force, such as the one under your Command, if it is but ably handled, I had always the greatest confidence in your talent and judgment."

ಸರ್ ಕಾಲಿನ್ ಕ್ಯಾಂಬೆಲ್ ಸಾಹೇಬನು ಆತನಿಗೆ ಅಭಿನಂದನ ಪೂರ್ವಕವಾಗಿ ಈ ರೀತಿ ಬರೆದಿದ್ದಾನೆ:—

"Your operations have been conducted with much skill, and have reason to thank you for the manner in which you have executed the difficult tasks assigned to you by the Government of India."

† ಮೇಲಿನ ಸಂಖ್ಯೆಯನ್ನು ಮೇಜರ್, ಜನರಲ್ ಓವನ್, ವೆಡ್ಡಬರ್ನ್. ಕೆ. ಸಿ. ಯಸ್. ಐ. ಸಾಹೇಬನು ಬರೆದಿರುತ್ತಾನೆ. ಆದ್ದರಿಂದ ಇದರ ನಿಜತ್ವವನ್ನು ಕುರಿತು ಸಂಶಯ ಪಡಬೇಕಾದ್ದಕ್ಕೆ ಕಾರಣವೇಇಲ್ಲ. ಆದಾಗ್ಯು ಝಾನ್ಸಿಯವರ ಪಕ್ಷದಲ್ಲಿ ಇಷ್ಟು ಜನಗಳು ಸಮರಾಂಗಣದಲ್ಲಿ ಸತ್ತುಹೋದರೋ ಅಥವ ಯುದ್ಧ ಮುಗಿದನಂ

ಪ್ರಬಲವಾದ ಮತ್ತು ಕೃಪಾಳುವಾದ ಇಂಗ್ರೇಜಿ ಸರಕಾರದವರ ಸಂಗಡ ದ್ವೇಷ ತೊಟ್ಟದ್ದರಿಂದ, ಝಾಂಸಿಜನಗಳ ಇಷ್ಟು ಭಯಂಕರವಾದ ಸಂಹಾರವಾದದ್ದು ಸಹಜವಾದ್ದಾಗಿಯೇ ಇದೆ. *

---

ತರ ಷಹರಿನಲ್ಲಿ ನಡೆದ ಬಿಜನ್ ಎಂಬ ಕೊಲೆಪಾತಕದಲ್ಲಿ ತೀರಿಹೋದರೋ ಎಂಬುವದನ್ನು ಸ್ಪಷ್ಟಪಡಿಸಬೇಕಾಗಿತ್ತು. ಷಹರಿನಲ್ಲಿ ಕೊಲೆಪಾತಕದಿಂದ ತೀರಿಹೋದ ಜನಗಳ ಸಂಖ್ಯೆಯು ಸೇರಿ 5000 ಒಟ್ಟು ಸಂಖ್ಯೆ ಆಗಿರಬಹುದು. ಆದರೆ ಇದು ಸ್ಪಷ್ಟವಾಗಿಲ್ಲ. ಡಾ. ಲೋಸಾಹೇಬನಂತೂ, ಝಾಂಸಿಯಲ್ಲಿ ಹುಷ್ಕಳ ಜನಗಳ ಪ್ರಾಣ ಹಾನಿಯಾಯಿತೆಂತ ತಾತ್ಪರ್ಯವುಳ್ಳ ವರ್ಣನೆಯನ್ನು ಮಾಡಿರುತ್ತಾನೆ.

"In Jhansi we burnt and buried upwards of a thousand bodies, and if we take into account the constant fighting carried since investment and the battle of the Betwa, I fancy I am not far wrong when I say I believe *we must have slain* 3,000 of the enemy."

*Central India P.* 261.

* ಝಾಂಸಿಯಲ್ಲಿ ಇಂಗ್ರೇಜಿ ಶಿಪಾಯಿಗಳು ಮಾಡಿದ ಕೊಲೆಪಾತಕದ ವಿಷಯದಲ್ಲಿ ಅಥವಾ ಲೂಟಿಯ ಸಮ್ಮಂಧದಲ್ಲಿ ಮ್ಯಾಲಿಸನ್ ಮುಂತಾದ ಇಂಗ್ರೇಜಿ ಇತಿಹಾಸಕಾರಕ ಪ್ರಭೃತಿಗಳು ಚಕಾರಶಬ್ದ ಕೂಡ ಹೇಳುವದಿಲ್ಲ. ಡಾ. ಲೋಸಾಹೇಬನು ಮಾತ್ರ ಅದನ್ನು ಕುರಿತು ಆಗಾಗ್ಯೆ ವರ್ಣನೆ ಮಾಡಿರುತ್ತಾನೆ ಮತ್ತು ಮಿ. ಮಾರ್ಟಿನ್ ಸಾಹೇಬನು ಆಸಮ್ಮಂಧದಲ್ಲಿ ಸ್ವಲ್ಪದಲ್ಲಿಯೇ ವರ್ಣನೆ ಮಾಡಿದ್ದಾನೆ. ಆತನು ಹೇಳುವದೇನಂದರೆ:—

"On the 4th of April, the fort and remainder of the city were taken possession of by the troops, who, maddened by the re-collection of the massacre committed there, and by the determined resistance of the people, *committed fearful slaughter*. No less than 5,000 persons are stated to have perished at Jhansi, or to have been cut down by the flying Camps + + + The plunder obtained in the fort and town is said to have been *very great*."

*Martin's Indian Empire P.* 485.

# ೧೩ನೇ ಪ್ರಕರಣ.

## ಕುಂಚ ಮತ್ತು ಕಾಲ್ಪಿಯಲ್ಲಿನ ಯುದ್ಧ.



ಮಹಾರಾಣಿ ಲಕ್ಷ್ಮೀಬಾಯಿ ಸಾಹೇಬಳು, ಝಾಂಸಿಯಿಂದ ಹೊರಟುಹೋದ ನಂತರ, ತನ್ನ ಸಂಗಡ 10, 15 ಸವಾರರುಗಳ ಸಹಿತ ಕುದುರೆಗಳನ್ನು ಬಲವಾಗಿ ಓಡಿಸಿಕೊಳ್ಳುತ್ತಾ, ಮಾರನೆದಿವಸ ಬೆಳಿಗ್ಗೆ, ಝಾಂಸಿಯ ಸರಹದ್ದಿನ ಭಾಂಡೇರಿಯೆಂಬ ಒಂದು ಊರಿಗೆ ಬಂದಳು. ಅಲ್ಲಿಗೆ ತಲ್ಪುತ್ತಲೆ, ಆಕೆಯು ಕುದುರೆಯಿಂದ ಕೆಳಗೆ ಇಳಿದು, ಪ್ರಾತರ್ವಿಧಿಯನ್ನು ಮಾಡಿದಳು; ಮತ್ತು ಅಲ್ಲಿನ ರೆವೆನ್ಯೂ ಉದ್ಯೋಗಸ್ಥನ ದರ್ಶನವನ್ನು ತೆಗೆದುಕೊಂಡು, ಅವನ ಕಡೆಯಿಂದ ಶ್ರೀಮಂತ ದಾಮೋದರ ರಾಯನಿಗೆ ಫಲಹಾರಕ್ಕೆ ಹಾಕಿಸಿದಳು. ಇತ್ತಲಾಗಿ ಝಾಂಸಿಯಲ್ಲಿ ಇಂಗ್ರೇಜಿ ಸೈನ್ಯದಲ್ಲಿ, ರಾಣಿಸಾಹೇಬಳು ಕೋಟೆಯಿಂದ ಹೊರಟುಹೋದ ವರ್ತಮಾನವು ತತ್‌ಕ್ಷಣವೆ ಹರಡಿಹೋಗಿ ಸರ್ವ ಇಂಗ್ರೇಜಿ ಅಧಿಕಾರಿಗಳು ಆಶ್ಚರ್ಯಪಟ್ಟು, ರಾಣಿಸಾಹೇಬಳ ಬೆನ್ನಟ್ಟಿಹೋಗುವದಕ್ಕೆ ಅನೇಕ ಉಪಾಯವನ್ನ ಮಾಡುವದಕ್ಕೆ ಮಾರ್ಗ ಹುಡುಕಲು ಪ್ರಾರಂಭಿಸಿದರು. ಸರ್‌ಹ್ಯೂರೋಸ್ ಸಾಹೇಬನು, ಲೆ. ಬೌಕರ್‌ಸಾಹೇಬನ ಕೈಕೆಳಗೆ ನಿಜಾಂ ಸರ್ಕಾರದ ಇರಸಾಲೆಯೊಳಗಿನ ರಣಶೂರಸವಾರರ ಒಂದು ಪಟಾಲಂನ್ನು ಆರಿಸಿಕೊಟ್ಟು, ಕಾಲ್ಪಿ ಮಾರ್ಗದ ಕಡೆಗೆ ಕಳುಹಿಸಿದನು. ಲೆ. ಬೌಕರ್ ಸಾಹೇಬನು ಕುದುರೆಯಮೇಲೆ ಕೂಡುವದರಲ್ಲಿ ತುಂಬಾ ಘಟಗನಾಗಿದ್ದಕಾರಣ, ಅವನು ಸರಿಯಾದ ಸವಾರರುಗಳನ್ನು ತೆಗೆದುಕೊಂಡು, ರಾಣಿಸಾಹೇಬಳ ಬೆನ್ನಟ್ಟಿ ಹೋಗುವದಕ್ಕಾಗಿ, ನೆಟ್ಟಗೆ ಭಂಡೇರಿ ಪರ್ಯಂತರ ಬಂದನು; ಮತ್ತು ತನ್ನ ಸೈನ್ಯ ಸಹಿತ ಯೆರಡನೇ ದಿವಸ ಬೆಳಿಗ್ಗೆ, ಆವೂರಿನ ಸರಹದ್ದಿಗೆ ಬಂದು ಸೇರಿದನು. ಆ ಸಮಯದಲ್ಲಿ, ರಾಣಿಸಾಹೇಬಳು ದಾಮೋದರರಾಯನನ್ನು ಸಂಗಡ ಕರೆದುಕೊಂಡು, ಕಾಲ್ಪಿಕಡೆಗೆ ಪ್ರಯಾಣ ಮಾಡುವದಕ್ಕೆ ಸನ್ನದ್ಧಳಾಗುತ್ತಿದ್ದಳು. ಆಗ ಪಹರೆಯಮೇಲಿದ್ದ ಶಿಪಾಯಿಗಳು, ಇಂಗ್ರೇಜಿ ಸವಾರರು ಬಂದ ವರ್ತಮಾನವನ್ನ ಆಕೆಗೆ ಕೊಟ್ಟರು. ಆ ಸಮಯದಲ್ಲಿ ರಾಣೀಸಾಹೇಬಳ ಹತ್ತಿರ ಸೈನ್ಯ ಮುಂತಾದ್ದು ಶುದ್ಧಾಂಗವಾಗಿರಲಿಲ್ಲ. ಸಂಗಡ ಬಂದ 10,15 ಸವಾರರು ಮಾತ್ರ ಇದ್ದರು. ಆದಾಗ್ಯೂ ಆಕೆಯು ಧೈರ್ಯಗೆಡದೆ, ಸೊಂಟವನ್ನು ಕಟ್ಟಿಕೊಂಡು, ಹುಡುಗನನ್ನ ಬೆನ್ನುಹಿಂದೆ ಕಟ್ಟಿಕೊಂಡು, ತನ್ನ ದಿವ್ಯ ಕುದುರೆಯಮೇಲೆ ಹತ್ತಿ, ಕೂತುಕೊಂಡಳು; ಮತ್ತು ದೊಡ್ಡ ಆವೇಶದಿಂದ, ತನ್ನ ಶಸ್ತ್ರವನ್ನ ಒರೆಯಿಂದ ಹಿರಿದು, ಕೈಯಲ್ಲಿ ತೆಗೆದುಕೊಂಡಳು. ಇತ್ತಲಾಗಿ ಇಂಗ್ರೇಜಿ ಸವಾರರೂಕೂಡ,

ಬಹಳ ಶಿಸ್ತಿನಿಂದಲೂ ಮತ್ತು ತ್ವರಿತದಿಂದಲೂ ರಾಣಿಸಾಹೇಬಳನ್ನ ಹಿಡಿಯುವದ ಕ್ಕಾಗಿ, ಪ್ರಯಾಣಮಾಡಿ ಬಂದರು. ಈ ಪ್ರಸಂಗವು ರಾಣಿಸಾಹೇಬಳ ಯುದ್ಧ ಕೌಶ ಲ್ಯದ ಪೂರ್ಣಪರಿಕ್ಷೆ ಯಾಗುವದಕ್ಕಾಗಿಯೇ ನಡದದ್ದುಯಂತ ಹೇಳಬಹುದಾಗಿದೆ. ಲೆ. ಬೌಕರ್ ಸಾಹೇಬನಂಥ ರಣಶೂರನು ನಾನುಮುಂದೆ ನಾನುಮುಂದೆ ಯೆಂಬ ನಿಜಾಂ ಸರ್ಕಾರದ ಆರಿಸಿ ತೆಗದ ಸವಾರರು ಸಹಿತ ತನ್ನ ಮೇಲೆ ಪ್ರಯಾಣಮಾಡಿ ಬರುತ್ತಾನೆ; ಮತ್ತು 10, 12 ಸವಾರರುಗಳ ಸಹಿತ ಪ್ರಯಾಣಮಾಡುತ್ತಿದ್ದ ಒಬ್ಬ ಸ್ತ್ರೀಯು ಆತನಿಗೆ ಆಸ್ಪದಕೊಡದೆ, ಆತನಕೈಯಿಂದ ತಪ್ಪಿಸಿಕೊಂಡು ಹೋಗುವ ಪ್ರಯತ್ನ ಮಾಡುತ್ತಾ ಇದ್ದಾಳೆಯಂಬ ಈ ಮಾತು, ಸ್ವಲ್ಪ ನೋಡುವದ್ದರಿಂದಲೇ ಬಹಳ ಚಮ ತ್ಕಾರವಾದದ್ದಾಗಿ ಯಾರಿಗೆ ತೋರಲಿಕ್ಕಿಲ್ಲ? ಅಂಥಾಸಮಯದಲ್ಲಿ ರಾಣಿಸಾಹೇಬಳಿಗೆ ಯಶ ಸ್ಸು ಬರುತ್ತದ ಎಂತ ಆಶೆಯನ್ನು ಇಟ್ಟುಕೊಳ್ಳುವದು ಶುದ್ಧಾಂಗ ಹುಚ್ಚುತನವಾಗಿದೆ. ಹಾಗಿದ್ದಾಗ್ಯೂ ಆವಿಲಕ್ಷಣ ಧೈರ್ಯದ, ದೃಢಮನಸ್ಸಿನ ಮತ್ತು ಲೋಕೋತ್ತರ ಶೌರ್ಯ ಶಾಲಿಯಾದ ರಾಜಸ್ತ್ರೀಯು, ಆ ರಣಶೂರ ಮತ್ತು ಪರಾಕ್ರಮ ಶಾಲಿಗಳಾದ ಇಂಗ್ರೇಜಿ ಯುದ್ಧ ಶಾಲಿಗಳಿಗೆ ಮುಖ ತಗ್ಗಿಸುವ ಹಾಗೆ ಮಾಡಿಕೊಳ್ಳುವಂತೆ ಸಂಭವವನ್ನು ತಂದದ್ದು ಎಷ್ಟು ಆಶ್ಚರ್ಯಕರವಾದ ಮಾತಾಗಿದೆ, ಎಂಬುವದನ್ನು ಯೋಚಿಸತಕ್ಕದ್ದಾ ಗಿದೆ. ಲೆ. ಬೌಕರ್ ಸಾಹೇಬನು ಬಹಳ ವೇಗದಿಂದ ರಾಣೀಸಾಹೇಬಳ ಮೇಲೆ ಕುದುರೆ ಯನ್ನು ಓಡಿಸಿಕೊಂಡು ಹೋದನು. ಆಗ ರಾಣಿಸಾಹೇಬಳು ಬಹಳ ಚಮತ್ಕಾರವಾಗಿ ಅವನಮೇಲೆ ತನ್ನ ಕತ್ತಿಯಿಂದ ಒಂದು ಏಟು ಹೊಡೆದು, ಒಂದು ಕ್ಷಣಮಾತ್ರದಲ್ಲಿ ತನ್ನ ಕುದುರೆಯನ್ನು ಬಾಣದಂತೆ ಮುಂದಕ್ಕೆ ಹಾರಿಸಿದಳು. ಮತ್ತು ಮಧ್ಯದಲ್ಲಿ ಬರತಕ್ಕ ಇಂಗ್ರೇಜಿ ಸವಾರರ ಸಮಾಚಾರವನ್ನು ಚನ್ನಾಗಿ ತೆಗೆದುಕೊಂಡು, ಆಕೆಯು ಮರ್ಯಾದೆಯಿಂದ ಆ ಅಪಾಯಕಾಲವನ್ನು ದಾಟಿಹೋದಳು. ಆ ಸಮಯದಲ್ಲಿ ಆಕೆಗೆ ಯುದ್ಧದಲ್ಲಿದ್ದ ಪಾಂಡಿತ್ಯವು ಒಂದು ನಿಮಿಷದಲ್ಲಿ ಪೂರ್ಣ ಪರಿಕ್ಷೆಯಾಯಿತು. ಒಬ್ಬ ಸಂಸ್ಕೃತ ಕವಿಯು ಹೀಗೆಹೇಳಿರುತ್ತಾನೆ:—

ಶ್ಲೋ॥ ಸಂಗ್ರಾಮೆ ಸುಭಟೇಂದ್ರಾಣಾಂ ಕವೀನಾಂ ಕವಿಮಂಡಲೆ।
ದೀಪ್ತಿರ್ವಾ ದೀಪ್ತಿಹಾನಿರ್ವಾ ಮುಹೂರ್ತಾ ದೇವಜಾಯತೆ ॥ ೧॥

ಯುದ್ಧ ಸ್ಥಳದಲ್ಲಿ ದೊಡ್ಡದೊಡ್ಡ ಯುದ್ಧಶಾಲಿಗಳ, ಮತ್ತು ಕವಿಮಂಡಲಿಯಲ್ಲಿ ಕವಿಗಳ, ತೇಜಸ್ಸು ಪ್ರಕಾಶಿಸುವದು ಅಥವ ತೇಜಸ್ಸು ಹಾನಿಯಾಗುವದು, ಈ ಎರಡು ಮಾತುಗಳು ಒಂದು ಕ್ಷಣದಲ್ಲಿ ಆಗುತ್ತವೆ. ಆ ಪ್ರಕಾರವಾಗಿ ರಾಣಿಸಾಹೇಬಳ ತೇಜಸ್ಸು ಒಂದು ಕ್ಷಣದಲ್ಲಿ ಪ್ರಕಾಶಮಾನವಾಯಿತು, ಎಂಬುವದರಲ್ಲಿ ಏನೂ ಸಂಶಯ ವಿಲ್ಲ. ಇದು ಹಾಗಿರಲಿ. ಇತ್ತಲಾಗಿ ರಾಣೀಸಾಹೇಬಳು ಹೊರಟುಹೋದನಂತರ ಘಾಯ ವಾಗಿದ್ದ, ಲೆ. ಬೌಕರ್ ಮತ್ತು ಆತನ ಸವಾರರು ಹೋಗಲ್ಪಟ್ಟ ಆಸೆಯುಳ್ಳವರಾಗಿ

ಝಾನ್ಸಿಗೆ ತಿರಿಗಿಬಂದರು. * ರಾಣಿಸಾಹೇಬಳು ಬಂದೇ ಪ್ರಕಾರವಾಗಿ ಕುದುರೆಯನ್ನು ಚುರುಕುಮಾಡಿ ಓಡಿಸುತ್ತಾ, ಹೆಚ್ಚಾಗಿದ್ದರೆ, ನಾಲ್ಕು ಸವಾರರುಗಳು ಸಹಿತ ಕಾಲ್ಪಿ ಕಡೆಗೆ ಹೊರಟು ಹೋದಳು. ಆ ದಿವಸವೆಲ್ಲಾ ಮಾರ್ಗ ಪ್ರಯಾಣಮಾಡಿ, ರಾತ್ರೆ ಹನ್ನೆರಡುಘಂಟೆ ಸುಮಾರಿಗೆ ಕಾಲ್ಪಿಗೆ ಹೋಗಿ ಸೇರಿದಳು. ಅನ್ನನೀರಿಲ್ಲದೆ ಇಪ್ಪತ್ತು ನಾಲ್ಕು ತಾಸುಗಳಿದ್ದು ಮತ್ತು ಹುಡುಗನ ಭಾರವನ್ನು ಬೆನ್ನುಹಿಂದೆ ತೆಗೆದುಕೊಂಡು ಬಂದೇ ಪ್ರಕಾರವಾಗಿ ನೂರೆರಡು ಮೈಲಿಗಳ ದಾರಿ ನಡದು ಹೋದದ್ದು ಸಾಮಾನ್ಯವಾದ ಮಾತಲ್ಲ. ಇದರಿಂದ ಬಾಯಿಸಾಹೇಬಳ ಮನೋನಿಗ್ರಹ, ಸ್ಥೈರ್ಯ, ಮತ್ತು ಕುದುರೆಯ ಮೇಲೆ ಕೂಡತಕ್ಕ ಶಕ್ತಿ ಇವುಗಳು ಚನ್ನಾಗಿ ಸ್ಪಷ್ಟವಾಗುತ್ತವೆ.

ಕಾಲ್ಪಿಯು, ಯಮುನಾನದಿಯ ದಂಡೆಯಮೇಲೆ ಇರತಕ್ಕ ಸಣ್ಣದಾದ ಇನ್ನೊಂದು ಪಟ್ಟಣವಾಗಿದೆ. ಯಮುನಾ ನದಿಯು ಉತ್ತರ ದಕ್ಷಿಣವಾಗಿ ಹರಿಯುತ್ತಿದ್ದು, ಅದರ ಪಶ್ಚಿಮ ಮೂಲೆಯಮೇಲೆ ಕಾಲ್ಪಿ ಕೋಟೆಯು ಕಟ್ಟಲ್ಪಟ್ಟಿದೆ. ಅದಕ್ಕೆ ಮೂರು ದಿಕ್ಕುಗಳಲ್ಲಿಯೂ ಬಹಳ ಬಲವಾದ ಗೋಡೆಯಿದ್ದು, ನಾಲ್ಕನೆದಿಕ್ಕಿಗೆ ಆಳವಾದ ಯಮುನಾ ನದಿಯ ಪ್ರವಾಹವು ಹರಿಯುತ್ತಿದೆ. ಆದಕಾರಣ ಈ ಕೋಟೆಯು ಬಹಳ ಶೋಭಾಯಮಾನವಾಗಿಯೂ ಮತ್ತು ಬಲವಾಗಿಯೂ ಇದೆ. ಕೋಟೆಯ ಪಶ್ಚಿಮ ದಿಕ್ಕಿಗೆ ಬಯಲು ಜಾಗವಿದ್ದು ಅದರ ಆಚೆಯಕಡೆಗೆ ಪಟ್ಟಣವಿರುತ್ತದೆ. ಕಾಲ್ಪಿಯಲ್ಲಿ ಸಕ್ಕರೆ ವ್ಯಾಪಾರವು ಬಹಳ ಹೆಚ್ಚಾಗಿ ನಡೆಯುವದರಿಂದ ಅಲ್ಲಿ ದೊಡ್ಡದೊಡ್ಡ ವ್ಯಾಪಾರಿಗಳ ಭಾರಿಭಾರಿ ಮನೆಗಳು ಪುಷ್ಕಳವಾಗಿವೆ; ಮತ್ತು ರಾಜಮಾರ್ಗವು ತುಂಬಾ ಅಗಲವಾಗಿದೆ. ಯಮುನಾ ನದಿಯು ಬಹಳ ಆಳವಾಗಿರೋಣದರಿಂದ, ಪಟ್ಟಣದ ಭಾವಿಗಳು

---

* ಈ ಪ್ರಸಂಗದ ವರ್ಣನೆಯನ್ನು ಇಂಗ್ರೇಜಿ ಗ್ರಂಥಕಾರರು ವಿಸ್ತಾರವಾಗಿ ಮಾಡುವದಿಲ್ಲ. ಮಾರ್ಟಿನ್ ಸಾಹೇಬನು ಮಾತ್ರ ಇಷ್ಟೇ ಬರೆದಿರುತ್ತಾನೆ.

"She was pursued, and nearly overtaken. Lieutenant Bowker, with a party of Cavalry, followed her to Bundere, twenty one miles from Jhansi; and there saw a tent, in which was spread an unfinished breakfast. Pressing on, he came in sight of the Ranee, who was escaping on a grey horse, with four attendants: but at this point he was severely wounded, and compelled to relinquish the pursuit."

*British India P.* 485.

ಸಹ ಬಹಳ ಆಳವಾಗಿವೆ. ಈ ಪಟ್ಟಣವು ಬಾದಶಹನ ಕಾಲದಿಂದಲೂ ಬಹಳ ಇತಿಹಾಸ ಪ್ರಸಿದ್ಧವಾಗಿದೆ. ಇಲ್ಲಿ ಒಂದು 'ಚೌರ್‍ಯಾಸಿ ಗುಂಟಾಚೆ ಮೈದಾನ್' ಎಂದು ಪ್ರಸಿದ್ಧವಾದ ರಣಭೂಮಿಯಿದೆ. ಅಲ್ಲಿ ಬಾದಶಹನ ಕಾಲದಲ್ಲಿ ಒಂದು ಯುದ್ಧನಡೆದಿತ್ತು. ಅದರಲ್ಲಿ ಬಾದಶಹನ 85 ಪ್ರಸಿದ್ಧವಾದ ಸರದಾರರುಗಳು ಸತ್ತುಹೋಗಿ, ನಂತರ ವಿಜಯುಶ್ರೀಯಳು ಪ್ರಾಪ್ತಳಾಗಿದ್ದಳು, ಎಂಬುವದರಿಂದ ಬಾದಶಹನು ಆ 84 ಸರದಾರರುಗಳ ಸಮಾಧಿಯ ಮೇಲೆ ಸುಣ್ಣದಗಾರೆಯಿಂದ ಬಲವಾದ ಮತ್ತು ಸುಂದರವಾದ ಗೋರಿಗಳನ್ನು ಕಟ್ಟಿ, ಅವರ ಹೆಸರು ಬಹುಕಾಲದವರೆಗೂ ಜ್ಞಾಪಕವಿರುವಂತೆ ಮಾಡಿದ್ದಾನೆ. ಆ ರಣಾಂಗಣಕ್ಕೆ 84 ಗೋರಿಗಳಲ್ಲಿನ ಎತ್ತರವಾದ ಕಟ್ಟಡಗಳಿಂದ ಬಹಳ ಶೋಭಾಯಮಾನವಾಗಿತ್ತು. ಆದ್ದರಿಂದ ಅದಕ್ಕೆ 84 ಗೋರಿಗಳುಳ್ಳ ಬೈಲ್ ಎಂತ ಹೆಸರಾಗಿದೆ. ಮುಂದೆ ಅದು ಆ ಸಂಸ್ಥಾನದ ವಂಶಜ ಝಾಲವಾಣದ ಜಹಗೀರ್‌ದಾರ್ ನಾನಾಗೋವಿಂದರಾವ್ ಕಡೆಗೆ ಇತ್ತು. ಅನಂತರ 1806 ನೇ ಇಸವಿಯಲ್ಲಿ ಬ್ರಿಟಿಷ್ ಸರಕಾರದವರು, ಝಾಲವಾಣದ ಸಂಸ್ಥಾನಿಕರ ಸಂಗಡ ತಹಮಾಡಿಕೊಂಡು ಅದನ್ನು ತಮ್ಮ ಅಧೀನಕ್ಕೆ ತೆಗೆದುಕೊಂಡರು. ಆಗನಿಂದ ಅದು ಅವರ ಅಧೀನದಲ್ಲಿಯೆ ಇತ್ತು. ಮಧ್ಯಕಾಲದಲ್ಲಿ 1825 ನೇ ಇಸವಿಯಲ್ಲಿ ನಾನಾ ಪಂಡಿತನು ದಂಗೆಮಾಡಿ, ಅದನ್ನು ತನ್ನ ಅಧೀನಕ್ಕೆ ತೆಗೆದುಕೊಂಡಿದ್ದನು. ಆದರೆ ಆ ಸಮಯದಲ್ಲಿ ಬ್ರಿಟಿಷ್ ಸರಕಾರದವರು, ಝಾನ್ಸಿ ಸುಬೇದಾರ್ ರಾಮಚಂದ್ರರಾಯನ ಸಹಾಯ ತೆಗೆದುಕೊಂಡು, ಪುನಃ ಅದನ್ನು ಸಂಪಾದಿಸಿಕೊಂಡರು. ಮುಂದೆ ಸನ್ 1857 ನೇ ಇಸವಿ ಜೂನ್ ತಿಂಗಳು 12 ನೇ ತಾರೀಖಿನಲ್ಲಿ ಝಾನ್ಸಿಮತ್ತು ಕಾಲ್ಪಿಯಲ್ಲಿನ ದಂಗೇಖೋರ ಜನಗಳು ಕಾಲ್ಪಿಗೆಬಂದರು. ಆಗ ಅಲ್ಲಿನ ಸೈನ್ಯದವರು ದಂಗೇಮಾಡಿ ಕಾಲ್ಪಿ ಡೆಪ್ಟಿಕಲೆಕ್ಟರ್ ಮುನಿಷಿ ಶಿವಪ್ರಸಾದನನ್ನ ಓಡಿಸಿ ಬಿಟ್ಟು, ಕಾಲ್ಪಿಪಟ್ಟಣವನ್ನು ತಮ್ಮ ಸ್ವಾಧೀನಕ್ಕೆ ತೆಗದುಕೊಂಡುಬಿಟ್ಟರು. ಆಗಿನಿಂದ ಅಲ್ಲಿ ಬ್ರಿಟಿಷ್ ರಾಜಸತ್ವವು ನಷ್ಟವಾಗಿಹೋಗಿ, ಅಲ್ಲಿ ದಂಗೇಜನಗಳ ಆಳ್ವಿಕೆಯು ನಡೆಯುತ್ತಿತ್ತೆಂತ ಹೇಳಿದರೂನೂ ಸರಿಯಿರಬಹುದು. ಶ್ರೀಮಂತ ನಾನಾಸಾಹೇಬ್ ಪೇಷ್ವೆಯಬಂಧುವಾದ ರಾವ್ ಸಾಹೇಬನು, ಕಾಲ್ಪಿಪಟ್ಟಣವು ಬುಂದೇಲ್‌ಖಂಡದ ಮಧ್ಯದಲ್ಲಿದ್ದು ಅಲ್ಲಿನ ಕೋಟೆಯು ಬಳ್ಳೇ ಬಲವಾಗಿದೆ ಎಂಬುವದನ್ನು ನೋಡಿ, ತನ್ನ ಸೈನ್ಯಸಹಿತ ಅಲ್ಲಿಗೆಬಂದು ಇದ್ದನು. ಆದಕಾರಣ ಅಲ್ಲಿ ದಂಗೇಖೋರರರ ಗುಂಪು ಬಹಳವಾಗಿ ಸೇರಿ, ಮದ್ದುಗುಂಡು ಮುಂತಾದ ಯುದ್ಧ ಸಾಮಗ್ರಿಗಳು ಅವರಿಗೆ ಚನ್ನಾಗಿ ಒದಗಿದ್ದವು. ಈ ಕಾರಣದಿಂದ ರಾಣೀಸಾಹೇಬಳಿಗೆ, ಕಾಲ್ಪಿಗೆ ಹೋಗಿ ಶ್ರೀಮಂತ ರಾವ್ ಸಾಹೇಬ್ ಪೇಷ್ವೆಯ ಭೇಟಿ ಮಾಡಿಕೊಳ್ಳದೆ ಬೇರೇ ಯಾವಮಾರ್ಗವೂ ಇಲ್ಲವೆಂತ ತೋರಿ, ಅವಳು ಕಾಲ್ಪಿಗೆ ಹೋಗಿ ತಲಪಿದಳು.

ರಾಣಿಸಾಹೇಬಳು ಕಾಲ್ಪಿಯಲ್ಲಿ ಅರ್ಧರಾತ್ರೆಯಲ್ಲಿ ಇಳಿದಮೇಲೆ, ಪೇಷ್ವೆಯ ಹತ್ತಿರದ್ದ ಪಹರೇಸವಾರ ಜನರಿಗೆ ತಿಳಿಸಿ, ಅಶ್ವಾಲಯಕ್ಕೆ ಹೋದಳು; ಮತ್ತು ಕುದುರೆಯಿಂದ

ಇಳಿದು ಅಲ್ಲಿ ಆಕೆಯು ಪ್ರಾತಃಕಾಲದವರೆಗೂ ವಿಶ್ರಾಂತಿ ತೆಗದುಕೊಂಡಳು.* ಆಕೆಯ ಕುದುರೆಯು ಆದಿವಸ ಬಹಳ ಉತ್ತಮವಾದ ಸೇವಾಮಾಡಿದ್ದಕಾರಣ, ಅದು ಕೇವಲ ದಣಿದು ಹೋಗಿತ್ತು. ಅದು ಲಾಯಕ್ಕೆ ಹೋದಕೂಡಲೆ ಭೂಮಿಯಮೇಲೆ ಬಿತ್ತು. ಅವರಮೇಲೆ ಬಾಯಿಸಾಹೇಬಳಿಗೆ ಅತಿಶಯ ಪ್ರೇಮವಿದ್ದಕಾರಣ, ಆಕೆಯು ಕೂಡಲೆ 7, 8 ಶಿಪಾಯಿಗಳನ್ನ ಅದರ ಮೈ ತಿಕ್ಕುವದಕ್ಕೆ ಹಚ್ಚಿದಳು. ಅದರ ಯೋಗದಿಂದ, ಆ ಕುದುರೆಯ ಶ್ರಮ ಪರಿಹಾರವಾಗಿ ಹೋಗಿ, ಪೂರ್ವದಂತೆ ಸ್ವಸ್ಥವಾಯಿತು. ಇದು

---

* ಉಜ್ಜನ ಪುಸ್ತಕದಲ್ಲಿ ಮುಂದೆ ಹೇಳಿರುವಪ್ರಕಾರ ತಿಳುವಳಿಕೆ ಕೊಟ್ಟಿರುತ್ತೆ:

"ಬಳಗೆ ಹೋದನಂತರ ರಾತ್ರಿಯು ಬಹಳವಾಗಿ ಉಳಿದದ್ದರಿಂದ ಬಾಯಿಸಾಹೇಬಳು ತಾನು ಬಂದ ವರ್ತಮಾನವನ್ನು ಶ್ರೀಮಂತನಿಗೆ ತಿಳಿಸಲಿಲ್ಲ. ಬೆಳಗಾದಮೇಲೆ ಮುಖಪ್ರಕ್ಷಾಳನೆ ಮುಂತಾದ ವಿಧಿಗಳನ್ನು ತೀರಿಸಿಕೊಂಡು, ಪೇಷ್ವೆಯನ್ನು ಹ್ಯಾಗೆ ಕಾಣಬೇಕೆಂತ ಯೋಚಿಸುತ್ತಿದ್ದಳು. ಸ್ತ್ರೀಧರ್ಮ ಪ್ರಕಾರ ಅವಳಿಗೆ ಅಸ್ಪರ್ಶದಶಾ ಪ್ರಾಪ್ತವಾಯಿತು. ಆ ಸಮಯದಲ್ಲಿ ಬಾಯಿಸಾಹೇಬಳ ಅಂತಃಕರಣವಲ್ಲಿ ಮೊದಲಿಗಿಂತಲೂ ಹತ್ತರಷ್ಟು ದುಃಖ ಬಂತು. ಸ್ತ್ರೀಯರು ಎಷ್ಟು ಶೌರ್ಯಮಾಡಿದಾಗ್ಯೂ ಪ್ರಯೋಜನವೇನು ? ಸಮಯದಲ್ಲಿ ಘಾತುಕವಾದ ಅವರ ಶರೀರ ಧರ್ಮವು ಅವರನ್ನು ದುಃಖಾಗ್ನಿಯಲ್ಲಿ ಹಾಕಲು ಶಕ್ತಿಯುಳ್ಳದ್ದಾಗಿದೆ. ಆ ಸಮಯದಲ್ಲಿ ಬಾಯಿಸಾಹೇಬಳ ಹತ್ತರ ಹೆಂಗಸರ ಬಟ್ಟೆಯೊಂದೂ ಇಲ್ಲದಿದ್ದಕಾರಣ ಬೆಂಕಿಯಲ್ಲಿ ಎಣ್ಣೆಯನ್ನು ಹಾಕಿದಹಾಗೆ ಆಕೆಯ ದುಃಖವು ತುಂಬಿಹೋಯಿತು. ಆ ಸಮಯದಲ್ಲಿ ಆಕೆಯ ಮೈಮೇಲಿನ ಬಟ್ಟೆಗಳೆಲ್ಲಾ ಗಂಡಸರು ಹಾಕಿಕೊಳ್ಳತಕ್ಕದ್ದಾಗಿತ್ತು. ಆದ್ದರಿಂದ ಆಕೆಗೆ ಬಹಳ ಸಂಕಟವು ಒದಗಿತು. ಅವಳ ಹತ್ತರ ವಸ್ತ್ರ ತೆಗೆದುಕೊಳ್ಳುವದಕ್ಕೆ ದ್ರವ್ಯವೂ ಯಿರಲಿಲ್ಲ. ಪೇಷ್ವೆಯ ಹತ್ತರ ಶೀರೆಯನ್ನು ಕೇಳಬೇಕೆಂದರೆ, ಆ ಗೌರವವಾದ ಸ್ತ್ರೀಗೆ ಕೇವಲ ಜೀವದಮೇಲಿನ ಮಾತಾಗಿತ್ತು. ಅಂಥಾ ಸಮಯದಲ್ಲಿ, ಬಾಯಿಸಾಹೇಬಳಿಗೆ ಉಂಟಾದ ದುಃಖವನ್ನ ವರ್ಣಿಸಲಸಾಧ್ಯವಾಗಿದೆ. ಇದು ಹಾಗಿರಲಿ. ಬಾಯಿ ಸಾಹೇಬಳ ಆಗಮನ ವರ್ತಮಾನವು ಶ್ರೀಮಂತ ರಾವ್ ಸಾಹೇಬ್ ಪೇಷ್ವೆಗೆ ತಿಳಿಯ ಬಂತು. ಆಗ ಆವನು ತಾತ್ಯಾ ಟೋಪಿಗೆ ಆಕೆಯನ್ನ ಸರಿಯಾಗಿ ಇಡುವದಕ್ಕೋಸ್ಕರ ಕಳುಹಿಸಿಕೊಟ್ಟನು. ತಾತ್ಯಾನು ಆಕೆಗೆ ಶೀರೆ ಮುಂತಾದ್ದನ್ನು ಮೈದು ಕೊಟ್ಟು 15 ಜನಗಳಿಗೆ ಅನ್ನಬೆಯ್ಯಬಹುದಾದಂಥಾ ತಪ್ಪೇಲಿ, ಬೆಳ್ಳೀ ಪಾತ್ರೆಗಳು, ಸ್ವಯಂಪಾಕಿ, ಪರಿಚಾರಕನು, ಡೇರೆ, ಕನಾತು, ಹಾಸಿಗೆ, ಹೊದ್ದಿಕೆ, ಚಾಕರಿವಾ ಶೇವಕರು ಮುಂತಾದ ಸರ್ವ ವ್ಯವಸ್ಥೆಯನ್ನೂ ಸರಿಯಾಗಿ ಮಾಡಿಕೊಟ್ಟನು. ಅನಂತರ ಶ್ರೀಮಂತನಿಗೆ ಈ ಸಮಾಚಾರವೆಲ್ಲಾ ತಿಳಿದು, ಸಮಾಧಾನದಿಂದ ಆಕೆಯ ಭೇಟಿ ತೆಗೆದುಕೊಂಡು, ಮುಂದೆ ಮಾಡಬೇಕಾದದ್ದನ್ನ ನಿಶ್ಚಯಿಸಿದನು."

ಹಾಗಿರಲಿ.ವ ಎರಡನೇದಿವಸ ಪದ್ಧತಿ ಪ್ರಕಾರ ಬಾಯೀಸಾಹೇಬಳಿಗೂ ಮತ್ತು ಶ್ರೀಮಂತ ರಾವ್‌ಸಾಹೇಬ್‌ಗೂ ಪೇಷ್ವೆ ಭೇಟಿಯಾಯಿತು. ರಾಣಿಸಾಹೇಬಳು ಕಣ್ಣುಗಳಲ್ಲಿ ನೀರು ತುಂಬಿಕೊಂಡು, ತನ್ನ ಶಸ್ತ್ರವನ್ನ ಶ್ರೀಮಂತನಮುಂದೆ ಇಟ್ಟು, ಹೇಳಿದ್ದೇನಂದರೆ, "ನಿಮ್ಮ ಪೂರ್ವಜನರು ಈ ಶಸ್ತ್ರವನ್ನ ನಮಗೆ ಕೊಟ್ಟಿದ್ದರು. ಅದರ ಪುಣ್ಯಪ್ರತಾಪದಿಂದ ಇವತ್ತಿನವರೆಗೂ ಅದರ ಪ್ರಯೋಜನವನ್ನ ನಾವು ಚನ್ನಾಗಿ ಹೊಂದಿದೆವು. ಈಗ ನಮಗೆ ನಿಮ್ಮ ಸಹಾಯ ವುಳಿಯಲಿಲ್ಲ. ಆದಕಾರಣ ನೀವು ಇದನ್ನ ಹಿಂದಕ್ಕೆ ತೆಗದು ಕೊಳ್ಳಬೇಕು." ಬಾಯಿಸಾಹೇಬಳ ಈ ಚತುರವಾದ ಮಾತನ್ನು ಕೇಳುತ್ತಲೆ, ಶ್ರೀಮಂತನಿಗೆ ಬಹಳ ವ್ಯಸನವಾಯಿತು. ಆತನು ಝಾಂಸಿಯ ಯುದ್ಧ ಸಮಯದಲ್ಲಿ, ರಾಣಿಸಾಹೇಬಳಿಗೆ ತನ್ನ ಸೈನ್ಯದ ಸಹಾಯವೇನೂ ಆಗಲಿಲ್ಲವೆಂಬುವದಕ್ಕಾಗಿ ಬಹಳ ವಿಷಾದಪಟ್ಟನು. * ಅನಂತರ ರಾವ್‌ಸಾಹೇಬ್ ಪೇಷ್ವೆಯು ನಡೆದು ಹೋದ ಮಾತಿಗೆ ಬಹಳ ವ್ಯಸನಪಟ್ಟು, ರಾಣಿಸಾಹೇಬಳಿಗೆ ಈ ರೀತಿ ವಿನಂತಿ ಮಾಡಿಕೊಂಡನು, ' ನೀವು ಇವತ್ತಿನ ವರೆಗೂ, ಝಾಂಸಿ ಶುಬೇದಾರ ಮನೆತನದ, ಪೂರ್ವದಿಂದಲೂ ನಡೆದುಬಂದ ಪರಾಕ್ರಮವನ್ನು ತೋರಿಸಿ, ಬಹಳ ದಿವಸದವರೆಗೂ ಇಂಗ್ರೇಜಿಯವರ ಪ್ರಬಲವಾದ ಸೈನ್ಯಕ್ಕೆ ಆಸ್ಪದಕೊಡದೆ, ಕೊನೆಗೆ ಅವರ ಯೇಟನಿಂದ ಬಹಳ ಚಮತ್ಕಾರವಾಗಿ ತಪ್ಪಿಕೊಂಡು ಬಂದಿರುವದರಮೇಲೆಯೇ, ನಿಮ್ಮಯುದ್ಧ ಕೌಶಲ್ಯತೆಯ ವಿಷಯದಲ್ಲಿ ಸಂಪೂರ್ಣವಾದ ದೃಷ್ಟಾಂತ ತೋರಿದೆ. ಹೀಗಿರುವಾಗ ತಮ್ಮಂಥ ಸ್ವಾಭಿಮಾನಿಯಾದ ಸರದಾರಳು ಸೈನ್ಯವನ್ನು ನಡಸುವ ಉದ್ಯೋಗವನ್ನು ಸ್ವೀಕಾರ ಮಾಡಿದರೇನೇ ನಮ್ಮ ಉದ್ದೇಶವು ನೆರವೇರುವ ಸಂಭವವಿದೆ. ನಮ್ಮ ಪೂರ್ವಜರ ಕಾಲದಲ್ಲಿ, ಶಿಂಧೆ, ಹೋಳಕರ್, ಗಾಯಕವಾಡ್, ಬುಂದೇಲೆ, ವಿಂಚೂರ್ಕರ್, ರಾಸ್ತೆ, ಪಟವರ್ಧನ್, ಮುಂತಾದ ಸರದಾರರು ಸ್ವರಾಜ್ಯಕ್ಕೋಸ್ಕರ ತಮ್ಮ ಪ್ರಾಣಗಳನ್ನ ವೆಚ್ಚಮಾಡುವದಕ್ಕೆ ಸಿದ್ಧರಾಗಿದ್ದದರಿಂದಲೇ ಮರಾಟೆ ನಿಶಾನೆಯು ಅಟಕ್ ಪರ್ಯಂತರ ವ್ಯಾಪಿಸಿತ್ತು; ಮತ್ತು ಈಗಲಾದರೂ,

---

* ಝಾಂಸಿಗೆ ಮುತ್ತಿಗೆಹಾಕಿದ ಸಮಯದಲ್ಲಿ, ಪೇಷ್ವೆಯ ಸೈನ್ಯವು ರಾಣೀಸಾಹೇಬಳಿಗೇನೂ ಉಪಯೋಗವಾಗಲಿಲ್ಲ. ಇದರ ನಿಜವಾದ ಕಾರಣವು ಶಿಕ್ಕಲಿಲ್ಲ. ಆದಾಗ್ಯೂ, ಝಾಂಸಿ ಕೋಟೆಯೊಳಗಿನ ಜನಗಳು ಇಂಗ್ರೇಜಿ ಸೈನ್ಯದಮೇಲೆ ತೋಫು ಬಿಡಲಿಲ್ಲವಾದಕಾರಣ, ಅವರಿಗೆ ಪೇಷ್ವೆಯವರ ಸೈನ್ಯದಮೇಲೆ ಬೀಳಲು, ಒಳ್ಳೇ ಸಲಕರಣೆ ಶಿಕ್ಕಿತೆಂಬದಾಗಿ ಕೇಳಿಡು ಬರುತ್ತದೆ. ಆ ಸಮಯದಲ್ಲಿ ಕೋಟೆಯ ಬುರುಜಿನಮೇಲೆ, ಲಾಲಾತಾಬಾದಿಯೆಂಬ ಒಬ್ಬ ಸರದಾರ ನಿದ್ದನು. ಆತನು ಇಂಗ್ರೇಜಿ ಸೈನ್ಯಕ್ಕೆ ಪೇಷ್ವೆಯವರ ಸೈನ್ಯವೆಂತ ಹೇಳಿ, ಅವರಮೇಲೆ ತೋಫು ಹೊಡೆಯಲಿಕ್ಕೆ ಬಿಡಲಿಲ್ಲ. ಈ ಪ್ರಕಾರ ನಡೆದ ಸಂಗತಿಯನ್ನ 'ಗಿಲಿಯರ್' ನು ರಾಣಿ ಸಾಹೇಬಳಿಗೂ ಮತ್ತು ತಾತ್ಯಾಟೋಪಿಗೂ ನಡೆದ ಸಂಭಾಷಣೆಯಲ್ಲಿ ಹಾಕಿರುತ್ತಾನೆ. ತಾತ್ಯಾ ಟೋಪಿಯು ರಾಣಿಸಾಹೇಬಳಿಗೆ ವಿಚಾರಿಸಿದಾಗ, 'ನಾವು ನಿಮ್ಮ ಸಹಾಯಕ್ಕೆ ಸೈನ್ಯ ತೆಗದು ಕೊಂಡ

ಶೌರ್ಯ ಪರಾಕ್ರಮ ಗುಣದಲ್ಲಿ ಸುಪ್ರಸಿದ್ಧರಾದ ತಮ್ಮಂಥಾ ಸರ್ದಾರರಿಂದ ನಮಗೆ ಸಹಾಯವಾದರೇನೆ ನಮ್ಮ ಇಷ್ಟವು ಸಿದ್ಧಿಗೆ ಬರಬಹುದಾಗಿದೆ. ಆಸಕಾರಣ, ಈ ನಿಮ್ಮ ಶಸ್ತ್ರವನ್ನು ಹಿಂದಕ್ಕೆ ಕೈಗೆ ತೆಗದುಕೊಂಡು, ಅದರಿಂದ ನಮಗೆ ಉತ್ತಮವಾದ ಸಹಾಯ ಮಾಡಬೇಕು.' ರಾವಸಾಹೇಬ ಪೇಷ್ವೆಯ ಈ ವಿಧವಾದ ವಿನಯ ಪೂರ್ವಕವಾದ ವಿನಂತಿಯನ್ನು ಮನ್ನಿಸಿ, ರಾಣಿಸಾಹೇಬಳು ಪುನಹ ತನ್ನ ಶಸ್ತ್ರವನ್ನು ಸ್ವೀಕಾರ ಮಾಡಿದಳು. ವಸ್ತುತಃ, ಆಕೆಗೆ ಪ್ರಬಲ ಮಹಾ ರಣಶೂರ ಇಂಗ್ರೇಜಿಯವರ ಸಂಗಡ ಯುದ್ಧ ಮಾಡಿ, ಕಡೆಗೆ ಯೇನು ಪರಿವಸಾನವಾಗಬಹುದೆಂಬುವದು, ಝಾಂಸಿಯಲ್ಲಿನ ಯುದ್ಧವೇಳೆಯಲ್ಲಿ ಸ್ವಂತ ಅನುಭವದಮೇಲೆ ತಿಳಿದಿದ್ದಾಗ್ಯೂ, ಆಕೆಯು,

---

ಬಂದೆವು. ನಮಗೂ ಮತ್ತು ಝಾಂಸಿಗೆ ಮುತ್ತಿಗೆಹಾಕಿದ ಇಂಗ್ರೇಜಿ ಸೈನ್ಯಕ್ಕೂ ಯುದ್ಧ ಪ್ರಾರಂಭವಾಗುತ್ತಲೇ, ನೀವು ಇಂಗ್ರೇಜಿ ಸೈನ್ಯದಮೇಲೆ ತೋಫು ಹೊಡೆಯಲು ಪ್ರಾರಂಭಿಸಿದ್ದರೆ, ಅವರದ್ದೇನೂ ನಡೆಯುತ್ತಿರಲಿಲ್ಲ ; ಮತ್ತು ನಮಗೆ ಅಪಜಯವೆಂದಿಗೂ ಆಗುತ್ತಿರಲಿಲ್ಲ ; ಆಗ ರಾಣಿಸಾಹೇಬಳು ಹೀಗೆ ಉತ್ತರ ಕೊಟ್ಟಳು, 'ಆ ಸಮಯದಲ್ಲಿ ಕೋಟೆಯೊಳಗಿನ ಮುಖ್ಯ ಬ್ರಾಹ್ಮಣ ಹವಾಲ್ದಾರ್ ಲಾಲಾತಾಬಾಜಿ ಯಂಬುವನು, ನಮಗೆ ಆರೀತಿ ಮಾಡಲಿಕ್ಕೆ ಬಿಡಲಿಲ್ಲ; ಮತ್ತು ಕಡೆಯವರೆಗೂ, ಅವರು ನಿಮ್ಮಮೇಲೆ ನಿಜವಾಗಿ ಬೀಳುವದಿಲ್ಲ. ಸುಮ್ಮನೆ ನಾವು ಹೊರಗೆ ಬರಬೇಕೆಂಬುವದ್ದರಿಂದ ಬಾರು ಮಾಡುತ್ತಾ ಇದ್ದಾರೆಯಂತ ಹೇಳಿದನು.'

*The Rani. P. 260.*

ಇದರಿಂದ ಕಾಲ್ಪಿಯಲ್ಲಿ ಯೇನಾದರೂ ವಿಶ್ವಾಸಘಾತುಕತನವೋ ಅಥವ ಮೂರ್ಖತನವೋ ನಡೆಯಿತೆಂತ ತೋರಿಬರುತ್ತದೆ. ತಾತ್ಯಾಟೋಪಿಯ ಸೈನ್ಯದ ಮೇಲೆ ಇಂಗ್ರೇಜಿ ಸೈನ್ಯದವರು ಬಿದ್ದಾಗ, ಕೋಟೆಯಿಂದ ಇಂಗ್ರೇಜಿ ಸೈನ್ಯದವರ ಮೇಲೆ ತೋಫು ಬಿಡಬೇಕಾಗಿದ್ದ ಮುಖ್ಯ ಕೆಲಸವೇ ನಿಂತು ಹೋಯಿತು. ಆದಕಾರಣ ಇಂಗ್ರೇಜಿ ಸೈನ್ಯಕ್ಕೆ ಅವರನ್ನು ಜಯಿಸುವದಕ್ಕೆ ಬಳ್ಳೇ ಮಾರ್ಗವಾಯಿತು. ಈ ಮಾತು ಬೇರೆ ಒಬ್ಬ ಇಂಗ್ರೇಜಿ ಗೃಹಸ್ಥನು ಕೊಟ್ಟಿರುವ ದೃಷ್ಟಾಂತರದಿಂದ ಸ್ಪಷ್ಟವಾಗುತ್ತದೆ. ಸರಹ್ಯೂರೋಜ್ ಸಾಹೇಬನ ಸಂಗಡ ಇದ್ದ ಅಸಿಸ್ಟೆಂಟ್ ಸರ್ಜನ್ ಶಿಂಪ್ಲೇಸ್ಟರ್ ಸಾಹೇಬನು ಬರೆಯುವದೇನಂದರೆ:—

"Why the garrison did not make a sortie, and destroy our batteries, while the Peishwa's army was attempting their rescue from without, it is impossible to imagine. *Their overpowering numbers must have*

"ಹತೋವಾಪ್ರಾಪ್ಸ್ಯೇಸೆ ಸ್ವರ್ಗಂ ಜಿತ್ವಾವಾ ಭೋಕ್ಷ್ಯಸೆಮಹೀಂ," ಇಂಥಾ, ಭಗವಂತನ, ವಾಕ್ಯಪ್ರಕಾರ ಇಂಗ್ರೇಜಿ ಸೈನ್ಯದ ಸಂಗಡ ಯುದ್ಧಮಾಡುವದಕ್ಕೆ ಸಿಜ್ಜಯಾಮಾಡಿದಳು; ಮತ್ತು ಕಾಲ್ಪಿಯಲ್ಲಿ ಕೇರಿದ ಸರ್ವ ಸೈನ್ಯದ ಆಧಿಪತ್ಯವನ್ನು ಸ್ವತಃ ಸ್ವೀಕಾರ ಮಾಡಿ, ಸೈನ್ಯದ ಸಿದ್ಧತೆಯ ವ್ಯವಸ್ಥೆಯನ್ನು ಸರಿಯಾಗಿ ನಡಿಸಿದಳು. ಝಾಂಸಿಯ ಶೂರ ರಾಣಿಸಾಹೇಬಳು, ರಾವ್‌ಸಾಹೇಬ್ ಪೇಷ್ವೆಯ ಹತ್ತರ ಬಂದು ಕೇರಿದ್ದಾಳೆ ಮತ್ತು ಆಕೆಯು ಕಾಲ್ಪಿಯಲ್ಲಿ ಪೇಷ್ವೇ ಸೈನ್ಯದ ವ್ಯವಸ್ಥೆಯನ್ನು ಸರಿಪಡಿಸುತ್ತಿದ್ದಾಳೆಂತ ತಿಳಿಯುತ್ತಲೆ, ಬಾಂದೇವಾಲೆ ನವಾಬ್, ಬಾಣಪುರದ ಬುಂದೇಲೆ ರಾಜನು ಮತ್ತು ಇತರ, ಯುದ್ಧಕ್ಕೆ ಶಿದ್ಧರಾಗಿದ್ದ ಸಂಸ್ಥಾನಿಕರು ಮತ್ತು ಇತರ ಸರದಾರರು ತಮ್ಮ ಸೈನ್ಯವನ್ನು ಕಾಲ್ಪಿಗೆ ಕಳುಹಿಸುವದಕ್ಕೆ ಪ್ರಾರಂಭಿಶಿದರು, ರಾವ್‌ಸಾಹೇಬ್ ಪೇಷ್ವೆಯು ಗ್ವಾಲಿಯರ್ ಕಂಟಿಂಜೆಂಟಿನ ಸೈನ್ಯ, ಆಫರ್ಗ ಜನಗಳು, ಕುದುರೆಯು ಸವಾರರ ಇರಸಾಲಿ, ಮತ್ತು ಇಂಗ್ರೇಜಿಯವರಿಗೆ ವಿರುದ್ಧವಾಗಿದ್ದ ಸಂಸ್ಥಾನಿಕರ ಮತ್ತು ರಾಜರ ಕಡೆಯಿಂದ ಬಂದ ಸೈನ್ಯಗಳನ್ನು ಸಹ ಸೇರಿಸಿ, ಅವರಿಂದಕವಾಯಿತು ತೆಗದುಕೊಂಡು, ಅವರಮೇಲೆ ರಾಣಿ ಸಾಹೇಬ್ ಮತ್ತು ತಾತ್ಯಟೋಪಿಗೆ ಸೇನಾಧಿಕಾರಿಗಳಾಗಿ ನೇಮಿಸಿದನು. ಇದು ಹಾಗಿರಲಿ. ಈ ಪ್ರಕಾರವಾಗಿ ಕಾಲ್ಪಿಯಲ್ಲಿ ಯುದ್ಧದ ಸರ್ವ ಸಿದ್ಧತೆಗೆ ಪ್ರಾರಂಭವಾಯಿತು.

ಇತ್ತಲಾಗಿ, ಇಂಗ್ರೇಜಿ ಸೈನ್ಯದಲ್ಲಿ ಯೇನು ಸಂಭವ ನಡೆದು ಬಂತು ಯಂಬುವದನ್ನ ಹೇಳಬೇಕಾಗಿದೆ.

ಸರ್ ಹ್ಯೂರೋಜ್ ಸಾಹೇಬನು, ಝಾಂಸಿ ಸಂಸ್ಥಾನವನ್ನ ಉತ್ತಮ ರೀತಿಯಿಂದ ಭದ್ರಪಡಿಸಿದನಂತರ, ಸೂರ್ಯನ ತಾಪವು ಹೆಚ್ಚಾಗಿದ್ದದ್ದರಿಂದ ರಾತ್ರೆಯೇ ಪ್ರಯಾಣ ಮಾಡಿ, ಕಾಲ್ಪಿಯಮೇಲೆ ದಂಡೆತ್ತಿಹೋಗಲು ಅಭಿಪ್ರಾಯ ಪಟ್ಟನು. ತಾರೀಖು 25 ನೇ ದಿವಸ, ಆತನು ತನ್ನ ಸೈನ್ಯವನ್ನ ಪ್ರತ್ಯಪ್ರತ್ಯೇಕವಾಗಿ ಭಾಗಮಾಡಿ, ಅದರ ಮೇಲೆ

---

*been successful, however well our Infantry and Gunners might have stood to their* guns. They may have been deterred by a false attack made by Major Gall and Captain Field, R. A., on a distant part of the city wall."

*The Campaign in Central India P.* 101—2.

ಇದರಿಂದ ಪೇಷ್ವೆಯ ಬಲಾಢ್ಯವಾದ ಸೈನ್ಯವನ್ನು ಇಂಗ್ರೇಜಿ ಜನಗಳು ಬಹಳ ಯುಕ್ತಿಯಿಂದ ಸೋಲಿಸಿದರೆಂಬುವದು ಯಾರಿಗೆ ತಿಳಿಯಲಾರದು ?

ಮೇಜರ್ ಗಾಲ್ ಮತ್ತು ಮೇಜರ್ ಆರ್, ಈ ಎರಡುಜನ ಶೂರ ಯುದ್ಧಶಾಲಿಗಳನ್ನು ಸೇನಾಧಿಪತಿಗಳನ್ನಾಗಿ ನೇಮಿಸಿ, ಪ್ರತ್ಯ ಪ್ರತ್ಯೇಕ ಮಾರ್ಗದಿಂದ ಕಾಲ್ಪಿಯಮೇಲೆ ಪ್ರಯಾಣ ಮಾಡುವದಕ್ಕೆ ಹೊರಡಿಸಿದನು. ಆಗ ಅವರಿಗೆ ಈ ರೀತಿಯಾದ ಸಮಾಚಾರವು ಸಿಕ್ಕಿತು:—ಝಾಸಿ ರಾಣಿಸಾಹೇಬಳು ಕಾಲ್ಪಿಗೆ ಹೋದ ತರುವಾಯ, ಅಲ್ಲಿನ ಪೇಶ್ವೇ ಸೈನ್ಯವನ್ನು ಚೆನ್ನಾಗಿ ಸರಿಪಡಿಸಿ, ಬಾಂದೇವಾಲೆ ನವಾಬನ ಕಡೆಯಿಂದ ಸೈನ್ಯದ ಸಹಾಯವನ್ನು ತೆಗದುಕೊಂಡು, ಪುನಃ ಝಾಸಿ ತೆಗೆದುಕೊಳ್ಳುವದಕ್ಕೆ ಪ್ರಯತ್ನ ಮಾಡಿದ್ದಾಳೆ; ಮತ್ತು ಅದೇ ಪ್ರಕಾರವಾಗಿ, ತಾತ್ಯಾಟೋಪಿ, ಬಾಣಪುರದ ರಾಜ, ಮತ್ತು ಝಾಸಿ ರಾಣಿಸಾಹೇಬಳು ಸಹ ಪುನಃ ಸೈನ್ಯವನ್ನು ತೆಗೆದುಕೊಂಡು, ಕುಂಚ ನಗರದ ಪರ್ಯಂತರ ಬಂದು ತಲ್ಪಿದ್ದಾರೆ. ಈ ರೀತಿಯಾದ ವರ್ತಮಾನವು ತಿಳಿದಕೂಡಲೆ, ಸರ್ ಹ್ಯೂರೋಜ್ ಸಾಹೇಬನ ಮನಸ್ಸಿನಲ್ಲಿ ಬಹಳ ಚಿಂತೆಯುತ್ಪನ್ನವಾಯಿತು. ಸೂರ್ಯನ ಅತಿಶಯ ತಾಪದಿಂದ ಇಂಗ್ರೇಜಿ ಸೈನ್ಯಕ್ಕೆ ಕೇವಲ ದುರ್ದಶೆ ಬಂದಿತ್ತು; ಮತ್ತು ಅವರಿಗೆ ಕುಡಿಯುವದಕ್ಕೆ ನೀರೂ, ಕುದುರೆ, ಯೆತ್ತುಗಳಿಗೆ ಹುಲ್ಲೂ ಸಿಕ್ಕುವದು ದುಸ್ತರವಾಗಿತ್ತು. ಇದು ಹೊರ್ತು ನಾಲ್ಕು ಕಡಗೆ ಯಲ್ಲಾ ಊರಿನಲ್ಲಿಯೂ ದಂಗೇಖೋರರು ತುಂಬಿದ್ದು, ಇಂಗ್ರೇಜಿ ಸೈನ್ಯದವರ ಮೇಲೆ ಬೀಳಲು ಕೇವಲ ಸಿದ್ಧರಾಗಿದ್ದರು. ಆದಾಗ್ಯೂ ಸರ್ ಹ್ಯೂರೋಜ್ ಸಾಹೇಬನು ಶತ್ರುಗಳ ನಡವಳಿತೆಯನ್ನ ತುಂಬಾ ದೃಷ್ಟಿಯಲ್ಲಿಟ್ಟುಕೊಂಡು, ಶತ್ರುವಿನ ಪಾರ್ಶ್ವ ಭಾಗದಮೇಲೆ ಬೀಳಲು ನಿಶ್ಚಯಿಸಿದನು: ಕುಂಚನಗರವು ಕಾಲ್ಪಿಯ ಈಚೆಗೆ 42 ಮೈಲಿಗಳ ದೂರದಲ್ಲಿದ್ದು, ಅಲ್ಲಿ ತುಂಬಾ ಅಡವಿಗಳಿದ್ದಕಾರಣ, ಅದರ ಮೇಲೆ ಸರಿಯಾಗಿ ಬಂದೂಕು ಹೊಡೆಯುವದು ಬಹಳ ಕಷ್ಟವಾಗಿತ್ತು. ಅದರ ಪಶ್ಚಿಮಭಾಗದ ಮತ್ತು ಝಾಸೀ ಬಾಗಲಿನ ಭದ್ರತೆಯನ್ನ ದಂಗೇಖೋರರು ಚನ್ನಾಗಿ ಮಾಡಿದ್ದರು. ಸರ್ ಹ್ಯೂರೋಜ್ ಸಾಹೇಬನು ಬಹಳ ಚಾತುರ್ಯದಿಂದ ಸೈನ್ಯವನ್ನು ತೆಗೆದುಕೊಂಡು ಹೋಗಿ, ದಂಗೇಖೋರರನ್ನ ಚದುರಿಸುವದಕ್ಕೆ ನಿಶ್ಚಯಮಾಡಿದನು. ಪ್ರಥಮದಲ್ಲಿ ಆತನು ಮೇ ತಾರೀಖು 2 ನೇ ದಿವಸ ಗಾಲ್‌ಸಾಹೇಬನ ಕೈಕೆಳಗೆ 25 ಮತ್ತು 3 ನೇ ಪಟಾಲಂಗಳಿಂದ, ಆರಿಸಿ ತೆಗೆದ, ಕೆಲವು ಜನಗಳನ್ನು ಕೊಟ್ಟು, ಅವನಕಡೆಯಿಂದ ಪುಂಚೆ ಯಂಬ ಊರಿನಮೇಲೆ ಬೀಳಿಸಿದನು. ಅಲ್ಲಿ ಸುಮಾರು 500 ದಂಗೇಖೋರ ಜನಗಳು ಆಶ್ರಯವನ್ನು ಹಿಡಿದುಕೊಂಡು ಕೂತಿದ್ದರು. ಅವರಮೇಲೆ ಇಂಗ್ರೇಜಿ ಸೈನ್ಯವು ಬೀಳುತ್ತಲೇ, ದೊಡ್ಡ ಯುದ್ಧವು ನಡೆದು, ಅದರಲ್ಲಿ ಅನೇಕ ದಂಗೇಖೋರರು ಸತ್ತು ಹೋಗಿ, ಅಲ್ಲಿನ ಕೋಟೆಯು ಇಂಗ್ರೇಜಿಯವರ ಕೈಗೆ ಸಿಕ್ಕಿತು. ಅಲ್ಲಿಂದ ಬೇಟವಾ ನದಿಯನ್ನು ದಾಟಿಕೊಂಡು ಬರುತ್ತಲೇ, ಅವರ ಮತ್ತು ಮೇಜರ್ ಆರ್ ಸಾಹೇಬನ ಸೈನ್ಯವು ಕೇರಿತು. ಅಲ್ಲಿ ಅವರಿಗೆ ಬಾಣಪುರ ಮತ್ತು ಷಹಗಡದ ರಾಜರುಗಳು ದಂಗೇಖೋರರಿಗೆ ಸಹಾಯ ಮಾಡುವದಕ್ಕೋಸ್ಕರ ಯುದ್ಧ ಸಾಮಗ್ರಿಗಳನ್ನ ತೆಗೆದುಕೊಂಡು, ಕುಂಚುನಗರಕ್ಕೆ ಹೋಗುತ್ತಿದ್ದಾರೆಂತ ವರ್ತಮಾನವು ಸಿಕ್ಕಿತು. ಕೂಡಲೆ ಅವರು ಕೋಟ್ರಾಯಂಬ

ಸ್ಥಳದಲ್ಲಿ ಅವರ ಮೇಲೆಬಿದ್ದು, ಅವರ ಒಂದು ತೋಫನ್ನು ತೆಗೆದು ಕೊಂಡರು. ಪರಂತು ಆ ಸಮಯದಲ್ಲಿ ಜಗನಿಯರಾಜನು, ಅವರಿಗೆ ಒಳ್ಳೇ ಸಹಾಯ ಮಾಡಿದ್ದರಿಂದ, ಇಂಗ್ರೇಜಿ ಸೈನ್ಯದ ಪರಾಕ್ರಮವು ವ್ಯರ್ಥವಾಗಿ ಹೋಗಿ, ಆ ರಾಜರುಗಳು ಕುಂಚವೆಂಬ ಊರಿಗೆ ಬಂದು ಸೇರಿದರು. ಅನಂತರ ಮೇಜರ್ ಗಾಲ್ ಮತ್ತು ಮೇಜರ್ ಆರ್ ಸಾಹೇಬರುಗಳೂನೂ ಶೀಘ್ರದಲ್ಲಿ ಹೋಗಿ, ಕುಂಚ ಊರಿನಲ್ಲಿನ ಇಂಗ್ರೇಜಿ ಸೈನ್ಯಕ್ಕೆ ಸೇರಿದರು.

ಇತ್ತಲಾಗಿ, 5 ನೇ ತಾರೀಖಿನ ದಿವಸ ಇಂಗ್ರೇಜಿ ಸೈನ್ಯಕ್ಕೆ 72 ನೇ ಪಟಾಲಂನ ಶೂರರು ಮತ್ತು ಇನ್ನೊಂದು ಬ್ರಿಗೇಡು ಸಹ ಬಂದು ಸೇರಿತು. ಆದಕಾರಣ ಸರ್‌ಹ್ಯೂರೋಜ್ ಸಾಹೇಬನಿಗೆ ಒಳ್ಳೇಧೈರ್ಯ ಹುಟ್ಟಿ, ಮೇಜರ್ ಗಾಲ್ ಸಾಹೇಬನನ್ನು ಕುಂಚ ಊರಿನಿಂದ 10 ಮೈಲಿಗಳಮೇಲೆ ಯಿದ್ದ ಲೊಹಾರಿಯೆಂಬ ಕೋಟೆಯಮೇಲೆ ಬೀಳುವದಕ್ಕಾಗಿ ಕಳುಹಿಸಿದನು. ಆ ಕೋಟೆಯು ಕೈವಶವಾದರೆ, ಕುಂಚನಗರದ ಸಾಮರ್ಥ್ಯವು ಚನ್ನಾಗಿ ತಿಳಿಯಬಂದು, ಮುಂದೆ ಅದರಮೇಲೆ ಪ್ರಯಾಣಮಾಡಲು ಹೆಚ್ಚಾಗಿ ಪ್ರಯಾಸ ವಾಗಲಾರದೆಂತ ಆತನ ಆಲೋಚನೆ ಯಾಗಿತ್ತು. ಆ ಪ್ರಕಾರ ಮೇಜರ್ ಗಾಲ್ ಸಾಹೇಬನು 3 ನೇ ಯುರೋಪಿಯರ್ನ ಪಟಾಲಂನ ಶೂರ ಸೈನ್ಯವನ್ನು ಸಂಗಡ ತೆಗೆದುಕೊಂಡು, ಲೋಹಾರಿ ಮೇಲೆಬಿದ್ದನು. ಆ ಕೋಟೆಯು ಮರಾಟಿ ಆಳ್ವಿಕೆಯಲ್ಲಿ ಕಟ್ಟಿದ್ದಾದ್ದರಿಂದ, ಬಹಳ ಬಲವಾಗಿತ್ತು. ಅದರ ಸಂರಕ್ಷಣೆಯನ್ನು ಆಫರ್ಗ ಜನಗಳು ಬಹಳ ಚನ್ನಾಗಿ ಮಾಡುತಿದ್ದರು. ಆದ್ದರಿಂದ ಇಂಗ್ರೇಜಿ ಸೈನ್ಯಕ್ಕೂ ಮತ್ತು ಅವರಿಗೂ ಬಹಿರಂಗವಾದ ಯುದ್ಧವು ನಡೆಯಿತು. ಪರಂತು, ಕೊನೆಗೆ ಇಂಗ್ರೇಜಿಯು ವರಪ್ಡೇ ಹೆಚ್ಚಾಗಿ, ಕೋಟೆಯನ್ನು ತೆಗದುಕೊಂಡರು. ಈ ಒಂದು ಚಿಕ್ಕ ಯುದ್ಧದಲ್ಲಿ ಇಬ್ಬರು ಯುರೋಪಿಯರ್ನ ಅಧಿಕಾರಿಗಳು ಮತ್ತು ಅನೇಕ ಕೆಂಪು ಜನಗಳು ಸಹ ಸತ್ತು ಹೋದರು.

ಲೋಹಾರಿ ಕೋಟೆಯು ಕೈವಶವಾದ ನಂತರ, ಸರ್ ಹ್ಯೂರೋಜ್ ಸಾಹೇಬನು ಕುಂಚ ಪೂರಿನಮೇಲೆ ಬೀಳುವದಕ್ಕೆ ನಿಶ್ಚಯಿಸಿದನು. ದಂಗೇಖೋರಜನಗಳು ಯಾವಾಗಲೂ ತಮ್ಮ ಮುಂಭಾಗವನ್ನು ಚನ್ನಾಗಿ ಭದ್ರಪಡಿಸಿಕೊಂಡಿರುತ್ತಾರೆ. ಆದ್ದರಿಂದ ಆ ಸೈನ್ಯದಮೇಲೆ ಮುಂಭಾಗದಲ್ಲಿ ಪ್ರಯಾಣವಾಡಿ ಹೋಗದೇ, ಹಿಂದುಗಡೆಯಲ್ಲಿ ಸೈನ್ಯವನ್ನು ಪ್ರತ್ಯಪ್ರತ್ಯೇಕ ಭಾಗವಾಡಿ ಕಳುಹಿಸಿ, ಶತ್ರುವಿನ ದುರ್ಬಲವಾದ ಪಾರ್ಶ್ವವನ್ನು ನೋಡಿಕೊಂಡು, ಅದರ ಮೇಲೆ ಯುದ್ಧಕ್ಕೆ ಬೀಳಬೇಕೆಂತ, ಆತನು ಸಂಕೇತ ಮಾಡಿಕೊಂಡನು. ಎರಡನೇ ದಿವಸ ಬೆಳಿಗ್ಗೆ, 14 ಮೈಲಿಗಳವರೆಗೆ ತನ್ನ ಸೈನ್ಯವನ್ನು ತೆಗೆದುಕೊಂಡು ಹೋಗಿ, ಒಳ್ಳೇ ಸ್ಥಳಗಳನ್ನು ಹುಡಿಕಿಕೊಂಡನು. 1 ನೇ ಬ್ರಿಗೇಡಿನ ಜನಗಳನ್ನು ನಾಗಪುರದ ಹಿಂಭಾಗದಲ್ಲಿ ನಿಲ್ಲಿಸಿದನು. 2 ನೇ ಬ್ರಿಗೇಡನ್ನು ಮಧ್ಯಭಾಗದಲ್ಲಿ ಚುಮೇರ್ ಯೆಂಬ ಊರಿನಲ್ಲಿಟ್ಟನು; ಮತ್ತು ಮೇಜರ್ ಆರ್ ಸಾಹೇಬನ ಕೈಕೆಳಗಿನ ಹೈದ

ರಾಬಾದ್ ಸೈನ್ಯವನ್ನು ಬಲಪಾರ್ಶ್ವಕ್ಕೆ ಪುಗ್ರಿಯೆಂಬ ಊರಿನಲ್ಲಿಟ್ಟನು. ಈಪ್ರಕಾರವಾಗಿ ಕುಂಚಊರಿನಿಂದ ಎರಡು ಮೈಲಿಗಳದೂರದೊಳಗೇನೇ ತನ್ನ ಎಲ್ಲಾ ಸೈನ್ಯವನ್ನು ಸ್ಥಳ ಕ್ಲಿಪ್ತಮಾಡಿ, ಯುದ್ಧಕ್ಕೆ ಸಿದ್ಧಪಡಿಸಿದನು.

ಇತ್ತಲಾಗಿ ಬಾಂದೇವಾಲೆ ನವಾಬ್, ತಾತ್ಯಾಟೋಪಿ, ಮುಂತಾದ ಮಂಡಲಿಯವರು, ಗ್ವಾಲಿಯರ್‌ನ ಸೈನ್ಯವು ಬರತಕ್ಕ ಮಾರ್ಗವನ್ನ ನಿರೀಕ್ಷಿಸಿಕೊಂಡು, ಸ್ವಸ್ಥವಾಗಿದ್ದು ಬಿಟ್ಟರು. ಅವರ ಕೆಂಪು ಇರಸಾಲೆ ಮತ್ತು ಪಟಾಲಂ ಕುಂಚ ಪೂರಮುಂದಿನ ಬಯಿಲು ಮಧ್ಯೆ, ಗಿಡದಕೆಳಗೆ ಪುಳಿದಿದ್ದರು. ಅವರಿಗೆ ಇಂಗ್ರೇಜಿ ಸೈನ್ಯವು ಪ್ರಯಾಣ ಮಾಡಿಬಂದ ವರ್ತಮಾನವು ತಿಳಿದಕೂಡಲೆ, ಅವರು ಬಂದೇ ಉಸುರಿಗೆ ಅವಸರವಸರದಲ್ಲಿ ತಮ್ಮ ತೋಫುಗಳನ್ನ ಹಾರಿಸಿದರು. ಸರ್ ಹ್ಯೂರೋಜ್ ಸಾಹೇಬನು ಪ್ರತ್ಯಪ್ರತ್ಯೇಕ ದಿಶೆಯಲ್ಲಿ ತನ್ನಸೈನ್ಯವನ್ನು ವಿಭಾಗ ಮಾಡಿಟ್ಟಿದ್ದನು. ಆದಕಾರಣ ಅವರ ತೋಫಿನ ಯೇಟುಗಳು ಮುಂದುಗಡೆಯ ಪಕ್ಕದಮೇಲೆ ಮಾತ್ರ ಬೀಳುತ್ತಾ ಬಂತು. ಇಂಗ್ರೇಜಿ ಸೈನ್ಯದವರು ಆ ಹೊಡೆತವನ್ನು ನಿಲ್ಲಿಸುವದಕ್ಕಾಗಿ, ನಾಲ್ಕು ದಿಕ್ಕುಗಳಿಂದಲೂ ಗನ್ನಾಲಿ ತೋಫು ಮತ್ತು ಬಂದೂಕು ಯೇಟಿಗೆ ಪ್ರಾರಂಭಿಸಿದರು. ಅದರಿಂದ ಶತ್ರುಗಳಕಡೆ ಸವಾರರಿಗೆ ದುರ್ದೆಶೆಬಂದು, ಸಿಕ್ಕಿಸಿಕ್ಕಿದಹಾಗೆ ಓಡಲಿಕ್ಕೆ ಪ್ರಾರಂಭಿಸಿದರು. ದಂಗೇಖೋರರ ಭದ್ರತೆ ಬಂದೇಪಕ್ಕಕ್ಕೆ ಮಾತ್ರ ಇದ್ದದ್ದರಿಂದ, ಅವರಿಗೆ ಬಹಳ ಕಷ್ಟವು ಬದಗಿತ್ತು ಇಂಗ್ರೇಜಿ ಸೈನ್ಯದವರಿಗೆ ಸೂರ್ಯನ ತಾಪದಿಂದ ಬಹಳ ಶ್ರಮವಾಯಿತು. ಆದಾಗ್ಯೂ ಅಂಥಾ ಶಖೆಯಲ್ಲಿಯೂ ದಂಗೇಖೋರರನ್ನ ಸೋಲಿಸಿದರು. ಇದರಿಂದ ಅವರ ಸಹನಶಕ್ತಿ ಮತ್ತು ಅವರ ಯುದ್ಧದ ವ್ಯವಸ್ಥೆ ಸಹ ಯೆಷ್ಟಿರ ಬೇಕೆಂಬುವದು ತನ್ನಷ್ಟಕ್ಕೆ ತಾನೇ ತೋರಿಬರುತ್ತದೆ. ಸರ್ ಹ್ಯೂರೋಜ್ ಸಾಹೇಬನು ಈ ಯುದ್ಧ ಸಮ್ಮಂಧವಾಗಿ ತನ್ನ ರಿಪೋರ್ಟಿನಲ್ಲಿ ಹೀಗೆ ಬರೆದಿರುತ್ತಾನೆ:—

"ನಮ್ಮ ಸೈನ್ಯಕ್ಕೆ ಸೂರ್ಯನ ತಾಪದಿಂದ ಉಂಟಾದ ನಷ್ಟವು ಆಗದೇ ಯಿದ್ದರೆ, ನಾವು ಶತ್ರುಗಳನ್ನು ಪೂರಾ ಸಂಹಾರ ಮಾಡುತ್ತಿದ್ದೆವು. ನಮ್ಮ ಸೈನ್ಯದಲ್ಲಿ 11 ಶಿಪಾಯಿಗಳು ಸೂರ್ಯನ ಅತಿಶಯ ತಾಪದಿಂದ ಹಾಹಾ ಯೆಂಬಷ್ಟರಲ್ಲಿ ಮೃತ್ಯುವಿನ ಬಾಯಿಗೆ ಬಿದ್ದರು. ಅನೇಕರು ಜ್ಞಾನತಪ್ಪಿ ಭೂಮಿಯಮೇಲೆ ಬಿದ್ದರು. ಅವರ ಸ್ಥಿತಿಯನ್ನು ವರ್ಣನೆ ಮಾಡುವದಕ್ಕೆ ಬರುವದಿಲ್ಲ. ನಾಲ್ಕು ಸಲ, ಶಖೆಯ ಪ್ರಾಬಲ್ಯದಿಂದ ನನಗೆ, ಬಂದು ಕಡೆಗೆ ಕುದುರೆಯನ್ನು ಬಿಟ್ಟು ಬಿಡಬೇಕಾದ ಸಂಭವಬಂತು. ಆದರೆ ಡಾಕ್ಟರ ಜನಗಳು ನನ್ನ ತಲೆಯಮೇಲೆ, ಸರಿಯಾಗಿ ನೀರಿನಧಾರೆಯನ್ನು ಬಿಟ್ಟು, ಉಷ್ಣ ಶಮನವಾಗತಕ್ಕ ಔಷಧವನ್ನು ಕೊಟ್ಟು, ವಾಸಿಮಾಡಿದರು. ನೆಳಲಿನಲ್ಲಿ ನೋಡಿದರೆ, ಇಲ್ಲಿ 110 ಅಂಶ ಉಷ್ಣತೆ ಇದ್ದಹಾಗೆ ಹಿಂದುಸ್ಥಾನ ದೇಶದಲ್ಲಿನ ಇನ್ಯಾವ ಭಯಂಕರವಾದ ಪ್ರಸಂಗದಲ್ಲಿಯೂ ನನಗೆ ಇರಲಿಲ್ಲ. ನನಗೆ ಎಷ್ಟು ಯಶಃಪ್ರಾಪ್ತಿಯ ಆಸೆಯಿತ್ತೋ

ಅಷ್ಟು ಯುದ್ಧಮಾಡಿ, ಪರಿಪೂರ್ಣವಾಗಿದೆ. ನನಗೆ ಇನ್ನಾವ ಆಶೆಯೂ ಇಲ್ಲ." ಈ ಟೀಕಾದಿಂದ ಇಂಗ್ರೇಜಿ ಸೈನ್ಯಕ್ಕೆ ಉತ್ತರ ಹಿಂದುಸ್ಥಾನದಲ್ಲಿ, ಬಿಸಲು ತಾಪದ ಸಹಿಸಲ ಸಾಧ್ಯವಾದ ಕಷ್ಟವು ಯಷ್ಟು ಆಗಿದ್ದೀತೆಂಬುವದು ಯಾರಿಗಾದರೂ ಸಹಜವಾಗಿ ತಿಳಿಯ ಬಹುದು." * ಇದು ಹಾಗಿರಲಿ.

ಒಂದು ತಾಸು ಪರ್ಯಂತರ ಇಂಗ್ರೇಜಿ ಸೈನ್ಯಕ್ಕೂ, ದಂಗೇ ಖೋರರಿಗೂ ತುಮುಲ ಯುದ್ಧ ನಡೆಯಿತು. ಒಳ್ಳೆ ಮಧ್ಯಾಹ್ನ ಸಮಯದಲ್ಲಿ, 16 ಮತ್ತು 25 ನೇ ಪಟಾಲಂ ನವರು ಕುಂಚನಗರದ ಮೇಲೆ ಬಿದ್ದರು. ಆ ಸಮಯದಲ್ಲಿ ಉಭಯ ಪಕ್ಷದವರಿಗೂ ನಿಂತು ಯುದ್ಧ ನಡೆಯಿತು. ರಾವ್ ಸಾಹೇಬ್ ಪೇಷ್ವೆಯಕಡೆ ಪರ್ಶಾ ಸೈನ್ಯದವರು ತಮ್ಮ ಶೌರ್ಯವನ್ನ ಉತ್ತಮ ಪ್ರಕಾರವಾಗಿ ತೋರಿಸಿದರು. ಹೈದರಾಬಾದ್ ಇನ್ಫೆಂಟ್ರಿ ಅಧಿಕಾರಿ ಲೆ. ವ್ಯಾಕ್ಬೆತ್ ಸಾಹೇಬನು ವಿರುದ್ಧ ಪಕ್ಷದ ಸೈನ್ಯದಮೇಲೆ ಬಿದ್ದು, ಹಿಂದಕ್ಕೆ ಅಟ್ಟಿ, ಅವರಸ್ಥಳವನ್ನು ತೆಗೆದುಕೊಂಡನು. ಪರಂತು, ಪೇಷ್ವೆಯ ಪರ್ಶಾ ಸೈನ್ಯದ ಮುಂದೆ, ಅವನದೇನೂ ನಡೆಯಲಿಲ್ಲ. ಆದಕಾರಣ ಆತನು ಹಿಂದಕ್ಕೆ ಬರಬೇಕಾದ ಸಂಭವವು ಬಂತು. ಇಂಗ್ರೇಜಿ ಕುದುರೆಯ ಸವಾರರು ಆಸಮಯದಲ್ಲಿ, ಒಳ್ಳೆ ಧೈರ್ಯ

---

* ಸ್ನ 1859 ನೇ ಇಸವಿ ಎಪ್ರೇಲ್ ತಾರೀಖು 19 ನೇ ದಿವಸ, ಡಾಕ್ಟರ್ ಅರ್ನರ್ಟ್ ಸಾಹೇಬನು ಇಂಗ್ರೇಜಿ ಸೈನ್ಯದ ಸ್ಥಿತಿಯನ್ನು ಕುರಿತು ಬರೆದಿರುವ ಸಮಾಚಾರದಿಂದ ಕಂಡು ಬರುವದೇನಂದರೆ:—ಆ ಸಮಯದಲ್ಲಿ ಪುಷ್ಕಳ ಕೆಂಪುಜನಗಳು ಶಖೆಯಿಂದ ಅಸ್ವಸ್ಥರಾಗಿ ಆಸ್ಪತ್ರೆಯಲ್ಲಿ ಬಿದ್ದಿದ್ದರು. ಆರೋಗಿಗಳ ಸಂಖ್ಯೆಗಳು 310 ಆಗಿದ್ದವು. ಅವರ ಶಿವಾಯಿ, ಕ್ವಾರ್ಟರ್ ಮಾಸ್ಟರ್ ಜನರಲ್, ಪಾದರಿಗಳು, ಕಮಿಷರೇಟ್ ಆಫೀಸರ್, ಬ್ಯಾಗೇಜ್ ಮ್ಯಾಸ್ಟರ್, ಬ್ರಿಗೇಡ್ ಮ್ಯಾಸ್ಟರ್, ಮುಂತಾದ ಸರ್ವ ಅಧಿಕಾರಿಗಳು ಅಸ್ವಸ್ಥರಾಗಿದ್ದರು. ಆದಕಾರಣ ಈಗ ಇಂಗ್ರೇಜಿ ಸೈನ್ಯಕ್ಕೆ ಯಶಸ್ಸು ಬರುವ ಆಶೆಇರುವದಿಲ್ಲ, ಅವನು ಸ್ಪಷ್ಟವಾಗಿ ಹೇಳಿರುವದೇನಂದರೆ:—

"Several of these and many other officers will have to go to Europe, and others will have to go elsewhere for change of climate. Thus paralysed as the force already is, and with the rest enfeebled and worn out by this long and ardous campaign, I cannot refrain from mentioning my apprehensions that should the operations before Kalpi be protracted and the exposure great, the force will be completely prostrated."

ಮಾಡಿದರು; ಮತ್ತು ಸೋತು ಹೋದ ಸೈನ್ಯದ ಬೆನ್ನಟ್ಟಿ, ಅವರ ಪುಷ್ಕಳ ಮದ್ದು, ಗುಂಡುಗಳನ್ನು ಕೈವಶಮಾಡಿಕೊಂಡರು. ತಾತ್ಯಾಟೋಪಿ ಮತ್ತು ಬಾಂದೇವಾಲೆ ನವಾಬ ಸಹ ಇಂಗ್ರೇಜಿ ಸೈನ್ಯವನ್ನು ಸೋಲಿಸಲು ಬಳ್ಳ ಪ್ರಯತ್ನಮಾಡಿದರು. ಪರಂತು ಇಂಗ್ರೇಜಿ ಸೈನ್ಯದ ಹೊಡೆತದ ಮಧ್ಯದಲ್ಲಿ, ಅವರ ಸೈನ್ಯವೆಲ್ಲಾ ಸಿಕ್ಕಿದ್ದ ಕಾರಣ, ಕೊನೆಗೆ ಅವರು ಅಪಯಶಸ್ಸು ತೆಗೆದುಕೊಂಡು ಕಾಲ್ಪಿಗೆ ಹೋಗಬೇಕಾದ ಸಂಭವ ಬಂತು. ದಂಗೇಖೋರರು ಹೊರಟು ಹೋದನಂತರ, ಅವರ 8 ತೋಫುಗಳೂ, ಪುಷ್ಕಳ ಮದ್ದು, ಗುಂಡು, ಮತ್ತು ಧಾನ್ಯಸಹ ಇಂಗ್ರೇಜಿ ಸೈನ್ಯಕ್ಕೆ ಸಿಕ್ಕಿತು. ಈ ಪ್ರಕಾರವಾಗಿ ಬಂದ ಅವ್ಯವಸ್ಥತೆಯಿಂದ, ದಂಗೇಖೋರರ 20000 ಸೈನ್ಯವು ಸೋತು ಹೋಯಿತು. ಸರ್‌ಹ್ಯೂರೋಜ್ ಸಾಹೇಬನು, ತನ್ನ ಸೈನ್ಯದವರು ಬಳ್ಳೇ ಸಾಹಸ ಕೆಲಸವನ್ನು ಮಾಡಿದ್ದಕ್ಕಾಗಿ, ಅವರಿಗೆ ಬಹಳ ಸ್ತೋತ್ರಮಾಡಿ, ಕಾಲ್ಪಿಯ ಮೇಲೆ ದಂಡೆತ್ತಿ ಬಂದು, ಅದನ್ನ ಸ್ವಾಧೀನಪಡಿಸಿಕೊಳ್ಳುವ ವಿಷಯದಲ್ಲಿ, ಅವರಿಗೆ ಪ್ರೋತ್ಸಾಹ ಪಡಿಸಿದನು. * ಕುಂಚ ನಗರದಲ್ಲಿ ಅಪಜಯವಾದ ನಂತರ, ತಾತ್ಯಾಟೋಪಿ, ರಾವ್ ಸಾಹೇಬ್ ಪೇಷ್ವೆ ಮುಂತಾದ ಮಂಡಲಿಯು ಹಿಂದಕ್ಕೆ ಕಾಲ್ಪಿಕಡೆಗೆ ಬಂತು. ನಂತರ ತಾತ್ಯಾನು ತನ್ನ ಯಜಮಾನನನ್ನು ನೋಡುವದಕ್ಕಾಗಿ, ಝಾಲವಾಣದ ಸಮೀಪ ಚರಕಿಯೆಂಬ ಊರಿಗೆ ಹೋದನು. ಬಾಂದೆವಾಲೆ ನವಾಬ್ ಮತ್ತು ಬಾಣಪುರದ ರಾಜನು ಸಹ ಕಾಲ್ಪಿಗೆ ಹೋಗಿ ಸೇರಿದ್ದರು. ರಾಣೀ ಲಕ್ಷ್ಮೀಬಾಯಿ ಸಾಹೇಬಳು, ಈ ಕುಂಚ ನಗರದ ಯುದ್ಧದಲ್ಲಿ ಪ್ರಮುಖಳಾಗಿ ಯುದ್ಧಮಾಡುತ್ತಿರಲಿಲ್ಲ. ಆಕೆಯ ಮನಸ್ಸಿನಂತೆ ಸೈನ್ಯದ ಶಿಕ್ಷೆಯನ್ನ ರಾವ್ ಸಾಹೇಬ್ ಪೇಷ್ವೆ ಮತ್ತು ಬಾಂದೇವಾಲೆ ನವಾಬಸಹ ಮಾಡಲಿಲ್ಲ. ಬಾಂದೇವಾಲೆ ನವಾಬನಿಗೆ ತನ್ನ ಚಾತುರ್ಯದ ವಿಶೇಷ ಗರ್ವವಿತ್ತು. ರಾವ್ ಸಾಹೇಬ್ ಪೇಷ್ವೆಯು

---

* ಸರ್ ಹ್ಯೂರೋಜ್ ಸಾಹೇಬನು ತನ್ನ ಸೈನ್ಯದ ಅಭಿನಂದನವನ್ನ ಮುಂದೆ ಬರೆದಿರುವ ಪ್ರಕಾರ ಮಾಡಿರುತ್ತಾನೆ :—

"These noble soldiers, whose successes were never chequered by a reverse, with a discipline which was as enduring as their courage, never proffered one complaint. They fell in their ranks, struck down by the sun, and exhausted by fatigue; but they would not increase the anxieties of their General or belie their devotion by complaint. No matter how great their exhaustion or how deep their short sleep, they always sprung to my call to arms with the heartiest

ಆತನು ಹೇಳಿದಂತೆ ನಡೆದು ಕೊಳ್ಳುತ್ತಿದ್ದನು. ಆದಕಾರಣ ಕುಂಚನಗರದ ಯುದ್ಧದಲ್ಲಿ, ಅವನ ಸೈನ್ಯದ ಭದ್ರತೆಯು ಅಪಕ್ವವಾಗಿ ಹೋಗಿ, ಇಂಗ್ರೇಜಿ ಸೈನ್ಯದವರು ಹೊಡೆಯುತಕ್ಕ ಜಾಗವನ್ನು ಸಾಧಿಸಿ ಹಿಡಿದುಕೊಂಡು, ಶತ್ರುಸೈನ್ಯವನ್ನ ಜಯಿಸಿದರು. ರಾಣೀ ಸಾಹೇಬಳ ಸ್ವಂತ ಸೈನ್ಯವು ಶುದ್ಧಾಂಗ ಇರಲಿಲ್ಲವಾದಕಾರಣ, ಅವಳಿಗೆ ಪೇಷ್ವೆಯ ಸೈನ್ಯದ ಸಂಗಡ ಹಿಂತಿರುಗಿ ಕಾಲ್ಪಿಗೆ ಹೋಗಬೇಕಾದ ಸಂಭವ ಬಂತು. ಕಾಲ್ಪಿಗ ಹೋದತರುವಾಯ, ಆಕೆಯು ಪುನಃ ರಾವ್ ಸಾಹೇಬ್ ಪೇಷ್ವೆಯ ಕಿವಿಗಳನ್ನೂದಿದಳು; ಮತ್ತು ಅವನಿಗೆ ಈ ರೀತಿಹೇಳಿದಳು:—"ಸೈನ್ಯದ ಭದ್ರತೆಯನ್ನ ಬಲಹೀನವಾಗಿಟ್ಟರೆ, ನಿಮಗೆಂದಿಗೂ ಯಶಸ್ಸು ಬರಲಾರದೆಂತ ಖಂಡಿತವಾಗಿ ತಿಳಿಸಿದಳು. ಇಂಗ್ರೇಜಿ ಸೈನ್ಯದ ಯೇರ್ಪಾಡು ಸರಿಯಾಗಿರೋಣದರಿಂದ, ಅವರ ಸೈನ್ಯದಲ್ಲಿ ಎಂದಿಗೂ ಅವಿವೇಕವು ನಡೆಯುವದಿಲ್ಲ; ಮತ್ತು ನಿಮ್ಮ ಸೈನ್ಯವು ಕೇವಲ ಅವ್ಯವಸ್ಥೆಯಲ್ಲಿರುವದ್ದರಿಂದ, ಅದರ ಮೇಲೆ ಮುತ್ತಿಗೆ ಹಾಕಿ ಬೀಳಲು ಅವರಿಗೆ ಬಹಳ ಸಲಕರಣೆ ಶಿಗುತ್ತದೆ. ಆದ್ದರಿಂದ ಸೈನ್ಯವನ್ನ ಭಾಗಮಾಡಿ, ಸರಿಯಾದ ಸ್ಥಳಗಳಲ್ಲಿ, ಮೋರ್ಚೆಯನ್ನು ಗುರಿನೋಡಿ ಇಟ್ಟು ಅದರಮೇಲೆ ದಕ್ಷ ಸೇನೆಯನ್ನ ನೇಮಿಸಿದರೆ, ವಿರುದ್ಧ ಪಕ್ಷದವರು ನಿಮ್ಮ ಸೈನ್ಯಕ್ಕೆ ಯುದ್ಧದಲ್ಲಿ ತಾಗುವದು ಸರ್ವಥಾ ಸಾಧ್ಯವಾಗಲಾರದು." ರಾವ್ ಸಾಹೇಬ್ ಪೇಷ್ವೆಯು ರಾಣಿ ಸಾಹೇಬಳು ಸೂಚಿಸಿದ್ದನ್ನ ಮನಸ್ಸಿಗೆ ತೆಗದುಕೊಂಡು, ಕಾಲ್ಪಿಯಲ್ಲಿ ಪುನಃ ತನ್ನ ಸೈನ್ಯವನ್ನು ಸರಿಪಡಿಸುವ ಕೆಲಸವನ್ನು ನಡೆಸಿದನು. ಅವನು ಬಾಂದೇವಾಲೆ ನವಾಬನ ಕಡೆಯಿಂದ ಬಂದಿದ್ದ 2000 ಸವಾರರುಗಳನ್ನೂ ಮತ್ತು ತೋಫುಗಳನ್ನೂ ಒಂದು ದಿಕ್ಕಿನಲ್ಲಿಟ್ಟನು. ಅಯೋಧ್ಯಾ ಪ್ರಾಂತ್ಯದಿಂದ ಬಂದಿದ್ದ ರೋಹಿಲೆ ಜನಗಳನ್ನು ಮತ್ತು ಬಂಗಾಳ ನೇಟಿವ್ ಇನ್ಫೆಂಟ್ರಿಯ ಕಪ್ಪು ಪಟಾಲಂನ್ನು ಕಾಲ್ಪಿಯ ಸಂರಕ್ಷಣಾರ್ಥವಾಗಿ, ಪಹರೆಮೇಲೆ ಇರುವದಕ್ಕೆ ಇಟ್ಟನು. ಇದು ಹೊರ್ತು ಅವನ ಹತ್ತರಯಿದ್ದ ಅನೇಕ ದೊಡ್ಡ ದೊಡ್ಡ ತೋಫುಗಳನ್ನು ನಾಲ್ಕು ದಿಕ್ಕುಗಳಲ್ಲಿಯೂ ಮೋರ್ಚೆ ಕಟ್ಟಿ, ಪ್ರತಿಒಂದು ಮೋರ್ಚೆಯಮೇಲೂ ಘಟ್ಟಿಗರಾದ ಗುಂಡು ಹೊಡೆಯುತಕ್ಕವರನ್ನು

---

good will. 'To think of yielding or retreating would have been ignominy. All felt that physical strength might fail, but that the spirit and discipline never could. They were often too ill to march, but their devotion made them fight. It is almost superfluous to add that troops animated by so high a sense of duty were sober, orderly and very respectful to their officers."

ನೇಮಿಸಿದನು. ಬುಂದೇಲೆ, ಠಾಕೂರು ಮುಂತಾದ ಜನಗಳಲ್ಲಿ, ರಣ ಭೂಮಿಯಲ್ಲಿ ತಮ್ಮ ಪರಾಕ್ರಮವನ್ನು ತೋರಿಸತಕ್ಕವರು ಎಷ್ಟು ಜನಗಳಿದ್ದರೋ, ಅವರಕಡೆಗೆ ಸಣ್ಣ, ದೊಡ್ಡ ಕೆಲಸಗಳನ್ನು ವಹಿಸಿದನು ; ಮತ್ತು ತಾನು ಸ್ವತಃ ಸರ್ವ ಸೈನ್ಯದ ಸೇನಾಪತಿತ್ವವನ್ನು ಸ್ವೀಕಾರ ಮಾಡಿದನು. ರಾಣೀ ಸಾಹೇಬಳ ಶರೀರದಲ್ಲಿ, ರಣ ಶೌರ್ಯವು ಉತ್ತಮ ಪ್ರಕಾರವಾಗಿ ವಾಸಮಾಡುತ್ತಿತ್ತೆಂಬುವದು ಆತನಿಗೆ ತಿಳುವಳಿಕೆ ಯಿತ್ತು. ಆದರೆ ಅಂತಃ ರಾವ್ ಸಾಹೇಬನ ಮನಸ್ಸಿನಲ್ಲಿ, ತನ್ನ ಶ್ರೇಷ್ಠತ್ವವು ತೋರು ತ್ತಿದ್ದ ಕಾರಣ, ಅವನು ತನ್ನ ಪ್ರಚಂಡ ಸೈನ್ಯದಮೇಲಿನ ಆಧಿಪತ್ಯವನ್ನ ಸ್ತ್ರೀ ಕೈಯ್ಯಲ್ಲಿ ಕೊಡುವದಕ್ಕೆ ಇಷ್ಟಪಡಲಿಲ್ಲ. ಆದಾಗ್ಯೂ ಬಾಹ್ಯದಲ್ಲಿ ರಾಣಿ ಸಾಹೇಬ ಳಿಗೆ ಬಹುಮಾನಮಾಡಿ, ಅವಳ ಕೈಕೆಳಗೆ 200, 250 ಲಾಲಾವರ್ದಿಯ ಕುದುರೆ ಸವಾರರನ್ನು ಕೊಟ್ಟು, ಅವಳಿಗೆ ಯಮುನಾನದಿಯ ಕಡೆ ಪಾರ್ಶ್ವವನ್ನ ಸಂರಕ್ಷಣೆ ಮಾಡುವದಕ್ಕೋಸ್ಕರ ವಿನಂತಿ ಮಾಡಿದನು. ಶ್ರೀಮಂತನು ವಿಶಿಷ್ಟ ಸೈನ್ಯದ ವ್ಯವ ಸ್ಥೆಯನ್ನು ಸರಿಪಡಿಸಿದನೆಂಬುವದನ್ನು ನೋಡಿ, ರಾಣಿ ಸಾಹೇಬಳು ಉತ್ತರ ಪಾರ್ಶ್ವ ವನ್ನು ಸಂರಕ್ಷಣೆ ಮಾಡತಕ್ಕ ಕೆಲಸವನ್ನು ತನ್ನ ಕೈಯ್ಯಲ್ಲಿ ತೆಗೆದುಕೊಂಡಳು ; ಮತ್ತು ಯಾರಾದರೂ ಒಬ್ಬ ಯುದ್ಧ ಕಲಾಕುಶಲ ಪರಿಪೂರ್ಣನಾದ ಯುದ್ಧಶಾಲಿಯ ಹಾಗೆ, ಬಹಳ ಬಲವಾಗಿ ಅಲ್ಲಿ ತನ್ನ ಸೈನ್ಯವನ್ನು ವೈದು ನಿಲ್ಲಿಸಿಕೊಂಡಳು.

ಸರ್ ಹ್ಯೂರೋಜ್ ಸಾಹೇಬನು ಕುಂಚನಗರದಲ್ಲಿ ದಂಗೇಖೋರರನ್ನ ಜಯಿಸಿದ ನಂತರ ಕಾಲ್ಪಿಯನ್ನು ತೆಗೆದುಕೊಳ್ಳುವ ಉದ್ದೇಶ್ಯದಿಂದ ಹದೋರ್ಯಿ ಮತ್ತು ಪುರೈ ಮಾರ್ಗವಾಗಿ ಕಾಲ್ಪಿಗೆ ಪ್ರಯಾಣಮಾಡಿದನು. ಮಧ್ಯದಲ್ಲಿ ಆತನಿಗೆ ದಂಗೇಖೋರರ ಅಟಂಕವು ಬಹಳವಾಗಿ ಆಯಿತು ; ಮತ್ತು ಸೂರ್ಯನ ಪ್ರಚಂಡ ತಾಪದಿಂದ ಅವನ ಕಡೆಯ ಪುಷ್ಕಳ ಜನಗಳು ಸ್ಮೃತಿ ತಪ್ಪಿ ಬೀಳಲು ಪ್ರಾರಂಭಿಸಿದರು.

ಆದಾಗ್ಯೂ ಸರ್ ಹ್ಯೂರೋಜ್ ಸಾಹೇಬನು ಧೈರ್ಯಗೆಡದೆ, ಅಲ್ಲಲ್ಲಿ ನಿಂತು ಪ್ರಯಾಣ ಮಾಡಿಕೊಳ್ಳುತ್ತಾ ತನ್ನ ಸೈನ್ಯವನ್ನ ಮುಂದಕ್ಕೆ ಪ್ರಯಾಣ ಮಾಡಿಸಿದನು. 14 ನೇ ಡ್ರಾಗೂನ ಅಧಿಕಾರಿಯಾದ ಬ್ರಿಗೇಡಿಯರ್ ಸ್ಟ್ಯೂವರ್ಟ್ ಸಾಹೇಬನು ಕುಂಚ ನಗರದ ಯುದ್ಧವಾದ ನಂತರ, ರೋಗಿಯಾಗಿ ಬಿದ್ದನು. ಆದ್ದರಿಂದ ಅವನ ಸ್ಥಾನಕ್ಕೆ ಲೆ. ಕ. ಕ್ಯಾಂಬೆಲ್ ಸಾಹೇಬನನ್ನು ನೇಮಿಸಿದನು.

ಆ ಸಮಯದಲ್ಲಿ, ಪ್ರಯಾಣದ ಮತ್ತು ಯುದ್ಧದ ಶ್ರಮದಿಂದ ಇಂಗ್ರೇಜಿ ಸೈನ್ಯ ದವರ ಕೊಬ್ಬು ಮತ್ತು ಬಲವು ಕಡಮೆಯಾಗುತ್ತಾ ಹೋಯಿತು ಯಂಬುವದನ್ನ ನೋಡಿ, ಸರ್ ಹ್ಯೂರೋಜ್ ಸಾಹೇಬನು ಯಮುನಾನದಿಯ ಉತ್ತರ ಕಡೆಗೆ ಭದ್ರತೆ ಗೋಸ್ಕರ ಬಂದಿದ್ದ ಕರ್ನಲ್ ಮ್ಯಾಕ್ಸ್ವೆಲ್ ಸಾಹೇಬನನ್ನು, ಅವನ ಸೈನ್ಯ ಸಹಿತ ಹೊರಟುಬಂದು, ಕಾಲ್ಪಿಗೆ ಸೇರುವಹಾಗೆ ಕಳುಹಿಸಬೇಕೆಂತ, ಕಮ್ಯಾಂಡರ್ ಇನ್ ಚೀಫ್

ಸಾಹೇಬನಿಗೆ ಬರೆದು ಕಳುಹಿಸಿದನು. ಆ ಪ್ರಕಾರ ಆತನ ಕಡೆಯಿಂದ 88 ನೇ ಪಟಾಲಂನ ಎರಡು ಭಾಗಗಳು ಮತ್ತು ಸಿಕ್ ಜನಗಳ ಒಂದು ಪಟಾಲಂ ಮತ್ತು ಒಂಟೆಯ ಮೇಲಿನ ಒಂದು ಇರಸಾಲೆ ಸಹ ಸರ್ ಹ್ಯೂರೋಜ್ ಸಾಹೇಬನ ಸಹಾಯಕ್ಕೆ ಬಂದವು. ಸರ್ ಹ್ಯೂರೋಜ್ ಸಾಹೇಬನು ಪುನಃ ತನ್ನ ಸರ್ವ ಸೈನ್ಯವನ್ನ ಚನ್ನಾಗಿ ಸರಿಪಡಿಸಿಕೊಂಡು, ಕಾಲ್ಪಿಯ ಹತ್ತರ ಹತ್ತರಕ್ಕೆ ಪ್ರಯಾಣ ಮಾಡಿದನು. ಪರಂತು ಆ ಪ್ರದೇಶವು ಎತ್ತರವಾದ ಗುಡ್ಡಗಳಿಂದ ತುಂಬಿದ್ದ ಕಾರಣ, ಮತ್ತು ಕಾಲ್ಪಿಯ ಮುಖ್ಯ ಮಾರ್ಗದಮೇಲೆ ದಂಗೇ ಜನಗಳು ಶಿದ್ಧರಾಗಿ ಯಿದ್ದ ಕಾರಣ, ಅವರ ಎದುರಿನಲ್ಲಿ ಹೋಗುವದು ಸರಿಯಾದದ್ದಲ್ಲವೆಂತ ಆತನಿಗೆ ತೋರಿಬಂತು. ಆದ್ದರಿಂದ ಆತನು ಕಾಲ್ಪಿಯ ಸುತ್ತಲಿನ ಪ್ರದೇಶಕ್ಕೆ ಮುತ್ತಿಗೆ ಹಾಕಿ, ಬಲಹೀನವಾಗಿದ್ದ ಸ್ಥಳಗಳನ್ನು ಹುಡಿಕಿ ತೆಗೆದು, ಅದನ್ನ ಸೋಲಿಸಬೇಕೆಂತ ಯೋಚಿಸಿದನು.

ತಾರೀಖು 25 ನೇ ದಿವಸ, ಇಂಗ್ರೇಜಿ ಸೈನ್ಯವು ಕಾಲ್ಪಿಗೆ 5 ಮೈಲಿಗಳ ದೂರದಲ್ಲಿರುವ ಗಲಾವಲಿ ಎಂಬ ಒಂದು ಊರಿಗೆ ಬಂದು ಸೇರಿತು. ಈ ವರ್ತಮಾನವು ಕಾಲ್ಪಿಯ ಸೈನ್ಯಕ್ಕೆ ತಿಳಿದ ಕೂಡಲೆ, ಅವರು ಆ ಸೈನ್ಯವು ನೆಟ್ಟಗೆ ಮಾರ್ಗ ಹಿಡಿದು ಕಾಲ್ಪಿಯ ಸಮರಾಂಗಣಕ್ಕೆ ಬಂದೀತೆಂಬ ತಿಳುವಳಿಕೆಯ ಮೇಲೆ ಅವಸರಬಟ್ಟು ಅವರಮೇಲೆ ಬಿದ್ದರು ; ಮತ್ತು ಅವರನ್ನು ನಿಲ್ಲಿಸುವದಕ್ಕೆ ಪ್ರಯತ್ನ ಪಟ್ಟರು. ಪಹರೆಯಮೇಲೆ ಗ್ವಾಲಿಯರ್ ಸೈನ್ಯವು ಪುಷ್ಕಳವಾಗಿತ್ತು. ಅವರು ಬಹಳ ಬಲವಾಗಿ ಇಂಗ್ರೇಜಿಯವರ 25 ನೇ ನೇಟಿವ್ ಇನ್ಫೆಂಟ್ರಿ ಸೈನ್ಯದಮೇಲೆ ಬಿದ್ದು, ಅನೇಕ ಜನಗಳನ್ನು ಕೊಂದುಹಾಕಿದರು ; ಮತ್ತು ಅನೇಕರನ್ನು ಘಾಯಮಾಡಿದರು. ಇಂಗ್ರೇಜಿ ಸೈನ್ಯವು ಒಂದೇಕಡೆ ಇಲ್ಲದಿದ್ದರಿಂದ, ಈ ಅಲ್ಪ ಯುದ್ಧದಲ್ಲಿ ಅವರ ಸಾಮರ್ಥ್ಯವು ಎಳ್ಳಿನಷ್ಟಾದರೂ ಭಂಗವಾಗಲಿಲ್ಲ. ಗ್ವಾಲಿಯರ್ ಸೈನ್ಯ ಮಾತ್ರ ಭಂಗಿ ತಿಂದು, ಈ ಅಲ್ಪ ಜಯದಿಂದ ಕೂಡಲೆ ಉಬ್ಬಿಹೋಗಿ, " ನೀವು ಝಾಁಸಿ ಸುಲಿದುಕೊಂಡಿದ್ದೀರಿ ; ಮತ್ತು ಈಗ ಕಾಲ್ಪಿಕಡೆಗೆ ಬರುತ್ತಿರುವಿರೇನು ? ಚನ್ನಾಗಿದೆ. ಬನ್ನಿ ! ನಿಮ್ಮ ಸಮಾಚಾರವನ್ನು ತೆಗೆದುಕೊಳ್ಳುವದಕ್ಕೆ ನಾವು ಸಮರ್ಥರಾಗಿದ್ದೇವೆ !! " ಇಂಥಾ ಆತ್ಮಸ್ತುತಿಯ ಬಡಾಯಿ ಹೊಡೆದು, ಹಿಗ್ಗಲಿಕ್ಕೆ ಪ್ರಾರಂಭಿಸಿದರು. ಇತ್ತಲಾಗಿ ತಾರೀಖು 16 ನೇ ದಿದಸ, ಮೇಜರ್ ಆರ್ ಸಾಹೇಬನ ಕೈಕೆಳಗಿನ ಇನ್ನೊಂದು ಬ್ರಿಗೇಡಿನ ಸೈನ್ಯಕ್ಕೂ ಮತ್ತು ದಂಗೇಖೋರರಿಗೂ ಸ್ವಲ್ಪ ಯುದ್ಧ ನಡೆಯಿತು. ತಥಾಪಿ ಸರ್ ಹ್ಯೂರೋಜ್ ಸಾಹೇಬನು, ದಯಾಪುರವೆಂಬ ಒಂದು ಊರಿನ ಹತ್ತರ ತನ್ನ ಸೈನ್ಯವನ್ನ ತೆಗೆದುಕೊಂಡು ಹೋಗಿ, ಅಲ್ಲಿ ಒಂದು ಒಳ್ಳೇ ಆಶ್ರಯ ಜಾಗವನ್ನು ಹುಡುಕಿ ನಿಂತುಕೊಂಡು; ಅನಂತರ ಅಲ್ಲಿಂದ ಶತ್ರುಗಳಮೇಲೆ ಹೊಡೆಯುವದಕ್ಕೆ ಪ್ರಾರಂಭಿಸಿದನು. ಆದ್ದರಿಂದ ಆಗಲೇ ಅವರ ಅವಸ್ಥೆಯು ಹೀನಸ್ಟಿಗೆ ಬಂದು ಹಿಂತಿರುಗಬೇಕಾದ ಸಂಭವ ಬಂತು. 2 ನೇ ಬ್ರಿಗೇಡಿಯರ್ ಸೈನ್ಯವೂ ಕೂಡ, ತಮ್ಮ ಸ್ಥಳವು ಶತ್ರುಗಳ ಕಡೆಗೆ

ಹೋಗಬಾರದೆಂಬುವದಕ್ಕಾಗಿ ಬಹಳ ನಿಕರವಾದ ಯುದ್ಧ ಮಾಡಿದರು; ಮತ್ತು 71 ನೇ ಹೈಲಾಂಡರ್ಸ್ ಪಟಾಲಂನವರು ದಂಗೇಖೋರರನ್ನು ಸಂಹಾರಮಾಡುವ ಕ್ರಮವನ್ನು ನಡಿಸಿದರು. ಇಂಗ್ರೇಜಿಯ ಸೈನ್ಯವು ಹಿಡದುಕೊಂಡಿದ್ದ ಸ್ಥಳಕ್ಕೂ ಮತ್ತು ಕಾಲ್ಪಿಗೂ ಪುಷ್ಕಳ ದೂರವಿದ್ದು, ಆ ಮಧ್ಯದಲ್ಲಿ ಹಾವು ಹರಿದಹಾಗೆ, ಚಿಕ್ಕ ದೊಡ್ಡ ಕೇಳುದಾರಿಗಳ ಒಂದೇ ಪ್ರಕಾರವಾದ ಮಾಲಿಕೆಯು ದಕ್ಷಿಣಕಡೆ ಯಮುನಾನದಿಯ ಪರ್ಯಂತರ ಹೋಗಿತ್ತು. ಅವರಮೇಲೆ ತೋಫುಖಾನೆ ತೆಗೆದುಕೊಂಡು ಹೋಗುವದು ಶುದ್ಧಾಂಗ ಅಸಾಧ್ಯವಾಗಿತ್ತು. ಈ ಕಾರಣದಿಂದ ಕಾಲ್ಪಿಯ ಕಡೆ ಪಾಯದಳಕ್ಕೆ ಬಹಳ ಸುಲಭವಾದ ಮತ್ತು ಉತ್ಕೃಷ್ಟವಾದ ಜಾಗವು ಸಿಕ್ಕಿತ್ತು. ಈ ತಗ್ಗು ಎತ್ತರದ ಗುಡ್ಡ ಪ್ರದೇಶದ ಯೋಗದಿಂದ ಕಾಲ್ಪಿಯ ಸಂರಕ್ಷಣೆಯು ಸ್ವಾಭಾವಿಕವಾಗಿಯೇ ಆಗಿತ್ತು. ಅಲ್ಲದೆ, ಮಳೆಗಾಲದಲ್ಲಿ ಯಮುನಾ ನದಿಯ ಮಹಾ ಪ್ರವಾಹ ಬಂದು, ಎರಡು ದಂಡೆಗೂ ತುಂಬಿ ಹರಿಯಲಿಕ್ಕೆ ಪ್ರಾರಂಭಿಸಿದರೆ, ಕಾಲ್ಪಿಗೆ ಶತ್ರುವಿನ ಭಯವು ಶುದ್ಧಾಂಗ ವಿರಲಿಲ್ಲ. ತಿರುಗಿ, ಬೇಸಿಗೆಕಾಲದಲ್ಲಿ ಯಮುನಾ ನದಿಯು ತಾರೇಕಾಯಿ ಗಿಡಗಳ ಮಧ್ಯದಲ್ಲಿ, ಅನಾಯಾಸವಾಗಿ ಗುಪ್ತದಿಂದ ಹೋಗಿ, ಪುನಃ ಶತ್ರುಗಳಮೇಲೆ ಬೀಳುವದಕ್ಕೆ ದಂಗೇ ಜನಗಳಿಗೆ ಸಲೀಸಾದ ಮಾರ್ಗವಿತ್ತು. ಅಲ್ಲಿ ಕಾಲ್ಪಿಯ ದಕ್ಷಿಣಕ್ಕೆ ಮುಖ್ಯ ಮಾರ್ಗದ ಪಾರ್ಶ್ವದಲ್ಲಿ, 84 ಶೂರ ಸರದಾರರುಗಳ ಗೋರಿಗಳ ಕಟ್ಟಡವು ತಮ್ಮ ಭವ್ಯ ಸ್ವರೂಪವನ್ನ ತೋರಿಸಿ, ತಮ್ಮ ಸೈನ್ಯವನ್ನು ಸಂರಕ್ಷಣೆ ಮಾಡುವದಕ್ಕೆ ಪೂರ್ಣ ಸಮರ್ಥರಾಗಿದ್ದೇವೆಂತ ವ್ಯಕ್ತಪಡಿಸುತ್ತಿದ್ದವು; ಮತ್ತು ಅದರ ಈಚೆಗೆ ಸರ್ವವೂ ಹಾಳು ಪ್ರದೇಶವಾಗಿತ್ತು. ಹೀಗಿರುವಾಗ ಇಂಥಾ ಭದ್ರವಾದ ಸ್ಥಳದಮೇಲೆ ಪ್ರಯಾಣಮಾಡಿ ಹೋಗುವದು ಇಂಗ್ರೇಜಿ ಸೈನ್ಯಕ್ಕೆ ಎಷ್ಟು ಅಸಾಧ್ಯ ಮತ್ತು ಕಷ್ಟವಾಗಿತ್ತೆಂಬುವದನ್ನ ಸಹಜವಾಗಿ ಊಹಿಸಬಹುದು.

ಸರ್ ಹ್ಯೂರೋಜ್ ಸಾಹೇಬನು ಇದನ್ನೆಲ್ಲಾ ಮನಸ್ಸಿನಲ್ಲಿ ಯೋಚಿಸಿಕೊಂಡು, ಒಂದೇಸಲ ಕಾಲ್ಪಿಯಮೇಲೆ ಹೋಗುವ ಆಲೋಚನೆಯನ್ನು ನಿಲ್ಲಿಸಿ, ಗಲಾವಲಿ ಊರಿನಲ್ಲಿ ಸರಿಯಾದ ಒಂದು ಆಶ್ರಯ ಸ್ಥಳವನ್ನ ನೋಡಿ, ಅಲ್ಲಿ ತನ್ನ ಸೈನ್ಯವನ್ನು ನಿಲ್ಲಿಸಿಕೊಂಡನು. ಆ ಸಮಯದಲ್ಲಿ ಕಾಲ್ಪಿ ಸೈನ್ಯಕ್ಕೆ ವಿಶೇಷ ಆವೇಶಯಿದ್ದು, ಅವರು ಯಮುನಾ ನದಿಯಮೇಲೆ ಪ್ರಮಾಣಮಾಡಿ, ಇಂಗ್ರೇಜಿ ಸೈನ್ಯವನ್ನ ಸುಟ್ಟುಬಿಡುತ್ತೇವೆ, ಅಥವ ತಾವು ರಣ ಮಧ್ಯದಲ್ಲಿ ಪ್ರಾಣ ಬಿಡುತ್ತೇವೆಂತ ಸಂಕಲ್ಪ ಮಾಡಿದ್ದರು. ಯಾವ ಯಾವಾಗ ನಿರಾಶೆ ಯೋಗದಿಂದ ವಿಲಕ್ಷಣವಾದ ಆವೇಶ ಯಿದ್ದಿತೋ, ಆಗ್ಯೆ ಆ ಸೈನ್ಯಕ್ಕೆ ಕುಂಚನಗರದಲ್ಲಿ ಆಕಸ್ಮಿತವಾಗಿ ತಮಗೆ ಆದ ಅಪಜಯವೂ ಸಹನವಾಗದೆ, ಅವರು ಇಂಗ್ರೇಜಿ ಸೈನ್ಯವನ್ನು ಯಮುನಾ ನದಿಯ ಗಡಿಯ ಆಚೆಗೆ ಹಾಕುವದನ್ನು ನಿಶ್ಚಯ ಮಾಡಿದರು; ಮತ್ತು ಅವರ ಕ್ಷಣಿಕ ಆವೇಶದಿಂದ, ಯೇನಾದರೂ ಒಂದು ಭಯಂಕರ ಕೆಲಸವಾದೀತೆಂತ ತೋರಿಬಂತು. ಪರಂತು, ಸಿಂಹದ ದರುಶನವಾ

ಗುವದಕ್ಕಿಂತ ಮುಂಚೆ ನರಿಯು ಘರ್ಜನೆಗೆ ಹೇಗೆ ಮಹಾತ್ಮೆ ಬರುತ್ತದೆಯೋ, ಹಾಗೆ ಅವರ ಸ್ಥಿತಿ ಇತ್ತು. ಬ್ರಿಗೇಡಿಯರ್ ಸ್ಟ್ಯೂವರ್ಟ್ ಲೆ. ಕ. ರಾಬರ್ಟ್‌ಸನ್ ಮತ್ತು ಲೆ. ಗಾರ್ಡನ್ ಮುಂತಾದ ರಥಿ ಮಹಾರಥಿಗಳು ತಮ್ಮ ಧನುರ್ಬಾಣಗಳನ್ನ ಸಿದ್ಧಮಾಡಿಕೊಂಡು, ಮುಂದೆ ಪ್ರಯಾಣಮಾಡಿ ಬರುತ್ತಲೆ, ಆ ಕ್ಷಣಮಾತ್ರ ಆವೇಶ ತೋರಿಸತಕ್ಕ ಸೈನ್ಯದ ಮರ್ದಶೆಯು ಆಗಲೇ ಹಾರಿತು. ಇದಕ್ಕೆ ಕಾರಣವೇನಂದರೆ, ಆ ಸೈನ್ಯದವರು ಶತ್ರುಗಳಮೇಲೆ ಮುತ್ತಿಗೆ ಹಾಕುವ ಉದ್ದೇಶದಿಂದ ತಮ್ಮ ಸುರಕ್ಷಿತವಾದ ಸ್ಥಳವನ್ನು ಬಿಟ್ಟು ಬಿಟ್ಟು, ವ್ಯರ್ಥವಾಗಿ ಇಂಗ್ರೇಜಿಯವರ ಏಟಿಗೆ ಸರಿಯಾಗಿ ಬಂದಿದ್ದರು. ಅವರ ಗುಂಡುಗಳು ಇಂಗ್ರೇಜಿ ಸೈನ್ಯಕ್ಕೆ ಶುದ್ಧಾಂಗ ತಗಲದೇ ಹೋಗಿ, ತಿರುಗಿ ಇಂಗ್ರೇಜಿ ಸೈನ್ಯದ ತೋಫುಗಳು ತಮ್ಮ ಕೆಲಸವನ್ನು 16 ಆಣೆಗೆ ಪೂರೈಸಿ, ಅವರನ್ನು ಸುಡಲು ಪ್ರಾರಂಭಿಸಿದವು. ಕಾಲ್ಪಿ ಸೈನ್ಯದವರು ತಮ್ಮ ಸಂರಕ್ಷಣೆಗೋಸ್ಕರ ಭಗೀರಥ ಪ್ರಯತ್ನಮಾಡಿ, ಬಹಳ ನಿಕರದಿಂದ ಇಂಗ್ರೇಜಿ ಸೈನ್ಯದವರಮೇಲೆ ಬಿದ್ದರು. ಆದಾಗ್ಯೂ ಕೊನೆಗೆ ಅವರಿಗೇನೂ ಒಳ್ಳೇದಾಗಲಿಲ್ಲ. ತಿರುಗಿ, ಅವರಿಗೇನೇ ದೀಪಕ್ಕೆ ಪತಂಗ ಬಿದ್ದಹಾಗೆ ದುರ್ದಶಾ ಬಂದು ವದಗಿತು. ಕಾಲ್ಪಿ ಸೈನ್ಯದ ಬಲವನ್ನು ನೋಡಿ, ಹೈದರಾಬಾದ್ ಪಟಾಲಂನವರು ಮುಂದರಿಸಿ ಆಗಲೇ ಅವರನ್ನ ಚದುರಿಸಿಬಿಟ್ಟರು. ಈ ರೀತಿಯಾಗಿ ಕಾಲ್ಪಿಯ ಮುಂದಿನ ಸೈನ್ಯದವರ ಅಪಜಯ ವರ್ತಮಾನವು ಇತರ ಭಾಗದಲ್ಲಿ ತಿಳಿದ ಕೂಡಲೆ, ಅಲ್ಲಲ್ಲಿ ನಿರಾಶೆ ಯುತ್ಪನ್ನವಾಯಿತು. ರಾವ್ ಸಾಹೇಬ್ ಪೇಶ್ವೆ, ಬಾಂದೇವಾಲೆ ನವಾಬ್, ಪ್ರಭೃತಿ ಮುಖ್ಯ ಯುದ್ಧಶಾಲಿಗಳು ಚಿಂತಾಗ್ರಸ್ತರಾಗಿ ಪಲಾಯನ ಮಾಡಲು ಯೋಚಿಸುವದಕ್ಕೆ ಪ್ರಾರಂಭಿಸಿದರು. ಆಗ ರಾಣಿ ಸಾಹೇಬಳು ಅವರಿಗೆ ಸ್ವಲ್ಪ ಧೈರ್ಯಕೊಟ್ಟು, ತನ್ನ ಕುದುರೆಯನ್ನು ಮುಂದಕ್ಕೆ ತರಿಸಿ ಅದರಮೇಲೆ ಕೂತುಕೊಂಡು, ಲಾಲಾವರ್ದಿ ಜನಗಳನ್ನು ಸಂಗಡ ತೆಗದುಕೊಂಡು ಇಂಗ್ರೇಜಿಯವರ ಬಲಪಾರ್ಶ್ವದ ಮೇಲೆ ಹಬಳ ವೇಗದಿಂದ ಪ್ರಯಾಣ ಮಾಡಿದಳು. ಆಕೆಯು ಸುಂಡ್ರಗಾಳಿಯಂತೆ ಬಂದ ಆಕಸ್ಮಿಕ ಈ ಮೇಲು ಬೀಳುವಿಕೆಯಿಂದ ಇಂಗ್ರೇಜಿ ಸೈನ್ಯವು ಒಂದೇ ಉಸುರಿಗೆ ಹಿಂದಕ್ಕೆ ಸರಿಯಿತು ; ಮತ್ತು ಕೆಲವುಕಾಲ ಅವರಿಗೆ ಬಹಳ ಕಷ್ಟ ಸಂಭವಿಸಿತು. ರಾಣಿ ಸಾಹೇಬಳು ಆ ಸಮಯದಲ್ಲಿ ಎಷ್ಟರಮಟ್ಟಿಗೆ ನಿಕರವಾದ ಯುದ್ಧಮಾಡಿದಳೆಂದರೆ, (ಲಯಿಟ್ ಫಿಡಲ್) ತೋಫುಗಳಮೇಲಿನ ಸೈನ್ಯವು ಕೆಲವುಕಾಲ ಸುಮ್ಮನೆ ಏನೂ ತೋರದೇ ನಿಂತು ಬಿಟ್ಟು ಮತ್ತು ಅವರ ತೋಫುಗಳು ನಿಂತು ಹೋದವು. ಇಷ್ಟೇಅಲ್ಲದೆ, ರಾಣೀ ಸಾಹೇಬಳು ಆ ತೋಫುಗಳ ಇಪ್ಪತ್ತು ಅಡಿಗಳ ಪರ್ಯಂತರ ಮುಂದರಿಸಿ ಹೋದಳು. ರಾಣಿ ಸಾಹೇಬಳ ಈ ಬಲವಾದ ಯುದ್ಧದಿಂದ ಕಾಲ್ಪಿಯ ಇತರ ಸೈನ್ಯಕ್ಕೆ ಕೂಡ ಧೈರ್ಯಬಂದು, ಅದೂನೂ ಇಂಗ್ರೇಜಿ ಸೈನ್ಯದಮೇಲೆ ಪ್ರಯಾಣ ಮಾಡಿತು. ಆದಕಾರಣ ಉಭಯಕಡೆಯ ಜನಗಳೂನೂ ಕೈ ಕೈ ಹಚ್ಚುವದಕ್ಕೆ ಬಂದು, ಹೆಸರಾದ ಯುದ್ಧವು ವದಗಿತು. ಆ ಕಾಲದಲ್ಲಿ ರಾಣೀ ಸಾಹೇಬಳು ತನ್ನ ಶ್ವೇತಾಶ್ವವನ್ನು ವೇಗವಾಗಿ ಓಡಿಸಿಕೊಳ್ಳುತ್ತಾ ತನ್ನ ಶಸ್ತ್ರದ ಕೈಯನ್ನು ಬಹಳ

ಚಮತ್ಕಾರವಾಗಿ ನಡೆಸುತ್ತಾ, ಇಂಗ್ರೇಜಿ ತೋಫ್ಖಾನೆಯ ಮೇಲೆ ಹತ್ತಿಹೋದಳು. ಆಗ ಆಕೆಯ ವೀರಶ್ರೀಯ ಆವೇಶ ಮತ್ತು ಧೀರತನವನ್ನು ಅವಲೋಕನಮಾಡಿ, ಪೇಷ್ವೆಯ ಇತರ ಸೇನಾಪತಿಗಳಿಗೆ ಸಹ ವಿಲಕ್ಷಣವಾದ ಆವೇಶವು ಹುಟ್ಟಿತು ; ಮತ್ತು ಅವರೂನೂ ಇಂಗ್ರೇಜಿ ಸೈನ್ಯದವರ ಮೇಲೆ ಕೇವಲ ನಿಶ್ಚಯಿಸಿ ಬಿದ್ದರು. ಆ ಸಮಯದಲ್ಲಿ ಎದ್ದ ರಣ ಧೂಳನ್ನು ನೋಡಿ, ದಂಗೇಖೋರರದ್ದು ಹೆಚ್ಚಾಗಬಹುದೆಂತ ಖಂಡಿತವಾಗಿ ತೋರಿಬಂತು. ಇಂಗ್ರೇಜಿ ತೋಫ್ಖಾನೇ ಮೇಲಿನ ಸೈನ್ಯವು ಹತವೀರ್ಯರಾಗಿ ಹೋಗಿ, ಯುದ್ಧವನ್ನು ಬಿಟ್ಟು ಓಡಲಿಕ್ಕೆ ಪ್ರಾರಂಭಿಸಿದರು ; ಮತ್ತು ಕುದುರೆಯ ಮೇಲಿನ ತೋಫ್ಖಾನೆ ಬಿದ್ದುಹೋಗಿ, ಇತ್ತಲಾಗಿ ಅತ್ತಲಾಗಿ ಅವ್ಯವಸ್ಥೆಯಾಗುವ ಚಿನ್ಹೆಯು ಕಂಡುಬಂತು. ಆಗ ಬ್ರಿಗೇಡಿಯರ್ ಸಿ. ಎಸ್. ಸ್ಟ್ಯೂವರ್ಟ್ ಸಾಹೇಬನು ತನ್ನ ಕುದುರೆಯನ್ನು ಓಡಿಸಿಕೊಳ್ಳುತ್ತಾ, ತೋಫ್ಖಾನೆಯ ಹತ್ತರಕ್ಕೆ ಬಂದು, ಆ ಜನಗಳಿಗೆ ಅತಿಶಯ ಪ್ರೋತ್ಸಾಹವನ್ನು ಕೊಟ್ಟು, ಅವರ ಕಡೆಯಿಂದ ಪುನಃ ತೋಫು ಬಿಡಲಿಕ್ಕೆ ಪ್ರಾರಂಭ ಮಾಡಿಸಿದನು. ದೊಡ್ಡ ಪರಾಕ್ರಮದಿಂದ ಕಾಲ್ಪಿ ಸೈನ್ಯದವರು ಇಂಗ್ರೇಜಿ ಸೈನ್ಯವನ್ನು ಸೋಲಿಸಿ, ಅವರ ತೋಫುಗಳನ್ನ ನಿಲ್ಲಿಸಿದರೆಂಬ ವರ್ತಮಾನವು ಸರ್ ಹ್ಯೂರೋಜ್ ಸಾಹೇಬನಿಗೆ ತಿಳಿದಕೂಡಲೆ, ಅವನು ತನ್ನ ಒಂಟೆಯಮೇಲಿನ ಸೈನ್ಯವನ್ನು ತೆಗೆದುಕೊಂಡು ಶೀಘ್ರವಾಗಿ ಅಲ್ಲಿಗೆ ಬಂದು ಸೇರಿದನು ; ಮತ್ತು ಅವನು ಸ್ವತಃ ಮುಂದಾಳುತನವನ್ನ ವಹಿಸಿ, ಕಾಲ್ಪಿ ಸೈನ್ಯದಮೇಲೆ ಬಲವಾಗಿ ಬಿದ್ದನು : ಮತ್ತು ಅವರ ಭಾಗವನ್ನು ಒಡೆದು, ಅವರನ್ನ ಪರಾಭವ ಮಾಡಿಬಿಟ್ಟನು. *

---

* ಸರ್ ಹ್ಯೂರೋಜ್ ಸಾಹೇಬನ ಒಂಟೆಯಮೇಲಿನ ಸೈನ್ಯವು ಸಹಾಯಕ್ಕೆ ತಕ್ಕ ಸಮಯದಲ್ಲಿ ಬಂತು ; ಮತ್ತು ಆ ಸೈನ್ಯದಿಂದ ದಂಗೇಖೋರರನ್ನ ಜಯಿಸಿದರೆಂಬುವದನ್ನ ನೋಡಿ, ಇಂಗ್ರೇಜಿ ಅಧಿಕಾರಿಗಳಿಗೆ ಒಂಟೆಯನ್ನು ನೋಡಿದರೆ ಬಹಳ ಪ್ರೀತಿ ಮತ್ತು ಅಭಿಮಾನ ಉತ್ಪನ್ನವಾಯಿತು ಯೆಂಬ ಮಾತು, ಚನ್ನಾಗಿ ಲಕ್ಷ್ಯೆಯಿಲ್ಲಿಟ್ಟುಕೊಳ್ಳತಕ್ಕದ್ದಾಗಿಯೂ ಮತ್ತು ಮನೋಹರವಾದ್ದಾಗಿಯೂ ಇದೆ. ಆ ಯುದ್ಧದಲ್ಲಿ ಪ್ರತ್ಯಕ್ಷವಾಗಿದ್ದ ಒಬ್ಬ ಗೃಹಸ್ಥನು, ಕರ್ನಲ್ ವ್ಯಾಲಿರ್ಸ ಸಾಹೇಬನಿಗೆ ಒಂದು ಪತ್ರ ಬರೆದಿರುತ್ತಾನೆ. ಅದರಲ್ಲಿ ಅವನು ತಿಳಿಸಿರುವದೇನಂದರೆ :—

"Well do I remember that day. Nearly four hundred of my regiment, the '86' were *hors de combat*, the native regiment was not much better, and thousands of yelling savages were pressing on, a river in our rear, We were well-nigh beaten, when the camel

ಕಾಲ್ಪಿಯ ಸೈನ್ಯದಲ್ಲಿ ಸರ್ವ ಜನಗಳೂನೂ ವಿಪರೀತವಾಗಿ ಭಂಗೀ ಸೇದಿದ್ದು ಅದರ ಅಮಲಿನಿಂದ ಕೆಲವು ಕಾಲ ಪರ್ಯಂತರ ಆವೇಶದಿಂದ ಯುದ್ಧಮಾಡಿದರು. ಪರಂತು 86 ಮತ್ತು 84 ನೇ ಪಟಾಲಂನವರು ಯಾವಾಗ ಪ್ರಯಾಣಮಾಡಿ ಬಂದರೋ ಮತ್ತು ಸರ್ ಹ್ಯೂರೋಜ್ ಸಾಹೇಬನ ಒಂಟೆಯ ಮೇಲಿನ ಸೈನ್ಯದವರು ನೀರಿನ ಧಾರೆಯಂತೆ, ಸಹಿಸ ಲಸಾಧ್ಯವಾದ ಬಾಣಗಳ ಮಳೆಯನ್ನು ಕರೆದರೋ, ಆ ಸಮಯ ದಲ್ಲಿ ಆ ಜನಗಳು ಕೇವಲ ನಿಸ್ತೂಕವಾಗಿ ಹೋಗಿ, ಹತ್ತು ದಿಕ್ಕುಗಳಿಗೂ ಓಡಲಿಕ್ಕೆ ಪ್ರಾರಂಭಿಸಿದರು. ರಾಣೀ ಸಾಹೇಬಳು ಮುಂದರಿಸಿ ದೊಡ್ಡ ಪರಾಕ್ರಮವನ್ನು ತೋರಿ ಸಿದಳು; ಮತ್ತು ಅವರ ಸೈನ್ಯದ ಬಾಣಗಳನ್ನ ನಿಲ್ಲಿಸಿ, ಅವರನ್ನ ಹಿಂದಟ್ಟಿ ಬಳ್ಳೇ ಸಾಹಸ ಮಾಡಿದಳು. ಪರಂತು ಆಕೆಗೆ ಸಹಾಯ ಮಾಡುವದಕ್ಕೆ ಬರತಕ್ಕ ಪೇಷ್ವೆಯ ಸೈನ್ಯವು ಸರ್ ಹ್ಯೂರೋಜ್ ಸಾಹೇಬನ ಪಾರ್ಶ್ವದ ಯುದ್ಧದಲ್ಲಿ ಸಿಕ್ಕು, ಹಿಂದೆ ಹಿಂದೆ ನಿಂತುಹೋದಕಾರಣ, ಆಕೆಗೂ ಅಪಯಶಸ್ಸು ತಂದು, ಹಿಂದಕ್ಕೆ ತಿರುಗುವ ಸಂಭವ ಬಂತು. ಈ ಪ್ರಕಾರವಾಗಿ ರಾಣೀ ಸಾಹೇಬಳು ಪೇಷ್ವೇ ಸೈನ್ಯದ ಅವ್ಯವ ಸ್ಥತೆಯಿಂದ ಸತ್ತುಹೋದಹಾಗೆ ಆಗಿ, ರಾವ್ ಸಾಹೇಬ್ ಪೇಷ್ವೆಯ ಶಿಬಿರಕ್ಕೆ ತಿರುಗಿ ಬಂದಳು.

ಈ ಪ್ರಕಾರವಾಗಿ ಕಾಲ್ಪಿ ಸೈನ್ಯವು ಚದುರಿ ಹೋಗುತ್ತಲೆ, ಸರ್‌ಹ್ಯೂರೋಜ್ ಸಾಹೇಬನ ಸೈನ್ಯವು ಪ್ರತ್ಯೇಕ ಪ್ರತ್ಯೇಕ ದಿಶೆಯಿಂದ ಅವರನ್ನ ಬೆನ್ನಟ್ಟಿ ಹೋಗಿ, ಸಂಹಾರ ಮಾಡುವದಕ್ಕೆ ಪ್ರಾರಂಭಮಾಡಿತು. ಇಂಗ್ರೇಜಿ ಸೈನ್ಯದವರು ದೊಡ್ಡ ವಿಜಯೋತ್ಸವದಿಂದ ಆ ವೇಶವೆದ್ದು, ಸಿಕ್ಕಿದಷ್ಟು ದಂಗೇಖೋರರಮೇಲೆ ತಮ್ಮ ಶಸ್ತ್ರ ವನ್ನ ಪ್ರಯೋಗಿಸಿದರು; ಮತ್ತು ಜಯಧ್ವನಿ ಮಾಡಿಕೊಳ್ಳುತ್ತಾ, ಶತ್ರುಗಳನ್ನ ಯಮಸದನಕ್ಕೆ ಕಳುಹಿಸುವ ಪ್ರಯತ್ನ ಮಾಡಿದರು. ಸ್ವಲ್ಪ ಅವಕಾಶದಲ್ಲಿಯೇ ನೂರಾರು ದಂಗೇಖೋರರು ಇಂಗ್ರೇಜಿ ಸೈನ್ಯದ ಯೇಟಿಗೆ ಸಿಕ್ಕಿ, ಅವರ ಶಸ್ತ್ರಕ್ಕೆ ಬಲಿ

---

corps came up, and about one hundred and fifty fresh troops soon turned the tide, and sent the bhang-possessed enemy to the right about again. It was the camel corps that *literally* saved Sir Hugh Rose's division. The enemy were within twenty yards of our battery and out post tents, the lattery full of men down with sunstroke. Another quarter of an hour and there would have been a massacre. *Ever since that day I have looked upon a camel with eyes of affection.*"

ಯಾಗಿ ಬಿದ್ದರು. ಸಾವಿರಾರು ಜನಗಳು ಭಯಭೀತರಾಗಿ ಯಮುನಾನದಿಯ ತೋಪು ಗಿಡಗಳ ಮಧ್ಯೆ ಜೀವ ಸಂರಕ್ಷಣೆಗೋಸ್ಕರ ಓಡಿಹೋದರು. ಈ ಪ್ರಕಾರವಾಗಿ ಇಂಗ್ರೇಜಿ ಸೇನಾಪತಿ ಸರ್‌ಹ್ಯೂರೋಜ್ ಸಾಹೇಬನು ಬಳ್ಳೆ ಬಂದು ಸರಿಯಾದ ವ್ಯವಸ್ಥೆಯು ಮತ್ತು ಯುದ್ಧಕಾಲದಲ್ಲಿ ಶಿಕ್ಷಿತರಾದ ಸೈನ್ಯಬಲದಿಂದ ಅಸಂಖ್ಯಾಕವಾದ ದಂಗೇಕೋರರನ್ನ ಜಯಿಸಿದನು.

ಪೇಷ್ವೆಯ ಸೈನ್ಯವು ಚದುರಿಹೋದನಂತರ ಸರ್‌ಹ್ಯೂರೋಸ್‌ನು ಅಲ್ಲಿ ಬ್ರಿಟಿಷ್ ಸರ್ಕಾರದ ಧ್ವಜವನ್ನು ಹಾಕುವದಕ್ಕೆ ನಿಶ್ಚಯಮಾಡಿದನು. ಅವನು 1 ನೇ ಬ್ರಿಗೇಡಿನ ಸೈನ್ಯವನ್ನು ಬ್ರಿಗೇಡಿಯರ್ ಸ್ಟ್ಯುವರ್ಟ್ ಸಾಹೇಬನ ಸಂಗಡ ಕೊಟ್ಟು, ಯಮುನಾನದಿಯ ದಂಡೆಯಮೇಲೆ ಕಾಲ್ಪಿಯ ಕಡೆಗೆ ಕಳುಹಿಸಿಕೊಟ್ಟನು. ತಾನು ಸ್ವತಃ ೨ ನೇ ಬ್ರಿಗೇಡಿನ ಅಧಿಪತ್ಯವನ್ನ ತೆಗೆದುಕೊಂಡು, ಕಾಲ್ಪಿರಸ್ತೆಯಿಂದ ನೆಟ್ಟಗೆ ಪಟ್ಟಣದ ಕಡೆಗೆ ಪ್ರಯಾಣ ಮಾಡಿದನು. ಕಾಲ್ಪಿಯ ಕೋಟೆಯಲ್ಲಿ ರಾವ್‌ಸಾಹೇಬ್ ಪೇಷ್ವೆಯು ಪುಷ್ಕಳ ಮದ್ದು, ಗುಂಡು, ಮತ್ತು ಯುದ್ಧಸಾಮಗ್ರಿಗಳನ್ನು ಸಹ ಸೇರಿಸಿಟ್ಟಿದ್ದನು. ಆದ್ದರಿಂದ ಅದರ ಸಂರಕ್ಷಣೆಗೋಸ್ಕರ ಅದ್ಯಾಪಿ, ಅಲ್ಲಿ ಬಹಳ ಸೈನ್ಯವಿತ್ತು. ಇದಲ್ಲದೆ ಯುದ್ಧದಿಂದ ಪಟ್ಟಣಕ್ಕೆ ಓಡಿಬಂದ ಲಷ್ಕರ್‌ನವರು ಅಲ್ಲಿ ಆಶ್ರಯ ತೆಗೆದುಕೊಂಡು ಕೂತಿದ್ದರು ಯೆಂಬುವದರಿಂದ, ಅದರಮೇಲೆ ಇಂಗ್ರೇಜಿ ತೋಪುಖಾನೆ ಅಧಿಕಾರಿ ಕರ್ನಲ್ ಮ್ಯಾಕ್ಸ್ವೆಲ್ ಸಾಹೇಬನು ದೊಡ್ಡ ದೊಡ್ಡ ತೋಪುಗಳಿಂದ ಬೀಗದ ಗುಂಡುಗಳನ್ನು ಬಿಡುವದಕ್ಕೆ ಪ್ರಾರಂಭಿಸಿದನು. ಅದರ ಯೋಗದಿಂದ ಕಾಲ್ಪಿ ಸಂರಕ್ಷಣೆಗೋಸ್ಕರ ಇಟ್ಟ ಸೈನ್ಯವು ಕುಂದಿಹೋಗಿ, ಹಿಂದಕ್ಕೆ ಕಾಲಿಡಲು ಪ್ರಾರಂಭಿಸುತ್ತಲೇ, ಉಳಿದ ಮೂರುಪಾರ್ಶ್ವದಿಂದಲೂ, ಇಂಗ್ರೇಜಿ ಸೈನ್ಯವು ಬಂದು ಸೇರಿತು. ಪೇಷ್ವೆಯ ತೋಪುಖಾನೆಯವರು ಮತ್ತು ಅಲ್ಲಲ್ಲಿ ಮೋರ್ಛೆಯ ಮೇಲಿದ್ದ ಸೈನ್ಯದವರು ಸಹ, ಇಂಗ್ರೇಜಿ ಸೈನ್ಯದವರ ಮೇಲೆ ಹೊಡೆಯಲು ಪ್ರಾರಂಭಿಸಿದರು. ಆದರೆ ವಿರುದ್ಧ ಪಕ್ಷದ ತೋಪುಗಳ ಮುಂದೆ, ಅವರದ್ದೇನೂ ಪ್ರಯೋಜನ ವಾಗದೆ, ಅವರು ಸ್ಥಳ ಬಿಡಬೇಕಾಗಿಬಂತು. ಇಂಗ್ರೇಜಿ ಸೈನ್ಯದವರು ಅವರ ಮೇಲೆಬಿದ್ದು, ಅವರ ನಾಲ್ಕು ಆನೆಗಳನ್ನ ನೆಲಕ್ಕೆ ಕೆಡವಿ, ಕಾಲ್ಪಿಯ ಮುಂದಿನ ಬೈಲಿನಲ್ಲಿ ಇಳಿದುಕೊಂಡರು. ಇಷ್ಟರಲ್ಲಿ ಸರ್‌ಹ್ಯೂ ರೋಜ್‌ನ ಸೈನ್ಯವು ಅಲ್ಲಿಗೆಬಂದು ಸೇರಿತು. ಪಟ್ಟಣ ಮಧ್ಯದಲ್ಲಿ ಪ್ರವೇಶಮಾಡಿದಾಗ ಕಾಲ್ಪಿಯಲ್ಲಿದ್ದ ಸೈನ್ಯವು ಓಡಲಿಕ್ಕೆ ಪ್ರಾರಂಭಿಸಿತು. ಕರ್ನಲ್ ಗಾಲ್ ಮತ್ತು ಹೈದರಾಬಾದ್ ಕಂಟಿಂಜೆಂಟಿನ ಅಧಿಕಾರಿ ಕ್ಯಾಪ್ಟನ್ ರಾಬರ್ಟ್ ಸಾಹೇಬರುಗಳು, ಕೆಲವುಮೈಲಿಗಳ ಪರ್ಯಂತರ ಅವರನ್ನು ಬೆನ್ನಟ್ಟಿಹೋಗಿ, ಅವರ ಪುಷ್ಕಳ ಆನೆ, ಕುದುರೆ, ಒಂಟೆ ಮತ್ತು ತೋಪುಗಳನ್ನ ಹಸ್ತಗತಮಾಡಿಕೊಂಡರು. ಈ ಯುದ್ಧದಲ್ಲಿ ಪುಷ್ಕಳ ಜನಗಳು ಧಾರತೀರ್ಥದಲ್ಲಿ ಮುಳಿಗಿಹೋದರು. ತಾರೀಖು 24 ನೇ ದಿವಸ ಇಂಗ್ರೇಜಿ ಸೈನ್ಯದವರು ಸಂಪೂರ್ಣವಾಗಿ ಕಾಲ್ಪಿ ಪಟ್ಟಣವನ್ನು ಕೈವಶಮಾಡಿಕೊಂಡು, ಅದೇದಿವಸವೇ ಮಹಾರಾಣಿ ವಿಕ್ಟೋರಿಯ ಜನ್ಮ

ದಿವಸವಾಗಿದ್ದ ಕಾರಣ ದೊಡ್ಡ ಆನಂದದಿಂದ ಕಾಲ್ಪಿಯ ಬಯಿಲಿನಲ್ಲಿ ತೋಫಿನ ಬಂದನೆಯನ್ನು ಮಾಡಿ, ತಮ್ಮ ವಿಜಯೋತ್ಸವವನ್ನು ತೋರಿಸಿದರು. ಇಂಗ್ರೇಜಿ ಸೈನ್ಯವು ಕಾಲ್ಪಿ ಪಟ್ಟಣದ ಕಡೆಗೆ ಹೊರಡುತ್ತಲೆ, ಶ್ರೀಮಂತರಾವ್ ಸಾಹೇಬ್ ಪೇಷ್ವೆ, ಮಹಾರಾಣಿ ಲಕ್ಷ್ಮೀಬಾಯಿ ಸಾಹೇಬಳು, ಬಾಂದೇವಾಲೆ ನವಾಬ್, ಮುಂತಾದ ಪ್ರಮುಖ ಮಂಡಲಿಯವರು ಅಲ್ಲಿಂದ ಬಹಳ ಯುಕ್ತಿಯಿಂದ ತಪ್ಪಿಸಿಕೊಂಡು ಹೋದರು. ಆದ್ದರಿಂದ ಇಂಗ್ರೇಜಿಸೈನ್ಯಕ್ಕೆ ಕಾಲ್ಪಿಯ ಕೋಟೆ ಮತ್ತು ಪಟ್ಟಣವನ್ನ ಕೈಗೆ ತೆಗೆದುಕೊಳ್ಳುವದಕ್ಕೆ ಯೇನೂ ಶ್ರಮವಾಗಲಿಲ್ಲ. ಪಟ್ಟಣದೊಳಗೆ ಇದ್ದ ಪೇಷ್ವೆಯ ಸೈನ್ಯವು ಯುದ್ಧ ಕೆಲಸದಲ್ಲಿ ಶುದ್ಧಾಂಗ ಉಪಯೋಗವಿಲ್ಲ ವಾಗಿತ್ತು. ಯಿದಕ್ಕೆ ಕಾರಣವೇನಂದರೆ, ಇಂಗ್ರೇಜಿಯವರಿಗೆ ದಿಲ್ಲಿ, ಲಕ್ನೋ, ಝಾಂಸಿ ಮುಂತಾದ ಸ್ಥಳಗಳಲ್ಲಿ ಜಯವಾದ್ದರಿಂದ, ದಂಗೆಯ ಬಹುಜನಗಳು ನಿರಾಶರಾಗಿ ಹೋಗಿದ್ದರು. ಆದಕಾರಣ ಪುಷ್ಕಳ ತಿಳುವಳಿಕೆಯುಳ್ಳ ಲಷ್ಕರೀ ಜನಗಳು ಜೀವಭೀತಿಯಿಂದ ಪಟಾಲಂಬಿಟ್ಟು, ತಮ್ಮ ಮನೆಗಳ ಸಮೀಪದಲ್ಲೆಲ್ಲಾ ಪ್ರಸಿದ್ಧಿಯಾಗಿದ್ದ ಇಸ್ತಿಹಾರಿಗೆ ಹೆದರೀ, ವೇಷ ಬದಲಾಯಿಸಿಕೊಂಡು, ಬೇರೆ ಉದ್ಯೋಗ ಮಾಡುತ್ತಿದ್ದರು. ಹೊಸದಾಗಿ ಸೇರಿಸಲ್ಪಟ್ಟ ಜನಳು ಇನ್ನೂ ಅಶೀಕ್ಷಿತರಾಗಿದ್ದದ್ದರಿಂದ, ಅವರಿಗೆ ಕವಾಯಿತು ಚನ್ನಾಗಿ ಇಲ್ಲದೆ, ಸಮಯದಲ್ಲಿ ನಿಲ್ಲತಕ್ಕವರಾಗಿರಲಿಲ್ಲ. ಇಷ್ಟೇಅಲ್ಲದೆ, ಒಳ್ಳೇ ಸರದಾರಜನಗಳು ಯುದ್ಧದಲ್ಲಿ ಬಿದ್ದು ಹೋದ್ದರಿಂದ ಹೊಸಜನಗಳಲ್ಲಿ, ಕಳ್ಳರು, ಸುಲಿಗೆಜನಗಳುಮಾತ್ರ ತುಂಬಿದ್ದರೆಂತ ಹೇಳಿದರೂ ಹೇಳಬಹುದು. ಆದಕಾರಣ ಅವರಿಗೆ ಹೆಚ್ಚಾಗಿ ಸುಲಿಗೆಯಲ್ಲಿ ದೃಷ್ಟಿಯಿತ್ತೇ ಹೊರ್ತು, ಯುದ್ಧದಲ್ಲಿ ಲಕ್ಷೆಯಿರಲಿಲ್ಲ. ಕಾಲ್ಪಿಯಲ್ಲಿ ಮೂರುದಿವಸ ಯುದ್ಧ ನಡೆದು, ಕೊನೆಗೆ ಇಂಗ್ರೆಜಿಯವರು ಜಯಹೊಂದಿ, ಪೇಷ್ವೆಯ ಅಪಜಯದ ಚಿನ್ಹೆ ಕಾಣುತ್ತಲೇ, ನೂರಾರು ಜನ ಶಿಪಾಯಿಗಳು ಯುದ್ಧದ ಕೆಲಸಬಿಟ್ಟು, ಪಟ್ಟಣದಲ್ಲಿ ನುಗ್ಗಿ, ಐಶ್ವರ್ಯವಂತರ ಮನೆ ಒಡೆದು, ಸುಲಿಗೆಗೆ ಪ್ರಾರಂಭಿಸಿದರು. ಸಕ್ಕರೆ ಚೀಲಗಳನ್ನು ರಸ್ತೆಯಮೇಲೆ ತಂದು, ಯಳೆದರು. ಸಾವಿರಾರು ಜೀನಸಿನ ಚೀಲಗಳನ್ನ ನಾಶಪಡಿಸಿದರು. ಅದೇ ಮೂರನೇದಿವಸ ಇಂಗ್ರೇಜಿ ಜನಗಳು ಪಟ್ಟಣದ ಒಳಗೆ ಬಂದದ್ದು ಕಣ್ಣಿಗೆ ಕಾಣುತ್ತಲೆ, ಈ ಸುಲಿಗೆಗಾರರ ಸೈನ್ಯವು ಸ್ಥಳವನ್ನು ಬಿಟ್ಟಿತು. ಇಂಗ್ರೇಜಿ ಸೈನ್ಯದವರು ಪಟ್ಟಣದಲ್ಲಿ ನುಗ್ಗುತ್ತಲೆ, ಅವರಿಗೆ ಮಾರ್ಗದಲ್ಲಿ ಹರಡಿದ್ದ ಸಕ್ಕರೆ ಮತ್ತು ಇತರ ನಾನಾಪಥವಾದ ಸುಲಿಗೆಯು ಅನಾಯಾಸವಾಗಿ ಸಿಕ್ಕಿತು. 'ಸಕ್ಕರೆ ತಿನ್ನುವವರಿಗೆ ದೇವರು ಕೊಡತಕ್ಕವನು' ಯಂತಹೇಳುವ ಗಾದೆಗೆ ಸರಿಯಾಗಿ, ಈ ಸಮಯದಲ್ಲಿ ಇಂಗ್ರೇಜಿ ಸೈನ್ಯದವರಿಗೆ ಒಳ್ಳೇ ಅನುಭವಬಂತೆಂತ ಯಾರು ಹೇಳಲಾರರು ? ಇದುಹಾಗಿರಲಿ. ಇಂಗ್ರೆಂಜಿ ಸೈನ್ಯದವರಿಗೆ ಪಟ್ಟಣ ಮಧ್ಯದಲ್ಲಿ ಹೀಗೆ ಸಿಕ್ಕಿದ್ದಕ್ಕಿಂತಲೂ ಸಹಸ್ರಪಾಲು ಹೆಚ್ಚಾಗಿ, ಕೋಟೆಯೊಳಗೆ ಪ್ರಯೋಜನವು ಸಿಕ್ಕಿತು—ಶ್ರೀಮಂತರಾವ್ ಸಾಹೇಬ್ ಪೇಷ್ವೆ ಮತ್ತು ಆತನ ಪ್ರಧಾನಿ ತಾತ್ಯಾಟೋಪಿಸಹ, ಶ್ರಮಪಟ್ಟು ಮಾಡಿದ ಯುದ್ಧ ಸಾಮಗ್ರಿ

ಯಲ್ಲಾ ಇಂಗ್ರೇಜಿ ಸೈನ್ಯಕ್ಕೆ ಕಾಲ್ಪಿ ಕೊಟೆಯೊಳಗೆ ಅನಾಯಾಸವಾಗಿ ಬಂದುಸೇರಿತು. ಅದರಲ್ಲಿ ಬಂದೂಕಿನ ಮದ್ದೇನೆ, 60,000 ಪೌಂಡು ಇತ್ತು. ಅಷ್ಟರಮೇಲೆ ಇತರ ತೋಫುಗಳೂ, ಬಂದೂಕುಗಳು, ಕತ್ತಿಗಳೂ, ಡೇರೆಗಳು, ನಿಶಾನೆಗಳೂ, ಮುಂತಾದು ಎಷ್ಟಿತ್ತೆಂಬುವದು ಊಹಿಸಬಹುದಾಗಿದೆ. ಈ ಎಲ್ಲಾ ಸಾಮನಿನ ಮೌಲ್ಯ ಸುಮಾರು ಎರಡು ಲಕ್ಷ ರೂಪಾಯಿಗಳಿಗಿಂತಲೂ ಹೆಚ್ಚಾಗಿತ್ತೆಂತ ಒಬ್ಬ ಇಂಗ್ರೇಜಿ ಗ್ರಂಥಕಾರನು ಬರೆಯುತ್ತಾನೆ. *

---

* ಕೋಟೆಯೊಳಗಿದ್ದ ಸಾಮಾನಿನ ವರ್ಣನೆಯನ್ನ ಡಾ. ಲೋ ಮತ್ತು ಡಾ. ಸಿಂಹ್ಲೇಸ್ಟರ್, ಈ ಇಬ್ಬರು ಮಾಡಿರುತ್ತಾರೆ. ಡಾ. ಸಿಂಹ್ಲೇಸ್ಟರ್ ಬರೆಯುವದೇನಂದರೆ:—

"There was an indescribable medley here, just as in the fort of Jhansi, but the articles here all pertained to the art of war. There were guns, large and small, numbering fifteen, besides a large mortar and howitzer: there were conical stocks of English round shot and shell, and several sheds in which the manufacture of cannon, howitzers, shells, and the repair of arms, was being carried on. The tools and appliances, such as forges. hammers, vices, smiths' braces etc. were all of English make. Several muskets had been restocked, and very well fitted. There were vast numbers of broken brass shells, which proved they had rather failed in that branch of ordinance manufacture: they had all been cast on clay moulds, and the outside filed smooth. In the arsenal the uniform was knee deep, comprising not only sepoy clothes, but coats that had been taken from Windham's slain, belonging to H. M's 88th Regiment, some bearing the number 92, with the Prince of Wales' plume; also one or two ladies bonnets, together with brass-band instruments, parts of cornopeans, French horns, trumpets, and

ಇದು ಹಾಗಿರಲಿ. ಸರ್ ಹ್ಯೂರೋಜ್ ಸಾಹೇಬನು, ಅನೇಕ ತೊಂದರೆಗಳನ್ನು ಸಹಿಸಿಕೊಂಡು, ಕಾಲ್ಪಿಯಲ್ಲಿ ಅಸದೃಶವಾದ ಜಯವನ್ನು ಸಂಪಾದನೆ ಮಾಡಿದ್ದನ್ನು ಕುರಿತು ಲಾರ್ಡ್‌ಕ್ಯಾನಿಂಗ್ ಸಾಹೇಬನು, ಸನ್ 1858 ನೇ ಇಸವಿ ಮೇ ತಾರೀಖು 24ನೇ ದಿವಸ ಆತನಿಗೆ ತಂತಿಯಿಂದ ಬಂದನೆ ಮಾಡಿದನು. ಅದರಲ್ಲಿ ತಿಳಿಸಿದ್ದೇನಂದರೆ, 'ಇವತ್ತಿನ ಪರ್ಯಂತರ ನೀವು ಒಂದೇ ರೀತಿಯಾಗಿ ಸಂಪಾದಿಸಿದ ಯಶಸ್ಸಿಗೆ ಕಾಲ್ಪಿಯ ವಿಜಯವು ಒಂದು ಕಳಶವಾಗಿದೆ. ಈ ವಿಜಯಕ್ಕಾಗಿ, ನಿಮ್ಮ ಮತ್ತು ನಿಮ್ಮ ಶೂರ ಸೈನ್ಯಕ್ಕೆ ನಾನು ಬಹಳ ಕೃತಜ್ಞನಾಗಿದ್ದೇನೆ.' ಈ ರೀತಿಯಾಗಿ ಸರ್‌ಹ್ಯೂರೋಜ್ ಸಾಹೇಬನು ಸರ್ವಮಧ್ಯ ಹಿಂದುಸ್ಥಾನ ಪ್ರಾಂತ್ಯವನ್ನು ದಂಗೇಖೋರರ ಕೈಯಿಂದ ಬಿಡಿಸಿಕೊಂಡು, ತನ್ನ ವಿಜಯ ಧ್ವಜವನ್ನು ಕಾಲ್ಪಿಯಲ್ಲಿ ಸ್ಥಾಪನ ಮಾಡಿದನಂತರ, ಕಮ್ಯಾಂಡರ್ ಇನ್‌ಚೀಫ್ ಸರ್ ಕಾಲಿನ್ ಕ್ಯಾಂಬೆಲ್ ಸಾಹೇಬನು, ಆತನ ಕೈಕೆಳಗಿನ ಸೈನ್ಯವನ್ನು ಎರಡು ಭಾಗಮಾಡಿ, ಅನುಕ್ರಮವಾಗಿ ಗ್ವಾಲಿಯರ್ ಮತ್ತು ಝಾನ್ಸಿಯಲ್ಲಿನ ಸಂರಕ್ಷಣೆಗೋಸ್ಕರ ಕಳುಹಿಸಿ ಕೊಡಬೇಕೆಂತ ನಿಶ್ಚಯಿಸಿದನು. ಅದೇಪ್ರಕಾರವಾಗಿ ಸರ್ ಹ್ಯೂರೋಜ್ ಸಾಹೇಬನು ಅವಿಚ್ಛಿನ್ನವಾದ ಯುದ್ಧದ ಶ್ರಮದಿಂದ ಕೇವಲ ದಣಿದು ಹೋಗಿದ್ದದ್ದರಿಂದ, ರಜಾ ತೆಗೆದುಕೊಂಡು ಮುಂಬಾಯಿಗೆ ತಿರಿಗಿ ಹೋಗಬೇಕೆಂತ ನಿಶ್ಚಯಮಾಡಿದನು. ಅವನು ಜೂನ್ ತಾರೀಖು 1 ನೇ ದಿವಸ, ತನ್ನ ಕೈಕೆಳಗಿನ ಜನಗಳು, ಅವತ್ತಿನವರೆಗೆ ತೋರಿಸಿದ ಉತ್ತಮ ಶೌರ್ಯವನ್ನು ಬಹಿರಂಗವಾಗಿ ಶ್ಲಾಘನೆ ಮಾಡಿ, ಮನಃಪೂರ್ವಕವಾಗಿ ಅವರಿಗೆ ಬಂದನೆ ಮಾಡಿದನು. * ಅದರಲ್ಲಿಅವನು

---

Infantry bugles, Military drums, flags, standards, Glegarries, stocks etc. etc. under ground, and discovered subsequently, was a vast store of ammunition, including 60,000 pounds of English Gunpowder, shot, shell, and fire arms. In fact, this was the greatest central arsenal of the mutineers, and had it been capable of defence *it would not have fallen such an easy pray to us.*"

*The Compaign in Central India* P. 116—17.

* ಸರ್ ಹ್ಯೂರೋಜ್ ಸಾಹೇಬನು ತನ್ನ ಸೈನ್ಯಕ್ಕೆ ಮುಂದೆ ಬರೆದಿರುವ ಪ್ರಕಾರ ಅಭಿನಂದನೆ ಮಾಡಿದ್ದಾನೆ:—

"Soldiers! you have marched more than a thousand miles, and taken more than a hundred guns;

ಇಂಗ್ರೇಜಿ ಸೈನ್ಯದ ವಿಧೇಯತ್ವ ಮತ್ತು ವ್ಯವಸ್ಥೆಯಿಂದಲೇ, ಎಲ್ಲಾ ಕಡೆಯಲ್ಲಿಯೂ ಜಯಸಂಪಾದನೆ ಆಯಿತೆಂತ ಸ್ಪಷ್ಟವಾಗಿ ಹೇಳಿ, ಅದನ್ನು ಕುರಿತು ಸೈನ್ಯಕ್ಕೆ ಬಹಳವಾಗಿ ಸ್ತೋತ್ರ ಮಾಡಿದನು. ಇದು ಎಷ್ಟು ಯಥಾರ್ಥವಾಗಿದೆ ಯೆಂಬುವದನ್ನ ಪ್ರತ್ಯೇಕವಾಗಿ ಹೇಳಬೇಕಾದ್ದಿಲ್ಲ. ಯಾಕಂದರೆ, ವಿರುದ್ಧ ಪಕ್ಷದ ಸೈನ್ಯದಲ್ಲಿ ವ್ಯವಸ್ಥೆ ಶುದ್ಧಾಂಗ ಇಲ್ಲದಿದ್ದ ಕಾರಣ, ಅವರಿಗೆ ಪ್ರತಿಒಂದು ಸ್ಥಳದಲ್ಲಿಯೂ ಅಪಜಯ ಬಂದುವದಗಿ, ಅದರ ಯೋಗದಿಂದ ಅವರ ಪ್ರಬಲವಾದ ಶಕ್ತಿಯು ಅಸದೃಶವಾದ ಶೌರ್ಯದ, ಅಸಂಖ್ಯಾಕವಾದ ಯುದ್ಧ ಸಾಮಗ್ರಿಯು ಮತ್ತು ಕೊನೆಗೆ ಅಗಣಿತವಾದ ಪ್ರಾಣದ ನಾಶವು ಹೇಗಾಯಿತು, ಮತ್ತು ಒಂದು ತುದಿಯಿಂದ ಇಂಗ್ರೇಜಿಕಡೆಯ ಅಲ್ಪಸೈನ್ಯಕ್ಕೆ ಹೇಗೆಯಶಸ್ಸುಬಂತು, ಎಂಬುವದು ಪ್ರತಿಒಂದು ಸ್ಥಳದ ಯುದ್ಧದಲ್ಲಿಯೂ ಚನ್ನಾಗಿ ತೋರಿಬಂದಿದೆ. ವಸ್ತುತಃ ಕಾಲ್ಪಿಯಂಥಾ, ದುಸ್ಸಾಧ್ಯವಾದ ಯುದ್ಧದ ಸ್ಥಳ, 84 ಕಟ್ಟಡಗಳ ಗೋರಿಗಳುಳ್ಳ

---

you have forced your way through mountain passes and intricate jungles and over rivers; you have captured the strongest forts, and beat the enemy, no matter what the odds, wherever you met him; you have restored extensive districts to the Government, and peace and order now reign where before, for twelve months, were tyranny and rebellion; you have done all this, and you have naver had a check.

"I thank you with all my sincerity for your bravery, your devotion, and your discipline.

"When you first marched I told you that you, as British soldiers, had more than enough of courage for the work which was before you, but that courage without discipline was of no avail, and I exhorted you to let discipline be your watch-word; you have attended to my orders. In hardships, in temptations and in dangers you have obeyed your General, and you never left your ranks.

"You have fought against the strong, and you have protected the rights of the weak and defenceless,

ಬೈಲಿನಂಥಾ, * ಇತಿಹಾಸ ಪ್ರಸಿದ್ಧವಾದ ರಣಾಂಗಣವು, 60,000 ಪೌಂಡಿನ ಮದ್ದು, ನೂರಾರು ತೋಫುಗಳು ಮತ್ತು ಅಸಂಖ್ಯಾಕವಾದ ಸೈನ್ಯ ಸಹ ಅಧೀನದಲ್ಲಿದ್ದು, ಸದಾ ಯಶೋವಂತನಾದ ಪಂತ ಪ್ರಧಾನ ಸಂಶೀರ ಬಹದ್ದೂರನಿಗೂ ಮತ್ತು ಶುಬೇದಾರ ಶಿವ ರಾವ್ ಭಾವೂನ ರಣಧುರಂಧರ ವಂಶಜಳಿಗೂ, ಸ್ವಲ್ಪ ಕೆಂಪು ಮುಖದ ಸೈನ್ಯದ ಮುಂದೆ ವಿರಾಟರಾಯನ ಪುತ್ರನಂತೆ (ಉತ್ತರನು) ಭಯಭೀತರಾಗಿ ಓಡಿಹೋಗಬೇಕಾದ ಸಂಭವ ಬರಬೇಕೆ? ಹೀಗಿರುವಾಗ, ಆ ಪ್ರಕಾರ ಆಗುವದಕ್ಕೆ ಅವ್ಯವಸ್ಥತೆಯೇ ಮುಖ್ಯಕಾರಣವಾಗಿತ್ತೆಂಬುದಕ್ಕೇನೂ ಸಂಶಯವಿಲ್ಲ, ಅಥವ ಅವ್ಯವಸ್ಥತೆ ಯೆಂಬುವದಕ್ಕಿಂತಲೂ ಪರಿಯಾಯವಾಗಿ ದುರ್ದೈವವೆಂತ ಹೇಳುವದು ಚನ್ನಾಗಿದೆ! ಒಂದು ಸಲ ದುರ್ದೈವವು ತನ್ನ ದೃಷ್ಟಿಯನ್ನು ತಿರುಗಿಸಿದರೆ, ಅಲ್ಲಿ ಇನ್ಯಾವದರ ಉಪಯೋಗವೂ ನಡೆಯುವದಿಲ್ಲ! ಒಬ್ಬ ಸಂಸ್ಕೃತ ಕವಿಯು ಹೀಗೆ ಹೇಳುತ್ತಾನೆ:—

---

of foes as well as of friends; I have seen you in the ardour of the combat preserve and place children out of harm's way.

"This is the discipline of christian soldiers, and this it is which has brought you triumphant from the shores of Western India to the waters of the jumna, and establishes, without doubt, that you will find no place to equal the glory of our arms!"

* ಕಾಲ್ಪಿಯಲ್ಲಿ 24 ಗೋರಿಗಳ ಕಟ್ಟಡದ ಬೈಲಿನಲ್ಲಿ, ಇಂಗ್ರೇಜಿ ಸೈನ್ಯದವರು ಡೇರೆ ಹೊಡೆದುಕೊಂಡು ಇಳಿದನಂತರ, ಅವರ ದೀನಸ್ಥಿತಿಯನ್ನು ನೋಡಿ, ಒಬ್ಬ ಇಂಗ್ರೇಜಿ ಕವಿಯು ಈರೀತಿ ಒಂದು ಪದ್ಯವನ್ನು ಬರದಿರುತ್ತಾನೆ:—

"Ye mouldering fanes, and melancholy tombs,
Sun-blighted wilds, where parched famine reigns
A weary exile marks your mournful glooms,
And heaves a fond sigh for his native plains!
But vain the wish, and seldom cherish'd here:
Hope swiftly flies the soul-degrading clime,
While listless Apathy or wild Despair
Chill fervid Patriotism's glow sublime."

*Richardson.*

ಶ್ಲೋಕ.

ವಿಧೌ ವಿರುದ್ಧೇ ನ ಪಯಃ ಪಯೋನಿಧೌ ।
ಸುಧೌಘಸಿಂಧೌ ನ ಸುಧಾ ಸುಧಾಕರೇ ॥
ನ ವಾಂಛಿತಂ ಸಿದ್ಧ್ಯತಿ ಕಲ್ಪಪಾದಪೇ ।
ನ ಹೇಮ ಹೇಮಪ್ರಭವೇ ಗಿರಾವಪಿ ॥ ೧ ॥

“ದೈವ ಪ್ರತಿಕೂಲವಾಗಿರುವಾಗ ಜಲನಿಧಿಯಲ್ಲಿ ನೀರು ಸಿಕ್ಕುವದಿಲ್ಲ. ಅಮೃತದ ಸಮುದ್ರನಾದ ಚಂದ್ರನಲ್ಲಿ, ಅಮೃತದ ಒಂದು ಬಿಂದು ಕೂಡ ಸಿಕ್ಕುವದಿಲ್ಲ ಇಷ್ಟಾರ್ಥವನ್ನು ಕೊಡತಕ್ಕಂಥ ಕಲ್ಪವೃಕ್ಷದ ಕಡೆಗೆ ಹೋದರೆ, ಇಷ್ಟ ಸಿದ್ಧಿಯಾಗುವದಿಲ್ಲ; ಮತ್ತು ಸುವರ್ಣಪ್ರಭವಾದ ಮೇರುಪರ್ವತದಲ್ಲಿ ಭಂಗಾರವು ಸಿಕ್ಕುವದಿಲ್ಲ.”



# ೧೮ನೇ ಪ್ರಕರಣ.

## ಗ್ವಾಲಿಯರ್ ಮೇಲೆ ದಂಡೆತ್ತಿ ಹೋದದ್ದು.



ಕಾಲ್ಪಿಯಲ್ಲಿ ರಾವ್ ಸಾಹೇಬ್ ಪೇಷ್ವೆಯು ಅಪಜಯ ಹೊಂದಿದಮೇಲೆ ತನ್ನ ಸೈನ್ಯ ಸಹಿತ ಗ್ವಾಲಿಯರ್‌ನ ನೈರುತ್ಯ ದಿಕ್ಕಿಗೆ 46 ಮೈಲಿಗಳ ದೂರದಲ್ಲಿರತಕ್ಕ ಗೋಪಾಲಪುರವೆಂಬ ಒಂದು ಹಳ್ಳಿಯ ಕಡೆಗೆ ಓಡಿಹೋದನು. ಲಕ್ಷ್ಮೀಬಾಯಿ ಸಾಹೇಬಳೂ ಕೂಡ ಅವನ ಸಂಗಡಲೇ ಇದ್ದಳು. ರಾವ್ ಸಾಹೇಬ್ ಪೇಷ್ವೆಯ ಸೇನಾಪತಿಯಾದ ತಾತ್ಯಾಟೋಪಿಯು, ಕುಂಚಿನಗರದಲ್ಲಿ ಯುದ್ಧವಾದ ನಂತರ ಜಾಲವಾಣದ ಸಮೀಪದಲ್ಲಿ ಇಕತಕ್ಕ ಚರಖಿಯೆಂಬ ಸ್ಥಳಕ್ಕೆ ತನ್ನ ಯಜಮಾನನ್ನು ನೋಡುವದಕ್ಕೋಸ್ಕರ ಹೋಗಿದ್ದನು. ಅವನಿಗೆ, ಕಾಲ್ಪಿಯಲ್ಲಿ ಶ್ರೀಮಂತನಿಗೆ ಅಪಜಯವಾಯಿತು ಯೆಂಬ ಸಮಾಚಾರವು ತಿಳಿಯುತ್ತಲೆ, ತಕ್ಷಣವೇ ಗೋಪಾಲಪುರಕ್ಕೆ ಬಂದು ಸೇರಿದನು. ರಾವ್ ಸಾಹೇಬ್ ಪೇಷ್ವೆಯ ಇನ್ನೊಬ್ಬ ಮಿತ್ರನಾದ ಬಾಂದೇವಾಲೆ ನವಾಬನೂ ಸಹ ಓಡುತ್ತ ಗೋಪಾಲಪುರದಲ್ಲಿ ಶ್ರೀಮಂತನ ಹತ್ತರಕ್ಕೆ ಬಂದು ತಲ್ಪಿದನು.

ಯಾವದಾದರೂ ಒಂದು ದಿವಸ ವರ್ಷಾಕಾಲದಲ್ಲಿ ಆಕಾಶ ಮಧ್ಯದಲ್ಲಿ ಮೇಘಗಳುತ್ಪನ್ನವಾಗಿ ಕೆಲವುಕಾಲ ಪರ್ಯಂತರ ಅಂಧಕಾರವು ಹೇಗೆ ಬೀಳುತ್ತದೆಯೋ, ಮತ್ತು ಇದ್ದಕ್ಕೆ ಇದ್ದಹಾಗೆ ಬಲವಾಗಿ ಮಳೆ ಬಿದ್ದನಂತರ ಆಕಾಶಮಂಡಲವು ಹ್ಯಾಗೆ ಸ್ವಚ್ಛ ಮತ್ತು ಶಾಂತವಾಗುತ್ತದೆಯೋ, ಆ ರೀತಿಯಾಗಿ ಈ ಸಮಯದಲ್ಲಿ ಬುಂದೇಲ್ ಖಂಡದಲ್ಲಿನ ದಂಗೆ ಜನಗಳ ಸತ್ವದ ಸ್ಥಿತಿಯಾಗಿತ್ತು. 1857 ನೆ ಇಸವಿ ಜೂನ್ ತಿಂಗಳಲ್ಲಿ ಇದ್ದಕ್ಕಿದ್ದಹಾಗೆ ಸಾಗರ, ಕಾಲ್ಪಿ, ಬಾಂದ, ಮುಂತಾದ ಸ್ಥಳಗಳಲ್ಲಿ ಬ್ರಿಟಿಷ್ ರಾಜಸತ್ವವು ಇಲ್ಲದಂತೆ ಆಗಿಹೋಗಿ, ಅಲ್ಲಿ ದಂಗೆಯವರ ಸಾಮ್ರಾಜ್ಯಕ್ಕೆ ಪ್ರಾರಂಭವಾಯಿತು. ಪರಂತು ಸರ್ ಹ್ಯೂರೋಜ್ ಮತ್ತು ಹ್ವಿಟ್‌ಲಾಕ್ ಸಾಹೇಬರುಗಳ ಯುದ್ಧವು ಆ ಪ್ರಾಂತ್ಯದ ಮೇಲೆ ಪ್ರಾರಂಭವಾಗುತ್ತಲೆ, ಅಲ್ಲಿ ಬ್ರಿಟಿಷ್ ರಾಜಸತ್ವವು ಪುನಃ ಸ್ಥಾಪಿತವಾಗುವಕ್ಕೆ ಬಹಳಕಾಲವು ಹಿಡಿಯಲಿಲ್ಲ. ಎರಡು ಮೂರು ತಿಂಗಳ ಮಧ್ಯಕಾಲದಲ್ಲಿಯೆ, ಸರ್ ಹ್ಯೂರೋಜ್ ಸಾಹೇಬನು ನರ್ಮದಾ ತೀರವನ್ನೆಲ್ಲಾ ಸ್ವಾಧೀನಪಡಿಸಿಕೊಂಡು, ಝಾನ್ಸಿ ಮತ್ತು ಕಾಲ್ಪಿಯಲ್ಲಿ ನಿಕರವಾದ ಯುದ್ಧಮಾಡಿ, ಅಲ್ಲಿ ತಮ್ಮ ವಿಜಯಧ್ವಜವನ್ನು ಸ್ಥಾಪಿಸಿದನು. ಹ್ವಿಟ್‌ಲಾಕ್ ಸಾಹೇಬನು, ಬಾಂದಾ ಮತ್ತು ಕಾರ್ವಿಹಸ್ತಗತ್

ಮಾಡಿಕೊಂಡು ಕಾಲ್ಪಿಯಮೇಲೆ ಸಹ ಕೊಟ್ಟನು. ಮೇಜರ್ ರಾಬರ್ಟ್ ಸಾಹೇಬನು ರಾಜಪುಟಾನದಿಂದ ಕರ್ನಲ್ ಸ್ಮಿತ್ ಸಾಹೇಬನ ಕೈಕೆಳಗೆ ಬಂದು ಹೊಸ ಪಟಾಲಂ ಕೊಟ್ಟು, ಯಮುನಾನದಿಯ ಪಶ್ಚಿಮಪಾರ್ಶ್ವವನ್ನು ಭದ್ರಪಡಿಸಿದನು. ಇದು ಹೊರ್ತು, ಪ್ರತ್ಯೆ ಪ್ರತ್ಯೇಕ ಅನೇಕ ಇಂಗ್ರೇಜಿ ಸೇನಾಧಿಕಾರಿಗಳು, ಅಲ್ಲಲ್ಲಿ ಪಹರೆಗಳನ್ನಿಟ್ಟು ದಂಗೆ ಖೋರರ ತಂಟೆಯನ್ನು ನಿಲ್ಲಿಸಿದರು. ಈ ಪ್ರಕಾರವಾಗಿ ಬುಂದೇಲ್ ಖಂಡವೆಲ್ಲಾ ತನ್ನ ಕೈತಪ್ಪಿಹೋಯಿತು; ಝೂಸಿ ಮತ್ತು ಕಾಲ್ಪಿಯಲ್ಲಿನ ಬಲವಾದ ಕೋಟೆ ಗಳೂ, ಪ್ರಚಂಡ ತೋಪುಗಳೂ, ಮತ್ತು ಅಸಂಖ್ಯಾಕವಾದ ಯುದ್ಧ ಸಾಮಾನುಗಳೂ ಸಹ ವಿರುದ್ಧಪಕ್ಷದವರಿಗೆ ಸಿಕ್ಕಿತು; ಮತ್ತು ಕೊನೆಗೆ ತಮ್ಮ ಸರ್ವಸೈನ್ಯವೂ ಚದುರಿ ಧೈರ್ಯಗುಂದಿ ಹೋಯಿತು ಎಂಬುವದನ್ನು ನೋಡಿ, ಶ್ರೀಮಂತ ರಾವ್ ಸಾಹೇಬ್ ಪೇಷ್ವೆ ಪ್ರಭೃತಿಗಳು, ನಿರಾಶರಾಗಿ ಈಗ ಇನ್ನು ಮುಂದೆ ಯೇನು ಮಾಡಬೇಕೆಂಬ ಪ್ರಶ್ನೆಯನ್ನು ವಿಚಾರಮಾಡುವದಕ್ಕಾಗಿ ಈ ಅಧ್ವರ್ಯ ಮಂಡಲಿಯವರು ಗೋಪಾಲ ಪುರದಲ್ಲಿ ಸೇರಿದರು.

ಆ ಸಮಯದಲ್ಲಿ, ಯುದ್ಧ ಪ್ರಸಂಗದಲ್ಲಿ ತಮ್ಮ ಕಾಲಕ್ಷೇಪ ಮಾಡುತ್ತಿದ್ದ ರಾಜ ಕುಲೋತ್ಪನ್ನರಾದ ಈ ಮಂಡಲಿಯವರಿಗೆ, ತಮ್ಮ ಚಾತುರ್ಯದಿಂದ ಸೊಂಟವನ್ನು ಕಟ್ಟಿಕೊಳ್ಳತಕ್ಕಂಥಾ ಕಠಿಣವಾದ ಪ್ರಸಂಗವು ಬಂದುವದಗಿತು. ಅಂಥಾ ವೇಳೆಯಲ್ಲಿ ವಿಶೇಷವಾದ ಯುಕ್ತಿಯನ್ನು ಹುಡಿಕಿ, ಅದರ ಬಲದಮೇಲೆ ಪುನಃ ಜಯ ಸಂಪಾದನೆ ಮಾಡಿಕೊಂಡ ಹೊರ್ತು ಅವರಿಗೆ ಬೇರೆದಾರ್ಗ ವಿರಲಿಲ್ಲ. ಮತ್ತು ಈಕಡೆ ಇಂಗ್ರೇಜಿ ಸೈನ್ಯದ ಸಂಗಡ ಯುದ್ಧ ಮಾಡುವದು ಶುದ್ಧಾಂಗವಾಗಿ ಅಸಾಧ್ಯವಾಗಿತ್ತು ಇಂಗ್ರೇಜಿ ಸೈನ್ಯವು ಶಾಸ್ತ್ರರೀತಿಯಾದ ಯುದ್ಧದ ತಿಳುವಳಿಕೆ, ದೂರದೃಷ್ಟಿ, ಸೈನ್ಯದ ಆಜ್ಞಾಧಾರ ಕತನ, ಮತ್ತು ಯುದ್ಧಕಲಾ ಶಿಕ್ಷಣ ಮುಂತಾದ ಗುಣಗಳಿಂದ ಇವತ್ತಿನವರೆಗೂ ಜಯವನ್ನು ಹೊಂದಿ ಆನಾಗ್ಯೆ ಯುದ್ಧ ಸಾಹಿತ್ಯವನ್ನು ತುಂಬಾ ಸಂಪಾದಿಸಿಕೊಂಡು, ಅವರಪಕ್ಷವು ಚನ್ನಾಗಿ ಬಲಪಟ್ಟಿತ್ತು. ಪರಂತು, ವಿರುದ್ಧಪಕ್ಷವು ಕೇವಲ ಶೋಚನಿ ಯವಾಗಿತ್ತು. ಅವರ ಬಲವಾದ ಕೋಟೆಗಳೂ ಮತ್ತು ಲಕ್ಷಾಂತರ ರೂಪಾಯಿನ ಮದ್ದುಗುಂಡುಗಳೂ ಸಹ ಇಲ್ಲದಂತೆ ಆಗಿ ಹೋಗಿ ಸರ್ವರಣಧೀರ ಸರದಾರರು ಮೃತ್ಯು ವಿನ ಬಾಯಲ್ಲಿ ಬಿದ್ದು ಹೋಗಿದ್ದರು. ಉಳಿದ ಸೈನ್ಯವು ಅಶಿಕ್ಷತೆ ಮತ್ತು ಬಲಹೀನತೆ ಯಿಂದ ಇದ್ದದರಿಂ ಅವರ ಸಾಮರ್ಥ್ಯದಮೇಲೆ ಯಶಸ್ಸು ಪ್ರಾಪ್ತಿಯಾಗುವದು ಕೇವಲ ಅಸಾಧ್ಯವಾಗಿತ್ತು. ಒಳ್ಳೇದು, ಸ್ವಸ್ಥವಾಗಿ ಕೂತುಕೊಂಡರೆ ಇಂಗ್ರೇಜಿ ಸೈನ್ಯದವರು ಬೆನ್ನಟ್ಟಿಬಂದು ಅವರನ್ನು ನಾಶಪಡಿಸಲು ಪ್ರಯತ್ನ ಮಾಡುತ್ತಿದ್ದರು. ಇಂಥಾ ಸಂಕಟ ಸಮಯದಲ್ಲಿ ಯಾವಯುಕ್ತಿ ತೆಗೆಯಬೇಕೆಂಬ ವಿಚಾರದಲ್ಲಿ ಶ್ರೀಮಂತರಾವ್ ಸಾಹೇಬ್ ಪೇಷ್ವೆ ಬಾಂದೇವಾಲೆ ನವಾಬ್ ಮತ್ತು ತಾತ್ಯಾಟೋಪಿ ಈ ಮೂರು ಜನಗಳು ಕೇವಲ ಯೊಚನಾಪರರಾಗಿ ಹೋದರು. ಗೋಪಾಲಪುರದಲ್ಲಿ ಅಹೋರಾತ್ರೆ ಯೋಚನೆಗೆ

ಪ್ರಾರಂಭವಾಯಿತು. ತಥಾಪಿ ಖಂಡಿತವಾಗಿ ನಿಲ್ಲತಕ್ಕ ಇತ್ಯರ್ಥ ಯಾವದೂ ಆಗದೇ ಹೋದ್ದರಿಂದ ಶ್ರೀಮಂತನು ಚಿಂತಾಗ್ರಸ್ತನಾದನು.

ಈ ಸಮಾಚಾರವು ಎರಡನೇದಿವಸ ಪ್ರಾತಃಕಾಲದಲ್ಲಿ ರಾವ್ ಸಾಹೇಬನ ಡೇರೆಯಲ್ಲಿ ತಿಳಿಯಬಂತು. ರಾವ್ ಸಾಹೇಬ್ ಪೇಷ್ವೆಗೆ ರಾಣೀಸಾಹೇಬಳು ಸಿಕ್ಕಿದ್ದಳು; ಮತ್ತು ಅವಳು ಅವನ ಸಂಗಡ ರಣಭೂಮಿಯ ಮೇಲೆ ಸೇನಾನಿತ್ವವನ್ನು ಸ್ವೀಕಾರಮಾಡುವದಕ್ಕೆ ಸಿದ್ಧಳಾಗಿದ್ದಳು. ಆದರೆ ರಾವ್ ಸಾಹೇಬ್ ಪೇಷ್ವೆಯು ತನ್ನ ಅಭಿಮಾನ ಮತ್ತು ಶ್ರೇಷ್ಟತ್ವಕ್ಕೋಸ್ಕರ ರಾಣಿಸಾಹೇಬಳ ಅಪೇಕ್ಷೆಪ್ರಕಾರ ಸರ್ವಸೈನ್ಯದ ಆಧಿಪತ್ಯವನ್ನು ನಿಜವಾಗಿ ಆಕೆಯಕಡೆಗೆ ವಹಿಸಿರಲಿಲ್ಲ. ಆದ್ದರಿಂದ ಅಂಶತಃ ಕಾಲ್ಪಿಯಲ್ಲಿ ಆತನ ಸೈನ್ಯಕ್ಕೆ ಅಪಜಯ ವಾಯಿತೆಂತ ಹೇಳಬೇಕಾಗಿದೆ. ರಾಣಿಸಾಹೇಬಳ ಹತ್ತರ ಆಕೆಯ ಸ್ವಂತ ಸೈನ್ಯವು ಶುದ್ಧಾಂಗವಾಗಿರಲಿಲ್ಲ. ಝಾಂಸಿಯಿಂದ ಓಡಿಬಂದ ನೂರು, ಇನ್ನೂರು ಕುದುರೆಸವಾರರು ಮಾತ್ರಇದ್ದರು. ಅಷ್ಟು ಸವಾರರ ಬಲದಮೇಲೆಯೇ ಪ್ರತ್ಯೇಕವಾಗಿ ಯುದ್ಧ ಮಾಡುವದರಲ್ಲೇನೂ ಪ್ರಯೋಜನ ವಿಲ್ಲದಿದ್ದಕಾರಣ ರಾಣೀಸಾಹೇಬಳು ರಾವ್ ಸಾಹೇಬ್ ಪೇಷ್ವೇಸಂಗಡಲೇ ಗೋಪಾಲಪುರಕ್ಕೆ ಬಂದಿದ್ದಳು. ಅವಳಿಗೆ ಬಲಾಢ್ಯವಾದ ಇಂಗ್ರೇಜಿ ಸೈನ್ಯದ ಮುಂದೆ ತಾನು ನಿಲ್ಲುವದಕ್ಕಾಗುವ ದಿಲ್ಲವೆಂದು ಸಂಪೂರ್ಣವಾಗಿ ತಿಳಿದಿತ್ತು. ಆದರೆ ಅವಳಲ್ಲಿ ಧೃಡನಿಶ್ಚಯ ಮತ್ತು ಶಕ್ತಿಯ ಬಲವು ವಿಲಕ್ಷಣವಾಗಿದ್ದ ಕಾರಣ, ಅವುಗಳಿಗೆ ಪುನಃ ಪುನಃ ಇಂಗ್ರೇಜಿಯವರ ಮೇಲೆ ಬಿದ್ದುಹೋಗುವ ಆವೇಶವು ಬರುತ್ತಿತ್ತು. ಮತ್ತು ಒಬ್ಬ ವೀರ ಶಿರೋಮಣಿಯಂತೆ ತನ್ನ ಶೌರ್ಯವನ್ನು ವ್ಯಕ್ತಪಡಿಸಿ, ಜಯಸಂಪಾದನೆ ಮಾಡಿಕೊಳ್ಳುವ ಇಚ್ಛೆಯು ಆಕೆಗೆ ಬಲವಾಗಿತ್ತು. ಆದಕಾರಣ, ಅವಳಿಗೆ ಪೇಷ್ವೆ ಸೈನ್ಯವನ್ನು ಚನ್ನಾಗಿ ಸರಿಪಡಿಸಿಕೊಂಡು ಪುನಃ ಒಂದು ಪ್ರಬಲ ಯುದ್ಧ ಮಾಡಬೇಕೆಂತ ತೋರುವದು ಸಹಜವಾಗಿದೆ. ಯಾವಾಗ ಶ್ರೀಮಂತನು ಚಿಂತಾಗ್ರಸ್ತ ನಾಗಿದ್ದಾನೆಂತ ಅವಳಿಗೆ ವರ್ತಮಾನ ತಿಳಿಯಿತೋ ಕೂಡ್ಲೇ ಹೋಗಿ ಶ್ರೀಮಂತನ ದರ್ಶನ ತೆಗೆದುಕೊಂಡು, ಯಾರೋ ಒಬ್ಬ ಭಾರತಿ ಯುದ್ಧ ಶಾಲಿಯಂತೆ ವೀರಸ್ತ್ರೀಯ ಮಾತನಾಡಿ, ಅವನಿಗೆ

"ನೈರಾಶ್ಯ ವುಚಿತನಹ್ವೆ ಸ್ಪಷ್ಟ ಕರಾವೆ ಧರೋನಿ ಹಾಂ ವರಣ."

ಈ ವಿಧವಾದ ಉಪದೇಶವನ್ನು ಮಾಡಿದಳು; ಮತ್ತು ಶ್ರೀಮಂತನ ಕಡೆಯಿಂದ ವಚನ ತೆಗೆದುಕೊಂಡು, ಅವನಿಗೆ ಒಳ್ಳೇ ಆಲೋಚನೆಯನ್ನು ಹೇಳಿದಳು. ಅದೇನಂದರೆ:—"ಇವತ್ತಿನ ಪರ್ಯಂತರ ಮರಾಟೆಯವರು ಪೌರುಷದಿಂದ ತಮ್ಮ ರಾಜಸತ್ವವನ್ನು ಸ್ಥಾಪನೆ ಮಾಡಿದಕ್ಕೆ ಅಭೇದ್ಯ ಮತ್ತು ಬಲವಾದ ಕೋಟೆಗಳ ಆಶ್ರಯವೇ ಬಹಳಮಟ್ಟಿಗೆ ಕಾರಣವಾಗಿಇತ್ತು. ಶ್ರೀಛತ್ರಪತಿ ಶಿವಾಜಿ ಮಹರಾಯನು ಯವನರನ್ನು ನಿರ್ವಿಣ್ಣರನ್ನಾಗಿ ಮಾಡಿ, ಹಿಂದು ಪಾದಶಾಹಿ ಸ್ಥಾಪನೆ ಮಾಡಿದ್ದು, ಸಿಂಹಗಡ, ರಾಯಗಡ, ತೋರಣ ಮುಂತಾದ ಕೋಟೆಯ ಬಲದ ಮೇಲೆಯೇ ಆಗಿತ್ತು. ಅವನು ಪ್ರಥಮದಲ್ಲಿ

ತನ್ನ ಸಂರಕ್ಷಣೆ ಮಾಡಿಕೊಳ್ಳುವಗೋಸ್ಕರ ಪ್ರಚಂಡವಾದ ಯುದ್ಧದ ಕೋಟೆಯನ್ನು ಹಸ್ತಗತಮಾಡಿಕೊಂಡನು. ಅನಂತರ ತನ್ನ ಶೌರ್ಯ ಪರಾಕ್ರಮವನ್ನು ತೋರಿಸಿ, ರಾಜ ಸತ್ವವನ್ನು ಸ್ಥಾಪಿಸಿದನು. ಹೀಗೆ ಇರುವಾಗ, ಪೂರ್ವದ ಅನುಭವದಿಂದಲೂ ಕೂಡ ಕೋಟೆಯ ಸಹಾಯವಿಲ್ಲದೆ ಯುದ್ಧಮಾಡುವದು ವ್ಯರ್ಥವೆಂತ ಕಂಡು ಬರುತ್ತದೆ ನಮ್ಮ ಅಧೀನದಲ್ಲಿ ಝಾಁಸಿ, ಕಾಲ್ಪಿಯಂಥ ಬಲವಾದ ಕೋಟೆಗಳು ಇದ್ದದ್ದರಿಂದಲೇ ಇವತ್ತಿನ ವರೆಗೂ ಇಂಗ್ರೇಜಿ ಸೈನ್ಯದ ಎದುರಿಗೆ ನಿಂತುಕೊಳ್ಳುವದಕ್ಕೆ ನಮಗೆ ಆಧಾರ ಸಿಕ್ಕಿತ್ತು. ಪರಂತು ದುರ್ದೈವದಿಂದ ಈಗ್ಯೆ ಅವುಗಳು ನಮಗೆ ಇಲ್ಲದಂತೆ ಆಯಿತು. ಆದಕಾರಣ ಪುನಃ ಯಾವದಾದರೊಂದು ಪ್ರಚಂಡವಾದ ಕೋಟೆಯನ್ನು ಕೈವಶ ಮಾಡಿ ಕೊಳ್ಳುವದಕ್ಕೆ ಪ್ರಯತ್ನ ಮಾಡಲಿಬೇಕು. ಈಗಿನ ಸಮಯದಲ್ಲಿ ಜೀವ ಉಳಿಸಿ ಕೊಳ್ಳುವದಕ್ಕೋಸ್ಕರ ಎಲ್ಲಿಗಾದರೂ ಓಡಿಹೋಗೋಣವೆಂದರೆ ಇಂಗ್ರೇಜಿ ಸೈನ್ಯವು ನಮ್ಮನ್ನ ಬೆನ್ನಟ್ಟಿದ; ಮತ್ತು ಅದು ಯಾವಾಗಲಾದರೂ ನಮ್ಮನ್ನು ನಾಶಮಾಡತ ಕ್ಕದ್ದು ಎಂಬುವದು ಸಿದ್ಧವಾಗಿಇದೆ. ಆದಾಗ್ಯೂ ಮುಂದೆ ಯೇನಾಗತಕ್ಕದ್ದಿದೆಯೋ ಅದು ಆಗಲಿ. ಅದರಮೇಲೆ ಲಕ್ಷ್ಯಕೊಡದೆ, ಈಗಿನ ಸಂದರ್ಭದಲ್ಲಿ ಯಾವದಾದರೂ ಒಂದು ಕೋಟೆಯನ್ನು ಕೈಗೆ ತೆಗೆದುಕೊಂಡು ಅದರ ಸಹಾಯದಿಂದ ಇಂಗ್ರೇಜಿ ಸೈನ್ಯದ ಸಂಗಡ ಯುದ್ಧ ಮಾಡುವ ಪ್ರಯತ್ನ ಮಾಡಿ, ಅದರಲ್ಲಿ ಯಶಸ್ಸು ಸಂಪಾದನೆ ಮಾಡಬೇಕಾದದ್ದೇ ಈಗ ಅವಶ್ಯಕವಾಗಿದೆ.'' ಬಾಯಿಸಾಹೇಬಳ ಈ ಮಾತನ್ನು ಕೇಳಿ, ಶ್ರೀಮಂತನಿಗೆ ಬಹಳ ಸಂತೋಷ ಹುಟ್ಟಿ, ಅವನು ಆಕೆಯನ್ನು ಯಾವಕೋಟೆಯನ್ನು ಕೈವಶ ಮಾಡಿಕೊಳ್ಳಬೇಕೆಂತ ಪ್ರಶ್ನೆ ಮಾಡಿದನು. ಅದರ ಮೇಲೆ ಬಾಯಿಸಾಹೇಬಳು ಹೇಳಿದ್ದೇನಂದರೆ:—''ಈಗಿನ ಸಂದರ್ಭದಲ್ಲಿ ಝಾಁಸಿ—ಅಥವಾ ಕಾಲ್ಪಿ ತೆಗೆದುಕೊಳ್ಳುವ ಆಶೆಯಿಂದ, ಶತ್ರುಗಳಬಾಯಿಯಲ್ಲಿ ಹೋಗುವದು ಸರಿಯಲ್ಲ. ಆದಕಾರಣ ಗ್ವಾಲಿಯರ್‌ನ ಮೇಲೆ ಪ್ರಯಾಣಮಾಡಿ, ಸಿಂಧೆ ಸರ್ಕಾರದ ಮತ್ತು ಅದರ ಸೈನ್ಯದ ಸಹಾಯ ತೆಗೆದು ಕೊಳ್ಳಬೇಕು; ಮತ್ತು ಅಲ್ಲಿನ ಕೋಟೆಯ ಆಶ್ರಯವನ್ನು ಹಿಡಿದುಕೊಂಡು ಮುಂದಿನ ಆಲೋಚನೆಯನ್ನು ಸಿದ್ಧಿಗೆ ತಂದುಕೊಳ್ಳಬೇಕು, ಇದೇ ಒಳ್ಳೇ ಮಾರ್ಗವಾಗಿದೆ.''

ರಾಣೀಸಾಹೇಬಳ ಈ ಯುಕ್ತಿಯು * ಶ್ರೀಮಂತನಿಗೆ ಬಹಳ ಸರಿಯಾಗಿ ತೋರಿ, ಅದಕ್ಕಾಗಿ ರಾಣೀ ಸಾಹೇಬಳಿಗೆ ಬಹಳ ವಂದನೆಯನ್ನು ಮಾಡಿದನು.

---

* ಇಂಥಾ ಸಂಕಟ ಸಮಯದಲ್ಲಿ ರಾಣಿಸಾಹೇಬಳು ತೆಗೆದ ಸರ್ವೋತ್ಕೃಷ್ಟವಾದ ಯುಕ್ತಿಯನ್ನು ಕುರಿತು, ಕರ್ನಲ್ ಮ್ಯಾಲಿಸನ್ ಸಾಹೇಬನಂಥ ಇಂಗ್ರೇಜಿ ಗ್ರಂಥ ಕರ್ತನು ವರ್ಣನೆ ಮಾಡಿರುತ್ತಾನೆ. ಕರ್ನಲ್ ಮ್ಯಾಲಿಸನ್ ಸಾಹೇಬನು, ರಾವ್ ಸಾಹೇಬ್ ಪೇಷ್ವೆ, ಬಾಂದೆ ವಾಲೇ ನವಾಬ್, ತಾತ್ಯಾ ಟೋಪಿ, ಮತ್ತು ಝಾಁಸಿ ಸಂಸ್ಥಾನ ರಾಣಿಸಾಹೇಬಳು, ಈ ನಾಲ್ಕು ಜನಗಳ ಶ್ರೇಷ್ಟತ್ವ ಮತ್ತು ಬುದ್ಧಿ ಚಾತುರ್ಯತೆಯನ್ನು

ತಾತ್ಯಾಟೋಪಿಯು ಶ್ರೀಮಂತನ ಸಾನ್ನಿಧ್ಯದಲ್ಲೇ ಇದ್ದನು. ಅವನೂ ಕೂಡ ರಾಣೀಸಾಹೇಬಳ ಒಳ್ಳೇಮಾತನ್ನು ಕೇಳಿ, ಅದಕ್ಕೆ ತಾನು ತುಂಬಾ ಸಮ್ಮತಿ ಕೊಟ್ಟನು. ತಾತ್ಯಾಟೋಪಿಯು ಗ್ವಾಲಿಯರ್ರಿಗೆ ಅನೇಕ ಸಲ ಗುಪ್ತರೀತಿಯಿಂದ ಹೋಗಿದ್ದನು. ಆದಕಾರಣ ಅವನಿಗೆ ಅಲ್ಲಿನ ಆಡಳತ ಮತ್ತು ಸೈನ್ಯದ ನಿಜಸ್ಥಿತಿಯು ಚೆನ್ನಾಗಿ ಪರಿಶ್ರಮವಾಗಿದ್ದು, ಪೇಷ್ವೆಯ ಆಲೋಚನೆಗೆ, ಅಲ್ಲಿ ಎಷ್ಟು ಯಶಸ್ಸು ಬಂದೀತೆಂಬುವದು ಚನ್ನಾಗಿ ತಿಳಿದು ಬಂದಿತ್ತು. ಆದಕಾರಣ ಅವನು ಗ್ವಾಲಿಯರ್‌ನಿಂದ ಸಹಾಯ ತರಿಸಿ ಕೊಳ್ಳುವ ಪ್ರಯತ್ನಕ್ಕೆ ಹೋಗದೆ ಸೈನ್ಯಸಹಿತ ಅಲ್ಲಿಗೆ ಪ್ರಯಾಣ ಮಾಡತಕ್ಕದ್ದು ಉತ್ತಮವೆಂತ ತಿಳಿಸಿದನು. ತಾತ್ಪರ್ಯವೇನಂದರೆ, ಸರ್ವರೂ ರಾಣೀಸಾಹೇಬಳ ಅಭಿಪ್ರಾಯವನ್ನು ಒಪ್ಪಿಕೊಂಡು, ಗ್ವಾಲಿಯರ್ ಮೇಲೆ ದಂಡೆತ್ತಿ ಹೋಗುವದಕ್ಕೆ ಸಿದ್ಧರಾದರು. ನಿಜವಾಗಿಯೂ ಆ ಸಮಯದಲ್ಲಿ ರಾಣೀಸಾಹೇಬಳು ತೆಗೆದ ಯುಕ್ತಿಯು ಬಹಳ ಚಾತುರ್ಯದ್ದಾಗಿಯೂ ಮತ್ತು ಮಹತ್ವವುಳ್ಳದ್ದಾಗಿಯೂ ಇದ್ದು, ಅದರ ಯೋಗದಿಂದ ದಂಗೇಜನಗಳಿಗೆ ಒಳ್ಳೇ ಯಶಸ್ಸು ಬರುವ ಸಂಭವವಿತ್ತು. ಆದಕಾರಣ ಅದು ಪೇಷ್ವೆಯ ಸಮೀಪದಲ್ಲಿದ್ದ ಲಷ್ಕರ್ ಸರದಾರರುಗಳಿಗೆಲ್ಲಾ ತಿಳಿಯುತ್ತಲೆ, ಅವರೂಕೂಡ ರಾಣೀಸಾಹೇಬಳನ್ನು ಸ್ತುತಿಮಾಡಿದರು. ಗ್ವಾಲಿಯರ್‌ನ ಮೇಲೆ ಪ್ರಯಾಣಮಾಡಿ, ಅಲ್ಲಿನ ಕೋಟೆಯನ್ನು ತೆಗೆದುಕೊಳ್ಳುವದಕ್ಕೆ ತಾವು ಕೇವಲ ಶಕ್ತರಾಗಿದ್ದೇವೆಂಬುವದನ್ನು ಸ್ಪಷ್ಟವಾಗಿ ತೋರಿಸಿದರು.

ಇದುಹಾಗಿರಲಿ. ರಾಣೀಸಾಹೇಬಳ ಯುಕ್ತಿಯು ಸರ್ವರಿಗೂ ಸಮ್ಮತವಾದ ನಂತರ ಶ್ರೀಮಂತರಾವ್ ಸಾಹೇಬ್ ಪೇಷ್ವೆಯು ಸರ್ವ ಸೈನ್ಯವನ್ನು ಸಿದ್ಧಮಾಡಿಕೊಂಡು ತಕ್ಷಣವೇ ಗ್ವಾಲಿಯರ್‌ನ ಮೇಲೆ ಪ್ರಯಾಣ ಮಾಡಿದನು; ಮತ್ತು 1858 ನೇ ಇಸವಿ ಮೇತಾರೀಖು 30 ನೇ ದಿವಸ ರಾತ್ರೆ ಮುರಾರಿನ ಸಮೀಪ ಬಂದು ಮುಳಿದುಕೊಂಡರು. ಆ ಸಮಯದಲ್ಲಿ ಸಿಂಧೇ ಸರ್ಕಾರದ ದರ್ಬಾರಿನ ಸ್ಥಿತಿ ಯೇನಾಗಿತ್ತೆಂಬುವದನ್ನು ಆದಿಯಲ್ಲಿ ಸಿಂಹಾವಲೋಕನ ಮಾಡಿ, ಅನಂತರ ಪೇಷ್ವೆಯ ಸೈನ್ಯದವರು ಏನು ಪರಾಕ್ರಮ ಕೆಲಸವನ್ನು ನಡೆಸಿದರೆಂಬುವದನ್ನು ವರ್ಣನೆ ಮಾಡುತ್ತೇವೆ.

---

ಪರಿಕ್ಷೆಮಾಡಿ, ಕೊನೆಗೆ ರಾಣೀಸಾಹೇಬಳಿಗೆ, ಅವರೆಲ್ಲರ ಮಧ್ಯದಲ್ಲಿ, ಪ್ರಮುಖಸ್ಥಾನವನ್ನು ಕೊಟ್ಟಿದ್ದಾನೆ. ಅವನು ಆವಿಷಯದಲ್ಲಿ ಬರೆದಿರುವದನ್ನು ಓದಿದರೆ ಯಾರಿಗೆ ವಿಸ್ಮಯಾನಂದವು ತೋರಲಾರದು ? ಮ್ಯಾಲಿರ್ಸ ಸಾಹೇಬನು ಬರೆಯುವದೇನಂದರೆ:—

"The situation then seemed desperate to the rebel chieftains. But desperate situations suggest desperate remedies ; and a remedy which, on first inspec-



**Jayajirao Sindia.**

ಜಯಾಜಿರಾವ್ ಸಿಂಧ್ಯ.

ಗ್ವಾಲಿಯರ್, ಉತ್ತರ ಹಿಂದೂಸ್ಥಾನದಲ್ಲಿ ಮರಾಟೆಯವರ ಪ್ರಮುಖ ಸಂಸ್ಥಾನವಾಗಿದ್ದು, ಆ ಸಮಯದಲ್ಲಿ ಅದರ ಆಧಿಪತ್ಯವು ಶ್ರೀಮಂತ ಮಹಾರಾಜ ಜಯಾಜಿರಾವ್ ಸಿಂಧ್ಯ ಅಲ್ಲಿ ಜಾಬಹದ್ದರನ ಕಡೆಯಿತ್ತು. ಮಹಾರಾಜ ಜಯಾಜಿರಾಯನ ವಯಸ್ಸು ಆ ವೇಳೆಯಲ್ಲಿ ಸುಮಾರು 23 ವರ್ಷಗಳಾಗಿತ್ತು. ಲಾರ್ಡ್ ಎಲ್ಲೆಂಬರೋನ ಕಾರಭಾರಿನಲ್ಲಿ 1844 ನೇ ಇಸವಿಯಲ್ಲಿ ಗ್ವಾಲಿಯರ್‌ನ ದರ್ಬಾರಿಗೂ ಮತ್ತು ಇಂಗ್ರೇಜಿ ಸರ್ಕಾರಕ್ಕೂ ಮಧ್ಯೆ ಏನೋ ಒಂದು ವ್ಯಾಜ್ಯಹುಟ್ಟಿ, ಮಹಾರಾಜಪುರ ಮತ್ತು ಪನ್ನಾರ್‌ನಲ್ಲಿ ಉಭಯ ಪಕ್ಷಕ್ಕೂ ಬಲವಾದ ಯುದ್ಧ ನಡೆಯಿತು. ಪರಂತು ಅದರಲ್ಲಿ ಇಂಗ್ರೇಜಿ ಸರ್ಕಾರಕ್ಕೆ ಯಶಸ್ಸು ಬಂದು ಸಿಂಧ್ಯೆ ಸರ್ಕಾರದವರ ಸಂಗಡ ಹೊಸತಹಾ ಮಾಡಿಕೊಂಡಿದ್ದರು. ಆಗಿನಾರಭ್ಯ ಗ್ವಾಲಿಯರ್ ಸಂಸ್ಥಾನದಲ್ಲಿ ಇಂಗ್ರೇಜಿ ಸರ್ಕಾರದವರ ಪ್ರವೇಶವು ಬಹಳವಾಗಿ, ಅವರ ಗೌರವವು ಅಲ್ಲಿ ಚನ್ನಾಗಿ ವ್ಯಾಪಿಸಿಕೊಂಡಯಿತ್ತು. ಆ ತಹಾದ ದೆಸೆಯಿಂದ ಗ್ವಾಲಿಯರ್ರಿನ ಕೋಟೆಯು ಇಂಗ್ರೇಜಿಯವರ ಆಧೀನಕ್ಕೆ ಹೋಗಿ, ಸಿಂಧ್ಯೇ ಸರ್ಕಾರದ ಯುದ್ಧದ ಸಾಮಗ್ರಿ ಮತ್ತು ಸೈನ್ಯ ಬಲಸಹ ಬಹಳ ಕಡಮೆ ಯಾಗಿತ್ತು. 1853 ನೇ ಇಸವಿಯಲ್ಲಿ ಮಹಾರಾಜ ಜಯಾಜಿ ರಾಯನಿಗೆ ಸಂಸ್ಥಾನದ ಪೂರ್ಣ ಸ್ವಾಮಿತ್ವವು ಸಿಕ್ಕಿತ್ತು. ಆದರೆ ಸ್ವರಾಜ್ಯ ಸೂತ್ರವೂ ರೆಸಿಡೆಂಟನ ವಿಚಾರದಿಂದ ನಡೆಯುತ್ತಿತ್ತು. ಮಹಾರಾಜ ಜಯಾಜಿರಾಯನು ಕೇವಲ ತರುಣನಾಗಿದ್ದ ಕಾರಣ ರಾಜ್ಯಕಾರಭಾರವನ್ನು ದಿನಕರ ರಾವ್ ರಘುನಾಥ ರಾಜವಾಡೆಯು ನೋಡುತ್ತಿದ್ದನು. ಮಹಾರಾಜನು ತಾರುಣ್ಯದ ಮಧ್ಯಾವಸ್ಥೆಯಲ್ಲಿದ್ದುಕೊಂಡು, ಸುಖವಿಲಾಸದಲ್ಲಿ ನಿಮಗ್ನನಾಗಿದ್ದನು. ಆದಾಗ್ಯೂ

---

tion, might well seem desperate, did occur to the fertile brain of one of the confiderates. To which one it is not certainly known. But, judging the leading group of conspirators by their antecedents—Rao Saheb, the Nawab of Banda, Tantia Topi, and the Rani of Jhansi,—we may at once dismiss the two first from consideration. They possessed neither the character nor the genius to conceive a plan so vast and so daring. Of the two who remain, we may dismiss Tantia Topi. Not that he was incapable of forming the design, but—we have his memoirs—and in those he takes to himself no credit for the most successful act with which

ಅವನು ಬಹಳ ಬುದ್ಧಿವಂತನಾಗಿಯೂ ಮತ್ತು ತೇಜಸ್ವಿಯಾಗಿಯೂ ಇದ್ದನು. ಅವನಿಗೆ ಯುದ್ಧಕಲಾದಲ್ಲಿ ಬಹಳ ಅಪೇಕ್ಷೆ ಯಿದ್ದು, ಅವನು ಅದರಲ್ಲಿ ಶಿಕ್ಷಿತನಾಗಿದ್ದನು. ಮಹಾರಾಜನ ಸುತ್ತಲೂ ಸಮವಯಸ್ಕರಾದ ಮರಾಟೆ ಮಂಡಲಿಯುವರು ಸೇರಿದ್ದದ್ದರಿಂದ ಕದಾಚಿತು ಅವನ ಚಂಚಲಸ್ವಭಾವದಮೇಲೆ ತಮ್ಮ ಶ್ರೇಷ್ಠತ್ವವನ್ನು ಕೂಡಿಸಿ ಅವನ ಕೈಯಿಂದ ರಾಜಕಾರ್ಯಕ್ಕೆ ವಿಘಾತುಕವಾದ ಯಾವದಾದರೂ ಒಂದು ಅಸಂಬದ್ಧವಾದ ತಪ್ಪಿನ ಸಂಗತಿ ನಡೆಯಬಹುದಾದ ಅನೇಕ ಸಂಭವವಿತ್ತು. ಆದಾಗ್ಯೂ ಸಂಸ್ಥಾನದ ದಿವಾನ್ ದಿನಕರರಾಯನು ಬಹುದೂರದರ್ಶಿ—ಮತ್ತು ರಾಜ್ಯವ್ಯವಹಾರ ಕುಶಲನಾಗಿದ್ದ ಕಾರಣ, ಸಿಂಧ್ಯಾ ಸರ್ಕಾರವನ್ನು ತನ್ನ ಮುಷ್ಟಿಯಲ್ಲಿಟ್ಟುಕೊಂಡು ಸರ್ವರಾಜ್ಯ ವ್ಯವಸ್ಥೆಯನ್ನು ಬಹಳ ಚಾತುರ್ಯದಿಂದ ನಡೆಸುತ್ತಿದ್ದನು. ದಿನಕರರಾಯನು ಪೂರ್ವದಲ್ಲಿ ಒಬ್ಬ ಸಣ್ಣ 'ಕಾರಕೂನ್' ನಾಗಿದ್ದನು. ಆದರೆ ಅವನ ಶರೀರದಲ್ಲಿ ಸಂಸ್ಥಾನದ ರಾಜಚಕ್ರವನ್ನು ನಡಿಸತಕ್ಕಂಥಾ ಬುದ್ಧಿವಂತಿಕೆಯಿದೆ ಎಂಬುವದನ್ನು ನೋಡಿ ಗ್ವಾಲಿಯರ್‌ನ ಮುಂಚಿನ ರೆಸಿಡೆಂಟ್ ಬುಷ್ಬಿ ಸಾಹೇಬನು, ಅವನನ್ನು ಶ್ರೇಷ್ಠವಾದ ಪದವಿಗೆ ತಂದನು. ಆಗಿನಾರಭ್ಯ ಅವನು ತನ್ನ ಉತ್ತಮ ಗುಣಗಳನ್ನು ಪ್ರಕಾಶಮಾಡಿ, ಗ್ವಾಲಿಯರ್ ಸಂಸ್ಥಾನವನ್ನು ಒಳ್ಳೇ ಸ್ಥಿತಿಗೆ ತಂದು ಇದ್ದನು.

---

his career is associated. The fourth conspirator possessed the genius, the daring, the despair necessary for the conception of great deeds. She was urged on by hatred, by desire of vengeance, by a blood—stained conscience, by a determination to strike hard whilst there was yet, a chance. She could recognise the possibilities before her, she could hope even that if the first blow were successful the fortunes of the campaign might be changed; she possessed and exercised unbounded influence over one at least of her companions —the Rao Sahib. The conjecture, then, almost amounts to certainty that the desperate remedy which confiderates decided to execute at Gopalpur, was suggested and pressed upon her comrades by the daring Rani of Jhansi."

*Malleson's History of the Indian Mutiny, vol. V. P.* 143—144

1855ನೇ ಇಸವಿಯಲ್ಲಿ ಗ್ವಾಲಿಯರ್‌ನ ಪೊಲಿಟಿಕಲ್ ಏಜಂಟ್ ಕರ್ನಲ್ ಮಾಲ್ಕಾಂ ಸಾಹೇಬನಿಗೆ ಬಡೋದೆಗೆ ನೇಮಕವಾಗಿ ಅವನ ಸ್ಥಾನಕ್ಕೆ ಮೇಜರ್ ಛಾರ್ಟಸ್ ಮ್ಯಾಕ್ಫರಸನ್ ಸಾಹೇಬನು ಬಂದನು. ಅವನು ಗ್ವಾಲಿಯರ್ ದರ್ಬಾರಿನಲ್ಲಿ ಅಪರಿಚಯಸ್ಥನಾಗಿದ್ದಾನೆಂಬುವದನ್ನು ನೋಡಿ ಪರರ ಒಳ್ಳೇಸ್ಥಿತಿಯನ್ನು ಸಹಿಸಲಾರದ ಹೊಟ್ಟೇಕಿಚ್ಚಿನ ಕೆಲವು ಜನಗಳು ಮಹಾರಾಜ ಸಾಹೇಬನಿಗೂ ಮತ್ತು ದಿನಕರರಾಯನಿಗೂ ವೈಮನಸ್ಸು ಉತ್ಪನ್ನ ಮಾಡುವದಕ್ಕೆ ಪ್ರಯತ್ನ ನಡಿಸಿದರು. ಮಹಾರಾಜ ಜಯಾಜಿರಾಯನು—

ಯೌವನಂ ಧನಸಂಪತ್ತಿಃ ಪ್ರಭುತ್ವ ಮವಿವೇಕಿತಾ।
ಏಕೈಕಮಪ್ಯನರ್ಥಾಯ ಕಿಮುಯತ್ರ ಚತುಷ್ಟಯಂ॥

ಈ ಹಿತೋಪದೇಶದ ವಚನ ಪ್ರಕಾರ, ಪ್ರಾಯವು ಧನಸಂಪತ್ತು ರಾಜ್ಯಾಧಿಕಾರ ಮತ್ತು ವಿವೇಕಶೂನ್ಯತೆ, ಈ ನಾಲ್ಕರ ಮಧ್ಯೆ ಸಿಕ್ಕಿಕೊಂಡಿದ್ದನು. ಆದಕಾರಣ ಕದಾಚಿತು, ಈ ವಿಘ್ನಸಂತೋಷ ಮಂಡಲಿಯ ಕೆಲಸಕ್ಕೆ ಯಶಸ್ಸು ಬಂದು ಅಸಂಬದ್ಧವಾದ ಅನರ್ಥವು ನಡದೀತೋ ಏನೋ ಎಂಬ ಭಯವು ಹುಟ್ಟಿಇತ್ತು. ಪರಂತು ಸುದೈವದಿಂದ ಅಲ್ಲಿನ ಹೊಸ ರೆಸಿಡೆಂಟ್ ಸಾಹೇಬನು ಮಹಾರಾಜನ ಮನಸ್ಸನ್ನು ತನ್ನ ಕಡೆಗೆ ತಿರುಗಿಸಿಕೊಂಡು, ಅವನ ಮತ್ತು ದಿನಕರರಾಯನ ವಿಶ್ವಾಸವನ್ನು ಪೂರ್ವದಂತೆ ಕೂಡಿಸಿದನು, ಮತ್ತು ಗ್ವಾಲಿಯರ್ ಸಂಸ್ಥಾನದ ರಾಜ್ಯ ವ್ಯವಸ್ಥೆಯನ್ನು ಅವನಿಗೆ ಸ್ವೇಚ್ಛಾನುಸಾರವಾಗಿ ನಡೆಸಿಕೊಳ್ಳುವದಕ್ಕೆ ಬಿಟ್ಟು, ತಾನು ಉತ್ತಮವಾದ ಸ್ನೇಹ ಸಂಪಾದನೆ ಮಾಡಿಕೊಂಡನು. ಸ್ವಲ್ಪಕಾಲದಲ್ಲಿಯೇ ಆ ಸ್ನೇಹ ಸಂಬಂಧವು ಎಷ್ಟರ ಮಟ್ಟಿಗೆ ತೋರಿ ಬಂತೆಂದರೆ, ಹೋಗುತ್ತ ಹೋಗುತ್ತ ಮೇಜರ್ ಮ್ಯಾಕ್‌ಫರಸನ್, ಮತ್ತು ಮಹಾರಾಜ ಜಯಾಜಿರಾವ್, ಇವರು ಕೇವಲ ಏಕಮತ್ಯದಿಂದ ನಡಕೊಳ್ಳಲು ಪ್ರಾರಂಭಿಸಿದರು. ಇಷ್ಟೇಅಲ್ಲದೆ, 1857ನೇ ಇಸವಿ ಪ್ರಾರಂಭದಲ್ಲಿ ಅವರು ಉಭಯತರು ಗವರ್ನರ್ ಜನರಲ್ ಲಾರ್ಡ್ ಕ್ಯಾನಿಂಗ್ ಸಾಹೇಬನ ದರ್ಶನ ತೆಗೆದುಕೊಳ್ಳುವದಕ್ಕಾಗಿ ಕಲ್ಕತ್ತೆಗೆ ಹೋಗಿದ್ದರು. ಅಲ್ಲಿ ಕ್ಯಾನಿಂಗ್ ಸಾಹೇಬನು ಸಿಂದ್ಯಾ ಸರ್ಕಾರಕ್ಕೆ ಒಳ್ಳೇ ಬಹುಮಾನಮಾಡಿ, ಅವನಿಗೆ ಪುತ್ರಸಂತತಿ ಯಾಗದಿದ್ದರೆ ದತ್ತು ತೆಗೆದುಕೊಳ್ಳುವದಕ್ಕೆ ಅಪ್ಪಣೆಕೊಟ್ಟು, ಆತನ ತರುವಾಯ ಗ್ವಾಲಿಯರ್ ಸಂಸ್ಥಾನವನ್ನು ನಡೆಸುತ್ತಾ ಬರುತ್ತೇವೆಂತ ವಾಗ್ದಾನ ಕೊಟ್ಟನು. ಅದರಿಂದ ಸಿಂಧ್ಯಾ ಸರ್ಕಾರದ ಮನಸ್ಸಿನಲ್ಲಿ ಇಂಗ್ರೇಜಿ ಸರ್ಕಾರದ ವಿಷಯದಲ್ಲಿ ವಿಶೇಷ ಪ್ರೇಮಭಾವಹುಟ್ಟಿತು, ಎಂಬುವದು ಚನ್ನಾಗಿ ಲಕ್ಷ್ಯೆಯಲ್ಲಿಡತಕ್ಕ ಮಾತಾಗಿದೆ.

ಮಹಾರಾಜ ಜಯಾಜಿರಾವ್ ಕಲ್ಕತ್ತೆಯಿಂದ, ತನ್ನ ರಾಜಧಾನಿಗೆ ಹಿಂದಕ್ಕೆ ಬರುತ್ತಲೆ ಅವನಿಗೆ ಇಂಗ್ರೇಜಿ ಸೈನ್ಯದಲ್ಲಿ ಅಸಮಾಧಾನ ಉತ್ಪನ್ನವಾದ ಚಿನ್ಹೆಯು ಕಾಣಬಂತು. ಮೇತಿಂಗಳಲ್ಲಿ ಮಿರತ' ಮತ್ತು ದಿಲ್ಲಿಯಲ್ಲಿ ಬಲವಾದ ದಂಗೆಯು ನಡೆದು ಅಲ್ಲಿ

ಬ್ರಿಟಿಷ್ ರಾಜಸತ್ವವು ನಾಶವಾದ ವರ್ತಮಾನವು ಗ್ವಾಲಿಯರಿಗೆ ಬಂದು ತಲ್ಪಿತು. ಗ್ವಾಲಿಯರ್ ಸೈನ್ಯದಲ್ಲಿ ಇಂಗ್ರೇಜಿ ಕಂಟಿಂಜೆಂಟ್ ಸೈನ್ಯವಿತ್ತು, ಮತ್ತು ಸಿಂಧ್ಯಾ ಸರ್ಕಾರದ ಹತ್ತು ಸಾವಿರ ಸೈನ್ಯವಿತ್ತು. ಅದೂನೂ ತಿರುಗಿ ಬಿದ್ದದೆಯೋ ಎಂಬ ಭೀತಿಯು ತೋರಿಬಂತು. ಇಂಗ್ರೇಜಿ ಸರ್ಕಾರದವರು ಅನೇಕ ಸಂಸ್ಥಾನವನ್ನು ಸರ್ಕಾರಕ್ಕೆ ಸೇರಿಸಿಕೊಂಡಿದ್ದರಿಂದ ಜನಗಳ ಮನಸ್ಸಿನಲ್ಲಿ ಉಂಟಾದ ಅಸಮಾಧಾನವು ಆಗಲೇ ಕಾಣುತ್ತಾ ಹೋಯಿತು. ಆದರಲ್ಲಿಯೂ ಬಂದೂಕಿನ ತೋಟೆಗಳ ಮತ್ತು ಹಿಂದೂಧರ್ಮ ನಾಶಪಡಿಸುವ ಪುಷ್ಕಳ ವರ್ತಮಾನತುಂಬಿ ವಿದ್ಯುಚ್ಛಕ್ತಿಯೋ ಪಾದಿಯಲ್ಲಿ ಸರ್ವಜನರ ಮನಸ್ಸು ಸ್ವಲ್ಪಕಾಲದಲ್ಲಿಯೇ ಬ್ರಿಟಿಷ್ ರಾಜ್ಯಸತ್ವದ ವಿಷಯದಲ್ಲಿ ಕೆಟ್ಟು ಹೋಯಿತು. ಗ್ವಾಲಿಯರ್ ದರ್ಬಾರಿನಲ್ಲಿ ಹಳೆ ಮತ್ತು ಹೊಸ ರಾಜ ಮಂಡಲಿಯವರು ಇದ್ದರು. ಆದಕಾರಣ ಆಗಲೇ ಅಲ್ಲಿಯೂ ಕೂಡ ಅರಾಜನಿಷ್ಠತೆಯ ಬೀಜವು ಬಿತ್ತಿ, ಹಳೇ ಸರದಾರರು ಮತ್ತು ಹೊಸ ಮುತ್ಸದ್ದಿಯವರೂ ಸಹ ಇಂಗ್ರೇಜಿ ರಾಜ್ಯಪದ್ಧತಿಗೆ ಪ್ರತಿಕೂಲರಾದರು. * ಮೀರತ್ ಮತ್ತು ದಿಲ್ಲಿಯಲ್ಲಿ ದಂಗೇಖೋರರು ವಿಜಯ ಪತಾಕೆಯನ್ನು

---

* "It was the opinion of the more intelligent Chiefs of the Gwalior state, who were but few in number, that the Bengal native army believed our Government to have intended, through the greased cartridges, to strike at the Hindu and Mahomedan religions in favour of Christianity. But they held that the army was predisposed to revolt through the disaffection of the population, and that the chief causes of the popular dissatisfaction with our rule were—the extinction of Native States, and our consequent measures; the depression of chiefs and heads of society; the resumption, or the conversion into life—tenures, of hereditary rent free tenures of land, or of hereditary interests connected with land or the land revenue; alienation of zamindary lands for arrears of revenue, or in satisfaction of Civil decrees; the nonconferment of estates or honours for eminent services to the state; the want of conciliatory and confidential personal intercourse between our

ಹಾರಿಸುತ್ತಲೆ, ಉತ್ತರಹಿಂದೂಸ್ಥಾನದಲ್ಲಿ, ಅನೇಕ ಸ್ಥಳದ ಸೈನ್ಯದವರು, ದಂಗೆಗೆ ಪ್ರವರ್ತರಾದರು. ಅಂಥಾ ಸಮಯವನ್ನು ನೋಡಿ ಶಿಂಧ್ಯಾ ಸರ್ಕಾರದವರು, ತಮ್ಮ ಅಂಗ ಸಂರಕ್ಷಣೆಯ ಸೈನ್ಯವನ್ನು, ತತ್‍ಕ್ಷಣವೆ ಲೆಫ್ಟಿನೆಂಟ್ ಗವರ್ನರ್‌ನ ಸಂರಕ್ಷಣೆಗಾಗಿ, ಆಗ್ರಾಕ್ಕೆ ಕಳುಹಿಸಿ ಕೊಟ್ಟರು ಮತ್ತು ಸ್ವಂತಮರಾಟೆ ಸೈನ್ಯದ ಒಂದು ಭಾಗವನ್ನು ಎಟ್ರಾವಾಕ್ಕೆ ಕಳುಹಿಸಿದರು. ಇಷ್ಟೇಅಲ್ಲದೆ ಸ್ವತಃ ತಾವು ಗ್ವಾಲಿಯರ್‌ನಲ್ಲಿನ ಕಂಟಿಂಜಂಟ್ ಫೌಜುತಿರುಗಿ ಬಿದ್ದಿದೆಯೆಂಬುವದನ್ನು ನೋಡಿ, ರೆಸಿಡೆಂಟನ ಆಲೋಚನೆಯನ್ನು ತೆಗೆದುಕೊಂಡು, ಅಲ್ಲಿನ ಯೂರೋಪಿಯನ್ ಜನಗಳ ಸಂರಕ್ಷಣೆಗೆ, ಅನೇಕ ಪ್ರಯತ್ನವನ್ನು ಮಾಡಿದರು. ಆದಾಗ್ಯೂ ತಾರೀಖು 14 ನೇ ಜೂನ್‌ನಲ್ಲಿ, ಆ ಸೈನ್ಯದವರು ದೊಡ್ಡದಂಗೆ ನಡಿಸಿ, ಇಂಗ್ರೇಜಿ ಕಂಟೋನ್ಮೆಂಟಿಗೆ ಬೆಂಕಿಹಚ್ಚಿದರು, ಮತ್ತು ಮೇಜರ್ ಲೇಕ್, ಸೇರಿಫ್, ಕ್ಯಾಪ್ಟನ್ ಹಾಕಿನ್ಸ್, ಮತ್ತು ಸ್ಟ್ಯುವರ್ಟ್ ಮುಂತಾದ ಲಷ್ಕರ್ ಅಧಿಕಾರಿಗಳನ್ನು ಕೊಂದುಹಾಕಿದರು. ಈ ವರ್ತಮಾನವು ಕ್ಯಾಪ್ಟನ್ ಮ್ಯಾಕ್‍ಫರ್ಸನ್ ಸಾಹೇಬನಿಗೆ ತಿಳಿಯುತ್ತಲೆ, ಆತನು ತತ್‍ಕ್ಷಣವೆ ಪೂಲ್‌ಬಾಗ್ ಮಧ್ಯದಲ್ಲಿ, ಶಿಂಧೇನ ಸರ್ಕಾರದ ಅರಮನೆಗೆ ಬಂದನು; ಮತ್ತು ಅವನು ರೆಸಿಡೆನ್ಸಿಯಲ್ಲಿನ ಸರ್ವಯೂರೋಪಿಯನ್ ಹೆಂಗಸರು ಮಕ್ಕಳನ್ನು ಸೈನ್ಯವನ್ನುಕೊಟ್ಟು, ಆಗ್ರಾಕ್ಕೆ ಕಳುಹಿಸಿಕೊಡಬೇಕೆಂತ ನಿಶ್ಚಯಮಾಡಿದನು. ಸ್ವತಃ ತಾನು ಗ್ವಾಲಿಯರ್‌ನಲ್ಲಿಯೇ ಇರಬೇಕೆಂತ ವಿಚಾರಮಾಡಿದನು. ಆದರೆ ಸಿಂಧ್ಯಾನು ಅದನ್ನು ಒಪ್ಪದೆ "ನೀವು ಆಗ್ರಾಕ್ಕೆ ಹೋಗಿ, ಇಲ್ಲದಿದ್ದರೆ, ದಂಗೇಜನಗಳು ನಿಮ್ಮನ್ನ ಬಲಿಯಾಗಿ ತೆಗೆದುಕೊಳ್ಳದೆ ಮುಂದಿಗೂ ಇರಲಾರರು." ಎಂತ ಖಂಡಿತವಾಗಿ ತಿಳಿಸಿದನು. ಆ ಯಲ್ಲರ ಸಂಗಡ ಸೈನ್ಯವನ್ನು ಕೊಟ್ಟು, ಅವರನ್ನ ಆಗ್ರಾಕ್ಕೆ ಕಳುಹಿಸಿದನು. ಚಂಬಲ್‌ನದಿಯಿಂದ 6 ಹರದಾರಿಗಳಮೇಲೆ, ಹಿಂಗೋನವೆಂಬ ವೊಂದು ಊರಿದೆ. ಅಲ್ಲಿಗೆ ಈ ಜನಗಳು ತಲ್ಪುತ್ತಲೇ, ಜಹಂಗೀರಖಾನ್ ಯೆಂಬ ಸಿಂಧ್ಯಾನಕಡೆ ಒಬ್ಬ ಹಳೇ ನೌಕರನು. 'ಗಾಜಿಯ ಪಂಗಡದ ಆಧಿಪತ್ಯವನ್ನು ವಹಿಸಿ, ಒಬ್ಬ ದೊಡ್ಡ ಮರ್ಯಾದಸ್ಥನಹಾಗೆ ತೋರಿಸಿಕೊಂಡು, ಯೂರೋಪಿಯನ್ ಜನರನ್ನ ಮೋಸಗೊಳಿಸುವದಕ್ಕೋಸ್ಕರ ಅಲ್ಲಿಗೆ ಬಂದಿದ್ದನು. ಅವನ ವುದ್ದೇಶವು, ಮಧುರವಾದ ಮಾತನಾಡಿ; ಅವರನ್ನು ನದಿಯ ಸಣ್ಣ ಪ್ರವಾಹಕ್ಕೆ ಕರಕೊಂಡು ಹೋಗಿ, ಅಲ್ಲಿ, ವುದ್ದೇಶಪಟ್ಟು ಕೂಡಿಸಿದ್ದ ತನ್ನಸೈನ್ಯದವರಿಂದ, ಅವರನ್ನ ನಾಶಪಡಿಸಬೇಕೆಂತ ಇತ್ತು. ಆದರೆ ಆಸಮಯದಲ್ಲಿ ದಿವಾನ್ ದಿನಕರರಾಯನು ಠಾಕುರ್ ಬಲದೇವಶಿಂಗನೆಂಬ ಒಬ್ಬ ಸರದಾರನನ್ನು ಕೆಲವು ಜನಗಳು ಸಹಿತ ಕಳುಹಿ

---

officers and the Native chiefs, heads of Society and people; our system of administering Civil Justice."

*Memorials Page*, 327.

ಸಿದ್ಧನು. ಅವನು ತತ್‌ಕ್ಷಣವೇ ಮುಂದೆ ಬಂದು ತನ್ನ ಸೈನ್ಯವನ್ನ ಎರಡು ಭಾಗಮಾಡಿ, ಜಹಾಂಗೀರಖಾನನ ಉದ್ದೇಶವು ನೆರವೇರುವದಕ್ಕೆ ಆಸ್ಪದಕೊಡದೆ ಯುರೋಪಿಯನ್ ಜನಗಳನ್ನು ಚಂಬಳಾ ಆಚೆಗೆ, ಸುಖದಿಂದ ತಲ್ಪಿಸಿದನು. ಅನಂತರ, ಧೋಲಾಪುರದ ರಾಣಾ ಅವರಿಗೆ ಆನೆ ಮುಂತಾದ್ದನ್ನು ಕಳುಹಿಸಿ, ವಳ್ಳೇ ಸಹಾಯ ಮಾಡಿ, ಅವರನ್ನು ಆಗ್ರಾಕ್ಕೆ ವೈದು ತಲ್ಪಿಸಿದನು. ಆಸಮಯದಲ್ಲಿ, ಇಂಗ್ರೇಜಿ ಜನಗಳಿಗೆ ಮಹಾರಾಜ ಸಿಂಧ್ಯೆ, ದಿವಾನ್ ದಿನಕರರಾವ್, ಠಾಕೂರ್ ಬಲದೇವಸಿಂಗ್, ಧೋಲಪುರದ ರಾಣಾ ಇವರು ಮಾಡಿದ ಉಪಕಾರವು, ಯಾವಾಗಲೂ ಸ್ಮರಿಸತಕ್ಕದ್ದಾಗಿಧೆ ಯುಂಬುವದಕ್ಕೇನೂ ಸಂದೇಹವಿಲ್ಲ.

ಇದುಹಾಗಿರಲಿ, ಇಂಗ್ರೇಜಿ ಜನಗಳು ಗ್ವಾಲಿಯರ್‌ನಿಂದ ಓಡಿಹೋದನಂತರ, ಕಂಟಿಂಜೆಂಟಿನ ಸೈನ್ಯದವರು ಶಿಂಧ್ಯಾಸರ್ಕಾರಕ್ಕೆ ಇಂಗ್ರೇಜಿಯುವರ ಪಕ್ಷವನ್ನು ಬಿಟ್ಟು, ತಮ್ಮ ಕಡೆ ಆಧಿಪತ್ಯವನ್ನು ಸ್ವೀಕಾರ ಮಾಡಬೇಕೆಂತ ವಿಜ್ಞಾಪಿಸಿಕೊಂಡರು. ಅವರ ಉದ್ದೇಶವು ಸಿಂಧ್ಯಾ ಸರ್ಕಾರವನ್ನ ಸಂಗಡ ತೆಗೆದುಕೊಂಡು ಆಗ್ರಾದಮೇಲೆ ಪ್ರಯಾಣ ಮಾಡಬೇಕೆಂತ ಇತ್ತು. ಆ ಸಮಯದಲ್ಲಿ ಆ ಗ್ರಾಕ್ಕೆ ಇಂಗ್ರೇಜಿಯುವರ ಭದ್ರತೆಯು ಶುದ್ಧಾಂಗ ಸರಿಯಾಗಿರಲಿಲ್ಲವಾದ್ದರಿಂದ, ಗ್ವಾಲಿಯರ್‌ನ ಸೈನ್ಯವು ಅಲ್ಲಿಗೆ ಬರುವದು ಅವರಿಗೆ ಬಹಳ ಕೆಟ್ಟದ್ದಾಗಿ ತೋರುತ್ತಿತ್ತು. ಆದ್ದರಿಂದ, ಮೇಜರ್ ಮ್ಯಾಕ್ ಫರ್ಸನ್ ಸಾಹೇಬನು ಸಿಂಧ್ಯಾ ಸರ್ಕಾರಕ್ಕೆ ಸೂಚಿಸಿದ್ದೇನಂದರೆ:—ಸಾಧ್ಯವಾದಷ್ಟು ಪ್ರಯತ್ನಮಾಡಿ, ಅಲ್ಲಿನ ಸೇನೆಯು ಆ ಗ್ರಾದಕಡೆಗೆ ಬಾರದಹಾಗೆ ಮಾಡಬೇಕು. ಆ ಸಮಯದಲ್ಲಿ, ಶಿಂಧ್ಯಾ ಮತ್ತು ಆತನ ದಿವಾನ್ ಸಹ, ಮ್ಯಾಕ್‌ಫರ್ಸನ್ ಸಾಹೇಬನ ಸೂಚನೆಗೆ, ಮಿತ್ರಭಾವದಿಂದ ಪೂರ್ಣ ಅನುಮತಿಕೊಟ್ಟು, ತಮಗೆ ವಿರೋಧವಾಗಿದ್ದ ಸೈನ್ಯದವರಿಗೆ, ನಾನಾಪ್ರಕಾರವಾದ ವಾಗ್ದಾನ ಮಾಡಿ, ಗ್ವಾಲಿಯರ್‌ನಲ್ಲಿಯೇ ಇಟ್ಟುಕೊಂಡರು. ಆದ್ದರಿಂದ, ಆಗ್ರದಕೋಟೆಯಲ್ಲಿ ಆಶ್ರಯ ಹಿಡಿದು ಕೊಂಡಿದ್ದ ಇಂಗ್ರೇಜಿ ಜನಗಳು ಉಳಿದುಕೊಂಡರು. *

---

* ಆ ಸಮಯದಲ್ಲಿ ಆಗ್ರಕೋಟೆಯಲ್ಲಿ ಪ್ರತ್ಯಕ್ಷವಾಗಿದ್ದ ಒಬ್ಬ ಯುರೋಪಿಯನ್ ಗೃಹಸ್ಥನು, ಮೇಜರ್ ಮ್ಯಾಕ್‌ಫರ್ಸನ್ ಸಾಹೇಬನಿಂದ ಇಂಗ್ರೇಜಿ ಜನಗಳ ಜೀವ ಉಳಿದುಕೊಂಡಿತು ಯಂತ ಸ್ಪಷ್ಟವಾಗಿ ಹೇಳಿದ್ದಾನೆ:—

"Few know how much we, at Agra, are indebted to Major Macpherson for our immunity from attack by the full force of the Gwaliar Contingent, with their powerful siege artillery. The real state of the case was

ಇದು ಹಾಗಿರಲಿ. ಕಂಟಿಂಜೆಂಟ್ ಸೈನ್ಯದವರು, ಕೆಲವು ದಿವಸ ಗ್ವಾಲಿಯರ್‌ನಲ್ಲಿ ಸ್ವಸ್ಥವಾಗಿದ್ದರು. ಅವರ ಪ್ರಮುಖ ಅಧಿಕಾರಿಗಳು ಸಿಂಧ್ಯಾ ಸರ್ಕಾರವನ್ನ ವಶ ಮಾಡಿಕೊಳ್ಳುವದಕ್ಕೆ, ಬಹಳ ಪ್ರಯತ್ನಮಾಡಿದರು. ಇಷ್ಟೇ ಅಲ್ಲದೆ, ಅವರು ಸಿಂಧ್ಯಾನಿಗೆ ನಮ್ಮಸಂಗಡ ಆಗ್ರಾಕ್ಕೆ ನಡೆಯಿರಿ, ಅಥವ ನಿಮ್ಮ ಬಕ್ಕಸದಿಂದ ಕೆಲವು ದ್ರವ್ಯವನ್ನು ಕೊಡಿಯಂತ, ಬಂದೇ ಪ್ರಕಾರವಾಗಿ ಕೇಳಲಿಕ್ಕೆ ಹಚ್ಚಿದರು. ಆದಾಗ್ಯೂ ಸಿಂಧೆ ಅಥವ ಆತನ ದಿವಾಣ ದಿನಕರರಾವ್, ಇವರು ತಮ್ಮ ಒಳಗಿನ ಉದ್ದೇಶವನ್ನು ಅವರಿಗೆ ಯಾವಪ್ರಕಾರವೂ ತಿಳಿಯಗೊಡದೆ, ಧೃಡನಿಶ್ಚಯ, ಧೈರ್ಯ ಮತ್ತು ಚಾತುರ್ಯ ದಿಂದ ತಾರೀಖು 15 ನೇ ಅಕ್ಟೋಬರ್ ಪರ್ಯಂತರ ಅವರಲ್ಲಿ ಒಳ್ಳೇ ಮಾತನಾಡಿ, ಅವರ ಪಕ್ಷಕ್ಕೆ ತಮ್ಮ ಅನುಕೂಲಧೆಯೆಂತ ತೋರಿಸಿ, ಸ್ವಸಂರಕ್ಷಣೆ ಮಾಡಿಕೊಂಡರು. ಆ ಕಾಲದಲ್ಲಿ ಬಂದಿದ್ದ ಪ್ರಸಂಗವು ಶಿಂಧೇ ಸರ್ಕಾರ ಮತ್ತು ದಿನಕರರಾವ್ ಇವರಿಗೆ ಇದ್ದ ಮಿತ್ರತ್ವವನ್ನು ಪರೀಕ್ಷೆ ಮಾಡಿ ನೋಡತಕ್ಕ ಒಳ್ಳೇಸಮಯವಾಗಿತ್ತೆಂತ ಹೇಳಿದರೆ ನಡೆಯುಬಹುದು. ಶಿಂಧೇ ಸರ್ಕಾರಕ್ಕೆ, ದಿವಾಣ ದಿನಕರರಾವ್ ಮತ್ತು ಇನ್ನಿಬ್ಬರು ಸರದಾರರು ಮಾತ್ರ ಅನುಕೂಲರಾಗಿದ್ದರು. ಉಳಿದವರ ಮನಸ್ಸೆಲ್ಲಾ, ಇಂಗ್ರೇಜಿಯವರಿಗೆ ವಿರುದ್ಧವಾಗಿತ್ತು. ಅವರು ನಾನಾವಿಧವಾಗಿ, ಅವರನ್ನು ವಶಮಾಡಿ ಕೊಳ್ಳುವ ಪ್ರಯತ್ನ ನಡೆಸುತ್ತಿದ್ದರು. ಇಂಗ್ರೇಜಿ ಕಂಟಿಂಜೆಂಟ್ ಸೈನ್ಯವು, ಸ್ವೇಚ್ಛೆಯಾಗಿ ಹೋಗಿ, ಶಿಂಧ್ಯಾ ಸರ್ಕಾರದ ಅನುಕೂಲವನ್ನು ಮತ್ತು ದ್ರವ್ಯವನ್ನು ಅಪೇಕ್ಷೆ ಮಾಡಿಕೊಂಡು ಕೂತಿತ್ತು. ಅದಕ್ಕೆ ಶಿಂಧ್ಯಾ ಸರ್ಕಾರದ ಅಂತರಂಗ ಮನಸ್ಸು ಸ್ವಲ್ಪ ಮಟ್ಟಿಗೆ ತಿಳದಿದ್ದರೆ, ಅದು ಅರಮನೆಯಮೇಲೆ ತೋಫುಹಾರಿಸಿ ಆಗಲೆ ಅದನ್ನು ಸುಟ್ಟು ಹಾಕಿಬಿಡುತಿತ್ತು. ಸ್ವತಃ ಶಿಂಧ್ಯಾನು ಲಷ್ಕರಿನ ಮನಸ್ಸಿನಂತೆ ಅಹಂಕಾರದಿಂದ ನಡಕೊಳ್ಳುತ್ತಿದ್ದ ಕಾರಣ, ಅವನಿಗೆ ಯತ್ಕಿಂಚಿತ್ ಶಿಟ್ಟುಬಂದಿದ್ದರೂ, ಮತ್ತು ಅವನು ಯುದ್ಧಕ್ಕೆ ಪ್ರಾರಂಭ ಮಾಡಿದ್ದರೂ, ಬಹಳ ಕಷ್ಟವಾಗಿತ್ತು. ಯಾಕಂದರೆ

---

this : the Political Agent had full influence over Scindia's Dewan, or Prime Minister, the celebrated Dinkar Rao ; the Minister in his turn influenced his master ; and thus Major Macpherson, from the interior of the fort at Agra, ruled the course of events at the Court of Gwalior."

*Notes on the Revolt in the N. W. Provinces of India by Charles Raikes.*

ಅವನ ಹತ್ತು ಸಾವಿರ ಸೈನ್ಯವು ಗುಪ್ತರೀತಿಯಿಂದ, ದಂಗೇಜನಗಳಿಗೆ ಅನುಕೂಲವಾಗಿತ್ತು. ಸರ್ವ ದರ್ಬಾರಿನವರೂ ಇಂಗ್ರೇಜಿಯುವರಿಗೆ ವಿರುದ್ಧವಾಗಿದ್ದ ಕಾರಣ, ಅವರ ಆಲೋಚನೆಯುಲ್ಲಾ ಇಂಗ್ರೇಜಿಯುವರಿಗೆ, ಪ್ರತಿಕೂಲವಾಗಿ ನಡೆಯುತ್ತಿತ್ತು. ಅದರಲ್ಲಿ ಯಾವದಾದರೂ ಒಂದು ಸಲಹೆ ಮಹಾರಾಜನ ಮನಸ್ಸಿನಲ್ಲಿ ಹತ್ತಿದ್ದರೆ, ಅನರ್ಥವಾಗುವದಕ್ಕೆ ಸಾಕಾಗಿತ್ತು. ಶ್ರೀಮಂತ ನಾನಾಸಾಹೇಬ ಪೇಷ್ವೆಯು ಸರ್ವ ಮಹಾರಾಷ್ಟ್ರದವರಿಗೆ ಪ್ರಿಯನಾಗಿದ್ದ ಕಾರಣ, ಆ ತನರ್ಕಾ ಪುರದಲ್ಲಿನ ವಿಜಯವು, ಗ್ವಾಲಿಯರ್ ನಲ್ಲಿನ ಜನಗಳಿಗೆ ಪ್ರೋತ್ಸಾಹ ಕೊಡುವದಕ್ಕೆ ಕಾರಣವಾಗಿತ್ತು. ದಿಲ್ಲಿ ಮತ್ತು ಲಕ್ನೋ ದಲ್ಲಿ; ಇಂಗ್ರೇಜಿಯವರ ಸ್ಥಿತಿಯು, ಬಹಳ ಶೋಚನೀಯವಾಗಿತ್ತು. ಬ್ರಿಟಿಷ್ನವರ ರಾಜಸತ್ವವು ಬಹಳವಾಗಿ ನಷ್ಟವಾಗಿಧೆಯಂತ, ಜನಗಳಿಗೆ ತೋರುತ್ತಾ ಹೋಯಿತು. ಅಂಥಾಸಮಯದಲ್ಲಿ ಶಿಂಧ್ಯಾಸರ್ಕಾರದ ಪ್ರಾಮಾಣಿಕತೆ, ಮತ್ತು ಬ್ರಿಟಿಷ್ ಸರ್ಕಾರದ ವಿಷಯದಲ್ಲಿ ಪ್ರೀತಿಯು ಸ್ವಲ್ಪವಾದರೂ ಕೆಟ್ಟಿದ್ದರೆ, ಸ್ 1857 ನೇ ಇಸ್ವಿ ದಂಗೆಗೆ, ಯಾವ ವಿಧವಾದ ಸ್ವರೂಪ ಬರುತ್ತಿತ್ತು ಯಂಬುವದನ್ನು, ಹೇಳುವದು ಬಹಳ ಕಷ್ಟವಾಗಿಧೆ. ಬುಂದೇಲಖಂಡದಲ್ಲಿ ಅನೇಕ ಸಂಸ್ಥಾನಿಕರು ಶಿಂಧ್ಯಾ ಸರ್ಕಾರದ ನಡವಳಿತೆಯನ್ನೇ ಅನುಸರಿಸುವದಕ್ಕೆ ಆಸಕ್ತಿಯುಳ್ಳವರಾಗಿದ್ದರು. ಭೋಪಾಲ್ ಮತ್ತು ಮಾಳವಾ ಕಂಟಿಂಜೆಂಟ್ ಮತ್ತು ಹೋಳಕರನ ಕೆಲವು ಸೈನ್ಯ ಸಹ, ದಂಗೇಜನಗಳಿಗೆ ಅನುಕೂಲವಾಗಿ ಹೋಗಿದ್ದು, ಅವರು ಇಂಗ್ರೇಜಿಯುವರಿಗೆ ವಿರುದ್ಧವಾಗಿ, ಯುದ್ಧ ಮಾಡುವದಕ್ಕೆ ಬುಂದೇಕಾಲಿನಮೇಲೆ ನಿಂತಿದ್ದರು. ನಿಜವಾಗಿಯೂ, ಆ ಸಮಯದಲ್ಲಿ, ಶಿಂಧ್ಯಾನು ಸ್ವಲ್ಪ ತಂಟೆ ಮಾಡಿದ್ದರೆ, ಮಳೆಗಾಲದಲ್ಲಿ ಪರ್ವತಗಳ ತಲೆಯಮೇಲೆ ಮಳೆಬಿದ್ದು, ಅನೇಕ ಜಲರಾಶಿಗಳು ಏಕತ್ರವಾಗಿ, ಅದರ ಬಲವಾದ ವೇಗದಿಂದ ಬೆಟ್ಟದಮೇಲಿನಿಂದ ಹಾರಿಕೊಳ್ಳುತ್ತಾ, ಹ್ಯಾಗೆ ಕೆಳಗೆ ಬರುತ್ತವೆಯೋ, ಮತ್ತು ಹ್ಯಾಗೆ ಸುತ್ತಲೂ ಸರ್ವ ಪ್ರದೇಶವನ್ನು ವ್ಯಾಪಿಸಿಕೊಳ್ಳುತ್ತವೆಯೋ ಆ ರೀತಿಯಾಗಿ ಆ ಪ್ರಳಯದ ಪ್ರವಾಹವು ಸರ್ವದಕ್ಷಿಣದೇಶದ ಮಧ್ಯದಲ್ಲಿಯೂ ಹರಿದು ಹೋಗಿ, ಅದು ಹಿಂದೂಸ್ಥಾನದ ಯಷ್ಟುಭಾಗವನ್ನು ವ್ಯಾಪಿಸಿಕೊಂಡುಬಿಡುತ್ತಿತ್ತೋ, ಮತ್ತು ಎಲ್ಲೆಲ್ಲಿ ಏನು ಏನು ಅನರ್ಥವನ್ನು ಮಾಡುತ್ತಿತ್ತೋ, ಎಂಬುವದನ್ನ ಹೇಳುವದು, ಕಠಿಣವಾಗಿಧೆ. *

---

* ಆ ಸಮಯದ ಸ್ಥಿತಿಯನ್ನು ಒಬ್ಬ ಗ್ರಂಥಕಾರನು ಯಥಾ ಯೋಗ್ಯವಾಗಿ ವರ್ಣನೆ ಮಾಡಿದ್ದಾನೆ:—

"Gwalior, while it thus continued in his hands, might have been regarded as in one sense the Key of India, or rather, perhaps, as one link of a chain, which

ಇದು ಹಾಗಿರಲಿ, ಸೆಪ್ಟಂಬರು ತಿಂಗಳ ಪರ್ಯಂತರ ತಮ್ಮ ಅಂತರಂಗದ ಉದ್ದೇಶವನ್ನು ಶಿಂಧ್ಯಾ ಮತ್ತು ದಿವಾನ್‌ಇವರು, ಕಂಟಿಂಜೆಂಟ್ ಸೈನ್ಯಕ್ಕೆ ಶುದ್ಧಾಂಗವಾಗಿ ತಿಳಿಯಗೊಡಲಿಲ್ಲ. ಪರಂತು, ಆ ಮುಂದೆ ಅದು ಹೊರಪಡತಕ್ಕ ಸಮಯವು ಶೀಘ್ರದಲ್ಲಿ ಬಂದು ಒದಗಿತು. ಮಹು, ಮತ್ತು ಇಂದೂರಿನಲ್ಲಿನ ದಂಗೇಖೋರ ಜನಗಳು ಗ್ವಾಲಿಯರ್‌ನಲ್ಲಿನ ಸೈನ್ಯಕ್ಕೆ, ದಂಗೆಯೇಳುವದಕ್ಕೆ ತುಂಬಾ ಪ್ರೋತ್ಸಾಹ ಕೊಟ್ಟದ್ದರಿಂದಲೂ, ಮತ್ತು ಶ್ರೀಮಂತ ನಾನಾಸಾಹೇಬ ಪೇಷ್ವೆಯ ವಕೀಲನು; ಗುಪ್ತರೀತಿಯಿಂದ ಅದನ್ನು ವಶಮಾಡಿಕೊಳ್ಳುವ ಪ್ರಯತ್ನ ಮಾಡುತ್ತಿದ್ದದ್ದರಿಂದಲೂ, ಆ ಸೈನ್ಯವು ಸ್ವಸ್ಥವಾಗಿರದೆ, ಸಪ್ಟಂಬರು ತಾರೀಖು 7ನೇ ದಿವಸ ಆರಿಸಿ ತೆಗೆದ ಸರಿಯಾದ 300 ತಮ್ಮ ಕಡೆ ಜನಗಳನ್ನು ಅರಮನೆಗೆ ಕಳುಹಿಸಿ, ಶಿಂಧ್ಯಾನಿಗೆ ತಿಳಿಸಿದ್ದೇನಂದರೆ.—"ನಾವು ಆಗ್ರಾದಮೇಲೆ ಹೋಗಿ ಅಲ್ಲಿನ ಕೆಂಪುಜನಗಳಮೇಲೆ ಬೀಳತಕ್ಕವರಾಗಿದ್ದೇವೆ. ಆದ ಕಾರಣ ನೀವು ನಮಗೆ ಸಹಾಯಮಾಡಿ, ನಿಮ್ಮ ಜರತಾರಿ ಭಾದರವನ್ನು ನಮ್ಮ ಸಂಗಡ ಕೊಡಿ." ಆ ಸಮಯದಲ್ಲಿ ಶಿಂಧ್ಯಾನು ಖಂಡಿತವಾಗಿ ಹೇಳಿದ್ದೇನಂದರೆ "ನಿಮ್ಮ ಕಾರ್ಯವು ನಮ್ಮ ಅಪ್ಪಣೆ ಯಿಲ್ಲದೆ ನಡೆಸತಕ್ಕದ್ದಾಗಿಧೆ. ಮಳೆಗಾಲವು, ತೀರುವವರೆಗೂ, ನೀವು ಯಾವದಾದರೂ ಕೆಲಸವನ್ನು ನಡೆಸಿದರೆ, ಅದು ನಮಗೆ ಸಮ್ಮತಿಯಿಲ್ಲ; ಮತ್ತು ಆಪ್ರಕಾರ ಮಾಡಿದರೆ, ನಿಮಗೆ ನಮ್ಮ ಕಡೆಯಿಂದ ಏನೂ ಸಹಾಯವು ಸಿಕ್ಕಲಾರದು. ಇಷ್ಟೇ ಅಲ್ಲದೆ, ನಿಮ್ಮ ಸಂಬಳವನ್ನು ನಾವು ನಿಲ್ಲಿಸುವೆವು." ಇದನ್ನು ಕೇಳುತ್ತಲೆ, ಶಿಂಧ್ಯಾನ ನಿಜವಾದ ಉದ್ದೇಶವು, ಆ ಜನಗಳಿಗೆ ತಿಳಿಯ ಬಂದು, ಬಹಳ ಶಿಟ್ಟಿನಿಂದ ಅವನ ನಿರೂಪವನ್ನು ತೆಗೆದುಕೊಂಡರು; ಮತ್ತು ತತ್‌ಕ್ಷಣವೇ ತಮ್ಮ

---

could not have given way in any part without ruining our power in India. If the Ruler of Gwalior had either played us false, or succumbed to the strong adverse elements with which he had to contend, the Revolt would almost certainly have been national and general instead of being local and mainly military; and instead of its fate being decided by those operations in the easily traversable Gangetic Valley, upon which public attention was concentrated, we should have had to face the warlike races of Upper India combined against us in a most difficult country; and, in all probability, those of the South also."

ಸ್ಥಳಕ್ಕೆ ಬಂದು, ಬಹಳ ಸಂಭ್ರಮದಿಂದ, ದಂಗೆಯ ನಿಶಾನೆಯನ್ನು ನಿಲ್ಲಿಸಿದರು. ಆ ಸಮಯದಲ್ಲಿ ಸಿಂಧ್ಯಾನ ಮೇಲೆ, ಬಹಳ ಸಂಕಟ ಪ್ರಸಂಗವು ಬಂದು ಪದಗಿತು. ಆದರೆ ಆತನು ಸ್ವಲ್ಪವೂ ಧೈರ್ಯಗೆಡದೆ, ತನ್ನ ಮರಾಟೆ ಜನಗಳ ಪಟಾಲಂನ ಕವಾಯತು ಪ್ರತಿ ದಿನವೂ ತೆಗೆದುಕೊಂಡು, ಅವರಿಗೆ ಅನೇಕ ಉಪದೇಶವನ್ನು ಮಾಡಿ, ಅವರ ಸ್ವಾಮಿ ಭಕ್ತಿಯನ್ನು ಎಚ್ಚರಿಸಿದನು. ಅದೇ ಪ್ರಕಾರವಾಗಿ, ಠಾಕೂರು ಜನಗಳ ಸಂಖ್ಯೆಯು ಹೆಚ್ಚಾಗಿ ತೋರಿಬಂದು, ಸುಮಾರು 5000 ಹೊಸ ಸೈನ್ಯವನ್ನು ಸೇರಿಸಿದನು. ತಿರುಗಿ ಬಿದ್ದಿದ್ದ ಕಂಟಿಂಜೆಂಟ್ ಸೈನ್ಯವು, ಸಿಂಧ್ಯಾನ ಅರಮನೆಯ ಮೇಲೆ, ಮತ್ತು ಪಟ್ಟಣದ ಮೇಲೆ ತೋಫಿನ ಮೋರ್ಚೆಯನ್ನು ಕಟ್ಟಿ, ಮೇಲೆ ಬೀಳುವದಕ್ಕೆ ನಿಶ್ಚಯಿಸಿತು. ಪರಂತು, ಆ ಕಾಲದಲ್ಲಿ ಸಿಂಧ್ಯನು ಬಹಳ ಧೈರ್ಯದಿಂದ, ಠಾಕೂರ ಜನಗಳ ಸೈನ್ಯವನ್ನು ಮುಂದಕ್ಕೆ ತಂದು, ಅವರ ಸೇನಾಪತಿತ್ವವನ್ನು ತಾನು ಸ್ವತಃ ಸ್ವೀಕಾರ ಮಾಡಿದನು. ಮತ್ತು ಬಹಳ ಚಾತುರ್ಯದಿಂದ ಪಟ್ಟಣವನ್ನು ಉತ್ತಮವಾಗಿ ಸಂರಕ್ಷಣೆ ಮಾಡಿದನು. ಇದನ್ನು ನೋಡುತ್ತಲೆ, ಕಂಟಿಂಜೆಂಟ್ ಸೈನ್ಯದವರು, ತಮ್ಮದೇನೂ ನಡೆಯುವದಿಲ್ಲವೆಂತ ತಿಳಿದು, ಹಿಂತಿರುಗಿದರು. ಇದೇ ಸಂಧಿಯಲ್ಲಿ, ಶ್ರೀಮಂತ ನಾನಾ ಸಾಹೇಬ್ ಪೇಷ್ವೆಯ ಪ್ರಧಾನ, ತಾತ್ಯಟೋಪಿಯು ಗ್ವಾಲಿಯರ್ರಿಗೆ ಬಂದಿದ್ದನು. ಅವನು ಸರ್ವ ಕಂಟಿಂಜೆಂಟ್ ಸೇನೆಯನ್ನು ವಶಮಾಡಿಕೊಂಡು, ಅದನ್ನು ಕಾರ್ಪುರಕ್ಕೆ ತನ್ನ ಸಂಗಡ ಕರೆದುಕೊಂಡು ಹೋದನು. ಆ ಸೈನ್ಯದವರು ಹೋಗುತ್ತ, ಹೋಗುತ್ತ, ಶಿಂಧ್ಯೆ ತಮಗೆ ಶತ್ರುವಾಗಿದ್ದಾನೆಂತ ತಿಳಿದು, ಆತನ ಅನೇಕದೇಶಗಳನ್ನು ನಾಶಪಡಿಸಿದರು; ಮತ್ತು ಮಧ್ಯ ದಾರಿಯಲ್ಲಿ ಒಬ್ಬ ಜಹಗೀರ್ದಾರನ ಮಗನ ಕಣ್ಣು ಕಿತ್ತು, ಬಹಳ ಬಲೋದ್ಬಂದಿಯಿಂದ ಅವನ ಕಡೆಯಿಂದ ಪುಷ್ಕಳ ದ್ರವ್ಯವನ್ನು ತೆಗೆದುಕೊಂಡರು. ಈ ಸರ್ವ ದಂಗೇಖೋರ ಜನಗಳು ಡಿಸೆಂಬರ್ ತಾರೀಖು 1ನೇ ದಿವಸ ಕಾರ್ಪುರಕ್ಕೆ ಹೋಗಿ ತಲ್ಪಿದರು. ಅದರಿಂದ ಅವರಿಗೆ ಆಗ್ರಾದಮೇಲೆ ಬೀಳುವ ಲಕ್ಷ್ಯೆಯು, ಅನಾಯಾಸವಾಗಿ ತಪ್ಪಿಹೋಗಿ, ಆಗ್ರಾದಲ್ಲಿನ ಯುರೋಪಿಯನ್ ಜನಗಳಮೇಲೆ ಬಂದಿದ್ದ ಭಯಂಕರವಾದ ಸಂಕಟವು, ಅದೃಷ್ಟವಶಾತ್ ನಿವಾರಣೆಯಾಯಿತು. ಕಂಟಿಂಜೆಂಟ್ ಸೈನ್ಯವು ಗ್ವಾಲಿಯರನ್ನು ಬಿಟ್ಟು ಹೊರಟುಹೋದ್ದರಿಂದ, ಸಿಂಧ್ಯಾನ ಭೀತಿಯು ಯಳ್ಳಷ್ಟಾದರೂ ಕಡಿಮೆಯಾಗಲಿಲ್ಲ. ಯಾಕಂದರೆ, ಗ್ವಾಲಿಯರ್‌ನಲ್ಲಿ ಇತರ ಸರ್ವ ಪಟಾಲಂ

---

+ + + + "Had Scindia then struck against us—nay, had he even done his best in our behalf, but failed—the character of the rebellion might have been changed almost beyond the scope of speculation."

*Memorials of Service in India.*

ಅಂತರಂಗವಾಗಿ ತಿರುಗಿ ಬಿದ್ದಿತ್ತು. ರಾಜಪುತ್, ಠಾಕೂರ್, ಬುಂದೇಲೆ, ಮತ್ತು ಪುರಭಯ ಜನಗಳು ತಮ್ಮ ತಮ್ಮ ಇತರ ಸ್ಥಳಗಳ ದೇಶಬಾಂಧವರನ್ನು ಯಾವಾಗ ಅನುಸರಿಸುವರೆಂಬುವದು ನೇಮ ಇರಲಿಲ್ಲ. ಆದಾಗ್ಯೂ ಈ ಪಟಾಲಂನ ಮುಖ್ಯಾಧಿಕಾರಿಗಳಾದ ಬಲವಂತರಾವ್ ಮತ್ತು ಮಾಹುರ್ಕರ್ ಇವರು ಅವರಿಗೆ ಸರ್ವಥಾ ಹೆಚ್ಚು ಕಡಿಮೆ ಮಾಡಲು ಬಿಟ್ಟುಕೊಡಲಿಲ್ಲ: ಸರ್ವ ರಾಜಕಾರ್ಯವು ಆಗ್ರಾದಿಂದ ಮೇಜರ್ ಮ್ಯಾಕ್‌ಪರ್ಸ್ನ ಸಾಹೇಬನ ಮನಸ್ಸಿನಂತೆ, ಗುಪ್ತರೀತಿಯಲ್ಲಿ ನಡೆಯುತ್ತಿತ್ತು. ದಿನಕರರಾಯನು ಸರ್ವ ದರ್ಬಾರು ಮಂಡಲಿಯವರ ಸಂಗಡ ಹೊರಥರಕ್ಕೆ ಸ್ನೇಹಭಾವವನ್ನು ತೋರಿಸಿಕೊಂಡು, ತನ್ನ ನಿಶ್ಚಯವಾದ ಅಭಿಪ್ರಾಯವನ್ನು ಉದ್ಘಾಂಗವಾಗಿ ವ್ಯಕ್ತಪಡಿಸಲಿಲ್ಲ. ಅರ್ಥಾತ್, ಇಂಥಾ ಮಹಾಧೂರ್ತ ಸಮಯಸೂಚಕ ಮತ್ತು ರಾಜಕಾರಣ ಕುಶಲ ಗೃಹಸ್ಥನ ಕೈಯ್ಯಲ್ಲಿ, ಗ್ವಾಲಿಯರ್ ಸಂಸ್ಥಾನದ ರಾಜಸೂತ್ರವಿತ್ತು, ಯೆಂಬುವದರಿಂದಲೇ, ಇಂಥಾ ಕಷ್ಟ ಸಮಯದಲ್ಲಿ ಗ್ವಾಲಿಯರ್‌ನಲ್ಲಿ ಶಾಂತವಾಗಿತ್ತು. ಗ್ವಾಲಿಯರ್ ದರ್ಬಾರಿನಲ್ಲಿನ ಬಹುಜನ ಸರದಾರರು, ಬ್ರಿಟಿಷ್ ರಾಜ್ಯಸತ್ವಕ್ಕೆ ವಿಮುಖರಾಗಿದ್ದರು. ಅಲ್ಲಿನ ಸರ್ವ ಸೈನ್ಯವು ಸರ್ಕಾರದ ಅಪ್ಪಣೆಯನ್ನು ಮಾತ್ರ ನಿರೀಕ್ಷಿಸಿಕೊಂಡಿಥೆ. ಸುತ್ತಲಿನ ಪ್ರಾಂತ್ಯದಲ್ಲಿ, ಘನಘೋರವಾದ ಯುದ್ಧವು ಪ್ರಾರಂಭವಾಗಿದೆ. ಅಂಥಾ ಸಮಯದಲ್ಲಿ ಗ್ವಾಲಿಯರ್‌ನಲ್ಲಿ ಯಥಾಸ್ಥಿತಿಯಾಗಿ ನಿಂತಿದ್ದದ್ದು ಸಾಮಾನ್ಯ ಚಾತುರ್ಯದ ಮಾತಲ್ಲ.

1857 ನೇ ಇಸ್ವಿ ಸೆಪ್ಟಂಬರು ಆರಂಭಿಸಿಕೊಂಡು ಸರ್ 1858 ನೇ ಇಸ್ವಿ ಏಪ್ರೆಲ್ ಪರ್ಯಂತರ, 7, 8 ತಿಂಗಳು ಹ್ಯಾಗಾದರೂ ಕಳೆದವು. ಆಮೇಲೆ, ಝಾಂಸಿ, ಕಾಲ್ಪಿ, ಮುಂತಾದಕಡೆ ಯುದ್ಧದ ವರ್ತಮಾನವು ಗ್ವಾಲಿಯರಿಗೆ ಬಂದು, ಅಲ್ಲಿ ಹೆಚ್ಚು ಹೆಚ್ಚು ಅಸ್ವಸ್ಥತೆಯು ಕಾಣಬಂತು. ದಿವಾನ ದಿನಕರರಾಯನು, ಸರ್ವ ಜನಗಳಸಂಗಡ, ಸ್ನೇಹಭಾವದ ನಡವಳಿತೆಯನ್ನು ಇಟ್ಟುಕೊಂಡಿದ್ದನು. ಮತ್ತು ತನ್ನ ಅಪ್ಪಣೆಯಿಲ್ಲದೆ ಒಂದು ಎಲೆಯೂ ಕೂಡ ಅಲಿಗಾಡಲಿಕ್ಕಿಲ್ಲದಂಥಾ ಭದ್ರತೆಪಡಿಸಿದ್ದನು. ಆದರೆ ಈಗ ಅವನ ಅಭಿಪ್ರಾಯದಂತೆ ಎಲ್ಲಾ ಸಂಗತಿಯೂ ನಡೆದೀತೆಂತ ಚಿನ್ಹೆ ತೋರದಂತೆ ಆಯಿತು. ಅದೇ ಸಮಯಕ್ಕೆ ಪುನಃ ತಾತ್ಯಟೋಪಿಯು ಸಿಂಧ್ಯಾನಸರ್ಕಾರದ ಸೈನ್ಯವನ್ನು, ದಂಗೆಗೆ ತಿರುಗಿಸಲು, ಗುಪ್ತರೀತಿಯಿಂದ ಬಂದಿದ್ದನು. * ಅವನಿಗೆ ಸರ್ವ ದರ್ಬಾರು ಮಂಡಲಿ

---

* ಸರ್ 1857 ನೇ ಇಸವಿ ಸೆಪ್ಟಂಬರು ತಿಂಗಳಲ್ಲಿ ತಾತ್ಯಟೋಪಿಯು ಗ್ವಾಲಿಯರಿಗೆ ಹೋಗಿದ್ದನು ; ಆ ಸಮಯದಲ್ಲಿ ಅವನು ಗ್ವಾಲಿಯರ್ ಕಂಟಿಂಜೆಂಟ್ ಸೈನ್ಯವನ್ನು ದಂಗೇ ಮಾಡುವ ಕೆಲಸಕ್ಕೆ ತಿರುಗಿಸಿಕೊಂಡು, ತನ್ನ ಸಂಗಡ ಕರಕೊಂಡು ಹೋದನು. ಇದೇ ಸೈನ್ಯವೇ ಕಾನ್ಪುರದ ಹತ್ತರ, ಜನರಲ್ ವಿಂಡಾಂ ಸಾಹೇಬನ ಸೈನ್ಯವನ್ನು ಪರಾಭವ ಮಾಡಿತ್ತು ; ಮತ್ತು ಅದೇ ಸೈನ್ಯವೇ ತಾತ್ಯಾನ ಸಂಗಡ ಝಾಂಸಿಗೆ ಹೋಗಿತ್ತು;

ಯವರು ಅಂತರಂಗದಲ್ಲಿ ಅನುಕೂಲರಾಗಿದ್ದ ಕಾರಣ, ಅವರು ಬೇಕಾವಷ್ಟು ಸಹಾಯ ಮಾಡುತ್ತೇವೆಂತ, ಆತನಿಗೆ ವಚನಕೊಟ್ಟರು. ತಾತ್ಪರ್ಯವೇನಂದರೆ, ಗುಂಡುಮದ್ದಿನ ಕಾರಖಾನೆಯಲ್ಲಿ, ಬೆಂಕಿಹತ್ತುವದಕ್ಕೆ ಹ್ಯಾಗೆ (ಬಂದುಸ್ಥಳದಲ್ಲಿ ಬೀಳುವದಕ್ಕೆ) ಅವಕಾಶವಿದೆಯೋ ಅದೇಪ್ರಕಾರವಾಗಿ, ಗ್ವಾಲಿಯರ್‌ನಲ್ಲಿ ಪ್ರಳಯವಾಗುವದಕ್ಕೆ ಯಾವದಾದರೂ ಒಂದು ಅಲ್ಪಕಾರಣವೇ ಅವಕಾಶವಾಗಿತ್ತು.

ಇದುಹಾಗಿರಲಿ. ಗ್ವಾಲಿಯರ್‌ನಲ್ಲಿ ಈ ಪ್ರಕಾರವಾದ ವರ್ತಮಾನವು, ಹುಟ್ಟಿರುವಾಗ, ಇತ್ತಲಾಗಿ ಸರ್ ಹ್ಯೂರೋಜ್ ಸಾಹೇಬನು ಕಾಲ್ಪಿಯನ್ನು ಜಯಿಸಿ ತೆಗೆದುಕೊಂಡು, ದಂಗೇಖೋರರನ್ನು ಯಮುನಾನದಿಯ ಗಡಿಯ ಆಚೆಗೆ ಹಾಕಲು ಪ್ರಯತ್ನ ಮಾಡಿದನು. ಆದಾಗ್ಯೂ ಸರ್ವಪ್ರಾಂತ್ಯದ ಮಧ್ಯದಲ್ಲಿಯೂ ಅದ್ಯಾಪಿ, ಅರಾಜನಿಷ್ಠತೆಯ ಅಗ್ನಿಯು ಹೊಗೆಯಾಡುತ್ತಿದ್ದ ಕಾರಣ, ಇಂಗ್ರೇಜಿ ರಾಜ್ಯಕ್ಕೆ ಬಳ್ಳೇ ಶಕ್ತಿ ಬಂದಿರಲಿಲ್ಲ. ಇಷ್ಟೇಅಲ್ಲದೆ, ಅಯೋಧ್ಯಾ ಪ್ರಾಂತ್ಯದಲ್ಲಿನ ರೋಹಿಲೇ ಸೈನ್ಯವು ಮತ್ತು ಕಾಲ್ಪಿಯಲ್ಲಿ ಹತವೀರ್ಯನಂತೆ ಆಗಿಹೋದ, ರಾವ್ ಸಾಹೇಬ್ ಪೇಷ್ವೆಯ ಸೈನ್ಯವು ಸಹ ಒಂದಾಗಿ

---

ಅಲ್ಲಿ ನಡೆದ ವೃತ್ತಾಂತವನ್ನು 10 ನೇ ಪ್ರಕರಣದಲ್ಲಿಯೇ ಕೊಟ್ಟಿದೆ, ಮತ್ತು ಈಗ ಮೇ ತಿಂಗಳಲ್ಲಿಯೂ ಗುಪ್ತರೀತಿಯಿಂದ ಅಲ್ಲಿಗೆ ಹೋಗಿತ್ತು. ಆದ್ದರಿಂದ ಅಲ್ಲಿನ ಒಳಗಿನ ಸ್ಥಿತಿಯು ಅವನಿಗೆ ಚನ್ನಾಗಿ ತಿಳಿದಿತ್ತು. ಅದರಮೇಲೆ ಮಹಾರಾಜ ಸಿಂಧ್ಯಾನು ಮತ್ತು ದಿವಾಣ ದಿನಕರರಾವ್ ಈ ಇಬ್ಬರ ಹೊರ್ತು, ಬಹಳವಾಗಿ ಸರ್ವ ಜನಗಳೂನು ಅವನಲ್ಲಿ ಸೇರಿದ್ದರೆಂತ ಕಂಡುಬರುತ್ತದೆ. ಈ ಸಮ್ಮಂಧದಲ್ಲಿ ಮ್ಯಾಕ್‌ಫರ್ಸನ್ ಸಾಹೇಬನು ಹೀಗೆ ಬರೆದಿರುತ್ತಾನೆ:—

"Already, in September 1857, when he went there to gain the contingent to the Nana, and move it upon Cawnpore, Topeh had become thoroughly acquainted with the ground. He saw that the Maharajah, influenced by the Dewan, was the only serious obstacle to the acquisition of Gwalior to the revolt; and that the sole hope of mastering that obstacle lay in gaining over the Mahratta and Gwalior Divisions of Scindia's troops which still looked to him for guidance, in addition to those who already sympathised with the rebels."

*Memorials P.* 331.

ಅದಕ್ಕೆ ಸಿಂಧ್ಯಾ ಸರ್ಕಾರದ ಸರ್ವಸೈನ್ಯವು ಸೇರಿಕೊಂಡರೆ, ಪುನಃ ಅಗ್ನಿಯು ಪ್ರಜ್ವಲಿತವಾಗಿ, ಅದರತೀಕ್ಷ್ಣವಾದ ಜ್ವಾಲೆಯು ನಾಲ್ಕು ದಿಕ್ಕುಗಳಿಗೂ ವ್ಯಾಪಿಸಿ, ಬ್ರಿಟಿಷ್‌ರಾಜ್ಯಸತ್ವದ ರಂಗೋಲಿಯು ಬೂದಿಯಾದೀತೋ ಯೇನೋ, ಎಂಬದೊಡ್ಡ ಭಯವಿತ್ತು. ಅಂದರೆ, ಪರ್ಯಾಯವಾಗಿ, ಆ ಸಮಯದಲ್ಲಿ ಸರ್ವಭಾರವೂ ಸಿಂಧ್ಯಾನ ಮೇಲೆ ಇತ್ತೆಂತ ಹೇಳಿಲಿಕ್ಕೇನೂ ಅಡ್ಡಿಯಿಲ್ಲ. * ಆದ್ದರಿಂದ ಇದಕ್ಕಾಗಿ ಗ್ವಾಲಿಯರ್ ಮೇಲೆ ಕೆಂಪು ಸೈನ್ಯವನ್ನು ಕಳುಹಿಸಿ, ಅಲ್ಲಿ ಚನ್ನಾಗಿ ಭದ್ರಪಡಿಸಬೇಕೆಂತ, ಆಗ್ರಾದಿಂದ ಗ್ವಾಲಿಯರಿನ ರೆಸಿಡೆಂಟ್ ಮೇಜರ್ ಮ್ಯಾಕ್‌ಫರ್ಸನ್ ಸಾಹೇಬನಿಗೆ ಗಂಟುಹಾಕಿದ್ದರು. ಆ ಪ್ರಕಾರ ಆತನು ಲಾರ್ಡ್ ಕ್ಯಾನಿಂಗ್ ಸಾಹೇಬನಿಗೆ ಪತ್ರವನ್ನು ಬರೆದಿದ್ದನು. ಪರಂತು, ಗ್ವಾಲಿಯರಿನ ಭದ್ರತೆಗಾಗಿ ಕೆಂಪು ಸೈನ್ಯವು ಬರುವದರೊಳಗಾಗಿ ಗೋಪಾಲ ಪುರದಲ್ಲಿದ್ದ ಪೇಷ್ವೆಯ ಮಂಡಲಿಯುವರಲ್ಲಿ ಗ್ವಾಲಿಯರ್‌ನ ಮೇಲೆ, ಪ್ರಯಾಣಮಾಡಿ ಹೋಗಬೇಕೆಂತ, ಆಲೋಚನೆನಡೆದು, ಸೈನ್ಯಸಹಿತ ಪ್ರಯಾಣ ಮಾಡಿಕೊಳ್ಳುತ್ತಾ, ಸಿಂಧ್ಯಾನರಾಜ್ಯದಲ್ಲಿನ ಅಮೇನ್ ಎಂಬ ಊರಿನ ಪರ್ಯಂತರ ಬಂದು ತಲ್ಪಿದರು.

---

* ಆ ಸಮಯದಲ್ಲಿ, ಶಿಂಧ್ಯಾ ಮಾತ್ರ, ದಂಗೇಖೋರರಿಗೆ ಆಸ್ಪದ ಕೊಟ್ಟಿದ್ದರೆ, ಆ ಪ್ರಳಯಾಗ್ನಿಯ ಜ್ವಾಲೆಯು ದಕ್ಷಿಣದವರೆಗೂ ಸುಟ್ಟುಕೊಳ್ಳುತ್ತಾ ಹೋಗುತ್ತಿತ್ತು. ಅಲ್ಲಿ, ಬಂದುವೇಳೆ ಅದರ ಪ್ರವೇಶವಾಗಿರುವ ಪಕ್ಷಕ್ಕೆ, ನಮ್ಮ ಕೃಪಾಳುಗಳಾದ ರಾಜ್ಯ ಕರ್ತರಿಗೆ ಹಿಂದೂಸ್ಥಾನಕ್ಕೆ, ತಮ್ಮ ಕೊನೆಯ ವಂದನೆಯನ್ನ ಮಾಡುವ ಪ್ರಸಂಗವು ಬರುತ್ತದೆಯೋ ಹ್ಯಾಗೋ ಯಂತ ಪುಷ್ಕಳ ಗ್ರಂಥಕಾರರಿಗೆ ಬಹಳ ಸಂದೇಹವಿತ್ತು. ಒಬ್ಬ ಗ್ರಂಥಕಾರನು ಬರೆಯುತ್ತಾನೆ:—

"It needs but a glance at the map to show what the result might have been, had Gwaliar sided with the rebels. The Nizam's territories, already sufficiently inflammable, would assuredly have caught fire; and it is questionable, whether in that case any part of Southern India could have been saved."

*Page* 326.

ನಿಜವಾಗಿಯೂ, ಅಂಥ ಕಠಿಣವಾದ ಪ್ರಸಂಗ ಇದ್ದಕಾರಣ ಆ ಸಮಯದಲ್ಲಿ ಶಿಂಧ್ಯಾನ ಪ್ರಾಮಾಣಿಕತೆಯೇ, ಬ್ರಿಟಿಷ್ ರಾಜಸತ್ವಕ್ಕೆ ಸಂಜೀವನವಾಯಿತು, ಯಂತ ಯಾರು ಹೇಳದೆ ಇರಲಾರರು ? ಗವರ್ನರ್ ಜನರಲ್ ಲಾರ್ಡ್ ಕ್ಯಾನಿಂಗ್ ಸಾಹೇಬನು ಆ ಸಮಯದಲ್ಲಿ ಕೊಟ್ಟ ತಂತೀ ವರ್ತಮಾನದಲ್ಲಿ ಹೀಗೆ ಹೇಳುತ್ತಾನೆ:—

ತಾತ್ಯಟೋಪಿಯು ಗ್ವಾಲಿಯರಿಗೆ ಹೋಗಿ ಅಲ್ಲಿನ ಪ್ರಮುಖ ದರ್ಬಾರಿನ ಮಂಡಲಿಯವರೆಲ್ಲರ ಮನಸ್ಸನ್ನು ತಿರುಗಿಸಿ ಇಟ್ಟದ್ದರಿಂದ, ಪೇಷ್ವೆಯ ಆಗಮನಕ್ಕೆ ಯಾರೂ ಅಡ್ಡಿಮಾಡಲಿಲ್ಲ. ಇಷ್ಟೇ ಅಲ್ಲದೆ ರಾವ್ ಸಾಹೇಬ್ ಪೇಷ್ವೆಯು ಗರ್ವದಿಂದ ಮಹಾರಾಜ ಜಯಾಜಿರಾವ್ ಸಿಂಧ್ಯೆ ಮತ್ತು ಬಾಯಜಾಬಾಯೀ ಸಾಹೇಬ್ * ಇವರಿಗೆ ಹೀಗೆ ಒಂದು ಪತ್ರವನ್ನು ಬರೆದು ಕಳುಹಿಸಿ ಕೊಟ್ಟನು:—'ನಾವು ನಿಮ್ಮ ಕಡೆಗೆ ಸ್ನೇಹಭಾವದಿಂದ ಬರುತ್ತಿದ್ದೇವೆ. ನೀವು ನಮ್ಮ ಪೂರ್ವದ ಸಂಬಂಧವನ್ನು ಮನಸ್ಸಿಗೆ ತಂದುಕೊಂಡು, ಈ ಸಮಯದಲ್ಲಿ ನಮಗೆ ಸಹಾಯ ಮಾಡಿದರೆ, ನಮಗೆ ದಕ್ಷಿಣಪ್ರಾಂತ್ಯಕ್ಕೆ ಹೋಗಲಿಕ್ಕೆ ಆದೀತು.' ಪರಂತು, ದಿವಾನ್ ದಿನಕರರಾಯನು ಅದಕ್ಕೆ ಸಂದಿಗ್ಧ ಮತ್ತು ರಾಜಕೀಯ ಉತ್ತರವನ್ನು ಕಳುಹಿಸಿ, ನಡೆದ ಸಂಗತಿಯನ್ನು ರೆಸಿಡೆಂಟ್ ಸಾಹೇಬನಿಗೆ ತಿಳಿಯಪಡಿಸಿದನು. ಇತ್ತಲಾಗಿ ರಾವ್ ಸಾಹೇಬ್ ಪೇಷ್ವೆಯು, ಶಿಂಧ್ಯನು ತನ್ನ ಪಾರಂಪರ್ಯದ ನೌಕರನಾಗಿರುವದ್ದರಿಂದ ಅವನು ತನಗೆ ಯಂದಿಗೂ ಸಹಾಯಮಾಡದೆ ಇರಲಾರನು, ಎಂಬ ವಿಶ್ವಾಸದಿಂದ ಮೇ ತಾರೀಖು 28ನೇ ದಿವಸ, ಆಮೇನಾ ಸ್ಥಳಕ್ಕೆ ಬಂದು ತಲ್ಪಿದನು. ಅಲ್ಲಿಗೆ ಬರುತ್ತಲೆ ಶಿಂಧ್ಯಾ ಸರ್ಕಾರದ ಶುಭೇದಾರನು, ನಾಲ್ಕು

---

"If the Scindia joins the muting, I shall have to pack off to-morrow."

"ಶಿಂಧ್ಯೆಯು ಮಾತ್ರ ದಂಗೇಖೋರರ ಕಡೆಗೆ ಸೇರಿದರೆ, ನಾಳೆ ನಾನು ಗಂಟು ಮಟ್ಟೆಯನ್ನು ಕಟ್ಟಬೇಕಾಗಿದೆ."

* ಶ್ರೀಮತಿ ಬಾಯಜಾಬಾಯಿ ಸಿಂಧೆಯು, ದೌಲತ್ತರಾವ್ ಸಿಂಧ್ಯನ ಪತ್ನಿಯಾಗಿಯೂ ಮತ್ತು ಮಹಾರಾಜ ಜಯಾಜಿರಾವ್‌ಸಿಂಧ್ಯೆಯ ಮಾತಾಮಹಿಯಾಗಿಯೂ ಇದ್ದಾಳೆ; ಪೇಷ್ವೆ 2ನೇ ಬಾಜಿರಾಯನ ಆಡಳಿತ ಕಾಲದಲ್ಲಿ ಇದ್ದ ಸರ್ಜೇರಾವ್ ಘಾಡಗೆ ಎಂಬ ಪ್ರಸಿದ್ಧ ಪುರುಷನು ಬಾಯಾಜಬಾಯಿ ಸಾಹೇಬಳ ತಂದೆಯಾಗಿದ್ದಾನೆ. ಈಕೆಯು ರಾಜಕಾರ್ಯ ದಕ್ಷಳಾಗಿದ್ದರಿಂದ ತನ್ನ ಪತಿಯನಂತರ ಬಹಳ ವರುಷಗಳವರಿಗೂ ರಾಜ್ಯಕಾರ್ಯಗಳನ್ನು ನಡೆಸಿದ್ದಾಳೆ. ಬರುತ್ತ ಬರುತ್ತ, ಈ ಬಾಯಿಯು ಬಹು ಧರ್ಮಿಷ್ಠಳಾಗಿ ಹೋಗಿ, ಪುಷ್ಕಳ ದಾನಧರ್ಮಗಳನ್ನು ಮಾಡಿದ್ದು ಪ್ರಸಿದ್ಧಿಯಾಗಿದೆ. ಲಕ್ಷಬ್ರಾಹ್ಮಣರ ಭೋಜನ ಮಾಡಿಸಬೇಕೆಂದು ಉದ್ದೇಶಪಟ್ಟು, ಆಯಾಯಸ್ಥಳಕ್ಕೆ ತಂತಿಯಂತ್ರದ ಮೂಲಕ ಸಂಕಲ್ಪ ಮಾಡಿದಳು ಯಂದು, ವೃದ್ಧರು ಕಥೆಯನ್ನು ಹೇಳುವಂತೆ ಮಾಡಿದವಳು ಈಕೆಯೇ ಆಗಿರುತ್ತಾಳೆ. ಈಕೆಯು ದಂಗೆಯು ಮುಗಿದನಂತರ, ಕೆಲವು ದಿವಸದಲ್ಲಿ ಸ್ವರ್ಗಸ್ಥಳಾದಳು. ಮಿಸೆಸ್ ಫೈನಿಪಾರ್ಕ್ ಯಂಬ ಒಬ್ಬ ಇಂಗ್ರೇಜಿ ಸ್ತ್ರೀಯು, ಆಕೆಯ ಭೇಟಿಯನ್ನು ಮಾಡಿದ್ದನ್ನು ಕುರಿತು, ಬಹಳ ಚನ್ನಾಗಿ ವರ್ಣಿಸಿದ್ದಾಳೆ.

ನೂರು, ಪಾಯದಳ, ಮತ್ತು 150 ಸವಾರರನ್ನು ಸಿದ್ಧಪಡಿಸಿಯಿಟ್ಟು, ಪೇಷ್ವೆಯ ಸೈನ್ಯಕ್ಕೆ ಪ್ರತಿಬಂಧಕವನ್ನು ಮಾಡಿದನು. ಆ ಸಮಯದಲ್ಲಿ ರಾವ್‌ಸಾಹೇಬ್ ಪೇಷ್ವೆಯು ನಿರ್ಲಕ್ಷ್ಯಮಾಡಿ, ಅವನಿಗೆ ಹೇಳಿದ್ದೇನೆಂದರೆ:—"ನಮಗೆ ಆಟಂಕ ಪಡಿಸುವದಕ್ಕೆ ನೀವು ಯಾರು ? ಶಿಂಧ್ಯೆ ಮತ್ತು ದಿನಕರರಾವ್, ಇವರ ಪರಿಚಯವು ನಮಗಿಲ್ಲ. ಅವರು ಯಂಥಾ ಕ್ರಿಸ್ತರೆಂತ ಹೇಳಿಕೊಂಡು, ನಮಗೆ ಪ್ರತಿಬಂಧ ಮಾಡ್ಯಾರು ? ನಾವು ರಾವ್ ಪಂತ ಪ್ರಧಾನ ಪೇಷ್ವೆಯಾಗಿದ್ದೇವೆ; ಸ್ವರಾಜ್ಯ ಮತ್ತು ಸ್ವಧರ್ಮಕ್ಕಾಗಿ ಯುದ್ಧ ಮಾಡುತ್ತಿದ್ದೇವೆ. ಸಿಂಧ್ಯಾನ ಪೂರ್ವಜರು ನಮ್ಮ ಸೇವೆಯನ್ನು ಮಾಡಿದ್ದಾರೆ ಮತ್ತು ನಾವು ಅವರಿಗೆ ರಾಜ್ಯವನ್ನು ಕೊಟ್ಟಿದ್ದೇವೆ. ಶಿಂಧ್ಯಾನ ಸರ್ವ ಸೈನ್ಯವೂ ನಮಗೆ ಸೇರಿಧೆ. ನಮಗೆ ಸ್ವತಃ ಸೈನ್ಯದ ಅಧಿಕಾರಿಗಳ ಕಡೆಯಿಂದ ವಾಗ್ದಾನಪತ್ರವು ಬಂದಿಧೆ. ತಾತ್ಯ ಟೋಪಿಯು ಗ್ವಾಲಿಯರಿಗೆ ಹೋಗಿ, ಸರ್ವಮಂಡಲಿಯವರ ದರ್ಶನವನ್ನು ತೆಗೆದುಕೊಂಡು, ಯಲ್ಲಾ ಸಂಗತಿಯನ್ನು ತಿಳಿದುಕೊಂಡು ಬಂದಿದ್ಧಾನೆ. ಈಗ ನಮ್ಮ ಸರ್ವ ಸಿದ್ಧತೆ ಆಗಿರುವದರಿಂದ, ನಾವು ಲಷ್ಕರ್ ಕಡೆಗೆ ಪ್ರಯಾಣಮಾಡಿದ್ದೇವೆ. ನಿಮಗೆ ಈಗ ನಮ್ಮಸಂಗಡ ಯುದ್ಧ ಮಾಡುವ ಅಪೇಕ್ಷೆ ಯಿರುವದೇ ? ಯೇನು ?" ಈ ವಿಧವಾದ ರಾವ್ ಸಾಹೇಬ್ ಪೇಷ್ವೆಯ ಶೂರಮಾತನ್ನು ಕೇಳುತ್ತಲೆ, ಆ ಶುಭೇದಾರನ ಗರ್ಭನಿರ್ಭೇದವಾಗಿ, ಅವರ ಪ್ರಚಂಡವಾದ ಸೈನ್ಯದ ಮುಂದೆ, ತನ್ನದೇನೂ ಸಾಗಲಾರದೆಂಬುವದನ್ನು ನೋಡಿ, ಆತನಸಂಗಡ ಯುದ್ಧಮಾಡುವ ಯೋಚನೆಯನ್ನು ಬಿಟ್ಟು ಬಿಟ್ಟನು. ಅನಂತರ ಪೇಷ್ವೆಯ ಸೈನ್ಯವು 1858 ನೇ ಇಸ್ವಿ ಮೇ 30 ನೇ ತಾರೀಖಿನ ರಾತ್ರೆ, ಗ್ವಾಲಿಯರ್ ನಿಂದ 9 ಮೈಲಿಗಳ ದೂರದಲ್ಲಿರುವ ಬಾರಾಗಾಂಯಂಬ ಊರಿಗೆ ಬಂದು, ನಿರ್ಭಯದಿಂದ ಇಳಿದುಕೊಂಡಿತು.

ಶ್ರೀಮಂತರಾವ್‌ಸಾಹೇಬ್ ಪೇಷ್ವೆಯು ತನ್ನ ಆಗಮನದ ವರ್ತಮಾನವನ್ನು ಸಿಂಧ್ಯನಿಗೆ ತಿಳಿಸಿ, ತನಗೆ ಯೋಗ್ಯವಾದ ಸಹಾಯವನ್ನು ಮಾಡಬೇಕೆಂತ, ವಿನಂತಿ ಮಾಡಿದನು. ಪೇಷ್ವೆಯ ಪತ್ರವು, ಗ್ವಾಲಿಯರ್ ದರ್ಬಾರಿನ ಮಧ್ಯದಲ್ಲಿ, ತಲ್ಪುತ್ತಲೆ, ಅಲ್ಲಿ ಅದನ್ನು ಕುರಿತು ಬಹಳ ಘರ್ಷಣೆಯು ಪ್ರಾರಂಭವಾಯಿತು. ಶಿಂಧ್ಯಾ ಸರ್ಕಾರದ ಅನೇಕ ಸರದಾರರು, ಮತ್ತು ಮುತ್ಸದ್ದಿಯರು, ಅಂತರಂಗವಾಗಿ ಪೇಷ್ವೆಗೆ ವಶವಾಗಿದ್ದ ಕಾರಣ, ಅವರು ಆತನಿಗೆ ಸಹಾಯ ಮಾಡುವ ವಿಷಯದಲ್ಲಿ, ತಮ್ಮ ಸಮ್ಮತಿಯನ್ನು ತೋರಿಸಿದರು. ದಿವಾನ್ ದಿನಕರರಾವ್ ಮತ್ತು ಮಹಾರಾಜ ಜಯಾಜಿರಾವ್ ಸಿಂಧ್ಯಾ ಸಹ ಸಾರ್ವಭೌಮ ಬ್ರಿಟಿಷ್‌ಸರ್ಕಾರದ ಸಂಗಡ, ಅಂತಃಕರಣ ಪೂರ್ವಕವಾಗಿ, ಸ್ನೇಹ ಭಾವದಿಂದ ನಡಕೊಳ್ಳುತ್ತಿದ್ದ ಕಾರಣ, ಅವರಿಗೆ ತಮ್ಮ ಸಖ್ಯತ್ವವನ್ನು ಮತ್ತು ವಿಶ್ವಾಸವಚನವನ್ನು ಸಹ, ಭಂಗಮಾಡಿ, ಕ್ಷಣಿಕರಾದ ದಂಗೇ ಖೋರರಿಗೆ ಸಹಾಯ ಮಾಡುವದು, ಯೋಗ್ಯವಾಗಿ ತೋರಲಿಲ್ಲ. ವಸ್ತುತಃ ಆವೇಳೆಯಲ್ಲಿ ಅವರು, ತಮಗೂ ಮತ್ತು ಪೇಷ್ವೆಗೂ ಪೂರ್ವದಿಂದ ನಡೆದು ಬಂದ ಸ್ವಾಮಿಭೃತ್ಯತ್ವದ ಸಂಬಂಧವನ್ನು ಮನಸ್ಸಿ

ನೆಲ್ಲಿ ತಂದುಕೊಂಡಿದ್ದರೆ, ಅಥವ ನಿಧಾನವಾಗಿ ಸ್ವದೇಶಬಂಧುತ್ವದ ಸಂಬಂಧವನ್ನು ಮನಸ್ಸಿನಲ್ಲಿಟ್ಟುಕೊಂಡು, ಅವರ ಸ್ವಧರ್ಮ ಉನ್ನತಿಯ ಅಭಿಲಾಷೆಗೆ ಸ್ವಲ್ಪ ಗೌರವವನ್ನು ಕೊಟ್ಟಿದ್ದರೆ, ಆವೇಳೆಯ ಕಾಲಮಾನದ ಅನುಸಾರವಾಗಿ, ಹಾಗೆಮಾಡಲು ಅವರಿಗೆ ಶಕ್ತಿಯಿತ್ತು. ಪರಂತು, ಅವರು ಹಿಂದೂ ಅಥವ ಆರ್ಯತನಕ್ಕೆ, ಭೂಷಣ ಕೊಡತಕ್ಕಂಥ ಮುಖ್ಯ ಗುಣವು ಯಾವದಿದೆಯೋ, ಆ ಪ್ರಾಮಾಣಿಕತನದ ಗುಣವನ್ನು, ಹೃದಯದಲ್ಲಿಟ್ಟುಕೊಂಡು, ಪ್ರತ್ಯಕ್ಷವಾಗಿ, ಸ್ವರಾಜ್ಯಸಂಸ್ಥಾಪನೆ ಅಥವ ಸ್ವಧರ್ಮಸಂರಕ್ಷಣೆ ಮಾಡುವ ಹವ್ಯಾಸವನ್ನು ಬಿಟ್ಟು, ತಮ್ಮ ಶಿರಸ್ಸುಗಳನ್ನು ಕೈಯಲ್ಲಿ ತೆಗೆದುಕೊಂಡು, ಆ ಪುಣ್ಯ ಪ್ರತಾಪನಾದ ಪೇಷ್ವೆಯ ವಂಶಜ ರಾವ್‌ಸಾಹೇಬ್ ಪ್ರಭೃತಿ, ದಂಗೇಖೋರರ ಯಜಮಾನನ ವಿನಂತಿಯನ್ನು ಅಮಾನ್ಯಮಾಡಿ, ಪರಕೀಯ ಮತ್ತು ಪರಧರ್ಮಿಯ— ಪರಂತು, ಅದೃಷ್ಟದಬಲದಮೇಲೆ ಹಿಂದೂಸ್ಥಾನದ ಸಾರ್ವಭೌಮತ್ವವನ್ನು ಸಂಪಾದಿಸಿಕೊಂಡು, ಅಲ್ಲಿನ ಸಾಮಂತ ಪ್ರಭುಗಳಾದ ಬ್ರಿಟಿಷ್ ಸರ್ಕಾರದ ಸಂಗಡ ತಮ್ಮ ಪ್ರಾಮಾಣಿಕತನವನ್ನಿಟ್ಟುಕೊಂಡು, ಒಬ್ಬ ಹಿಂದೀ ಕವಿಯು ಹೇಳಿರುವ ಪ್ರಕಾರ:—

ಜಲಕಿಶೋಭಾ ಕಮಲಹೈ, ದಲಕಿ ಶೋಭಾಪೀಲ ।
ಧನಕಿಶೋಭಾ ಧರ್ಮಹೈ, ಕುಲಕಿಶೋಭಾಶೀಲ ॥ ೧ ॥

ತಮ್ಮ ಕುಲದ ಮುಖ್ಯ ಭೂಷಣವು ಶೀಲವೆಂಬುವದನ್ನು ಚನ್ನಾಗಿ ಪ್ರಕಾಶಮಾಡಿದರು, ಯೆಂಬ ಈಮಾತು ಹಿಂದೂಸ್ಥಾನದ ಇತಿಹಾಸದಲ್ಲಿ ಸುವರ್ಣಾಕ್ಷರಗಳಿಂದ ಅಲಂಕಾರ ಮಾಡತಕ್ಕಂಥಾದ್ದಾಗಿಲ್ಲವೆಂತ, ಯಾರು ತಾನೇ ಹೇಳ್ಯಾರು ?

ಇದು ಹಾಗಿರಲಿ, ಶಿಂಧ್ಯನು ದಂಗೇಖೋರರಿಗೆ ಸರ್ವಥಾ ಸಹಾಯಮಾಡುವದಿಲ್ಲ ಮತ್ತು ಅವರಿಗೆ ಆಶ್ರಯವನ್ನು ಕೊಡುವದಿಲ್ಲವೆಂತ ನಿಶ್ಚಯಮಾಡಿದನು; ಇಷ್ಟೇ ಅಲ್ಲದೆ, ವಯಸ್ಸನ್ನು ಅನುಸರಿಸಿ ಹುಟ್ಟತಕ್ಕಂಥಾ ಚಂಚಲ ವೃತ್ತಿಯನ್ನು ಆತನು ವ್ಯಕ್ತಪಡಿಸಿ, ಹೇಳಿದ್ದೇನಂದರೆ, 'ದಂಗೇಖೋರರ ಸಂಗಡ ಯುದ್ಧಮಾಡಿ, ಅವರನ್ನು ಜಯಿಸುವದಕ್ಕೆ ನಾನು ಸಿದ್ಧನಾಗಿದ್ದೇನೆ.' ದಿವಾಣ ದಿನಕರರಾಯನು, ಬಹಳ ಅನುಭವಶಾಲಿಯಾಗಿಯೂ, ಗಂಭೀರನಾಗಿಯೂ ಮತ್ತು ದೂರದರ್ಶಿಯಾಗಿಯೂ ಇದ್ದಕಾರಣ, ದಂಗೇ ಜನಗಳಿಗೆ ತನ್ನ ಮನಸ್ಸಿನಲ್ಲಿದ್ದದ್ದನ್ನು ಒಂದೇಸಲ ತೋರಿಸಿಕೊಳ್ಳದೇ, ಮತ್ತು ತಾನಾಗಿಯೇ ಅವರಮೇಲೆ ಪ್ರಯಾಣಮಾಡಿಹೋಗದೆ, ಬಹಳ ಯುಕ್ತಿಯಿಂದ, ತನ್ನ ಪಟ್ಟಣದ ಸಂರಕ್ಷಣೆಯನ್ನು ಮಾಡಿಕೊಂಡು, ಇಂಗ್ರೇಜಿಸೈನ್ಯವು ಸಹಾಯಕ್ಕೆ ಬಂದಕೂಡಲೆ, ದಂಗೇಖೋರರ ಮೇಲೆಬಿದ್ದು, ಅವರ ಬೇರನ್ನು ಕತ್ತರಿಸಬೇಕೆಂತ ಆಲೋಚನೆ ಮಾಡಿದನು. ಆ ಪ್ರಕಾರವಾಗಿ ಗ್ವಾಲಿಯರ್‌ನ ಪೊಲಿಟಿಕಲ್ ಏಜಂಟ್ ಮೇಜರ್ ಮ್ಯಾಕ್‌ಫರ್ಸನ್ ಸಾಹೇಬನಿಗೂ ಆತನಿಗೂ ಪತ್ರವ್ಯವಹಾರ ನಡೆಯುತ್ತಿತ್ತು.

ಆದ್ದರಿಂದ ಅವನು ಸರ್ ಹ್ಯೂರೋಜ್ ಸಾಹೇಬನ ಸೈನ್ಯವು ಬರುವಪರ್ಯಂತರ ತನ್ನ ಸೈನ್ಯವನ್ನೆಲ್ಲಾ ಅಲ್ಲಲ್ಲೇ ಇಟ್ಟು, ಸರಿಯಾದ ಸ್ವಲ್ಪ ಮರಾಟಸೈನ್ಯವನ್ನು ಮುಂಪ

ಕ್ಕೆ ಕಳುಹಿಸಿ; ದಂಗೇಜನಗಳಿಗೆ ಇದ್ದಲ್ಲೇ ಇರುವಂತೆ ಮಾಡಬೇಕೆಂತ ಯೋಚಿಸಿದನು. * ಪರಂತು, ಶಿಂಧ್ಯಾ ಸರ್ಕಾರದ ಸೈನ್ಯದ ಮತ್ತು ಅದರಮೇಲಧಿಕಾರಿಗಳ ಮನಸ್ಸು ಸರಿಯಾಗಿರಲಿಲ್ಲ. ಒಂದು ಕಡೆಯಿಂದ ಎಲ್ಲಾ ಜನಗಳೂ, ದಂಗೇಖೋರರ ಪಕ್ಷದ ಹಿತಚಿಂತಕರಾಗಿದ್ದಾಗ್ಯೂ, ಅವರಲ್ಲಿಯೂ ಪರಸ್ಪರ ಮತ್ಸರ ಮತ್ತು ವೈಮನಸ್ಸು ಇತ್ತು. ಶಿಂಧ್ಯೆಸರ್ಕಾರದ ಬಾಲೆಘೋಟ್ ಯೆಂಬ 1200 ಮರಾಟೆಜನಗಳ ಪಟಾಲಂ ಇತ್ತು. ಆಸರ್ವ ಸವಾರರು ಗರ್ವಿತರಾಗಿದ್ದರು. ಅವರಮೇಲೆ ಮಹಾರಾಜನ ಪ್ರೇಮವಿದ್ದದ್ದರಿಂದ, ಆ ಪಟಾಲಂನ ಜನಗಳಿಗೆ ಸ್ವತಃ ಶಿಂಧ್ಯೇನ ಪಂಕ್ತಿಭೋಜನ ಇದ್ದು, ನಿತ್ಯದಲ್ಲಿಯೂ ಆಹಾರವು ಶಿಗುತ್ತಿತ್ತು. ಇದು ಹೊರ್ತು ಅವರಿಗೆ ಸರ್ಕಾರದ ಕಡೆಯಿಂದ ಬಳ್ಳೇ ಉಡುಪುಗಳೂ ಮತ್ತು ಬಿಳೇಕುದುರೆಗಳೂ ಸಹ ಕೊಡಲ್ಪಟ್ಟಿದ್ದವು. ಆದಕಾರಣ ಆ "ಬಾಲಘೋಟೆ" ಗರ್ವಿಷ್ಟಪಟಾಲಂನ ದೊಡ್ಡಸ್ತಿಕೆಯು ಇತರಪಟಾಲಂನವರಿಗೆ ಸಹನವಾಗುತ್ತಿರಲಿಲ್ಲ. ಈ ಪ್ರಕಾರವಾಗಿ ಅವನ ಸರ್ವಸೈನ್ಯದ ಮನಸ್ಸು ಒಂದಾಗಿಲ್ಲದಿದ್ದ

* ಈ ಸಂಬಂಧವಲ್ಲಿ ಇಂದೂರು ಪುಸ್ತಕದಲ್ಲಿ ಹೇಳಿರುವದು, ದಿವಾನ್ ದಿನಕರರಾಯನು ಕೊನೆಯವರಿಗೂ ಶ್ರೀಮಂತ ರಾವ್‌ಸಾಹೇಬ್ ಪೇಷ್ವೆಗೆ ಶಿಂಧ್ಯಾಸರ್ಕಾರವು ಪ್ರತಿಕೂಲವಾಗಿಧೆ ಯೆಂತ ಸ್ಪಷ್ಟವಾಗಿ ತೋರಿಸಿಕೊಳ್ಳಲಿಲ್ಲ. (ಹಾಗಿದ್ದರೆ, ಅದು ಮುತ್ಸದ್ದಿತನದ ಒಂದು ಯುಕ್ತಿಯನ್ನು, ಈ ದಿವಾನ್ ಸಾಹೇಬನು ಉಪಯೋಗವಲ್ಲಿ ತಂದನೆಂತ ಹೇಳಬೇಕು.) ಇಷ್ಟೇ ಅಲ್ಲದೆ, ರಾವ್ ಸಾಹೇಬ್ ಪೇಷ್ವೆಯ ಸೈನ್ಯಕ್ಕೆ, ಆ ಪ್ರಾಂತ್ಯದಿಂದ ಹಿಡಿದಷ್ಟು ಸಾಮಾನು ಶಿಕ್ಕಿತುಯೆಂತಲೂ ಹೇಳಿದ್ದನು. ತಥಾಪಿ, ಆ ಸಮ್ಮಂಧವಾಗಿ ಇಂಗ್ರೇಜಿ ಗ್ರಂಥದಲ್ಲಿ ಕೆಳಗೆ ಬರದಂತೆ ತಿಳುವಳಿಕೆಯು ಶಿಕ್ಕುತ್ತದೆ.

"Scindia's whole force had now been brought to sympathise more or less with the rebels; a large portion was fully with them, and the remainder had no sufficient motive to strike heartily against them for Scindia. Still the Dewan was confident that, as the small force detached by Sir Hugh Rose was advancing behind them, and as the rebels themselves might be divided by bribery, a selected body of Scindia's Gwalior and Maharatha men—if posted in advance, while the mass of his troops was kept back-would check them for a few days, and give time for our force to come up.

*Memorials P. 333.*

ಕಾರಣ, ಲಷ್ಕರಿನ ಸರದಾರರ ಮಧ್ಯದಲ್ಲಿ ಪ್ರತ್ಯಪ್ರತ್ಯೇಕವಾದ ಆಲೋಚನೆ ನಡೆಯುತ್ತಿತ್ತು. ತಾರೀಖು 36 ನೇದಿವಸ ಪ್ರಾತಃಕಾಲದಲ್ಲಿ, ಶಿಂಧ್ಯಾನಖಾಸಾ ಸರದಾರರು, ಈ ರೀತಿಯಾಗಿ ಆಲೋಚನೆ ಮಾಡುತ್ತಿದ್ದರು:—"8,000 (ಎಂಟುಸಾವಿರ) ಸೈನ್ಯ ಮತ್ತು 24 ತೋಫಗಳನ್ನು, ಮುರಾರಿನ ಛಾವಣಿಗೆ ತೆಗೆದುಕೊಂಡು ಹೋಗಿ ದಂಗೇಖೋರರ ಮೇಲೆಬಿದ್ದು ಅವರನ್ನ ನಿರ್ವಿಣ್ಣರನ್ನಾಗಿ ಮಾಡಬೇಕು." ಈಮಾತು ದಿವಾಣ ಸಾಹೇಬನಿಗೆ ತಿಳಿದ ಕೂಡ್ಲೆ, ಅವರ ಅವಿವೇಕವಾದ ಆಲೋಚನೆಯನ್ನು ತಪ್ಪಿಸಿ, ಆ ದಿವಸರಾತ್ರೆ ಸೈನ್ಯವನ್ನೆಲ್ಲಾ ಇದ್ದಿದ್ದ ಸ್ಥಳದಲ್ಲಿಯೇ ನಿಲ್ಲಿಸಿದ್ದನು. ಪರಂತು, ಪುನಃ ಮಧ್ಯರಾತ್ರಿಯಲ್ಲಿ, ಯಾರೋ ಬಬನು ಹೋಗಿ, ಶಿಂಧ್ಯಾನ ಮನಸ್ಸನ್ನು ತಿರುಗಿಸಿ, ದಂಗೇಖೋರರಮೇಲೆ ತತ'ಕ್ಷಣವೇಹೋಗಿ ಮುತ್ತಿಗೆಹಾಕಬೇಕೆಂಬ ಆಲೋಚನೆಯನ್ನು ತೆಗೆದನು. ದಿವಾಣ ಸಾಹೇಬನು ಆಗ ಅಲ್ಲಿ ಇಲ್ಲದಿದ್ದರಿಂದ, ಕೂಡ್ಲೆ ಶಿಂಧ್ಯಾನು ಆ ಮಾತಿಗೆ ತನ್ನ ಅನುಮತಿಯನ್ನು ಕೊಟ್ಟನು. ಆದರಿಂದ ಶ್ರೀಮಂತ ರಾವ್ ಸಾಹೇಬ್ ಪೇಷ್ವೆಗೆ, ಶಿಂಧ್ಯಾ ಸರ್ಕಾರದ ಕಡೆಯಿಂದ ತನಗೇನಾದರೂ ಸಹಾಯ ಸಿಕ್ಕೀತೆಂಬ ಆಶೆಯು ಶುದ್ಧಾಂಗವಾಗಿ ತಪ್ಪಿಹೋಗಿ ತಿರುಗಿ ಜೂನ್ 1ನೇ ತಾರೀಖಿನ ದಿವಸ ಅವನ ಸೈನ್ಯದ ಎದುರುನಿಂತು ಯುದ್ಧಮಾಡುವ ಪ್ರಸಂಗವು* ಬಂದು ಒದಗಿತು. ಜೂನ್ ತಾರೀಖು 1ನೇ ದಿವಸ, ಶಿಂಧ್ಯಾನು ಸ್ವತಃ ಲಷ್ಕರಿನ ವಸ್ತ್ರಧಾರಣೆಮಾಡಿಕೊಂಡು, ಸೊಂಟಕ್ಕೆ

---

* ಈ ವಿಷಯದಲ್ಲಿ ಮಿ. ಮಾರ್ಟಿನ್ ಸಾಹೇಬನು ಈ ಪ್ರಕಾರ ಬರೆದಿರುತ್ತಾನೆ.

"At this crisis, an unfortunate difference of opinion is said to have arisen between Scindia and his minister. The latter was in favour of an exclusively defensive policy, pending the arrival of British reinforcements; the former, deceived by certain ring—leaders in the confidence of Tantia Tope, was led to believe that he might safely attack the rebels (who were reported to be dispirited and disorganised) at the head of his own household troops. The counsels of the Dewan, however prevailed up to midnight on the 31st of May: but after he had quitted the palace, the Maharaja was prevailed upon to give orders for an instant march against the advancing enemy."

*British India Vol. II.P.* 488.

ಶಸ್ತ್ರವನ್ನು ಕಟ್ಟಿಕೊಂಡು, ಕುದುರೆಯಮೇಲೆ ಹತ್ತಿಕೊಂಡನು. ತನ್ನ ಸರ್ವ ಸೈನ್ಯಕ್ಕೆ ಯುದ್ಧದ ಸೂಚನೆಕೊಟ್ಟು, ಮುರಾರಿನ ಪೂರ್ವಕ್ಕೆ 2 ಮೈಲಿಗಳಲ್ಲಿರುವ ಬಹದರ್‌ಪುರವೆಂಬ ಊರಿಗೆಹೋಗಿ, ಅಲ್ಲಿ ದಂಗೇ ಜನಗಳನ್ನು ದಂಡಿಸುವದಕ್ಕೆ, ಸಮರಾಂಗಣದಲ್ಲಿ ಸೇನೆ ಸಹಿತ ನಿಂತನು. ಆ ಸಮಯದಲ್ಲಿ ಅವನ ಸಂಗಡ 6,000 ಪಾಯದಳ, 1,200 ಬಾಲೆಘಾಟ್ ಪಟಾಲಂನ ಕುದುರೆಸವಾರರು, ಮತ್ತು 8 ದೊಡ್ಡ ಪ್ರಚಂಡವಾದ ತೋಫುಗಳು ಇದ್ದವು. ಅವರನ್ನು ಬಹಳ ಬಲವಾಗಿ ಯುದ್ಧಕ್ಕೆ ನಿಲ್ಲಿಸಿದನು. ಪೂರ್ವದಿಂದಲೂ ಶಿಂಧ್ಯಾನ ತೋಫುಖಾನೆಯಂದರೆ ಬಹಳ ಪ್ರಸಿದ್ಧವಾದದ್ದು. ಜಾರ್ಪೇರು, ಸವಾಯಿಶಿಕಂದರ್, ಬತ್ತೀಸ್, ಮುಂತಾದ ಫರಾಂಸೀಸ್ ಸರದಾರರ ಯುದ್ಧಕೌಶಲ್ಯದಿಂದಲೂ, ಮತ್ತು ಗುಂಡು ಬಿಡತಕ್ಕ ಸರ್ವೋತ್ಕೃಷ್ಟ ಶಿಕ್ಷೆಯಿಂದಲೂ, ಅವರ ತೋಫುಖಾನೆಗೆಮಾಡಿ ಕೊಟ್ಟ ವ್ಯವಸ್ಥೆಯು ಅದ್ಯಾಪಿಹಾಗೆಯೇ ಸರಿಯಾಗಿ ಇದ್ದಕಾರಣ ದಂಗೇಖೋರರ ಹೊಗೆಯನ್ನು ಆರಿಸಿಬಿಡುವದಕ್ಕಾಗಿ, ಅದನ್ನು ತನ್ನ ಸೈನ್ಯದ ಹಿಂದೆ ಮೊದಲೇನೇ ಸರಿಪಡಿಸಿದ್ದನು. ಸಹಸ್ರಕಿರಣದ ಸೂರ್ಯ ನಾರಾಯಣನು ಉದಯುವಾಗುತ್ತಲೆ, ಆತನ ಆರಕ್ತ ಬಿಂಬಕ್ಕೆ ಲಜ್ಜೆಪಡಿಸುವದಕ್ಕಾಗಿ, ತನ್ನ ಬೃಹದ್ಯಂತ್ರಗಳಿಂದ ಸಹಸ್ರಾರು ಕೆಂಪು ಕಿಡಿಗಳು ಹಾರುವಂಥ ಗೋಲಿಗಳನ್ನು ಶತೃಗಳಮೇಲೆ ಮಳೆಗರೆಯಲು ಪ್ರಾರಂಭ ಮಾಡಿದನು.

ಪೇಷ್ವೆಯ ಸೈನ್ಯದ ಮುಂಭಾಗದಲ್ಲಿ ಇದ್ದಕಿದ್ದಹಾಗೆ, ಮುರಾರಿನ ಪಾರ್ಶ್ವಕ್ಕೆ ಗುಂಡುಗಳು ಬರಲಿಕ್ಕೆಪ್ರಾರಂಭವಾದವು. ಇದನ್ನು ನೋಡುತ್ತಲೆ, ಶಿಬಿರದಲ್ಲಿದ್ದ ಅಧಿಕಾರಿಗಳು, ಯುದ್ಧದ ಕಹಳೆಯನ್ನು ಊದಿ, ಸರ್ವಸೈನ್ಯವನ್ನು ಎಚ್ಚರಿಸಿದರು; ಮತ್ತು ಪೇಷ್ವೆಯು ಇದ್ದಡೇರೆಗೆ, ಶಿಂಧ್ಯಾನ ಸೈನ್ಯವು ಯುದ್ಧಮಾಡುವದಕ್ಕೆ ಎದುರಿಗೆ ಪ್ರಯಾಣ ಮಾಡಿಬಂದಿಧೆ. ಆದ್ದರಿಂದ ನಿಮ್ಮಸೈನ್ಯಕ್ಕೆ ಹ್ಯಾಗೆ ಯುದ್ಧ ಮಾಡಬೇಕೆಂಬುವದನ್ನು ಕುರಿತು ತತ್‌ಕ್ಷಣವೆ ಅಪ್ಪಣೆ ಮಾಡಬೇಕೆಂತ ನಿರೂಪವನ್ನು ಕಳುಹಿಸಿದರು. ಶ್ರೀಮಂತನ ಹತ್ತರ ಆ ಸಮಯದಲ್ಲಿ ಕೆಲವು ಜಾಣರಾದ ಮುತ್ಸದ್ದಿಯವರು ಇದ್ದಕಾರಣ, ಅವರು ತೋಫಿನ ಧ್ವನಿಯನ್ನು ಕೇಳಿ, ಈ ರೀತಿ ಅಭಿಪ್ರಾಯಪಟ್ಟರು. "ಸಿಂಧ್ಯಾನ ಸರ್ಕಾರಕ್ಕೂ ಮತ್ತು ಪೇಷ್ವೆಯವರಿಗೂ ಪೂರ್ವದಿಂದಲೂ ನಡಕೊಳ್ಳುತ್ತಾಬಂದ, ಪ್ರೇಮಸಂಬಂಧವು, ಅದ್ಯಾಪಿ ಎಚ್ಚರಿಕೆಯಲ್ಲಿಧೆ, ಮತ್ತು ಸಿಂಧ್ಯಾನ ಸರದಾರರು ನಿಮಗೆ ಪೂರ್ಣ ಅನುಕೂಲರಾಗಿಯಿದ್ದಾರೆ. ಹೀಗಿರುವಾಗ ಅವರು ನಿಮ್ಮಸಂಗಡ, ಯುದ್ಧಕ್ಕೆ ಎಂದಿಗೂ ಶಿದ್ಧರಾಗತಕ್ಕವರಲ್ಲ. ಈಗ ತೋಫಿನ ಧ್ವನಿಯು ಕೇಳಿಸುವದು, ಅವರಕಡೆಯಿಂದ ಶ್ರೀಮಂತನನ್ನು ಬರಮಾಡಿಕೊಳ್ಳುವದಕ್ಕೆ ತೋರಿಸುವ ಮರ್‍ಯಾದೆಯಾಗಿಇದೆ. ರಾವ್‌ಸಾಹೇಬ್ ಪೇಷ್ವೆ ಮತ್ತುತಾತ್ಯಟೋಪೇಸಹ, ಶಿಂಧ್ಯಾಸರ್ಕಾರದ ಸಹಾಯವನ್ನುಸಂಪೂರ್ಣವಾಗಿ ನಂಬಿಕೆ ಯಿಟ್ಟುಕೊಂಡಿದ್ದ ಕಾರಣ, ಅವರಿಗೂ ಇದೇಮಾತು ಸರಿಯಾದ್ದೆಂತ ತೋರಿ,ತಮ್ಮಸೈನ್ಯಕ್ಕೆ ಯುದ್ಧಮಾಡಲು ಅಪ್ಪಣೆಕೊಡಲಿಲ್ಲ. ಇಷ್ಟರಲ್ಲಿ ಶಿಂಧ್ಯಾನತೋಪ

ಖಾನೆಯ ಮೇಲಿನ ಸೈನ್ಯದವರು ತೋಫುಹಚ್ಚಿ ಬಿಟ್ಟು, ಏಕಪ್ರಕಾರವಾಗಿ ಹೊಡೆಯಲು ಪ್ರಾರಂಭಿಸಿದರು. ಕೂಡಲೆ ಪೇಷ್ವೆಸೈನ್ಯದಲ್ಲಿ, ಘಾಬರಿಎದ್ದು, 'ಓಡು, ಓಡು,' ಎನ್ನಲಿಕ್ಕೆ ಪ್ರಾರಂಭವಾಯಿತು. ಇದನ್ನು ಕಂಡಕೂಡಲೆ, ರಾವ್‌ಸಾಹೇಬ್ ಪೇಷ್ವೆಯು, ಘಾಬರಿಯಾಗಿ ದೊಡ್ಡವಿಚಾರದಲ್ಲಿ ಬಿದ್ದನು. ಪರಂತು ಆಸಮಯದಲ್ಲಿ ಮಹಾರಾಣಿ ಲಕ್ಷ್ಮೀಬಾಯಿ ಸಾಹೇಬಳು ಬಹಳ ಶಪಥದಿಂದ, ಆತನ ಪಾರ್ಶ್ವವನ್ನು ಸಂಬಾಳಿಸಿದಳು. ಗೋಪಾಲಪುರದಲ್ಲಿ, ರಾಣಿಸಾಹೇಬಳು, ಗ್ವಾಲಿಯರಿಗೆ ಹೋಗಿ, ಸಿಂಧ್ಯಾ ಸರ್ಕಾರದ ಸಹಾಯವನ್ನು ತೆಗೆದುಕೊಳ್ಳಬೇಕೆಂತಲೂ, ಅಲ್ಲಿನ ಭದ್ರವಾದಕೋಟೆಯನ್ನು ತಮ್ಮ ಕೈವಶಮಾಡಿಕೊಳ್ಳಬೇಕೆಂತಲೂ ಯುಕ್ತಿಯನ್ನು ಹುಡಿಕೆ, ರಾವ್‌ಸಾಹೇಬ್ ಪೇಷ್ವೆಯ ಮನಸ್ಸಿನಲ್ಲಿ ಆಸೆಯನ್ನು ತುಂಬಿದ್ದಳು; ಮತ್ತು ಅವನಿಗೆ ಪ್ರೋತ್ಸಾಹಕೊಟ್ಟು, ಸರ್ವ ಸೈನ್ಯವನ್ನು ಗ್ವಾಲಿಯರ್ ಕಡೆಗೆ ತಿರುಗಿಸಿದಳು. ತಥಾಪಿ ರಾಣಿಸಾಹೇಬಳ ಅಪೇಕ್ಷೆ ಪ್ರಕಾರ, ಸರ್ವ ಸೈನ್ಯದ ವ್ಯವಸ್ಥೆಯು ಅವಳಕೈಯಿಂದ, ನಡೆಯಲಿಲ್ಲ. ರಾಣಿಸಾಹೇಬಳು ಬಹಳಶೂರಳಾಗಿಯೂ, ಚತುರಳಾಗಿಯೂ, ಇದ್ದಕಾರಣ ಆಕೆಯ ಆಲೋಚನೆಯನ್ನು, ರಾವ್‌ಸಾಹೇಬ್ ಪೇಷ್ವೆಯು ಒಪ್ಪಿಕೊಳ್ಳುತ್ತಿದ್ದನು. ಪರಂತು, ಆತನಲ್ಲಿ ಸ್ವಯಂಪ್ರತಿಷ್ಟೆ, ಒಂದು ಹೆಚ್ಚಾದ ದುರ್ಗುಣ ಇದ್ದಕಾರಣ, ರಾಣಿಸಾಹೇಬಳ ಅಭಿಪ್ರಾಯದಂತೆ, ನಿಜವಾಗಿಯಲ್ಲಾ ಸಂಗತಿಯೂ ನಡೆಯುತ್ತಿರಲಿಲ್ಲ. ಹೊರತರಕ್ಕೆ ರಾಣಿಸಾಹೇಬಳ ಆಜ್ಞೆಯನ್ನು ಯಾರೂತಿರಸ್ಕಾರ ಮಾಡುತ್ತಿರಲಿಲ್ಲ. ಆದರೆ ಶ್ರೀಮಂತನು ಆಕೆಯಮೇಲೆ ಬಹುಮಾನಮನ್ನಿಟ್ಟು, ಅನೇಕ ಕೆಲಸಗಳಲ್ಲಿ, ಆಕೆಯ ಸೂಚನೆಯ ಪ್ರಕಾರ ಸೈನ್ಯದಲ್ಲಿ ಅಪ್ಪಣೆ ಮಾಡುತ್ತಿದ್ದನು. ಪರಂತು, ಪೇಷ್ವೆಯಸೈನ್ಯದಲ್ಲಿ, ಸರಿಯಾದಪದ್ಧತಿಯನ್ನು ಅನುಸರಿಸಿ, ಮುಖ್ಯ ಸೇನಾಪತಿಯ ಅಪ್ಪಣೆಪ್ರಕಾರ, ತಮ್ಮ ಕರ್ತವ್ಯವನ್ನು ಅಂತಃಕರಣಪೂರ್ವಕವಾಗಿ ನಡಿಸತಕ್ಕಂಥಾ ನಿಸ್ಸೀಮ ಸರದಾರರು ಬಹಳ ಸ್ವಲ್ಪವಿದ್ದಕಾರಣ, ಅವರ ಉಪಯೋಗವೇನೂ ಆಗುತ್ತಿರಲಿಲ್ಲ. ಬಾಂದೆವಾಲೆ ನವಾಬನು ಸ್ವತಃ, ತನ್ನ ಗರ್ವದ ಮೇಲೆ ನಡೆಯತಕ್ಕವನಾಗಿದ್ದಾನೆ ; ರಾವ್‌ಸಾಹೇಬ್ ಪೇಷ್ವೆಯು ತನ್ನ ಅಧಿಕಾರ ಸತ್ವದ ಶಿಖರದ ಮೇಲೆ ಹೋಗಿದ್ದಕಾರಣ, ತನ್ನಬುದ್ಧಿವಂತಿಕೆಯ ಪ್ರಭಾವವನ್ನು ತೋರಿಸುವ ಪ್ರಯತ್ನ ಮಾಡತಕ್ಕವನು; ಮತ್ತು ತಾತ್ಯಾಟೋಪಿಯು, ಯುದ್ಧಕಲಾದಲ್ಲಿ ಒಳ್ಳೇ ನಿಪುಣನಾಗಿಯೂ ಮತ್ತು ಗುಪ್ತಾಲೋಚನೆಯಲ್ಲಿ ತುಂಬಾ ಪರಿಶ್ರಮವುಳ್ಳವನಾಗಿಯೂ, ಇದ್ದಕಾರಣ ಅವನಮನಸ್ಸು ಬೇರೇವಿಧವಾಗಿತ್ತು ; ಮತ್ತು ಇತರ ಸೇನಾಪತಿಗಳೂ, ಸ್ವತಂತ್ರದ ಆಶೆಯನ್ನು ಮನಸ್ಸಿನಲ್ಲಿ ತುಂಬಿಕೊಂಡು, ಯೇನೋ ಒಂದು ಕಾರಣದಿಂದ ಕೈಯಲ್ಲಿ ಶಸ್ತ್ರಗಳನ್ನು ತೆಗೆದುಕೊಂಡದ್ದರಿಂದ, ಅವರ ತಲೆಯು ಬಲಿತು ಸ್ವಯಿಚ್ಛೆಯಾಗಿ ನಡಕೊಳ್ಳತಕ್ಕವರಾಗಿದ್ದರು. ಈಪ್ರಕಾರ ಆದಮೇಲೆ ಪೇಷ್ವೆಯ ಸೈನ್ಯದಲ್ಲಿ, ಒಳ್ಳೇ ವ್ಯವಸ್ಥೆಯಿಂದ ಯಾವಮಾತೂ ಸಿದ್ಧಿಗೆ ಬರುತ್ತಿರಲಿಲ್ಲ. ಒಂದು ಪ್ರಕಾರದ ಕಾಲಮಾನದಿಂದ, ಏನೋ ಒಂದು ಸಂದರ್ಭದಲ್ಲಿ ಅನೇಕ ಸಂಗತಿಗಳು ತಮ್ಮಷ್ಟಕ್ಕೆ ತಾವೇ, ಒಂದು ಕಡೆ ಒಂದು ಸೇರಿಕೊಂಡು, ದಂಗೆಯ ಸೈನ್ಯಕ್ಕೆ ಪ್ರಚಾ

ಡ ಸ್ವರೂಪವು ಪ್ರಾಪ್ತಿಯಾಗಿತ್ತು. ಇಷ್ಟರಿಂದಲೇ, ದಂಗೇಜನಗಳದ್ದು ಸ್ವಲ್ಪ ಹೆಚ್ಚಾಗಿತ್ತು. ಅರ್ಥಾತ್, ಅವರ ನೆಲಗಟ್ಟು ಶಾಸ್ತ್ರರೀತಿಯಿಂದ ಹಾಕಿದ್ದಲ್ಲವಾದ ಕಾರಣ, ಅದರಮೇಲೆ ಮನೆಯನ್ನು ಕಟ್ಟತಕ್ಕ ಕುಶಲಕೆಲಸದವನ ಚಾತುರ್ಯವು, ಸರಿಯಾದರೀತಿಯಿಂದ ಹೊರಗೆ ತೋರುತ್ತಿರಲಿಲ್ಲ; ಅಥವ, ಹಾಗೆ ವ್ಯಕ್ತವಾದಾಗ ಅದರತೇಜಸ್ಸು ಬಹಳ ಸ್ವಲ್ಪಕಾಲದ್ದಾಗಿರಬೇಕು, ಎಂಬುವದರಲ್ಲಿ ಆಶ್ಚರ್ಯವೇನೂ ಇಲ್ಲ. ಇದುಹಾಗಿರಲಿ.

ಶಿಂಧ್ಯಾ ಸರ್ಕಾರದ ಕಡೆಯವರು ಹೊಡೆದ ತೋಫಿನ ಏಟುಗಳಿಂದ, ಪೇಷ್ವೆಯ ಸೈನ್ಯವು ಆಕಸ್ಮಿಕವಾಗಿ, ಧೈರ್ಯಗೆಟ್ಟುಹೋಯಿತು ಎಂಬುವದನ್ನು ರಾಣೀ ಸಾಹೇಬಳು ನೋಡಿ, ದೊಡ್ಡ ಆವೇಶವನ್ನು ತಾಳಿಕೊಂಡು, ತನ್ನ 200, 300 ಸವಾರರನ್ನು ಬುಂದೇಸಲ ಮುಂದಕ್ಕೆ ತೆಗೆದಳು ; ಮತ್ತು ಶಿಟ್ಟಿಬ್ಬಿಸಿದ ಸರ್ಪದಂತೆ, ಆಕೆಯು ಶಿಂಧ್ಯಾನ ತೋಫುಖಾನೆಯಮೇಲೆ ಪ್ರಯಾಣ ಮಾಡಿದಳು. ಅದೇ ಪ್ರಕಾರವಾಗಿ ತಾತ್ಯಾಟೋಪಿಯು ತನ್ನ ಸೈನ್ಯವನ್ನು ಪ್ರತ್ಯೇಕ ಭಾಗಮಾಡಿ, ಆ ತೋಫಿನ ಏಟುಗಳಿಂದ ತಪ್ಪಿಸಿ, ಬೇರೇಕಡೆಗೆ ತಂದನು. ರಾಣೀ ಸಾಹೇಬಳು ತನ್ನಕಡೆ ರಣಶೂರ ಕುದುರೆ ಸವಾರರ ಸಹಿತ, ಶಿಂಧ್ಯಾನ ತೋಫುಖಾನೆ ಮೇಲೆಬಿದ್ದಕೂಡಲೆ, ಆ ಸೈನ್ಯದವರು ತೋಫುಗಳನ್ನು ಬಿಟ್ಟುಬಿಟ್ಟು ಓಡಿಹೋದರು. ಅದೇ ಪ್ರಕಾರ ಇತರ ಸೈನ್ಯದ ಅಧಿಕಾರಿಗಳು, ತಾತ್ಯಾನವಚನಕ್ಕೆ ಶಿಕ್ಕಿದ್ದಕಾರಣ, ಪೇಷ್ವೆಯ ಸೈನ್ಯದಮೇಲೆ ಗುಂಡು ಹಾರಿಸುವದನ್ನು ನಿಲ್ಲಿಸಿ ಬಿಟ್ಟರು. ಮಹಾರಾಜ ಜಯಾಜಿರಾವ್ ಸಿಂಧ್ಯನು ಮಾತ್ರ ಶೂರತ್ವದ ಆವೇಶವಿದ್ದು, ಸ್ವತಃ ತನ್ನ ಖಾಸಿಗೆ ಬಾಲಘಾಟ್ ಪಟಾಲಂನ್ನ ಮುಂದಕ್ಕೆ ತಂದು, ದಂಗೆಯವರ ಸಂಗಡ ಬಹಳ ನಿಕರದಿಂದ ಯುದ್ಧಮಾಡಲು ಪ್ರಾರಂಭಿಸಿದನು. ಒಂದು ಪಕ್ಷದ ಕಡೆಗೆ ರಣಾಂಗಣದಲ್ಲಿ, ಪ್ರಥಮದಲ್ಲಿ ಬಂದ, ಒಬ್ಬ ತರುಣರಾಜವಂಶಜ ಮತ್ತು ಆತನ ಖಾಸಿಗೆ 1200 ಶಿಲೆದಾರರ ಮಂಡಲಿ, ಇನ್ನೊಂದು ಪಕ್ಷದಕಡೆಗೆ, ದುರ್ದೈವದ ಘಾಳಿಯಲ್ಲಿ ಶಿಕ್ಕಿದ ಸ್ತ್ರೀ ಮತ್ತು ಸ್ವಲ್ಪ ರಣಶೂರ ಸವಾರರು, ಇಂಥಾ ಅಪೂರ್ವ ಸಂಭವವು ಒದಗಿತು. ಶಿಂಧ್ಯಾನ ಶುದ್ಧ ಅಂತಃಕರಣದಲ್ಲಿ ಬ್ರಿಟಿಷ್ ಸರ್ಕಾರದ ಸ್ನೇಹ ಬುದ್ಧಿಯು ಕೇವಲ ಪ್ರಜ್ವಲಿತವಾಗಿತ್ತಾದಕಾರಣ, ಆತನ ವೀರಶ್ರೀಯಮೇಲೆ, ಅತಿಸುಂದರವಾದ ಬಣ್ಣವು ಹುಟ್ಟಿತ್ತು. ಮತ್ತು ಇತ್ತಲಾಗಿ, ರಾಣೀಸಾಹೇಬಳ ಮೃದುವಾದ ಹೃದಯದಲ್ಲಿ, ಬ್ರಿಟಿಷ್ ಸರ್ಕಾರದ ಬಲೋದ್ಧಂಥಿ ವರ್ತನದಿಂದ ಉತ್ಪನ್ನವಾಗಿದ್ದ ಕ್ರೋಧಾಗ್ನಿಯು ತುಂಬಿಹೋಗಿತ್ತು. ಆದಕಾರಣ ಆಕೆಯ ಆವೇಶಕ್ಕೆ, ವಿಲಕ್ಷಣವಾದ ಕ್ರೂರ ಸ್ವರೂಪವು ಬಂದಿತ್ತು. ಒಂದು ತಾಸಿನವರೆಗೂ ಕತ್ತಿಯ ಏಟಿನಮೇಲೆ ಕತ್ತಿಯಏಟು ಬಿದ್ದು, ಉಭಯಪಕ್ಷದವರಿಗೂ ಪರಸ್ಪರ ನಿಕರವಾದ ಯುದ್ಧವು ನಡೆಯಿತು. ಶಿಂಧ್ಯೆ ಸರ್ಕಾರದ ಗೌರವವಸ್ತ್ರ ಧರಿಸಿದ ಬಾಲೆಘಾಟಿ ಶಿಲೇದಾರಮಂಡಲಿಯವರು, ಕ್ಷಣಮಾತ್ರದಲ್ಲಿ ಸೋತುಹೋದರು. ಬಾಯಿ ಸಾಹೇಬಳ ಕಡೆಯ ಸೊಂಟಾಕಟ್ಟಿದ ಶೂರ ಸವಾರರು, ಅವರನ್ನು ಸಂಹಾರಮಾಡಲು ಪ್ರಾರಂಭಿಸಿದರು. ಇದನ್ನು ನೋಡುತ್ತಲೆ

ಶಿಂಧ್ಯನು ಹಿಂತಿರುಗಿ ಅರಮನೆಯ ಮಾರ್ಗವನ್ನು ಹಿಡಿದು, ಆತ್ಮ ಸಂರಕ್ಷಣಾರ್ಥವಾಗಿ, ಧೋಲಪುರದ ಮಾರ್ಗದಿಂದ, ದಿವಾನ್ ದಿನಕರರಾವ್ ಮತ್ತು ಇನ್ನು ಒಂದೆರಡು ಸರದಾರರ ಸಹಿತ ತನ್ನ ಸ್ನೇಹಿತರಾದ ಕೃಪಾಳು, ಬ್ರಿಟಿಷ್ ಸರ್ಕಾರದವರ ಕಡೆಗೆ ಆಗ್ರಾದ ಕೋಟೆಗೆ ಓಡಿಹೋದನು ; ನಿಜವಾಗಿಯೂ ಆ ಸಮಯದಲ್ಲಿ ಸಿಂಧ್ಯನು,

ಪ್ರಾಣೈರಪಿಹಿತಾವೃತ್ತಿ, ರದ್ರೋಹೋವ್ಯಾಜ ವರ್ಜನಂ ।
ಆತ್ಮನೀವಪ್ರಿಯಾಧಾನ, ಮೇತನ್ಮೈತ್ರೀ ಮಹಾವ್ರತಂ ॥

ಈ ನಿಯಮ ಪ್ರಕಾರ ಬ್ರಿಟಿಷ್ ಸರ್ಕಾರದ ಸ್ನೇಹಕ್ಕೋಸ್ಕರ ಸ್ವಾರ್ಥವನ್ನು ಬಿಟ್ಟು ಸ್ವತಃ ತನ್ನ ಪ್ರಾಣದ ಆಶೆಯನ್ನು ನೋಡದೆ, ಮಿತ್ರತ್ವದ ವ್ರತವನ್ನು ನಿಜವಾಗಿ ರಕ್ಷಣೆ ಮಾಡಿದ್ದು ಆತನಿಗೆ ಚಿರಕಾಲ ಭೂಷಣಪ್ರದವಾಗಿದೆಯಂತ ಯಾರು ಹೇಳದೆ ಇರಲಾರರು?

ಇದು ಹಾಗಿರಲಿ, ಶಿಂಧ್ಯಾನು ಆ ಕಾಲದಲ್ಲಿ ಹೇಗೆ ತನ್ನ ಮಿತ್ರತ್ವವನ್ನು ರಕ್ಷಣೆ ಮಾಡಿ, ತನ್ನ ಹೆಸರು ಪ್ರಾಮಾಣಿಕತನದ ಇತಿಹಾಸದಲ್ಲಿ, ಅಗ್ರಸ್ಥಾನದಲ್ಲಿ ಭೂಷಣವಾಡಿದನೋ, ಅದೇ ಪ್ರಕಾರವಾಗಿ, ಮಹಾರಾಣಿ ಲಕ್ಷ್ಮೀಬಾಯಿ ಸಾಹೇಬಳೂನೂ, ಪರಾಕ್ರಮ ಗುಣದಲ್ಲಿ ಅದ್ವಿತೀಯವಾದ ಕೀರ್ತಿಯನ್ನು ಸಂಪಾದಿಸಿದಳು. ಮಹಾರಾಜ ಜಯಾಜೀರಾವ್ ಸಿಂಧ್ಯನ ಶೌರ್ಯಸಂಬಂಧದಲ್ಲಿ ದೊಡ್ಡದೊಡ್ಡ ಯುರೋಪಿಯನ್ ಜನಗಳು ಮೆಚ್ಚಿ ಸ್ತೋತ್ರಮಾಡಬೇಕು. ಆತನ ಯುದ್ಧ ಸಾಮಗ್ರಿಯ ಸಿದ್ಧತೆಯನ್ನು ಆಲೋಚನೆಮಾಡುತ್ತಲೇ, ಶತೃಗಳಿಗೆ ಸಂಕಟಹುಟ್ಟಬೇಕು. ಅವನ ಸಮೀಪದ, ಕರ್ಣನಿಗೆ ಸಮಾನವಾದ, ರಥಿ ಮಹಾರಥಿ ಶೂರಸರದಾರರು, ರಣಾಂಗಣದಲ್ಲಿ ದೃಷ್ಟಿಗೆ ಬಿದ್ದ ಕೂಡಲೇ, ವಿಜಯಶ್ರೀಯಳು ನಮಸ್ಕಾರಮಾಡಿ ವಶವಾಗಬೇಕು. ಇಂಥಾ ಸಿಂಧ್ಯನಿಗೆ, ರಾಣಿ ಸಾಹೇಬಳಂಥ ಒಬ್ಬ ಅಬಲೆಯು ಹೇಳುವದಕ್ಕೆ ಯೋಗ್ಯವಾದ ಯಾವ ಸಹಾಯವು ಇಲ್ಲದೇ, ತನ್ನ ಶಸ್ತ್ರದ ಬಲದಮೇಲೆ ರಣದಲ್ಲಿ ಮುಖ ತಿರುಗಿಸಿಕೊಂಡು ಓಡಿಹೋಗುವಂತೆ ಮಾಡಿದ್ದು ಸಾಮಾನ್ಯವಾದಮಾತಲ್ಲ. ಇದರಿಂದ ಒಬ್ಬ ಸಂಸ್ಕೃತ ಕವಿಯು ಹೇಳಿರುವ ಪ್ರಕಾರ ;—

"ಕ್ರಿಯಾಸಿದ್ಧಿಃಸ್ಸತ್ವೇ ಭವತಿಮಹತಾಂ ನೋಪಕರಣೆ"

"ದೊಡ್ಡವರಕಾರ್ಯಸಿದ್ಧಿಯು ಅವರ ಶರೀರದ ಪರಾಕ್ರಮದಿಂದ ಆಗುತ್ತದೆ; ಕೇವಲಸಾಧನದ ಸಾಹಿತ್ಯದಿಂದ ಯೇನೂ ಆಗುವದಿಲ್ಲ" ಈ ನಿಯಮ ಎಷ್ಟು ನಿಶ್ಚಯವಾಗಿದೆ ಯಂಬುವದು, ಚನ್ನಾಗಿತೋರಿ ಬರುತ್ತದೆ.



# ೧೫ನೇ ಪ್ರಕರಣ.

## ರಾಣೀಸಾಹೇಬಳ ಮುಂದಿನ ಯುದ್ಧ ಮತ್ತು ಮೃತ್ಯು.



ಮಹಾರಾಜ ಜಯಾಜಿರಾವ್ ಸಿಂಧ್ಯನನ್ನ ರಾಣೀಸಾಹೇಬಳು ಸೋಲಿಸಿದನಂತರ, ಅವನು ರಣಾಂಗಣದಿಂದ ಅರಮನೆಗೆ ಹಿಂತಿರುಗಿಬಂದು, ತನ್ನ ದಿವಾನ ದಿನಕರರಾವ್ ಸಹಿತ ತತ್‌ಕ್ಷಣವೇ ಆಗ್ರಾಕ್ಕೆ ಓಡಿಹೋದನು. ಸಿಂಧ್ಯನು ಗ್ವಾಲಿಯರ್ ರಾಜಧಾನಿಯಿಂದ ಹೊರಟುಹೋಗುತ್ತಲೇ, ಅರಮನೆಯಲ್ಲಿ ಒಂದೇಪ್ರಕಾರ ಹಾಹಾಕಾರವು ಹುಟ್ಟಿತು. ಮಹಾರಾಜನು ಸೋಲಿಸಲ್ಪಟ್ಟವನಾಗಿ, ಆಗ್ರಾಕ್ಕೆ ಹೋದನೆಂಬುವದು ತಿಳಿಯುತ್ತಲೆ, ಅಂತಃಪುರದಲ್ಲಿನ ಸರ್ವ ರಾಜಸ್ತ್ರೀಯರು ತಮ್ಮ ಆತ್ಮ ಸಂರಕ್ಷಣೆಗೋಸ್ಕರ, ನರವರ ಪೂರಿಗೆ ಹೋದರು. * ಅಲ್ಲಿ ಸಿಂಧ್ಯನ, ನಂಬಿಕೆಯಾದ ಇಬ್ಬರು ಸರದಾರರುಗಳು ಮತ್ತು ಹೊಸ ಇರಸಾಲೆಯು ಕೆಲವು ಸ್ವಾಮಿನಿಷ್ಟ ಸೇವಕರೂ ಸಹ ಅವರನ್ನು ಚನ್ನಾಗಿ ಸಂಬಾಳಿಸಿದರು.

ಇತ್ತಲಾ, ದಂಗೇಖೋರರು ಬಹಳ ವಿಜಯಾನಂದದಿಂದ ಪಟ್ಟಣದ ಒಳಗೆ ಪ್ರವೇಶಮಾಡುವದಕ್ಕೆ ಪ್ರಾರಂಭಿಸಿದರು. ಗ್ವಾಲಿಯರ್ ದರ್ಬಾರಿನಲ್ಲಿ ಶ್ರೀಮಂತರಾವ್ ಸಾಹೇಬ ಪೇಷ್ವೆ ಮತ್ತು ತಾತ್ಯಾಟೋಪಿ ಮುಂತಾದ ಮಂಡಲಿಯವರಿಗೆ ಅಂತರಂಗವಾಗಿ ಹಿತಚಿಂತನೆಮಾಡುತ್ತಿದ್ದ ಸರದಾರರು ಮತ್ತು ಮುತ್ಸದ್ದಿ ಮಂಡಲಿಯವರಿಗೆ ಅವರ ವಿಜಯದ

---

* ಸಿಂಧ್ಯಾ ಸರ್ಕಾರದ ರಾಜಸ್ತ್ರೀಯರು, ಗ್ವಾಲಿಯರ್‌ನಿಂದ ನರವರಕ್ಕೆ ಹೊರಟು ಹೋಗುವಾಗ, ಒಂದು ಚಮತ್ಕಾರವಾದ ಸಂಗತಿಯು ನಡೆಯಿತು. ಅರಮನೆಯಿಂದ ರಾಜಸ್ತ್ರೀಯರುಗಳು ಹೊರಟ ಸಮಯದಲ್ಲಿ ಪಟ್ಟಣದಲ್ಲಿ ದಂಗೇಖೋರರ ಗದ್ದಲವು ನಡೆಯುತ್ತಿತ್ತು. ಆಸಮಯದಲ್ಲಿ, ಆ ಸ್ತ್ರೀಯರಿಗೆ, ಸಿಂಧ್ಯನು ಅರಮನೆಯಲ್ಲಿ ಸಿಕ್ಕಿದ್ದಾನೆ. ಅವನಿಗೆ ಬಹಳ ಕಷ್ಟಕಾಲ ವದಗಿದೆಯಂತ ಸುಳ್ಳು ವರ್ತಮಾನವು ತಿಳಿಯಬಂತು. ಇದನ್ನು ಕೇಳುತ್ತಲೆ, ಆ ಸ್ತ್ರೀಯರಲ್ಲಿ "ಗಜರಾಜ" ಎಂಬ ಒಬ್ಬ ಶೂರಸ್ತ್ರೀಯು ಕೂಡಲೆ ಕುದುರೆಯಮೇಲೆ ಏರಿಕೊಂಡು, ಕೈಯಲ್ಲಿ ಶಸ್ತ್ರಧಾರಣೆ ಮಾಡಿಕೊಂಡು, ಸಿಂಧ್ಯನನ್ನು ಹುಡುಕುವದಕ್ಕಾಗಿ ಬಹಳ ಶೌರ್ಯದಿಂದ ಪುನಃ ಅರಮನೆಯ ಕಡೆಗೆ ಹೊರಟಳು. ಅಲ್ಲಿ ಆಕೆಗೆ ಸಿಂಧ್ಯನು ಆಗ್ರಾಕ್ಕೆ ಸುರಕ್ಷಿತವಾಗಿ ಹೊರಟು ಹೋದನೆಂತ ನಂಬಿಕೆಯಾದಮೇಲೆ, ಹಿಂತಿರುಗಿದಳು. ನಿಜವಾಗಿಯೂ ಈ ಸಂಗತಿಯಿಂದ ಆಕೆಯ ಧೈರ್ಯವನ್ನ ಸಹಜವಾಗಿ ಊಹಿಸಬಹುದಾಗಿದೆ.

ವರ್ತಮಾನವನ್ನು ಕೇಳಿ, ಬಹಳ ಆನಂದವಾಯಿತು; ಮತ್ತು ಅವರು ಬರುವ ಸಮಯ ದಲ್ಲಿ, ತಮ್ಮ ಆದರ ಬುದ್ಧಿಯನ್ನು ತೋರಿಸುವದಕ್ಕಾಗಿ, ಹಿಂದೆ ಮುಂದೆ ನೋಡಲಿಲ್ಲ. ಶ್ರೀಮಂತರಾವ್ ಸಾಹೇಬ್ ಪೇಷ್ವೆಯೇ, ಆಗ ತಮ್ಮ ಮುಖ್ಯಧಣಿಯಾದನೆಂತ ಯೋಚಿಸಿ, ಗ್ವಾಲಿಯರ್‌ನಲ್ಲಿ ತಿರುಗಿಬಿದ್ದಿದ್ದ ಸೈನ್ಯವು, ಅವನಿಗೆ ಆದರ ಪೂರ್ವಕವಾಗಿ ವಂದನೆಮಾಡಿ ದರು; ಮತ್ತು ಆತನಿಗೆ ಯಾವವಿಧವಾದ ಪ್ರತಿಬಂಧಕವನ್ನು ಮಾಡದೆ, ಲಷ್ಕರಿನ ರಾಜ ಧಾನಿಯಲ್ಲಿ ಬರುವದಕ್ಕೆ ಬಿಟ್ಟುಕೊಟ್ಟರು. ಶ್ರೀಮಂತನು ಬಹಳ ಅಟ್ಟಹಾಸದಿಂದ ಮಂಗ ಳವಾದ್ಯವನ್ನು ಮಾಡಿಸಿಕೊಳ್ಳುತ್ತಾ, ತನ್ನಪರಿವಾರ ಸಹಿತ ಸಿಂಧ್ಯನ ಅರಮನೆಗೆ ಬಂದು, ಅಲ್ಲಿಯೇ ಪುಳಕೊಂಡನು. ಮಹಾರಾಣಿ ಲಕ್ಷ್ಮೀಬಾಯಿ ಸಾಹೇಬಳು ಲಷ್ಕರಿನ ಸಮೀಪವಿರುವ ನೌಲಖವೆಂಬ ಬಂದು ತೋಟದಲ್ಲಿ * ಉಳಿದುಕೊಂಡಳು. ಶ್ರೀಮಂತನ ಸಂಗಡಯಿದ್ದ, ಇತರ ಸರ್ದಾರರು ಮತ್ತು ಉದ್ಯೋಗಸ್ಥರು ಪಟ್ಟಣದಲ್ಲಿ ಪ್ರತ್ಯಪ್ರತ್ಯೇಕ ವಾಗಿ, ದೊಡ್ಡದೊಡ್ಡ ಮನೆಗಳಲ್ಲಿ ಪುಳಿದುಕೊಂಡರು. ತಾತ್ಪರ್ಯವೇನಂದರೆ, ಶ್ರೀಮಂತ ರಾವ್ ಸಾಹೇಬ್ ಪೇಷ್ವೆಗೆ, ವಿಶೇಷ ಶ್ರಮವಿಲ್ಲದೆ, ಸ್ವಲ್ಪಕಾಲವಲ್ಲಿಯೇ ಸಿಂಧ್ಯನ ರಾಜಧಾ ನಿಯು ಕೈವಶವಾಗಿ, ಅಲ್ಲಿ ಅವನ ಸ್ವಾಮಿತ್ವವನ್ನು ತೋರಿಸತಕ್ಕ ವಿಜಯಧ್ವಜವು ಫೌಳಿಯಲ್ಲಿ ಅಲ್ಲಾಡಲಿಕ್ಕೆ ಪ್ರಾರಂಭಿಸಿತು.

ಪಟ್ಟಣವು ಕೈವಶವಾದಕೂಡಲೆ, ತಾತ್ಯಟೋಪಿಯು ಗ್ವಾಲಿಯರ್ ಕೋಟೆಯ ಕಡೆಗೆ ಕೆಲವು ಸೈನ್ಯವನ್ನು ಕಳುಹಿಸಿದನು. ಆಕೋಟೆಯ ಅಧಿಕಾರಿಗಳು ಮೊದಲೆ ತಾತ್ಯಾನಿಗೆ ಅನುಕೂಲವಾಗಿದ್ದಕಾರಣ, ಅದು ಆತನ ಅಧೀನಕ್ಕೆ ಬರುವದಕ್ಕೇನೂ ಪ್ರಯಾಸವಾಗಲಿಲ್ಲ. ತಾತ್ಯಟೋಪಿಯ ಸೈನ್ಯವು ಅಲ್ಲಿಗೆ ಹೋಗುತ್ತಲೆ, ಕಿಲೇದಾರ್ ಜನಗಳು ಬಾಗಲು ತೆರದುಕೊಟ್ಟು, ಕೋಟೆಯನ್ನೆಲ್ಲಾ ಅದರ ಸ್ವಾಧೀನಪಡಿಸಿದರು ಅರ್ಥಾತ್, ಗ್ವಾಲಿಯರ್‌ನಂಥ ಅಜಸ್ರ ಮತ್ತು ಪ್ರಾಚೀನ ಕಲ್ಲಿನಕೋಟೆ ಮತ್ತು ಅದರ ಲ್ಲಿನ ಅಗಣಿತವಾದ ಯುದ್ಧ ಸಾಮಗ್ರಿಗಳು ಸಹ, ಸಹಜವಾಗಿ ಕೈವಶವಾದದ್ದರಿಂದ, ತಾತ್ಯಾನಿಗೆ ಅತ್ಯಂತ ಸಂತೋಷವಾಗತಕ್ಕದ್ದು ಮತ್ತು ಆ ಕೋಟೆಯ ಅಸದೃಶವಾದ ಸಾಮರ್ಥ್ಯದಮುಂದೆ, ಇನ್ನುಮುಂದೆ ತನ್ನಮೇಲೆ ಯಾರದ್ದೇನೂ ನಡೆಯಲಾರದೆಂತ ಗರ್ವ ತೋರಿಬಂಧದ್ದೂ ಸಹ ಆಶ್ಚರ್ಯವೇನಲ್ಲ.

ಕೋಟೆ ಮತ್ತು ಲಷ್ಕರ್ ಸ್ವಾಧಿನ ಪಡಿಸಿಕೊಂಡತರುವಾಯ, ದಂಗೆಖೋರರು ವಿಜಯೋತ್ಸವದ ಆನಂದದಲ್ಲಿ, ಅವಿವೇಕವಾದ ಕೃತ್ಯಗಳನ್ನ, ಮಾಡಲು ಪ್ರಾರಂಭಿಸಿದರು. ಆದಿಯಲ್ಲಿ ಅವರು ಬಹಳ ಈರ್ಷೆಯಿಂದ, ರೆಸಿಡೆಸಿಯಮೇಲೆ ಬಿದ್ದು, ಅದನ್ನು ಸುಲಿಗೆ ಮಾಡಿ, ಸುಟ್ಟು ನಾಶಪಡಿಸಿದರು. ಅನಂತರ ಸಿಂಧ್ಯನ ಹೊಸ ಅರಮನೆಯಮೇಲೆ ಮತ್ತು

* ಗ್ವಾಲಿಯರ್ ಪುಸ್ತಕದಲ್ಲಿ, ರಾಣೀಸಾಹೇಬಳು ಬಾಪೂನ ಕೋಟೆಯಲ್ಲಿ ಇಳಿದ ಳೆಂತ ಬರದಿಧೆ.



**Rao Saeb Peishwa.**

ರಾವ್ ಸಾಹೇಬ್ ಪೇಷ್ವೆ.

ಸಿಂಧ್ಯಾನಕಡೆ ಇಂಗ್ರೇಜಿಯವರಿಗೆ ಹಿತಚಿಂತಕರಾಗಿದ್ದ ಸರ್ದಾರರ ಮಂದಿರಗಳಮೇಲೆ ಬಿದ್ದು, ಅವುಗಳನ್ನು ನಾಶಮಾಡಲು ಪ್ರಾರಂಭಿಸಿದರು. ಆ ಮಂದಿರಗಳನ್ನೆಲ್ಲಾ ಸುಲಿಗೆ ಮಾಡಿ ಬಹಳ ನಾಶಪಡಿಸಿದರು. ಮತ್ತು ದಿವಾನ್ ದಿನಕರರಾವ್, ಸರ್ದಾರ್ ಬಲವಂತ ರಾವ್ ಮತ್ತು ಮಾಹೂರ್ಕರ್ ಮುಂತಾದ, ದರ್ಬಾರಿನ ಪ್ರಮುಖ ಜನಗಳ ಅಶ್ವಾಲಯಗಳನ್ನು ನೆಲಸಮಮಾಡಿದರು. ಇಷ್ಟೇಅಲ್ಲದೇ, ದ್ರವ್ಯಾತುರವನ್ನ ತೃಪ್ತಿ ಪಡಿಸುವದಕ್ಕಾಗಿ, ಪಟ್ಟಣದಲ್ಲಿ ಸುಲಿಗೆ ಮಾಡುವದಕ್ಕೆ ವುದ್ಯುಕ್ತರಾದರು. ಆದರೆ ಸುದೈವದಿಂದ ಶ್ರೀಮಂತರಾವ್ ಸಾಹೇಬ್ ಪೇಷ್ವೆಯು ನಗರವಾಸಿಗಳಾದ ಜನಗಳ ವಿತ್ತ ಹರಣ ಮಾಡಬಾರದು. ಮತ್ತು ಅವರಿಗೆ ತೊಂದರೆ ಕೊಡಬಾರದೆಂತ ಖಂಡಿತವಾಗಿ ಅಪ್ಪಣೆಮಾಡಿದ್ದರಿಂದ ದಂಗೇಜನಗಳ ಅಘೋರವಾದ ಕೃತ್ಯವು ಸ್ವಲ್ಪಮಟ್ಟಿಗೆ ನಿಂತುಹೋಯಿತು. * ಇದುಹಾಗಿರಲಿ.

ಗ್ವಾಲಿಯರ್‌ನ ವಿಜಯವು, ಮಹಾರಾಷ್ಟ್ರ ರಾಜಸಂಸ್ಥಾಪನೆಗೆ ಪುನಹ ಪ್ರಾಪ್ತಿಯಾದ, ಕಪಿಲ ಷಷ್ಟಿಯಂಥಾ ಸುಯೋಗವಾಗಿಧೆ ಯಂಬುವದನ್ನು ನೋಡಿ, ಶ್ರೀಮಂತ ರಾವ್ ಸಾಹೇಬ್ ಪೇಷ್ವೆಯು ಸನ್ 1818ನೇ ಇಸವಿಯಲ್ಲಿ ನಷ್ಟವಾಗಿ ಹೋಗಿದ್ದ ಪುಣ್ಯಾಪತನ ಪೇಷ್ವಾಯಿಯು, ಪುನಃ ಪ್ರಾಣಪ್ರತಿಷ್ಠಾಪನೆಯನ್ನು ಸಿಂಧ್ಯಾಸರ್ಕಾರದ ಸಿಂಹಾಸನದಮೇಲೆ ಮಾಡಬೇಕೆಂಬ ಆಶೆಯನ್ನು ಮನಸ್ಸಿನಲ್ಲಿ ತಂದುಕೊಂಡನು. ಕಾಲವಶಾತ್ ಸರ್ವಗ್ವಾಲಿಯರ್ ದರ್ಬಾರಿನವರು ಅವನಿಗೆ ಅನುಕೂಲರಾದಕಾರಣ, ಆತನ ಯಿಷ್ಟಕ್ಕೆ ವಿರೋಧವಾಗಿ ಯಾರಾದರೂ ನಡಕೊಂಡಾರೆಂಬ ಭೀತಿಯು ಬಹಳಮಟ್ಟಿಗೆ ಯಿರಲಿಲ್ಲ. ಯಾಕಂದರೆ ದುರಾದೃಷ್ಟದ ಕ್ರೂರವಾದ ಪೆಟ್ಟಿನಿಂದ ಅಲಗಿಹೋಗಿದ್ದ ಸಿಂಧ್ಯಾಶಾಯಿಯು ಕ್ಷೀಣವಾಗಿ ಅದು ಆಗಲೇ ಈ ಸ್ವಯಂ ಶಿದ್ಧವಾಗುವದಕ್ಕೆ ನೋಡತಕ್ಕ ಪೇಷ್ವಾಯಿಯಲ್ಲಿ ಬಂದು ರೂಪವಾಗಿಹೋದೀತೆಂತ ಸರ್ವರ ಮನಸ್ಸಿನಲ್ಲಿಯೂ ಭ್ರಮೆಹುಟ್ಟಿತ್ತು. ಇದು ಹಾಗಿರಲಿ. ಮುದ್ರಾರಾಕ್ಷಸನಾಟಕದಲ್ಲಿ ಹೇಳಿರುವಂತೆ "ದೈವೇನೋಪಹತಸ್ಯಬುದ್ಧಿರಥವಾಪೂರ್ವಂವಿಪರ್ಯಯಃಶ್ಯತಿ" ಆಸಮಯದಲ್ಲಿ ವಿಜಯಾನಂದದ ಶಿಖರಕ್ಕೆ ಹೋಗಿದ್ದ ಶ್ರೀಮಂತರಾವ್ ಸಾಹೇಬ್‌ಪೇಷ್ವೆಯು ಪ್ರಭೃತಿ ಮಂಡಲಿಯುವರ ಸ್ಥಿತಿಯಾಗಿ ಅವರು ತಮ್ಮ ನೂತನ ರಾಜಸಂಸ್ಥಾಪನೆಯ ವಿಚಾರವನ್ನು ನೆರವೇರಿಸಿಕೊಳ್ಳುವದಕ್ಕೆ ಸಂಕಲ್ಪ ಮಾಡಿದರು.

---

* ಈ ಸಂಬಂಧವಲ್ಲಿ ಇಂಗ್ರೀಜಿ ಗ್ರಂಥಕಾರನದೂನೂ, ಆಧಾರ ಸ್ವಲ್ಪ ಶಿಕ್ಕುತ್ತದೆ. ಮೇಜರ್ ಮ್ಯಾಕ್‌ಫರ್ಸನ್ ಸಾಹೇಬನು ಹೇಳುವದೇನಂದರೆ :—

The Rao Saheb prevented plunder; confiscated only the houses of the Devan, Balawantha Rao, and Mohurghur."

*Memorials Page*, 334.

ಶ್ರೀಮಂತನು ಸರ್ವ ರಾಜಮಂಡಲಿಯವರನ್ನ ಸೇರಿಸಿಕೊಂಡನು. ಶಿಂಧ್ಯಾನ ಆಶ್ರಯದ ಜಹಗೀರದಾರ್ ಮತ್ತು ಸರದಾರರಿಗೆ ಪತ್ರ ಬರಿಸಿದನು. ಸರ್ವ ಲಷ್ಕರಿನ ಅಮಲ್ದಾರರುಗಳನ್ನು ಸೇರಿಸಿಕೊಂಡನು. ಶಿಂಧ್ಯಾನ ಗಂಗಾಜಳಿಯುಂಬ ಮುಖ್ಯ ದ್ರವ್ಯ ಭಂಡಾರವು ಶ್ರೀಮಂತನಿಗೆ ಅನಾಯಾಸವಾಗಿ ಸಿಕ್ಕತು. ಅದರ ಮೇಲಿನ ಅಧಿಕಾರಿ, ಅಮರಚಂದ್‌ಭಾಟ್ಯಾನಿಗೆ, ಸಾಮ, ದಾಸ, ದಂಡವನ್ನುಪಯೋಗಿಸಿ ತನ್ನ ವಶಮಾಡಿಕೊಂಡಿದ್ದನು. ಅವನಿಂದ ಬೇಕಾದಷ್ಟು ದ್ರವ್ಯವನ್ನು ಸಂಪಾದಿಸಿಕೊಳ್ಳುವದಕ್ಕೆ ಪ್ರಯತ್ನ ಮಾಡಿದನು. ಶಿಂಧ್ಯೆನ ಸರ್ಕಾರದವರು, ನಾಲ್ಕು ಸರದಾರರನ್ನ ರಾಜದ್ರೋಹ ತಪ್ಪಿತದ ಸಂಶಯದಮೇಲೆ ಶಿರಮನೆಯಲ್ಲಿಟ್ಟಿದ್ದವರನ್ನ ಬಂಧಮುಕ್ತರನ್ನಾಗಿ ಮಾಡಿ, ಅವರಿಗೆ ಗೌರವಾರ್ಥವಾಗಿ ವಸ್ತ್ರವನ್ನು ಕೊಟ್ಟನು. ಬಾಣಾಪುರ ಮತ್ತು ಶಹಗಡ ಮುಂತಾದ ಸ್ಥಳದಲ್ಲಿನ ಮಿತ್ರಭಾವದಿಂದ ನಡೆದುಕೊಳ್ಳುತ್ತಿದ್ದ, ರಾಜರುಗಳಿಗೆ ಲಗ್ನಪತ್ರಿಕೆಗಳನ್ನು ಕಳುಹಿಸಿದನು. ಈ ಪ್ರಕಾರವಾಗಿ ಸರ್ವವೂ ಸಿದ್ಧವಾದನಂತರ ಶ್ರೀಮಂತನು ಸ್ವತಃ ಸಿಂಹಾಸನಾರೂಢನಾಗುವದಕ್ಕೆ ಸುಮುಹೂರ್ತವನ್ನಿಡಿಸಿದನು.*

ತಾರೀಖು 3ನೇ ಜೂನ್ ದಿವಸ, ಫೂಲ್‌ಬಾಗ್ ಮಧ್ಯದಲ್ಲಿ ಸಾರ್ವಜನಿಕ ಸಭಾ ಸೇರಿತು. ಶ್ರೀಮಂತನಿಗೆ ಅನುಕೂಲವಾಗಿದ್ದ ಸರ್ವ ಸರ್ದಾರರೂ, ಮುತ್ಸದ್ದಿಯರೂ, ಮಾನಕರಿ, ಶಿಲೇದಾರರೂ, ಮುಂತಾದ ಶಿಷ್ಟಮಂಡಲಿಯವರು ತಮ್ಮ ತಮ್ಮ ಯೋಗ್ಯತಾನುಸಾ.

---

* ಶ್ರೀಮಂತರಾವ್ ಸಾಹೇಬ್ ಪೇಷ್ವೆಯು, ಶಿಂಧೆ ಸರ್ಕಾರದ ರಾಜಧಾನಿಯನ್ನ ಹಸ್ತಗತ ಮಾಡಿಕೊಂಡನಂತರ, ರಾಜ್ಯಾಭಿಷೇಕ ಸಮಾರಂಭ ಮಾಡಿದ ಸಮಯದಲ್ಲಿ ಶ್ರೀಮಂತನಾನಾಸಾಹೇಬ್ ಪೇಷ್ವೆಯು ಗ್ವಾಲಿಯರಿಗೆ ಬಂದಿದ್ದನೋ ಇಲ್ಲವೋ ಎಂಬುವದು ತಿಳಯುವದಿಲ್ಲ. ಮ್ಯಾಲಿಸನ್ ಮುಂತಾದ ಬಬ್ಬ ಇಬ್ಬರು, ಇತಿಹಾಸಕಾರಕರು ಗ್ವಾಲಿಯರ್ ರಾಜಧಾನಿಯನ್ನ ದಂಗೇಖೋರರು ಕೈವಶಮಾಡಿಕೊಂಡ ನಂತರ ನಾನಾಸಾಹೇಬನ ಹೆಸರಿನಮೇಲೆ ಡಂಗೂರಹೊಡಿಸಿ ರಾವ್ ಸಾಹೇಬನಿಗೆ ಗ್ವಾಲಿಯರನ ಶುಭೇದಾರನನ್ನಾಗಿ ನೇಮಿಸಿದರೆಂತ ಬರೆದಿದ್ದಾರೆ. ಆದರೆ, ಇದಕ್ಕೆ ಆಧಾರವೇನೂ ಸಿಕ್ಕುವದಿಲ್ಲ. ನಮಗೆ ತಿಳುವಳಿಕೆ ಕೊಡತಕ್ಕಯಲ್ಲರು ಶ್ರೀಮಂತರಾವ್‌ಸಾಹೇಬ್ ಪೇಷ್ವೆಯೇ ರಾಜ್ಯಾರೋಹಣ ಸಮಾರಂಭವನ್ನ ಮಾಡಿದನೆಂತ ಹೇಳುತ್ತಾರೆ. ಆದರೆ, ಸನ್ಮಾನಾರ್ಥವಾಗಿ ನಾನಾಸಾಹೇಬನ ಹೆಸರಿನಲ್ಲಿ ಪೇಷ್ವೆಯು ಡಂಗುರ ಹೊಡಿಸಿದ್ದು ತಿಳಿಯುವದಿಲ್ಲ. ಕದಾಚಿತು, ನಾನಾಸಾಹೇಬನ ಹೆಸರಿನಲ್ಲಿ ಪೇಷ್ವೆಯು ಸ್ಥಾಪನೆಮಾಡಿ ತಾನು ಹಿಂದೂಸ್ಥಾನದ ಶುಬೇದಾರನಾಗಬೇಕೆಂತ ರಾವ್‌ಸಾಹೇಬ್ ಪೇಷ್ವೆಯು ಇಛ್ಛಾಇದ್ದದ್ದನ್ನ ಹೇಳುವದಿಲ್ಲ. ಆದಾಗ್ಯೂ ಆ ಮಹೋತ್ಸವ ಪ್ರಸಂಗದಲ್ಲಿ, ನಾನಾಸಾಹೇಬನು ಗ್ವಾಲಿಯರ್ರಿಗೆ ಬಂದಿದ್ದನೆಂಬುವದಕ್ಕೆ ನಂಬಿಕೆಗೆ ಯೋಗ್ಯವಾದ ಆಧಾರ ಸಿಕ್ಕುವದಿಲ್ಲ. ರಾಜಸಂಸ್ಥಾಪನೆಯ ಸರ್ವಕೃತ್ಯವನ್ನು ರಾವ್‌ಸಾಹೆಬ್ ಪೇಷ್ವೆ ಮತ್ತು ತಾತ್ಯಟೋಪಿ ಮುಂತಾದ ಆತನ ಪ್ರಭೃತ ಮುತ್ಸದ್ದಿಯರೇ ಮಾಡಿದರೆಂತ ನಮಗೆ ಬಂದ ತಿಳುವಳಿಕೆಯಿಂದ ತೋರಿಬರುತ್ತದೆ.

ರವಾಗಿ ಸಭಾಸ್ಥಾನದಲ್ಲಿ ವಿರಾಜಿತರಾದರು. ತಾತ್ಯಾ ಟೋಪಿ ಮತ್ತು ಆತನ ಕೈಕೆಳಗಿನ ಆರಬ್, ರೋಹಿಲೆ, ಪಠಾಣ,ರಜಪುತ್‌, ರಾಂಗಡೆ ಮತ್ತು ಪರದೇಶದ ಸರ್ದಾರ್‌ಲಷ್ಕರಿನವರು ವಸ್ತ್ರಧಾರಣೆ ಮಾಡಿಕೊಂಡು, ಸೊಂಟಕ್ಕೆ ಶಸ್ತ್ರವನ್ನು ಸಿಗಿಸಿಕೊಂಡು, ಸಭಾಮಧ್ಯದಲ್ಲಿ ಬಂದು ಸೇರಿದರು. ಸ್ವತಃ ಶ್ರೀಮಂತನು ಪೇಷ್ವೆ ಅಟ್ಟಹಾಸದ ವಿಶಿಷ್ಟ ವಸ್ತ್ರವನ್ನ ಧಾರಣೆ ಮಾಡಿಕೊಂಡು, ಮಸ್ತಕದಲ್ಲಿ ಶಿರಪೇಂಚ್, ವಜ್ರಖಚಿತವಾದ ತುರಾಯಿ, ಕಿವಿಯಲ್ಲಿ ಮುತ್ತಿನ ಚೌಕಳಿ, ಕೊರಳಿನಲ್ಲಿ ಮುತ್ತಿನಹಾರ ಮತ್ತು ರತ್ನದಮಾಲೆ ಸಹಾ ಧರಿಸಿಕೊಂಡು, ಸರ್ವ ವೈಭವದಿಂದ ಛಾವ್‌ದಾರ್, ಚೋಪದಾರ್, ಲಲ್ಕಾರ್ತರು, ಮತ್ತು ನೌಕರ್ಚಾಲೆ ಸಹಿತ ಸಭಾ ಮಧ್ಯದಲ್ಲಿ ಆಗಮನ ಮಾಡಿದನು. ಅನಂತರ, ಪದ್ಧತಿ ಪ್ರಕಾರ, ಸಭಿಕರುಯದ್ದು ನಿಂತುಕೊಂಡು ಮಾಡುವ ಮರ್ಯಾದೆಯು ನಡೆದು, ದರ್ಬಾರಿನ ಜನಗಳ ಮುಜರೆಯಾಗಿ, ಸಿಂಹಾಸನಾರೂಢನಾಗತಕ್ಕ ಯಲ್ಲಾ ಸಂಪ್ರದಾಯವೂ ನಡೆಯಿತು. ಶ್ರೀಮಂತನು ನೇತ್ರದಲ್ಲಿ, ಆನಂದಭಾಷ್ಪವನ್ನು ತಂದುಕೊಂಡು ಬಹಳ ಆವೇಶದಿಂದ ಸರ್ವಸರ್ದಾರರುಗಳಿಗೆ ಅಭಿವಂದನೆಯನ್ನು ಮಾಡಿ, ಅವರಿಗೆವಸ್ತ್ರಾಲಂಕಾರವನ್ನು ಕೊಟ್ಟು ಬಹಳ ಸನ್ಮಾನಮಾಡಿದನು. ರಾಮರಾವ್ ಗೋವಿಂದನೆಂಬ ಗೃಹಸ್ಥನಿಗೆ ಮುಖ್ಯ ಪ್ರಧಾನತನದ ವಸ್ತ್ರವನ್ನು ಕೊಟ್ಟನು. ತಾತ್ಯಾಟೋಪಿಗೆ ಸೇನಾಪತಿತ್ವವನ್ನ ಮೊದಲಿನಂತೆ ಯಿಟ್ಟು, ಆತನಿಗೆ ಬಂದು ರತ್ನಖಚಿತವಾದ ಶಸ್ತ್ರವನ್ನು ಬಕ್ಷಿಸ್ಸಾಗಿ ಕೊಟ್ಟನು. ಅದೇಪ್ರಕಾರವಾಗಿ, ಅಷ್ಟಪ್ರಧಾನಿಗಳನ್ನು ಹುಡುಕಿ; ಅವರವರಯೋಗ್ಯತಾನುಸಾರವಾದ ಅಧಿಕಾರಗಳನ್ನು ಕೊಟ್ಟನು. ಶಿಂಧ್ಯಾ ಸಂಸ್ಥಾನದಲ್ಲಿ ತನಗೆ ಅನುಕೂಲವಾದ ಸೈನ್ಯ ಮತ್ತು ಇತರ ದಂಗೇ ಖೋರರ ಶಿಪಾಯಿಗಳಿಗೆ, 20 ಲಕ್ಷರೂಪಾಯಿಗಳನ್ನು ಹಂಚಿ ಕೊಟ್ಟನು. ಈ ಪ್ರಕಾರವಾಗಿ ದರ್ಬಾರಿನ ಅಪ್ರತಿಮ ಸಮಾರಂಭವು ನಡೆದು, ಶ್ರೀಮಂತರಾವ್ ಸಾಹೇಬ್ ಪೇಷ್ವೆಯು ಸ್ವತಃ ಪೇಷ್ವೆಯ ವಸ್ತ್ರಧಾರಣೆ ಮಾಡಿಕೊಂಡನು. ಎಲ್ಲೆಲ್ಲಿನೋಡಿದರೂ ಅತ್ಯಂತ ಸಂತೋಷವಾಗಿ, ತೋಫಿಗೆ ಸರಬತ್ತಿ ಹಚ್ಚಿದರು. ತಾತ್ಪರ್ಯವೇನಂದರೆ, ಸ್ವಾತಂತ್ರ್ಯಮತ್ತು ಸ್ವಾಭಿಮಾನದ ಆಶೆಯಿಂದ ತುಂಬಿಹೋಗಿ, ದಂಗೇ ಜನಗಳು ಸ್ವರಾಜ್ಯ ಸಂಸ್ಥಾಪನಾರ್ಥವಾಗಿಮಾಡಿದ, ಅವಿಚಾರ ಮಹೋತ್ಸವದ, ಮೊದಲನೆಯ ಬಣ್ಣವು ಚನ್ನಾಗಿ ಹೊರಟಿತೆಂತ ಹೇಳಿದರೆ, ನಡೆಯುಬಹುದು. ಇದುಹಾಗಿರಲಿ.

ಶ್ರೀಮಂತರಾವ್ ಸಾಹೇಬ್ ಪೇಷ್ವೆಯು ಸ್ವತಃ ಪಟ್ಟಾಭಿಷೇಕ ಮಾಡಿಕೊಂಡು ಹಿಂದೂ ಪಾದಷಾಹಿಯ ಗಾದಿಯನ್ನು ಸ್ಥಾಪನೆ ಮಾಡಿದನಂತರ ತನ್ನ ಈ ಮಹಾದುರ್ಘಟವಾದ ಪುಣ್ಯಕೃತ್ಯವನ್ನ ಸಫಲ ಗೊಳಿಸುವದಕ್ಕಾಗಿ, ಬ್ರಾಹ್ಮಣ ಸಂತರ್ಪಣೆಮಾಡಲು, ಪ್ರಾರಂಭಿಸಿದನು. ಗ್ವಾಲಿಯರ್‌ನಲ್ಲಿ ಗಂಗಾ ಮಹತ್ವ ವಿಶೇಷವಾಗಿದ್ದಕಾರಣ, ಆ ಸಮ್ಮಂಧವಾಗಿ, ಅರಮನೆಯಲ್ಲಿ ಬ್ರಾಹ್ಮಣರಿಗೆ ಅನ್ನ ಸಂತರ್ಪಣೆ ಮಾಡುವ ಸಂಪ್ರದಾಯ ವಿದ್ದೇಯಿತ್ತು. ಅದರಲ್ಲಿ ಶ್ರೀಮಂತನಿಗೆ ಪಟ್ಟಾಭಿಷೇಕವಾದದ್ದರಿಂದ, ಅದಕ್ಕೆ ವಿಶೇಷ ಮಹಾತ್ಮೆ ಪ್ರಾಪ್ತವಾಯಿತು. ಭೋಜನಕ್ಕೆ ಸಾವಿರಾರು ಬ್ರಾಹ್ಮಣರಿಗೆ ವೇತನ ಕೊಟ್ಟು, ಪ್ರತಿದಿನವೂ, ಅಸಂಖ್ಯಾಕವಾದ ಜನಗಳ ಊಟಕ್ಕೆ ಅಡಗಿಯನ್ನು ಸಿದ್ಧಪಡಿಸ

ಲು ಪ್ರಾರಂಭವಾಯಿತು. ಪ್ರತಿದಿವಸವೂ ಸಾವಿರಾರು ಬ್ರಾಹ್ಮಣರು, ಪಂಚಭಕ್ಷ್ಯಗಳ ಕುತ್ತಿಗೆಯ ಪರ್ಯಂತರ ಭೋಜನ ಮತ್ತು ಸುವರ್ಣದಕ್ಷಿಣೆ, ಇವರಲ್ಲಿ ಕೇವಲ ತೃಪ್ತರಾದರು. ಪಂಕ್ತಿಯ ಮಧ್ಯದಲ್ಲಿ, ಸ್ವತಃ ಯಜಮಾನನು ಜರ್ಜರೀ ಪೀತಾಂಬರವನ್ನುಟ್ಟುಕೊಂಡು, ಶಾಲುಜೋಡಿ ಹೊದ್ದುಕೊಂಡು, ಬ್ರಾಹ್ಮಣರನ್ನ ವಿಚಾರಿಸಿ ಕೊಳ್ಳುವದಕ್ಕೆ, ಕೇವಲ ತತ್ಪರನಾಗಿದ್ದ ಕಾರಣ, ನ್ಯೂನತೆ ಸ್ವಲ್ಪವೂ ನಡೆಯಲಿಲ್ಲ. ಆದ್ದರಿಂದ ಸರ್ವ ಬ್ರಾಹ್ಮಣರು ಅತಿರಿಕ್ತ ಭೋಜನದಿಂದ ವುಬ್ಬಿಹೋಗಿ, 'ಬೇಡ, ಬೇಡ,' ವೆಂಬುವದೊಂದು ಹೊರ್ತು, ಬೇರೆಯಾವ ಶಬ್ದವನ್ನು ಉಚ್ಚಾರಣೆ ಮಾಡಲು ಅವರಿಗೆ ಶಕ್ತಿಯಿರಲಿಲ್ಲ. ಶ್ರೀಮಂತನು, ನೂತನವಾಗಿ ಸ್ಥಾಪನೆಮಾಡಿದ, ಈ ಮಹರಾಷ್ಟ್ರ ರಾಜ್ಯದ ದೀಪವು, ಅಖಂಡವಾಗಿ ಪ್ರಕಾಶಮಾನ ವಾಗಬೇಕೆಂತ, ಶುಭ ಆಶಿರ್ವಾದ ತೆಗದುಕೊಳ್ಳುವದಕ್ಕಾಗಿ, 'ಶಾಪಾದಪಿ, ಶರಾದಪಿ' ಬ್ರಾಹ್ಮಣರಿಗೆ ಅನ್ನದಾನದಿಂದ ಸಂತುಷ್ಟಿಪಡಿಸುವ ಕ್ರಮವನ್ನು ಇಟ್ಟಿದ್ದನು. ಪರಂತು, ಆತನದುರ್ದೈವದಿಂದ, ಬ್ರಾಹ್ಮಣರು, ಆ ಪಂಕ್ತಿಯ ಮಧ್ಯದಲ್ಲಿ ವುಚ್ಚಾರಮಾಡಿದ. 'ಬೇಡ ಬೇಡ ವೆಂಬ ನಿಷೇದಾರ್ಥತವಾದ ಒಂದು ಶಬ್ದಮಾತ್ರ ಸಾರ್ಥಕವಾಗಿ, ಅವನ ರಾಜ್ಯದ ದೀಪವು ಜಾಗ್ರತೆಯಾಗಿ ನೊಂದಿಹೋಯಿತು, ಎಂಬುವದನ್ನು ನೋಡಿ, ಒಂದೇ ಸಮಯದಲ್ಲಿ ಸುಖ ಮತ್ತು ದುಃಖ ಸಹ ಯಾರಿಗೆ ತೋರಲಿಕ್ಕಿಲ್ಲ ?

ಇದುಹಾಗಿರಲಿ. ಅರಮನೆಯಲ್ಲಿ ನಿರ್ಭಯದಿಂದ ಬ್ರಾಹ್ಮಣ ಭೋಜನದ ಗದ್ದಲವು ನಡೆಯುತ್ತಿದೆ, ಮತ್ತು ಶ್ರೀಮಂತರಾವ್ ಸಾಹೇಬ್ ಪೇಷ್ವೆ ಮುಂತಾದ ಮಂಡಲಿಯವರು, 'ನಿರ್ವೀರಮುರ್ವೀತಳಂ,' (ಭೂಮಿಯು ಸತ್ವವಿಲ್ಲದೆ ಹೋಗಲಿ) ಯಂತ ಯೋಚಿಸಿ, ತಮ್ಮ ಐಶ್ವರ್ಯ ಅಧ್ವರ್ಯದಲ್ಲಿ, ಮುಳಿಗಿ ಹೋಗಿದ್ದಾರೆಂಬುವದನ್ನ ನೋಡಿ, ಮಹಾರಾಣಿ ಲಕ್ಷ್ಮೀಬಾಯಿ ಸಾಹೇಬಳಿಗೆ, ಪರಮಾವಧಿಯಭೇದ ವುತ್ಪನ್ನವಾಯಿತು. ಇಲ್ಲಿ ವಾಚಕರಿಗೆ ಒಂದುಮಾತನ್ನು ಹೇಳತಕ್ಕದ್ದು ಅವಶ್ಯಕವಿದೆ. ಆದೇನಂದರೆ: —

ರಾಣಿಸಾಹೇಬಳ ಪರಾಕ್ರಮದಿಂದಲೇನೇ, ಗ್ವಾಲಿಯರ್ ರಾಜಧಾನಿ ಮತ್ತು ಅಲ್ಲಿನ ಕೋಟೆಯು ಸಹಾ, ರಾವ್‌ಸಾಹೇಬ್ ಪೇಷ್ವೆಯ ಸ್ವಾಧೀನಕ್ಕೆ ಬಂದಿದ್ದಾಗ್ಯೂ, ಅವನು ರಾಣಿಸಾಹೇಬಳ ಅನುಮತಿಯಿಲ್ಲದೆ, ಈ ಸರ್ವ ವಿಜಯೋತ್ಸವ ಮತ್ತು ರಾಜ್ಯಾಭಿಷೇಕ ಸಮಾರಂಭವನ್ನ ನಡೆಸುತ್ತಾ ಯಿದ್ದನು. ರಾಣೀಸಾಹೇಬಳಿಗೆ ಪೇಷ್ವೆಕಡೆಯಿಂದ, ಅನೇಕಸಲ ಕರೆಬಂದಿತ್ತು. ಆದಾಗ್ಯೂ, ಆಕೆಯು ತನ್ನ ಮರ್ಯಾದೆಯನ್ನು ಬಿಟ್ಟು, ಬಹಿರಂಗವಾಗಿ ಪೇಷ್ವೆಯ ದರ್ಬಾರು ಮುಂತಾದ್ದಕ್ಕೆ ಯಂದಿಗೂ ಹೋಗಿರಲಿಲ್ಲ. ಇದರಿಂದ ರಾವ್‌ಸಾಹೇಬ್ ಪೇಷ್ವೆಯು ಆನಂದವನ್ನು ತೋರಿಸುವದಕ್ಕಾಗಿ, ಮಾಡಿದ ಕೆಲಸಗಳಲ್ಲಿ, ರಾಣಿಸಾಹೇಬಳ ಅನುಮತಿಯಿದ್ದಂತೆ ಕಂಡುಬರುವದಿಲ್ಲ. ರಾಣೀಸಾಹೇಬಳು, ಶ್ರೀಮಂತನ ಅವಿಚಾರದ ನಡವಳತೆಯ ಪರ್ಯವಸಾನವು ಒಳ್ಳೇದಾಗಲಾರದೆಂಬುವದನ್ನು ನೋಡಿ, ಅವನಿಗೆ ಸರಿಯಾದ ಹಿತಬೋಧನೆಯನ್ನ ಮಾಡಿದಳು; ಮತ್ತು, ಬ್ರಾಹ್ಮಣ

ಭೋಜನವನ್ನು ನಿಲ್ಲಿಸಿ, ಸೈನ್ಯವನ್ನು ಸರಿಪಡಿಸಬೇಕೆಂತ ನಿರೂಪವನ್ನು ಕಳುಹಿಸಿದಳು. ಆದರೆ, ಅದರ ವುಪಯೋಗವೇನೂ ಆಗಲಿಲ್ಲ. ಆದಾಗ್ಯೂ-ಆಕೆಯು ಪುನಃ ರಾವ್‌ಸಾಹೇಬನಿಗೆ ಉಪದೇಶಮಾಡಿದ್ದೇನಂದರೆ:—ನೀವು ಈ ಸಮಯದಲ್ಲಿ, ನಿಮ್ಮ ವಿಜಯವು ಶಾಶ್ವತವಾದ್ದೆಂತ ತಿಳಿದುಕೊಂಡು ಆನಂದದಲ್ಲಿ ನಿಮಗ್ನರಾಗಿದ್ದೀರಿ. ಪರಂತು, ಈ ಮಾತು ನಿಮಗೆ ಕೇವಲ ಅಹಿತಕರವಾಗಿದ್ದಾಗಿದೆ. ನಿಮ್ಮ ಅಧೀನದಲ್ಲಿ ಗ್ವಾಲಿಯರ್ ಪ್ರಾಂತ್ಯವು ಬಂದಿದ್ದರಿಂದ, ಶಿಂಧ್ಯೆ ಸರ್ಕಾರದ ಸರ್ವಸೈನ್ಯವೂ ನಿಮಗೆ ಶಿಕ್ಕಿದೆ. ಹೀಗಿರುವಾಗ, ಇನ್ನುಮೇಲೆ ನಿಮಗೆ ಯಾರಭೀತಿಯೂ ಇಲ್ಲವೆಂಬ ಆಲೋಚನೆ ಯಿರುವ ಪಕ್ಷದಲ್ಲಿ, ಅದು ಶುದ್ಧಾಂಗ ತಪ್ಪು ತಿಳುವಳಿಕೆಯಾಗಿದೆ. ಇಂಗ್ರೀಜಿ ಜನಗಳು, ಬಹಳ ಶಕ್ತರು ಮತ್ತು ಚತುರರು. ಅವರು ನಿಮ್ಮಮೇಲೆ ಹ್ಯಾಗೆ ದಂಡೆತ್ತಿಬರುವರೆಂಬುವದು ನಿಯಮವಿಲ್ಲ. ನಿಮಗೆ ಅದೃಷ್ಟವಶಾತ್, ಸಿಂಧ್ಯಾ ಸರ್ಕಾರದ ಸರ್ವಭಂಡಾರ ಮತ್ತು ಅದರ ಸರ್ವಸೈನ್ಯವು ಸಹ ಸ್ವಾಧೀನವಾಗಿದೆ. ಆದಕಾರಣ ಅದರ ವ್ಯವಸ್ಥೆಯನ್ನು ಚನ್ನಾಗಿಮಾಡಿ, ಯಲ್ಲಾದಿಕ್ಕಿನ ಮೋರ್ಚೆಯನ್ನು ಸರಿಯಾಗಿ ಬಲಪಡಿಸಬೇಕು. ಪಟಾಲಂಜನಗಳಿಗೆ ತುಂಬಾ ಸಂಬಳಕೊಟ್ಟು, ಅವರ ಸರ್ವಸೈನ್ಯವನ್ನು ಶಿದ್ಧಮಾಡಬೇಕು. ನಿಮಗೆ ಈಗ ನಿಮ್ಮವುದ್ದೇಶವನ್ನ ನೆರವೇರಿಸುವದಕ್ಕೆ ಶಿಕ್ಕಿರುವ ವುತ್ತಮ ಸಮಯವನ್ನು ವ್ಯರ್ಥವಾಗಿ ಕಳಕೊಳ್ಳಬೇಡಿ. ನೀವು ಸೈನ್ಯವನ್ನು ಸರಿಪಡಿಸಿಕೊಂಡು, ಯುದ್ಧಕ್ಕೆ ಶಿದ್ಧರಾಗಿಲ್ಲದೆಹೋದರೆ, ನಿಮ್ಮನಾಶಕ್ಕೆ ಬಹಳ ಕಾಲಹಿಡಿಯಲಾರದು. ಆದಕಾರಣ, ಚನ್ನಾಗಿ ಯೋಚನೆಮಾಡಿ, ವರ್ತಮಾನಸ್ಥಿತಿಯನ್ನು ಮನಸ್ಸಿನಲ್ಲಿ ತಂದು, ಸೈನ್ಯದ ವ್ಯವಸ್ಥೆಯನ್ನು ಸರಿಪಡಿಸಿಕೊಳ್ಳಬೇಕು. ಕೈ. ಶ್ರೀಮಂತಬಾಜೀರಾವ್ ಸಾಹೇಬನು, ಹ್ಯಾಗೆ ಬ್ರಾಹ್ಮಣರಿಗೆ ಭೋಜನವನ್ನು ಹಾಕಿ, ಪೇಷ್ವೆಯ ರಂಗೋಲಿಯನ್ನ ಬೂದಿಮಾಡಿದನೋ, ಹಾಗೆಯೇ ಈಗ ನೀವು, ಕೈಗೆಬಂದ ವಳ್ಳೇ ಸಮಯವನ್ನು ಕಳಕೊಂಡು, ನಿಮ್ಮಸರ್ವಸ್ವವನ್ನು ನಾಶಮಾಡಿಕೊಳ್ಳಬೇಡಿ. ಈ ಮುಂತಾದ ರೀತಿಯಿಂದ, ರಾಣೀಸಾಹೇಬಳು ರಾವ್ ಸಾಹೇಬ್ ಪೇಷ್ವೆಗೆ, ಚೆನ್ನಾಗಿ ಕಿವಿದುಂಬಿದಳು. ಆದರೆ ಅವನಕಣ್ಣುಗಳು ಹ್ಯಾಗೆತೆರೆದಾವು? ದುರ್ದೈವದಿಂದ, ಯಾವನು ಸಂಪೂರ್ಣನಾಗಿರುತ್ತಾನೋ, ಅವನಬುದ್ಧಿಯಲ್ಲಿ ವಿಪರ್ಯಾಸಹುಟ್ಟಿ, ಅವನ ವಿಚಾರಶಕ್ತಿಯಲ್ಲಾ ನಷ್ಟವಾಗುವದರಲ್ಲಿ ಆಶ್ಚರ್ಯವೇನು? ಇದುಹಾಗಿರಲಿ. ರಾಣೀಸಾಹೇಬಳು ರಾವ್‌ಸಾಹೇಬ ಪೇಷ್ವೆಗೆ, ಪುಷ್ಕಳವಾಗಿ ಉಪದೇಶಮಾಡಿದಳು. ಪರಂತು, ಅದು ತಲೆಕೆಳಗಾಗಿಟ್ಟ ಕೊಡದಮೇಲಿನ ನೀರಿನಹಾಗೆ ಆಗಿ, ಏನೂ ಪ್ರಯೋಜನವಾಗಲಿಲ್ಲ. ಶ್ರಿಮಂತರಾವ್ ಸಾಹೇಬ್ ಪೇಷ್ವೆಯು,

ಶ್ಲೋ॥ ಪ್ರತ್ಯುಪಸ್ಥಿತ ಕಾಲಸ್ಯ ಸುಖಸ್ಯಪರಿವರ್ಜನಂ ।
ಅನಾಗತಃ ಸುಖಾಶಾಚನೈವಬುದ್ಧಿ ಮತಾಂನಯಃ ॥

ಈ ನಿಯಮಪ್ರಕಾರ ಶೆರಗಿನಲ್ಲಿಬಿದ್ದ ಸುಖದ ಉಪಭೋಗವನ್ನು ತೆಗೆದುಕೊಳ್ಳುವ

ದಕ್ಕಾಗಿ, ಹಿಂದುಸ್ತಾನದ ಸಾರ್ವಭೌಮ ಪ್ರಭುವಾದನು; ಮತ್ತು ಶಿರಾಳಶೆಟ್ಟಿಯಂತೆ ಅಲ್ಪಕಾಲದ ರಾಜ್ಯ ಕಾರಭಾರವನ್ನ ಪ್ರಾರಂಭಮಾಡಿ ರಾವ್‌ಬಾಜಿಯು ದಾತೃತ್ವಗುಣದ ಮೇಲೆವಿನೋದದಿಂದ ಕಾಲಕ್ರಮಣ ಮಾಡುತ್ತಾ, ಗ್ವಾಲಿಯರ್‌ನಲ್ಲಿ, ಬ್ರಾಹ್ಮಣ ಭೋಜನದ ಸಮಾರಂಭವನ್ನು ಪ್ರಾರಂಭಮಾಡಿದನು. ಅವನ ಸೇನಾಪತಿಯಾದ ತಾತ್ಯಾಟೋಪಿಯು, ವಿಜಯಾನಂದದಲ್ಲಿ ತೃಪ್ತನಾಗಿ, ಈಗತನ್ನ ಬಲಾಢ್ಯವಾದ ಸೇನೆಯಮೇಲೆ ಪ್ರಯಾಣಮಾಡಿ ಬರುವವರು ಯಾರಿದ್ದಾರೆ ! ಇಂಥಾ ಗರ್ವದಿಂದ ಸ್ವಸ್ಥವಾಗಿದ್ದನು. ಅವನ ಸೈನ್ಯದ ಪಟಾಲಂನ ಜನಗಳು, ಅವತ್ತಿನವರೆಗೂ ಅಪಯಶಸ್ಸಿನ ಭಾರವನ್ನ ತಲೆಯಮೇಲೆ ಹೊತ್ತುಕೊಂಡು, ಓಡುತ್ತ ಓಡುತ್ತ ಶ್ರಮಪಟ್ಟವರು, ಗ್ವಾಲಿಯರ್‌ನಲ್ಲಿ ನಾಲ್ಕು ದಿವಸ ಸೌಖ್ಯವಾಗಿ ವಿಶ್ರಾಂತಿ ತೆಗೆದುಕೊಳ್ಳಲು ಪ್ರಾರಂಭಿಸಿದರು. ಸಿಂಧ್ಯಾ ಸರ್ಕಾರಕ್ಕೆ ತಿರುಗಿಬಿದ್ದದ್ದ ಜನಗಳು ಅಲ್ಲಲ್ಲಿ ಸಂತೋಷದ ಅವಲಿನಿಂದ ಇದ್ದು ಬಿಟ್ಟವರು. ಆದರೆ, ಅನಾಯಕತ್ವದ ಬಾದಶಾಹಿವರಾತ್ರ ಚೆನ್ನಾಗಿನಡೆಯುವಕ್ಕೆ ಪ್ರಾರಂಭವಾಯಿತು.

ಇದುಹಾಗಿರಲಿ. ಪ್ರಕೃತಃ ಇಂಗ್ರೇಜಿ ಯವರ ಪಕ್ಷದಲ್ಲಿ, ಏನುಸಂಗ್ತಿ ನಡೆಯಿತು ಎಂಬುವದನ್ನ ನೋಡೋಣ. ಕಾಲ್ಪಿಯುದ್ಧವು ಪೂರೈಸಿದ ನಂತರ ಸರ್‌ಹ್ಯೂರೋಜ್ ಸಾಹೇಬನು, ನಾಲ್ಕು ದಿಕ್ಕುಗಳಿಗೂ ಓಡಿಹೋದ, ದಂಗೇಖೋರರನ್ನ ದಂಡಿಸುವ ಗೋಸ್ಕರ, ಕರ್ನಲ್‌ರೀಡೇಲ್, ರಾಬರ್ಟ್‌ಸರ್, ಮುತಾದ ಸೇನಾಧಿಕಾರಿಗಳ ಸಂಗಡ ಫೌಜಿನ ಸಣ್ಣ ಸಣ್ಣ ತುಕಡಿಗಳನ್ನು ಕೊಟ್ಟು, ಪ್ರತ್ಯಪ್ರತ್ಯೇಕ ದಿಶೆಗೆ ಅವರನ್ನು ಕಳುಹಿಸಿ ಕೊಟ್ಟನು; ಮತ್ತು ನಾಲ್ಕು ಕಡೆಗಳಲ್ಲಿಯೂ ಸರಿಯಾದ ಭದ್ರತೆ ಆಯಿತು ಎಂಬುವದನ್ನು ನೋಡಿ, ತಾನುಸ್ವತಃ ತಪ್ಪದೆ, ಯುದ್ಧಪರಾಕ್ರಮದಿಂದ ಉಂಟಾದ ತನ್ನ ದೇಹದ ಆಯಾಸಕ್ಕೆ ವಿಶ್ರಾಂತಿಯನ್ನು ಕೊಡುವದಕ್ಕಾಗಿ, ಕೆಲವುದಿವಸದವರೆಗೆ ರಜಾತೆಗದುಕೊಂಡನು. ಹಿಂದುಸ್ಥಾನದ ಸರ್ಕಾರದವರು ಆತನ ರಜಾ ಮಂಜೂರುಮಾಡಿ, ಆತನ ಸ್ಥಾನಕ್ಕೆ ಬ್ರಿಗೇಡಿಯರ್ ನೇಪಿಯರ್ ಸಾಹೇಬನನ್ನ ನೇಮಿಸಿದರು. ಸರ್‌ಹ್ಯೂರೋಜ್ ಸಾಹೇಬನನು ತನ್ನ ಸೇನಾಧಿಪತಿತ್ವದ ಉದ್ಯೋಗವನ್ನು ನೇಪಿಯರ್‌ಸಾಹೇಬನಿಗೆ ಕೊಟ್ಟು ಹೊರಟು ಹೋಗುವಷ್ಟರಲ್ಲಿಯೇ, ಜೂನ್ 1ನೇ ತಾರೀಖಿನ ದಿವಸ, ಕರ್ನಲ್ ರಾಬರ್ಟ್‌ಸರ್ ಕಡೆಯಿಂದ ಇರಾವಣದಿಂದ ದಂಗೇಖೋರ ಜನಗಳು ಗ್ವಾಲಿಯರ್‌ಕಡೆಗೆ ಹೋದರೆಂಬ ವರ್ತಮಾನವು ತಲ್ಪಿತು. ಅದನ್ನು ಕೇಳುತ್ತಲೆ, ಆತನ ಮನಸ್ಸಿನಲ್ಲಿ ಒಂದು ಚಮತ್ಕಾರವಾದ ಸ್ಥಿತಿಹುಟ್ಟಿ ತತ್‌ಕ್ಷಣವೇ, ಜನರಲ್ ಸ್ಟ್ಯೂವರ್ಟ್‌ಸಾಹೇಬನ ಕೈಕೆಳಗೆ ಕೆಂಪು ಮತ್ತು ಕಪ್ಪು ಪಾಯದಳದ ಪಟಾಲಂ ಕುದುರೇ ಸವಾರರೂ, ಮತ್ತು ತೋಫುಖಾನೆ, ಮುಂತಾದ ತುಂಬಾ ಸೈನ್ಯವನ್ನು ಕೊಟ್ಟು, ಕರ್ನಲ್ ರಾಬರ್ಟ್‌ಸರ್ ಸಾಹೇಬನ ಸಹಾಯಕ್ಕೆ ಕಳುಹಿಸಿದನು; ಮತ್ತು ಆ ಉಭಯ ಸೈನ್ಯವು ಏಕತ್ರಸೇರಿ ದಂಗೇಖೋರರನ್ನು ನಾಶಪಡಿಸಬೇಕೆಂತ ನಿಶ್ಚಯಿಸಿದ್ದನು. ಮೇಜರ್ ಸ್ಟ್ಯೂವರ್ಟ್ ಸಾಹೇಬನ, ಕೈಕೆಳಗಿನ ಸೈನ್ಯವು ಗ್ವಾಲಿಯರ್ ಕಡೆಗೆ ಹೋಯಿತು. ಅಂದರೆ ಕೂಡಲೆ ದಂಗೇಖೋರರು ಚದುರಿಹೋದಾರೆಂತ, ಸರ್ ಹ್ಯೂರೋಜ್ ಸಾಹೇಬನ ಅಭಿಪ್ರಾಯವಾಗಿತ್ತು. ಪರಂತು,

ಆಸೈನ್ಯವು ಗ್ವಾಲಿಯರ್ರಿಗೆ ಹೋಗಿ ಮುಟ್ಟುವದಕ್ಕಿಂತ ಮುಂಚೆಯೇ, ಒಂದು ಅಘಟಿತ ಚಮತ್ಕಾರವು ಬಂದುವದಗಿ, ಶಿಂಧ್ಯನು ಆಗ್ರಾಕ್ಕೆ ಓಡಿಹೋದನು; ಮತ್ತು ಗ್ವಾಲಿಯರ್ ರಾಜಧಾನಿಯನ್ನು ದಂಗೇಖೋರರು ಸ್ವಾಧೀನಪಡಿಸಿಕೊಂಡರೆಂಬ ವ್ಯಸನಕರವಾದ ವರ್ತಮಾನವು, ಜೂನ್ ತಾರೀಖು 4ನೇ ದಿವಸ ಸರ್ಹ್ಯೂರೋಜ್ ಸಾಹೇಬನಿಗೆ ತಿಳಿಯಿತು. ಅದನ್ನು ಕೇಳುತ್ತಲೇ, ಅವನ ಮನಸ್ಸಿನಲ್ಲಿ ಎಲ್ಲವೂ ಶಾಂತವಾಗಿದೆಯೆಂತ ಇದ್ದ ಮನೋರಥವು ಲಯವಾಗಿಹೋಗಿ, ಅದರಲ್ಲಿ ಅನೇಕ ತಿಳಿಯಲಸಾಧ್ಯವಾದ ಚಿಂತೆ ಮತ್ತು ಭೀತಿ ವುಂಟುಮಾಡತಕ್ಕ ಆಲೋಚನೆಗಳು ಬಂದು ಸೇರಿಕೊಂಡವು. ಇವತ್ತಿನವರೆಗೂ, ಹಗಲು, ರಾತ್ರೆ, ಜೀವವನ್ನ ನೀರುಮಾಡಿ, ದಂಗೇಖೋರರ ಪುಂಡನ್ನು ನಿಲ್ಲಿಸುವದಕ್ಕೋಸ್ಕರ ಮಾಡಿದ ಭಗೀರಥ ಪ್ರಯತ್ನವು ಕಾಲ್ಪಿಯಲ್ಲಿ ತನಗೆ ಆದ ಜಯದಿಂದ ಸ್ಥಿರವಾದ ಫಲವಾಯಿತುಯಂತ, ಸರ್ ಹ್ಯೂರೋಜ್ ಸಾಹೇಬನ ಅಭಿಪ್ರಾಯವಾಗಿದ್ದು, ಬಹಳ ಸಂತೋಷದಿಂದ ತನ್ನಪ್ರಕಾಶವಾದ ಯಶಸ್ಸಿನ ವಿಷಯದಲ್ಲಿ, ಅಭಿಮಾನವಿಟ್ಟುಕೊಂಡು, ಮುಂಬಾಯಿಗೆ ಹೋಗತಕ್ಕವನಾಗಿದ್ದನು; ಪುನಃ ಅವನಮುಂದೆ ಕಠಿಣವಾದ ಪ್ರಸಂಗವು ಬಂದು ವದಗಿತು. ತಥಾಪಿ, ಆತನ ಧೈರ್ಯವು ಅಚಲವಾಗಿದ್ದಕಾರಣ, ಸ್ವಲ್ಪವೂ ಗಡಬಿಡಿಮಾಡದೆ, ಪುನಃ ದಂಗೇಖೋರರ ಸಂಗಡ ಯುದ್ಧಮಾಡಿ, ಅವರನ್ನ ಸಂಪೂರ್ಣವಾಗಿ, ಪಾತಾಳಕ್ಕೆ ಸೇರಿಸುವದಕ್ಕೆ ವಂಟುಕಾಲಿನಮೇಲೆ ನಿಂತುಕೊಂಡು ಶಿದ್ಧನಾದನು. ಆವೇಳೆಯಲ್ಲಿ, ಸರ್ಹ್ಯೂರೋಜ್ ಸಾಹೇಬನಂಥ, ರಣಗಂಭೀರ ಪುರುಷನು, ದಂಗೇಖೋರರ ಆಟವನ್ನು ಕಟ್ಟಿಸುವದಕ್ಕೆ ತತ್ಪರನಾಗದಿದ್ದರೆ, ಗ್ವಾಲಿಯರ್‌ನಲ್ಲಿ ಶ್ರೀಮಂತರಾವ್ ಸಾಹೇಬ್ ಪೇಷ್ವೆಯು ಪುನಹ ಜೀವಬರಿಸಿದ ಪೇಷ್ವೆಯ ವೃಕ್ಷವು ಬಲವಾಗಿಬೆಳೆದು, ಅದರ ಬೇರು, ಕೊಂಬೆಗಳು, ಸಹ ದಕ್ಷಿಣದ ಪರ್ಯಂತರವ್ಯಾಪಿಸಿ ಕೊಳ್ಳುತ್ತಿತ್ತೆಂಬುವುದಕ್ಕೇನೂ ಸಂದೇಹವಿಲ್ಲ. *

---

* ಈಕಾಲವು ಪರ್ಜನ್ಯಕಾಲವಾಗಿದ್ದಕಾರಣ, ದಂಗೇಖೋರರನ್ನು ನಿರ್ಮೂಲಪಡಿಸುವದಕ್ಕೆ, ಇಂಗ್ರೇಜಿ ಸೈನ್ಯಕ್ಕೆ ಅನಂತ ಅಡಚಣೆಯಿತ್ತು. ಅದನ್ನು ಮನಸ್ಸಿನಲ್ಲಿ ತರದೆ, ಶೀಘ್ರವಾಗಿ ಅಲ್ಲಿಗೆ ಪ್ರಯಾಣ ಮಾಡಬೇಕಾದದ್ದು, ಅವರಿಗೆ ಬಹಳ ಅಗತ್ಯವಾದ ಕೆಲಸವಾಗಿತ್ತು. ಅವರಿಗೆ ಸ್ವಲ್ಪವಿಳಂಬವಾಗಿದ್ದರೆ, ತಾತ್ಯಾಟೋಪಿಯಂಥ ಪಾತಾಳಕ್ಕೆ ಯಂತ್ರವನ್ನು ಹಾಕತಕ್ಕ ಪುರುಷನು ತನ್ನ ಅತರ್ಕಿಕ ಮತ್ತು ಅಲೌಕಿಕ ಬುದ್ಧಿ ಬಲದಿಂದ ಏನುಮಾಡಿಬಿಡುತ್ತಿದ್ದನೋ, ಎಂಬುವದರ ನಿಯಮ ಏರಲಿಲ್ಲವೆಂತ, ಮ್ಯಾಲಿಸನ್ ಸಾಹೇಬನಂಥಾ, ಇಂಗ್ರೇಜಿ ಇತಿಹಾಸಕಾರಕನು ಸ್ಪಷ್ಟವಾಗಿ ಒಪ್ಪಿಕೊಂಡಿದ್ದಾನೆ. ನಮ್ಮಕೃಪಾಳು ಸರ್ಕಾರದ ಮಹಿಮೆಯು ದೊಡ್ಡದಾಗಿದ್ದಕಾರಣ, ಅಂಥಾ ಕಠಿಣವಾದ ಪ್ರಸಂಗದಲ್ಲಿ, ಸರ್ಹ್ಯೂರೋಜ್ ಸಾಹೇಬನಂಥಾ ಯುದ್ಧಶಾಲಿಯು, ಅವರಿಗೆ ಉಪಯೋಗವಾದನು. ಮ್ಯಾಲಿಸನ್ ಸಾಹೇಬನು, ಆ ಕಷ್ಟಸಮಯದ ವರ್ಣನೆಯನ್ನ ಮಾಡುವಾಗ ಖಂಡಿತವಾಗಿ ಹೇಳಿರುವದೇನಂದರೆ:—

ಇದಂತುಹಾಗಿರಲಿ. ಸರ್‌ಹ್ಯೂರೋಜ್ ಸಾಹೇಬನು ತತ್‌ಕ್ಷಣವೇ ಗೌರ್ನರ್‌ಜನರಲ್ ಲಾರ್ಡ್ ಕ್ಯಾನಿಂಗ್ ಸಾಹೇಬನಿಗೆ, ತಂತಿವರ್ತಮಾನದ ಮೂಲಕ ತಿಳಿಸಿದ್ದೇನಂದರೆ:, 'ನಾನು ಗ್ವಾಲಿಯರ್‌ಮೇಲೆ ದಂಡೆತ್ತಿ ಹೋಗಿ, ಅಲ್ಲಿನ ಪಟ್ಟಣ ಮತ್ತು ಕೋಟೆಯನ್ನು ತೆಗೆದುಕೊಳ್ಳುವದಕ್ಕೆ ಸಿದ್ಧನಾಗಿದ್ಧೇನೆ. ಲಾರ್ಡ್‌ಕ್ಯಾನಿಂಗ್ ಸಾಹೇಬನು, ಆತನ ಆವೇಶವುಳ್ಳ ಆಸಕ್ತಿಯನ್ನನೋಡಿ, ಬಹಳ ಆನಂದದಿಂದ ಆತನ ವಿನಂತಿಯನ್ನು ಮನ್ನಿಸಿದನು., ಮತ್ತು ಗ್ವಾಲಿಯರ್ ಮೇಲಿನ ಯುದ್ಧಕ್ಕೆ, ಸೇನಾಧಿಪತಿತ್ವವನ್ನ ಆತನ ಕಡೆಗೆ ವಹಿಸಿದನು; ಸರ್ ಹ್ಯೂರೋಜ್ ಸಾಹೇಬನು, ಪುನಹ ತನ್ನಕರ್ತವ್ಯವನ್ನ ಸ್ವೀಕಾರ ಮಾಡುತ್ತಲೆ, ಆತನ ಸ್ಥಾನಕ್ಕೆ ಬರತಕ್ಕವನಾಗಿದ್ದ, ಬ್ರಿಗೇಡಿಯರ್ ಜನರಲ್ ನೇಪಿಯರ್ ಸಾಹೇಬನು ಬಹಳ ಹರ್ಷದಿಂದ, ಸರ್ ಹ್ಯೂರೋಜ್ ಸಾಹೇಬನ, 2 ನೆ ಸ್ಥಾನಾಧಿಪತ್ಯವನ್ನು ಸ್ವೀಕಾರಮಾಡಿ, ಆತನಿಗೆ, ಅತ್ಯುತ್ತಮವಾದ ಸಹಾಯಮಾಡುವದಕ್ಕೆ ಒಪ್ಪಿಕೊಂಡನು. ಇದರಮೇಲಿನಿಂದ, ಇಂಗ್ರೇಜಿ ಜನಗಳು ರಾಷ್ಟ್ರೀಯ ಕರ್ತವ್ಯವನ್ನು ಮಾಡುವದರಲ್ಲಿ, ಎಷ್ಟು ಅನ್ಯೋನ್ಯವಾಗಿ ನಡುಕೊಳ್ಳುತ್ತಾರೆ ಎಂಬುವದು ಚೆನ್ನಾಗಿ ವ್ಯಕ್ತವಾಗುತ್ತದೆ.

---

"No one could foresee the extent of evil possible if Gwalior were not promptly wrested from rebel hands. Grant them delay, and Tantia Topi, with the immense acquisition of political and military strength secured by the possession of Gwalior, and with all its resources in men, money, and material at his disposal, would be able to form a new army on the fragments of that beaten at Kalpi, and to provoke a Mahratta rising throughout India. It might be possible for him, using the dexterity of which he was a master, to unfurl the Peishwa's banner in Southern Mahratta countries. Those districts were denuded of troops, and a striking success in Central India would probably decide their inhabitants to pronounce in favour of the cause for which their fathers had fought and bled."

*Malleson's History of the Indian*
*Muting Vol. V. P.* 150,

ಸರ್ ಹ್ಯೂರೋಜ್ ಮತ್ತು ಬ್ರಿಗೇಡಿಯರ್ ಜನರಲ್ ನೇಪಿಯರ್, ಈ ಇಬ್ಬರು ವೀರ ಶಿರೋಮಣಿಗಳು, ಗ್ವಾಲಿಯರ್‌ನ ಯುದ್ಧಕ್ಕೆ ಸಿದ್ಧರಾದರು. ಅವರು ತಾರೀಖು 5ನೇ ದಿವಸ, ತಮ್ಮ ಕೈಕೆಳಗಿನ, ಬೇರೆಬೇರೆ ಅಧಿಕಾರಿಗಳಿಗೆ ಸೈನ್ಯವನ್ನು ಪ್ರತ್ಯೇಕವಾಗಿ ವಿಭಾಗ ಮಾಡಿಕೊಟ್ಟು, ಅವರು ಯಾವಮಾರ್ಗವಾಗಿ ಗ್ವಾಲಿಯರಿಗೆ ಪ್ರಯಾಣಮಾಡಿ ಹೋಗಬೇಕೆಂಬುವದನ್ನು ಗೊತ್ತು ಮಾಡಿದರು. ಮೇಜರ್ ಆರ್‌ಸಾಹೇಬನ ಕೈಕೆಳಗೆ, ಹೈದರಾಬಾದ್ ಕಂಟಿಂಜೆಂಟಿನ ರಣಶೂರಸೈನ್ಯವನ್ನು ಕೊಟ್ಟು, ಆತನಿಗೆ ದಂಗೇಖೋರರ ದಕ್ಷಿಣಕಡೆಯ ಗುಂಪನ್ನ ಮುರಿಯುವದಕ್ಕಾಗಿ, ಗ್ವಾಲಿಯರ್ ಮತ್ತು ಶಿಪ್ರಿಮಧ್ಯದ ದಾರಿಯಮೇಲೆ, ಪನ್ನಾರ್ ದಿಕ್ಕಿಗೆ ಕಳುಹಿಸಿದರು. ಬ್ರಿಗೇಡಿಯರ್ ಸ್ಮಿತ‘ಸಾಹೇಬನ ಕೈಕೆಳಗೆ ರಾಜಪುತಾನದ ಫಿಡಲ್‌ಫೋರ್ಸಿನ, ಹೊಸದಾದ ಧೀರಸೈನ್ಯವನ್ನು ಕೊಟ್ಟು, ಅವನನ್ನ ಗ್ವಾಲಿಯರ್ರಿನ ಪೂರ್ವಕ್ಕೆ 5 ಮೈಲಿಗಳಲ್ಲಿರುವ ಕೋಟಾಕಿ ಸರಾಯಿ, ಎಂಬಊರಿನಕಡೆಗೆ ಕಳುಹಿಸಿದರು. ಕರ್ನಲ್ ರಿಡೆಲ್ ಸಾಹೇಬನ ಸಂಗಡ, ಭರಭಕಂ ತೋಫ್ಖಾನೆಯನ್ನ ಕೊಟ್ಟು ಆತನನ್ನು ಆಗ್ರಾ ಗ್ವಾಲಿಯರ್ ದಾರಿಯಮೇಲೆ ನೇಮಿಸಿದರು ; ತಾನೂ ಮತ್ತು ಬ್ರಿಗೇಡಿಯರ್ ಜನರಲ್ ನೇಪಿಯರ್ ಸಹ ಖಾಸಾ ಸೈನ್ಯವನ್ನ ತೆಗೆದುಕೊಂಡು ಬೇರೆ ಬೇರೆ ದಿಶೆಯಿಂದ ಮುರಾರದ ಸ್ಥಳದಮೇಲೆ ಪ್ರಯಾಣಮಾಡಿ ಹೋಗುವದನ್ನ ನಿಶ್ಚಯಿಸಿದರು. ಈ ಪ್ರಕಾರವಾಗಿ ಸೈನ್ಯದ ಉತ್ತಮವಾದ ವ್ಯವಸ್ಥೆಯನ್ನು ಮಾಡಿದ ನಂತರ, ತಾರೀಖು 6 ನೇ ದಿವಸ ಸರ್ ಹ್ಯೂರೋಜ್ ಸಾಹೇಬನು ತನ್ನ ಸೈನ್ಯದೊಡನೆ ಕಾಲ್ಪಿಯಿಂದ ಪ್ರಯಾಣ ಮಾಡಿದನು. ಆ ವೇಳೆಯಲ್ಲಿ ಆತನ ಸಂಗಡ ಮಧ್ಯ ಹಿಂದುಸ್ತಾನದ ಪೊಲಿಟಿಕಲ್ ಏಜಂಟ್ ಸರ್ ರಾಬರ್ಟ್ ಹ್ಯಾಮಿಲ್ಟನ್ ಮತ್ತು ಗ್ವಾಲಿಯರ್ ರೆಸಿಡೆಂಟ್ ಮೇಜರ್ ಮ್ಯಾಕ್‌ಫರ್‌ಸನ್, * ಈ ಉಭಯತರು ಇದ್ದಕಾರಣ, ಅವನಿಗೆ ಗ್ವಾಲಿ

---

* ಮೇಜರ್ ಮ್ಯಾಕ್‌ಫರ್‌ಸನ್ ಸಾಹೇಬನು ಗ್ವಾಲಿಯರ್‌ನಿಂದ ಆಗ್ರಾಕ್ಕೆ ಹೋಗಿದ್ದನು. ತದನಂತರ ಅಲ್ಲಿಂದ ಅವನು ಕರ್ನಲ್ ರಿಡೇಲ್ ಸಾಹೇಬನ ಸೈನ್ಯದ ಸಂಗಡ ಹೋಗಿ ಕಾಲ್ಪಿಯಲ್ಲಿ ಸರ್ ಹ್ಯೂರೋಜ್ ಮತ್ತು ಸರ್ ರಾಬರ್ಟ್ ಹ್ಯಾಮಿಲ್ಟನ್ ಸಾಹೇಬರುಗಳ ಹತ್ತರ ಬಂದು ಸೇರಿದ್ದನೆಂತ ಕಾಣುತ್ತದೆ. ಮೇಜರ್ ಮ್ಯಾಕ್ಫರ್ಸನ್ ಕಾಲ್ಪಿಗೆ ಬಂದು, ಅನಂತರ ಸರ್ವರ ಅನುಮತಿಯಿಂದ ಗ್ವಾಲಿಯರ್ ಮೇಲೆ ದಂಡೆತ್ತಿ ಹೋಗುವದನ್ನ ನಿಶ್ಚಯಿಸಿದನು, ಎಂಬುವದು ತೋರಿಬರುತ್ತದೆ. ಇಂಗ್ರೇಜಿ ಇತಿಹಾಸಕಾರಕನು ಈ ಮಾತನ್ನ ಸ್ಪಷ್ಟಪಡಿಸುವದಿಲ್ಲ. ತಥಾಪಿ, ಮೇಜರ್ ಮ್ಯಾಕ್ಫರ್ಸನ್ ಸಾಹೇಬನು ಮೊದಲಿನಿಂದಲೂ ಕಾಲ್ಪಿಗೆ ಬಂದು, ಗುಪ್ತರೀತಿಯಲ್ಲಿ ಗ್ವಾಲಿಯರ್ ಮೇಲೆ ಬೀಳುವ ಯುಕ್ತಿಯನ್ನು ಹುಡುಕುತ್ತಲೇ ಇದ್ದನೆಂತ, ಆತನ ‘ಮೆಮೋರಿಯಲ್ಸ್’ ನಲ್ಲಿ ಸ್ಪಷ್ಟವಾಗಿ ಬರೆದಿರುತ್ತಾನೆ :—

“ Towards the end of April, he had been summoned from Agra to meet Sir Robert Hamilton in Sir

ಯರಿನ ಅಂತರಂಗ ಸ್ಥಿತಿ ಮತ್ತು ಅಲ್ಲಿನ ಯುದ್ಧಮಾಡತಕ್ಕ ಸ್ಥಳಗಳು ಇವುಗಳನ್ನು ಸರಿಯಾಗಿ, ತಿಳುಕೊಳ್ಳುವದಕ್ಕೂ ಮತ್ತು ಆಗಾಗ್ಗೆ ಬೇಕಾಗುವ ಸಂಗತಿಗಳನ್ನು ಆಲೋಚನೆ ತೆಗೆದುಕೊಳ್ಳುವದಕ್ಕೂ, ಬಹಳ ಅನುಕೂಲವೂ ಸಿಕ್ಕಿತು. ಇಂಗ್ರೇಜಿ ಸೈನ್ಯದವರು ಬಹಳ ತ್ವರಿತದಿಂದ ಪ್ರಯಾಣ ಮಾಡಲು ಪ್ರಾರಂಭಿಸಿದರು. ತಾರೀಖು 11 ನೇ ದಿವಸ, ಅವರು ಮತ್ತು ಬ್ರಿಗೇಡಿಯರ್ ಸ್ಟ್ಯುವರ್ಟ್ ಸಾಹೇಬನ 1 ನೇ ಬ್ರಿಗೇಡ್ ಸೈನ್ಯದ ಜನಗಳು ಸಹ ಇಂದೂರೆಂಬ ಊರಿನಲ್ಲಿ ಸೇರಿದರು. ಅಲ್ಲಿಂದ ಸರ್ವ ಸೈನ್ಯವು ಫವುಜು, ನದಿಯನ್ನು ದಾಟಿ; ಗುಡ್ಡಪ್ರದೇಶದಿಂದ ಬಹಳ ಸಹಸ ಮತ್ತು ಪ್ರಯಾಸದಿಂದ ದಾರಿ ನಡೆದರು. ಮಾರ್ಗವೆಲ್ಲಾ, ಇಕ್ಕಟ್ಟು ಮತ್ತು ಕಷ್ಟವಾಗಿದ್ದ ಕಾರಣ ಅವರಿಗೆ ಆಗಾಗ್ಯೆ ಬಹಳ ದುರ್ದೆಶೆಯಾಗುತ್ತಿತ್ತು. ಪರಂತು, ಅವರು ಅಂಥಾ ವಿಪತ್ತಿನಲ್ಲಿಯೂ ಕೂಡ, ತಮ್ಮ ಉತ್ಸಾಹವನ್ನು ಬಿಡದೆ, ಸೇನಾಪತಿಯ ಆಜ್ಞಾಪ್ರಕಾರ ವಾಗಿ, ಊರಿನಿಂದೂರಿಗೆ, ಪ್ರಯಾಣಮಾಡುತ್ತಾ ಹೋದರು. * ಇಂಗ್ರೇಜಿ ಸೈನ್ಯದ ಶಕ್ತಿಯು ಮತ್ತು ಉಲ್ಲಾಸ ಸ್ವಭಾವವನ್ನು ನೋಡಿ, ಸರ್ ಹ್ಯೂರೋಜ್ ಸಾಹೇಬನ ಶರೀರದಲ್ಲಿನ ವಿಜಯಶ್ರೀಗೆ ತಾನು ಅಡ್ಡಗಟ್ಟಿ ವಶಮಾಡಿಕೊಂಡೇನೆಂಬಷ್ಟು ಆವೇಶ ವೇರಿತು.

---

Hugh Rose's camp and to take a force to Gwalior after Calpee should have fallen. He made his way accordingly with Colonel Riddell's troops, and arrived at Calpee in time to see that place which might have made a serious defence evacuated by the rebels. Sir Hugh Rose, on hearing what the Agent had to say regarding the state of affairs in Gwalior, perceived the necessity of sending troops thither, for although the Maharajah had been able to hold his ground thus far, it was plain that without the assistance, he solicited he could not regain his authority over his subjects and his soldiery hostile to us, though still held in check by him,"

*Memorials P.* 331—32.

* ಆ ಸಮಯದಲ್ಲಿ ಇಂಗ್ರೇಜಿ ಸೈನ್ಯದ ಸ್ಥಿತಿಯನ್ನು ಕುರಿತು, ಡಾ. ಸಿಂಕ್ಲೇಸ್ಟರ್ ಸಾಹೇಬನು ವರ್ಣನೆ ಮಾಡಿರುತ್ತಾನೆ. ಅದು ಈ ರೀತಿಯಾಗಿದೆ :—

ತಾರೀಖು 16ನೇ ಜೂನ್ ದಿವಸ, ಇಂಗ್ರೇಜಿ ಸೈನ್ಯವು, ಸಿಂಧ್ಯಾನಿಗೆ ಅಪಜಯವು ಯಾವಸ್ಥಳದಲ್ಲಿ ಆಗಿತ್ತೋ, ಆ ಬಹದರ್‌ಪುರವೆಂಬ ಊರಿನ ಸಮೀಪಕ್ಕೆ ಬಂದು, ಮುಟ್ಟಿತು, ಅವರಿಗೆ ಗ್ವಾಲಿಯರಿನ, ಗುಡ್ಡದಮೇಲೆ ಇರತಕ್ಕ ಪ್ರಾಚೀನಕೋಟೆಯ ಭೀಮರೂಪವು ಕಾಣಿಸಿತು. ಅಲ್ಲಿಂದಅವರಿಗೆ, ವಿವಿಧವಾದ ಗಿಡಗಳಿಂದ ತುಂಬಿದ್ದ ಮುರಾರು ಛಾವಣಿಯು, ಎತ್ತರ ಮತ್ತು ತಗ್ಗಿನಪ್ರದೇಶವು ದೃಷ್ಟಿಗೆಬಿದ್ದು ಅವುಗಳನ್ನೆಲ್ಲಾ ದಂಗೇಖೋರ ಜನಗಳು ಕೈವಶ ಮಾಡಿಕೊಂಡಿದ್ದಾರೆಂತ ತೋರಿಬಂತು. ಅನಂತರ ಸರ್‌ಹ್ಯೂರೋಜ್ ಸಾಹೇಬನು, ದಂಗೇಖೋರರ ಆಶ್ರಯಸ್ಥಾನವನ್ನು ಸೂಕ್ಷ್ಮ ದೃಷ್ಟಿಯಿಂದ ನಿರೀಕ್ಷಣೆಮಾಡಿದನು. ಅವನಿಗೆ, ಮುರಾರಿನ ಛಾವಣಿಯ ಮಧ್ಯದಲ್ಲಿ ದಂಗೇಖೋರರು ಮುಂಭಾಗಕ್ಕೆ ಕುದುರೆಸವಾರರ ಇರಸಾಲೆ, ಅದರ ಬಲಭಾಗಕ್ಕೆ ತೋಪ್ಖಾನೆ, ಎಡಪಾರ್ಶ್ವಕ್ಕೆ ಪಾಯದಳ ಸೈನ್ಯ ಮುಂತಾದ್ದನ್ನು ಇಟ್ಟು, ಸಂಪೂರ್ಣವಾದ ಸಿದ್ಧತೆ

---

"The whole affair deserved, and narrowly escaped burning by order of Sir Hugh Rose. The misery of the drowsy pace at which we were compelled to follow our way, trammelled as we were with ordinance, and worn out draught animals, was almost the greatest trial, we were called on to endure and then to be obliged to halt about every hundred yards, and battle against sleep, was aggravating in the extreme. The Cavalry constantly slept in their saddles while marching, and by the constant lounging and dragging to one side galled their chargers' backs, as they dreamt.

............................"Of battle begun,
Of field-day and foray, and foeman undone;
Of provinces sacked, and warrior store,
Of hurry and havoc, and hampers of ore;
Of captive maidens for joys abundant,
And ransom vast when these grow redundant."

*The Campaign in Central India P.* 174—175.

ಮಾಡಿದ್ದಾರೆಂತ ತಿಳಿದುಬಂತು. ಆಗ ಅವನು ತನ್ನಸೈನ್ಯವನ್ನು ಬೇರೆಬೇರೆ ಭಾಗ ಮಾಡಿ, ಶಾಸ್ತ್ರಪ್ರಕಾರವಾಗಿ ತೋಫಿನ ಮೋರ್ಚೆಯನ್ನು ಕಟ್ಟಿದನು; ಮತ್ತು ವಿರುದ್ಧ ಪಕ್ಷದವರ ಕಡೆಯಿಂದ ಹೊಡೆಯತಕ್ಕ ಸ್ಥಳವನ್ನ ನೋಡಿ, ತದನುಸಾರವಾಗಿ, ಸೈನ್ಯವನ್ನು ನೇಮಿಸಿದನು. ಇಂಗ್ರೇಜಿ ಸೈನ್ಯದವರಿಗೆ, ಆಶ್ರಯಸ್ಥಾನವಿಲ್ಲದೇ ಇದ್ದ ಕಾರಣ, ಅವರ ಅವಸ್ಥೆಯು ಕೇವಲ ದೈನ್ಯವಾದ್ದಾಗಿತ್ತು; ಮತ್ತು ಅವರು ತಮ್ಮ ಶತ್ರುವಿನ ಸಂದಿಯಲ್ಲಿ ಶಿಕ್ಕಿಕೊಂಡಿದ್ದರು. ಇದನ್ನುನೋಡಿ ಸರ್ ಹ್ಯೂರೋಜ್ ಸಾಹೇಬನು ಬಹಳ ಯುಕ್ತಿಯಿಂದ, ಮುರಾರಿನ ಸೈನ್ಯದಮೇಲೆ ಬಲವಾಗಿ ಯುದ್ಧಮಾಡಿ, ಅದನ್ನ ಒಂದೇ ಉಸುರಿಗೆ ತೆಗದುಕೊಳ್ಳುವ ಪಕ್ಷಕ್ಕೆ, ಅಲ್ಲಿ ತಮ್ಮ ಸರ್ವೋತ್ಕೃಷ್ಟ ಸಂರಕ್ಷಣೆಯಾಗಿ ಸೈನ್ಯವು ನಿಂತುಕೊಳ್ಳುವದಕ್ಕೆ ಸುಖವಾದ ಸ್ಥಳವು ಶಿಕ್ಕುವದೆಂತ ಮನಸ್ಸಿನಲ್ಲಿ ತಂದುಕೊಂಡು, ತನಗೆ ನಂಬಿಕೆಯಾಗಿದ್ದ 86 ನೇ ರಣಶೂರ ಪಟಾಲಂನ್ನ ಮುಂದಕ್ಕೆ ತೆಗೆದು ಶತ್ರುಗಳೆದುರಿಗೆ, ಒಂದೇಸಲ ಪ್ರಯಾಣ ಮಾಡಿಸುವದಕ್ಕೆ ನಿಶ್ಚಯ ಮಾಡಿದನು.

ಮುರಾರದ ಛಾವಣಿ ಮಧ್ಯದಲ್ಲಿ ಇದ್ದ ಪಟಾಲಮ್ಮಿನ ಜನಗಳೆಲ್ಲಾ ಸಿಂಧ್ಯಾ ಸರ್ಕಾರದ ಪ್ರಸಿದ್ಧವಾದ ಸೈನ್ಯದ ಪೈಕಿದಾಗಿದ್ದು, ಅದರ ಮೇಲಿನ ಅಧಿಕಾರಿಯು ದಂಗೇಖೋರರಿಗೆ ವಶನಾಗಿದ್ದಕಾರಣ, ಅದು ಇಂಗ್ರೇಜಿಯವರಿಗೆ ವಿರುದ್ಧವಾಗಿತ್ತು. ಅದೇ ಪ್ರಕಾರವಾಗಿ ಸಿಂಧ್ಯಾ ಸರ್ಕಾರದ ಇತರ ಸೈನ್ಯವು, ತೋಫಖಾನೆ, ಮತ್ತು ಖಾಸ ಇರಸಾಲೆ ಸಹ, ದಂಗೇಖೋರರಿಗೆ ಅನುಕೂಲವಾಗಿದ್ದು, ತಮ್ಮ ತಮ್ಮ ಸ್ಥಳದಲ್ಲಿ, ಸ್ಥಿರವಾಗಿದ್ದರು. ಈ ಸರ್ವ ಸೈನ್ಯದ ಆಧಾರದ ಮೇಲೆ, ಶ್ರೀಮಂತರಾವ್ ಸಾಹೇಬ್ ಪೇಷ್ವೆ ಮತ್ತು ತಾತ್ಯಾಟೋಪಿ ಸಹ ನೂತನ ಹಿಂದೂ ಪದ ಪಾದಶಾಹಿಯ, ಕಟ್ಟಡವ ನ್ನೆಬ್ಬಿಸುವದಕ್ಕೆ ಪ್ರಯತ್ನ ಮಾಡಿದ್ದರು. ಪರಂತು, ಅವರ ಅವಿವೇಕವಾದ ಆಡಳತದಲ್ಲಿ, ದೂರದೃಷ್ಟಿ ಮತ್ತು ಶಕ್ತಿ, ಈ ಎರಡು ಗುಣಗಳು ಶುದ್ಧಾಂಗ ಅಭಾವವಾಗಿದ್ದ ಕಾರಣ, ಅವರು ಆ ಸೈನ್ಯದ ವ್ಯವಸ್ಥೆಯನ್ನು ತಮ್ಮ ಸ್ವಂತ ದೃಷ್ಟಿಯಲ್ಲಿ ತೆಗೆದುಕೊಳ್ಳದೆ, ಪೂರ್ವದ ಅಧಿಕಾರಿಗಳನ್ನೇ ಅದರಮೇಲೆ ಬಿಟ್ಟಿದ್ದರು. ಆದಕಾರಣ, ಆ ಸೈನ್ಯದ ವ್ಯವಸ್ಥೆಯನ್ನು ತಮ್ಮ ಸ್ವಂತ ದೃಷ್ಟಿಯಲ್ಲಿ ತೆಗದುಕೊಳ್ಳದೆ, ಪೂರ್ವದ ಅಧಿಕಾರಿಗಳನ್ನೇ ಅದರಮೇಲೆ ಬಿಟ್ಟಿದ್ದರು. ಆದಕಾರಣ ಆ ಸೈನ್ಯದ ಸರ್ವ ಸೂತ್ರವು ಅವರ ಕೈಯಲ್ಲಿಯೇ ಇದ್ದು, ಅವರು 'ಮಾಡಿದ್ದೇ ಮಾಟ, ಆಡಿದ್ದೇ ಆಟ' ವಾಗಿ ಹೋಗಿತ್ತು. ಅದೇ ಪ್ರಕಾರವಾಗಿ, ದಂಗೇಖೋರರ ಇತರ ಸೈನ್ಯವು, ಗ್ವಾಲಿಯರ್ ಕಂಟಿಂಜೆಂಟ್ ಸೈನ್ಯವು, ಅಯೋಧ್ಯಪ್ರಾಂತ್ಯದಿಂದ ಬಂದಿದ್ದ, ರೋಹಿಲೆ ಮತ್ತು ಪಠಾಣ ಜನಗಳು ಸಹ, ಸರ್ವ ಪಟ್ಟಣದ ಸುತ್ತಲೂ, ಸ್ಥಳ ಹಿಡಿದುಕೊಂಡಿದ್ದರು. ಆದರೆ ಅವರ ವ್ಯವಸ್ಥೆಯನ್ನು ಚಾತುರ್ಯದಿಂದ ಆದಿಯಿಂದಲೇ, ಮಾಡಿರಲಿಲ್ಲ. ಆದಕಾರಣ, ದಂಗೇಖೋರರ ಪಾರ್ಶ್ವಕ್ಕೆ, ಯುದ್ಧದ ಸಾಮಗ್ರಿ ಮತ್ತು ಸೈನ್ಯದ ಗುಂಪು, ತುಂಬಾ

ಯಿತ್ತು. ಆದರೆ ಅದನ್ನ ಸರಿಪಡಿಸತಕ್ಕ ಒಬ್ಬ ಪುರುಷನು ಇಲ್ಲದಿದ್ದರಿಂದ ಅದು ಇದ್ದರೂ, ಇಲ್ಲದೇ ಇದ್ದಂತೆಯೇ ಆಗಿಹೋಗಿತ್ತು.

ಇಂಗ್ರೇಜಿ ಸೈನ್ಯವು, ಮುರಾರಿನ ಛಾವಣಿಯಮೇಲೆ, ಪ್ರಯಾಣಮಾಡಿ, ಬಂದ ವರ್ತಮಾನವು, ಶ್ರೀಮಂತ ರಾವ್‌ಸಾಹೇಬ್ ಪೇಷ್ವೆಗೆ ಮೊದಲು ಗೊತ್ತಾಗಲಿಲ್ಲ. ಇಂಗ್ರೇಜಿ ಸೈನ್ಯದ ನಡವಳಿಕೆಯನ್ನು ಗುಪ್ತರೀತಿಯಿಂದ ವರ್ತಮಾನ ತೆಗೆದುಕೊಂಡು, ತನ್ನ ಸೈನ್ಯದ ಒಳ್ಳೇ ವ್ಯವಸ್ಥೆಯನ್ನ ಮಾಡುವದರ ಕಡೆಗೆ ಆತನ ವಿಶೇಷ ಲಕ್ಷ್ಯವಿಲ್ಲದೆ ಅವನು ಆ ಸಮಯದಲ್ಲಿ, ತನ್ನ ವಿಜಯ ಮಹೋತ್ಸವದ ಆನಂದದಲ್ಲಿ ಮುಳುಗಿಹೋಗಿದ್ದನು. ಅವನ ಪೂರ್ವಜರು, ಜರತಾರಿ ಸೊಂಟದ ಪಟ್ಟಿ ಹಾಕಿದ ಅಸಂಖ್ಯಾಕವಾದ ಮರಾಟೆಯ ವೀರರ ಸಮೇತ, ತಮ್ಮ ಶಸ್ತ್ರದ ಬಲದಮೇಲೇನೆ, ದಿಲ್ಲಿಯ ಅಟಕ್ ಅಚೆಯ ಪರ್ಯಂತರ ತೆಗೆದುಕೊಂಡುಹೋಗಿ, ಪ್ರಖ್ಯಾತಿ ಪಡೆದಿದ್ದರು. ಪರಂತು, ಈ ಸಮಯದಲ್ಲಿ ಶ್ರೀಮಂತನ ಹತ್ತರ ರಣಶೂರ ಸರದಾರರು ಯಾರೂ ಇಲ್ಲದಕಾರಣ, ಮತ್ತು ಆತನು ಬಹಳ ಪುಣ್ಯಶೀಲನಾಗಿಯೂ, ಪ್ರಾರಬ್ಧವಾದಿಯಾಗಿಯೂ ಇದ್ದಕಾರಣ, ಬ್ರಾಹ್ಮಣ ಭೋಜನದ ಪುಣ್ಯದಮೇಲೆ, ತನ್ನ ಹೊಸ ಜರತಾರಿ ನಿಶಾನೆಯನ್ನು ಸರ್ವ ಹಿಂದುಸ್ಥಾನದ ತುಂಬಾ, ಪ್ರಕಾಶವಾಗುವಹಾಗೆ ಮಾಡಬಹುದೆಂತ, ಮನಸ್ಸಿನಲ್ಲಿ ತಂದು, ಬ್ರಾಹ್ಮಣರಿಗೆ, ದಿವ್ಯ ಭೋಜನ ಮಾಡಿಸುವದರಲ್ಲಿ, ಕೇವಲ ತತ್ಪರನಾಗಿದ್ದನು. ಅವನಿಗೆ ಸರ್ ಹ್ಯೂರೋಜ್ ಸಾಹೇಬನ ಸೈನ್ಯವು, ಮುರಾರಿನ ಛಾವಣಿಯಮೇಲೆ, ಗುರಿಯಿಟ್ಟು ಬರುತ್ತಿದೆ ಯೆಂಬ ಸಮಾಚಾರವು ತಿಳಿಯುತ್ತಲೆ, ತಾತ್ಯಾಟೋಪಿಗೆ ಸೊಂಟ ಕಟ್ಟಿಕೊಂಡು, ಸೈನ್ಯದ ವ್ಯವಸ್ಥೆಯನ್ನ ಮಾಡುವದಕ್ಕಾಗಿ ಅಪ್ಪಣೆ ಮಾಡಿ ತನ್ನ ನಿತ್ಯ ಕ್ರಮದಲ್ಲಿ ಲೋಪವಾಗದಂತೆ, ಕೈಯ್ಯಲ್ಲಿ ತೆಗೆದುಕೊಂಡ ಪುಣ್ಯ ಕೆಲಸವನ್ನು ನಡಿಸಿಕೊಳ್ಳುತ್ತಾ ಬಂದನು.

ತಾತ್ಯಾಟೋಪಿಯು ಯುದ್ಧಶಾಸ್ತ್ರದಲ್ಲಿ, ಪೂರಾ ನಿಪುಣನಾಗಿದ್ದು ಕಠಿಣಪ್ರಸಂಗದಲ್ಲಿ, ಯಾರಿಗೂ ಆಸ್ಪದ ಕೊಡತಕ್ಕವನಾಗಿರಲಿಲ್ಲ. ಆದಾಗ್ಯೂ, ಆ ಸಮಯದಲ್ಲಿ ಅವನು ರಾವ್‌ಸಾಹೇಬ್ ಪೇಷ್ವೆಯಸಂಗಡ, ವಿಜಯೋತ್ಸವದಲ್ಲಿ ಭರಿತನಾಗಿದ್ದಕಾರಣ, ಅವನಿಗೆ ತನ್ನಪಕ್ಷದ ಸಾಮರ್ಥ್ಯದ ವಿಶೇಷವಾದ ಗರ್ವಹುಟ್ಟಿ, ಪ್ರಥಮದಲ್ಲಿ ತನ್ನ ಸೈನ್ಯದ ಒಳ್ಳೇವ್ಯವಸ್ಥೆಯನ್ನು ಮಾಡದೆ, ಆದಿಯಲ್ಲಿ ಪೇಷ್ವೇ ಸಂಸ್ಥಾಪನೆ ಮಾಡುವದರ ಕಡೆಗೇನೇ, ವಿಶೇಷವಾಗಿ ಮನಸ್ಸಿಟ್ಟಿದ್ದನು. ಅವನ ತಲೆಯಲ್ಲಿ, ಒಂದಾವರ್ತಿ ಪೇಷ್ವೆಯ ಸಿಂಹಾಸನ ಸ್ಥಾಪಿತವಾಯಿತು ಅಂದರೆ ಅದಕ್ಕೆ ಅಭಿನಂದನ ಮಾಡಿ, ಸಹಾಯಕೊಡಲು, ಸರ್ವರಾಜರುಗಳು ಮತ್ತು ಸಂಸ್ಥಾನಿಕರು, ತತ್ಪರರಾದಾರೆಂಬ ಭ್ರಮೆಯು ಹೊಕ್ಕಿರಬೇಕು. ಇದುಹಾಗಿರಲಿ. ತಾತ್ಯಾನು ತಕ್ಷಣವೇ ಲಷ್ಕರಿ ವಸ್ತ್ರಧಾರಣೆ ಮಾಡಿಕೊಂಡು ತಕ್ಕ ತಕ್ಕ ಸ್ಥಳದಲ್ಲಿ ಮೋರ್ಚೆ ಕಟ್ಟುವದಕ್ಕಾಗಿ ಅಪ್ಪಣೆಕೊಟ್ಟು, ಸ್ವತಃ ತಾನು ವೇಗದಿಂದ ಓಡ್ಯಾಡುತ್ತಾ, ಮುರಾರಿನ ಛಾವಣಿಯನ್ನು

ಸಂರಕ್ಷಣೆ ಮಾಡುವದಕ್ಕೆ ಪ್ರಯತ್ನ ಮಾಡಿದನು. ಆದರೆ, ಸರ್‌ಹ್ಯೂರೋಜ್ ಸಾಹೇಬನು ಅದರಮೇಲೆ, ಒಂದೇ ಉಸುರಿಗೆಬಿದ್ದು, ಅಲ್ಲಿನ ದಂಗೇಖೋರರ ಸೈನ್ಯವನ್ನ ಸೋಲಿಸಿ, ಚದುರಿಸಿದನು. ಆ ಸೈನ್ಯದಲ್ಲಿ, ಶಿಂಧ್ಯೇ ಸರ್ಕಾರದ ದಂಗೆಗೆ ಸಹಾಯವಾಗಿದ್ದ ಸೈನ್ಯವೂ ಪುಷ್ಕಳವಾಗಿತ್ತು. ಅವರು ತಿರುಗಿ ತೋಪುಗಳನ್ನ ಬಿಟ್ಟು, ಇಂಗ್ರೇಜಿ ಸೈನ್ಯದಮೇಲೆ ಗುಂಡುಗಳ ಮಳೆಯನ್ನು ಕರೆದರು ಆದಾಗ್ಯೂ ಅವರ ಯಲ್ಲಾ ಸ್ಥಳವನ್ನು ಸರ್ ಹ್ಯೂರೋಜ್ ಸಾಹೇಬನು, ಮೊದಲೇನೇ ತೆಗೆದುಕೊಂಡಿದ್ದ ಕಾರಣ, ವಿರುದ್ಧ ಪಕ್ಷದವರು ಉಪಾಯವಿಲ್ಲದೆ, ಯುದ್ಧ ಬಿಡಬೇಕಾದ ಸಂಭವವು ಬಂತು. ದಂಗೆಯವರ ಕಡೆಯವರು ಆಸಮಯದಲ್ಲಿ ತಮ್ಮ ಪರಾಕ್ರಮವನ್ನ ತೋರಿಸುವದಕ್ಕೇನೂ ಕಡಮೆ ಮಾಡಲಿಲ್ಲ. ಹೈದರಾಬಾದ್ ಕಂಟಿಂಜೆಂಟ್ ಸೈನ್ಯವನ್ನು ತೆಗೆದುಕೊಂಡು, ಆಬಟ್ ಸಾಹೇಬನು ಆ ಶೂರರನ್ನು ಎದುರಿಸಿದನು; ಆ ಸಮಯದಲ್ಲಿ ಆ ಶೂರರು ಅವರಮೇಲೆ ಬಿದ್ದು, ಬಹಳ ನಿಕರವಾದ ಯುದ್ಧಮಾಡಿದರು. 97ನೇ ಹೈಲ್ಯಾಂಡರ್ಸ್ ಪಟಾಲಂನವರಿಗೂ ಮತ್ತು ಅವರಿಗೂ ಕೇವಲ ಕೈಕೈ ಹಚ್ಚಿ ಯುದ್ಧ ಮಾಡುವ ಸಂಭವಬಂದು, ಅವರು ಪುಷ್ಕಳ ಇಂಗ್ರೇಜಿ ಸೈನಿಕರನ್ನ ಯಮಪಟ್ಟಣಕ್ಕೆ ಕಳುಹಿಸಿದರು. ಆ ಯುದ್ಧದಲ್ಲಿ ಅವರು ಲೆ. ನಿವ್ ಎಂಬ ಒಬ್ಬ ಯುದ್ಧಶಾಲಿಗೆ, ಅತೋನಾತ ಘಾಯಮಾಡಿ, ಅವನನ್ನ ಅರಜೀವ ಮಾಡಿಬಿಟ್ಟರು. ತಥಾಪಿ, ಆ ವೇಳೆಯಲ್ಲಿ ಲೆ. ರೋಸ್ ಎಂಬ ಹೆಸರುಳ್ಳ ಮುಂಬಾಯಿಯ 25 ನೇ ನೇಟಿವ್ ಇಫೆಂಟ್ರಿಯ ಅಧಿಕಾರಿಯು, ಬಹಳ ಶಪಥದಿಂದ ವಿರುದ್ಧ ಪಕ್ಷದ ಯುದ್ಧಶಾಲಿಗಳನ್ನ ಕೊಂದುಹಾಕಿ, ತನ್ನ ಪರಾಕ್ರಮವನ್ನು ಚನ್ನಾಗಿ ತೋರಿಸಿದನು. ಧಂಡಖೋರರ ಕಡೆಗೆ, ರಣಕ್ಕೆ ಅಂಜತಕ್ಕಂಥ ಮತ್ತು ಸಮಯದಲ್ಲಿ ಘಾತುಕ ಕೊಡತಕ್ಕಂಥ ಜನಗಳು ಬಹಳವಾಗಿದ್ದಕಾರಣ, ಅವರಪಕ್ಷದ ಶೂರರಿಗೆ ಯಶಸ್ಸು ಬರಲಿಲ್ಲ. ಆ ಜನಗಳು ತಮ್ಮ ನಿಜವಾದ ತೇಜಸ್ಸನ್ನು ವ್ಯಕ್ತಪಡಿಸಿ, ರಣಾಂಗಣದಲ್ಲಿ, ಬೀಳುತ್ತಿದ್ದರು. ಇದು ಹಾಗಿರಲಿ. ಮುರಾರಿನ ಸಮರಭೂಮಿಯಮೇಲೆ, 2 ತಾಸುಗಳ ಪರ್ಯಂತರ ಅವಿಚ್ಛಿನ್ನವಾಗಿ ನಿಂತು ಯುದ್ಧನಡೆದು, ಇಂಗ್ರೇಜಿಸೈನ್ಯಕ್ಕೆ ಜಯವಾಯಿತು. ಅವರು ಆ ಸ್ಥಳವನ್ನ ಸ್ವಾಧೀನಪಡಿಸಿಕೊಂಡು, ನಿರ್ಭೀತಿಯಿಂದ ಅಲ್ಲಿ ವುಳಿದುಕೊಂಡರು. *

---

* ಗ್ವಾಲಿಯರ್‌ನಲ್ಲಿ ಶಿಂಧ್ಯೇ ಸರ್ಕಾರದ, ಸೈನ್ಯದ ನಂಬಿಕೆಯ ಮೇಲೆ, ದಂಗೇಖೋರರ ಕಡೆಯ ಸೇನಾ ಧುರಂಧರನು ಬಹಳವಾಗಿ ಹಾರುತ್ತಿದ್ದನು ; ಮತ್ತು ಅವನಿಗೆ ತನ್ನ ಅಪಜಯವಾದೀತೆಂಬ ಭೀತಿ ಮೊದಲಿನಿಂದಲೂ ತೋರುತ್ತಿರಲಿಲ್ಲ. ಪರಂತು, ಇಂಗ್ರೇಜಿ ಸೈನ್ಯದ ಕಡೆಯ ಯುಕ್ತಿಯುಳ್ಳ ಧೂರ್ತ ಅಧಿಕಾರಿಗಳು ಇದನ್ನು ಚನ್ನಾಗಿ ನೋಡಿ, ತಾತ್ಯಾನ ಭ್ರಾಂತಿಯನ್ನು ಇಲ್ಲದಂತೆ ಮಾಡಿದರಾಗಿ, ಹೇಳುತ್ತಾರೆ. ಸರ್ ರಾಬರ್ಟ್ ಹ್ಯಾಮಿಲ್ಟನ್ ಮತ್ತು ಮೇಜರ್ ಮ್ಯಾಕ್ಫರ್ಸನ್ ಈ ಇಬ್ಬರು ಇಂಗ್ರೇಜಿ

ಇಂಗ್ರೇಜಿ ಸೈನ್ಯವು ಮುರಾರಿನ ಛಾವಣಿಯನ್ನು ತೆಗೆದುಕೊಂಡ ವರ್ತಮಾನವು, ಲಷ್ಕರನಲ್ಲಿ ತಿಳಿಯುತ್ತಲೆ, ಅಲ್ಲಲ್ಲಿ ಹಾಹಾಕಾರ ಹುಟ್ಟಿತು. ಶ್ರೀಮಂತರಾವ್ ಸಾಹೇಬ್ ಪೇಷ್ವೆಯು ಆ ಗಲಭೆಯಲ್ಲಿ ಹೋಗಿ ಬಹಳ ಲಘುಬಗಿಯಿಂದ ಸೈನ್ಯಕ್ಕೆ ಪ್ರೋತ್ಸಾಹ ಕೊಡುವದಕ್ಕಾಗಿ, ತನ್ನ ಸೈನ್ಯದ ಮಧ್ಯದಲ್ಲಿ ಬಂದನು. ಬಾಂದೆವಾಲೆ ನವಾಬನು ತನ್ನ ಗರ್ವವನ್ನು ಬಂದು ಕಡೆಯಿಟ್ಟು, ಪಟ್ಟಣದ ಮೋರ್ಚೆಗಳನ್ನು ಭದ್ರಪಡಿಸಲು ಉದ್ಯುಕ್ತನಾದನು. ತಾತ್ಯಾನು ಮೊದಲಿನಿಂದಲೂ ತನ್ನ ಕೆಲಸದಮೇಲೆ ಹೋಗಿ ಸೈನ್ಯದ ವ್ಯವಸ್ಥೆಯನ್ನು ಮಾಡುತಿದ್ದನು. ಅವನು ಆಯಾಯ ಸ್ಥಳಗಳಲ್ಲಿ ತೋಫುಗಳ ಮೋರ್ಚೆಗಳನ್ನ ಗುರಿಪಡಿಸಿ ಇಡಿಸಿದನು. ಕುದುರೆಯ ಸವಾರರ ಇರಸಾಲೆ ಮತ್ತು ಪಾಯದಳವನ್ನ ಆಯಾಯ ಸ್ಥಳಕ್ಕೆ ವಿಭಾಗಿಸಿಕೊಟ್ಟನು; ಮತ್ತು ಯುದ್ಧದ ತುಂಬಾ ಸಿದ್ಧತೆಯನ್ನು ನಡೆಸಿದನು. ಅವನು ಮಹಾರಾಣಿ ಲಕ್ಷ್ಮೀಬಾಯಿ ಸಾಹೇಬಳ ದರ್ಶನ ತೆಗೆದುಕೊಂಡು, ಅತ್ಯಂತ ನಮ್ರತೆಯಿಂದ ಪೂರ್ವದಂತೆ ಸಹಾಯ ಮಾಡಬೇಕೆಂತ ವಿನಂತಿ ಮಾಡಿದನು; ಮತ್ತು ಸೈನ್ಯದ ವ್ಯವಸ್ಥೆಯನ್ನು ಈಗ ಹೇಗೆ ಮಾಡಬೇಕೆಂಬುವದನ್ನು ಕುರಿತು, ಬಹಳ ಶ್ರದ್ಧೆಯಿಂದ ಆಕೆಯ ಆಲೋಚನೆಯನ್ನು

---

ಅಧಿಕಾರಿಗಳು, ಸರ್‌ಹ್ಯೂರೋಜ್ ಸಾಹೇಬನ ಸೈನ್ಯದ ಸಂಗಡ ಇದ್ದರು. ಅವರು ಗ್ವಾಲಿಯರ್ ಸೈನ್ಯದ ಅಂತರಂಗ ಸ್ಥಿತಿಯನ್ನ ಧ್ಯಾನದಲ್ಲಿ ತಂದ, ಆಗ್ರಾಕ್ಕೆ ಓಡಿಹೋದ ಶಿಂಧೆಯನ್ನ ತತ್‌ಕ್ಷಣವೇ ಹಿಂದಕ್ಕೆ ಕರೆಸಿದರು; ಮತ್ತು ಕ್ಷಮಾಪಣೆಯ ಪ್ರಸಿದ್ಧ ಪತ್ರಿಕೆಯನ್ನ ಹಚ್ಚಿ, ಶಿಂಧ್ಯೇ ಸರ್ಕಾರದಗೋಸ್ಕರವಾಗಿಯೇ, ತಾವು ಯುದ್ಧ ಮಾಡುತ್ತಿದ್ದೇವೆಂತ ಪ್ರಸಿದ್ಧ ಪಡಿಸಿದರು. ಅರ್ಥಾತ್, ಶಿಂಧ್ಯೇನು ಇಂಗ್ರೇಜಿಯವರ ಪಕ್ಷದಲ್ಲಿದ್ದ ಕಾರಣ, ಆತನಿಗೆ ವಿರುದ್ಧವಾಗಿ ಯುದ್ಧಮಾಡುವ ಮಾತು, ದಂಗೇಖೋರರಿಗೆ ಅನುಕೂಲವಾಗಿದ್ದ ಶಿಂಧ್ಯೇನ ಲಷ್ಕರ್ ಅಧಿಕಾರಿಗಳಿಗೆ ಸರಿಯಾದದ್ದಲ್ಲವೆಂತ ತೋರಿತು. ತತ್‌ಕ್ಷಣವೇ ಅವರ ಮನಸ್ಸಿನಲ್ಲಿ ಸ್ವಾಮಿನಿಷ್ಟತೆಯು ಮೋಹವುತ್ಪನ್ನವಾಗಿ, ಸಮರಾಂಗಣದಮೇಲೆ, ಬರುತ್ತಲೆ, ಅವರಿಗೆ ಅರ್ಜುನನಹಾಗೆ:—

"ಅಹೋಬತ ಮಹಾಪಾಪಂ ಕರ್ತುಂವ್ಯವಸಿ ತಾವಯಂ."

ಇಂಥಾ ವಿಚಾರಹುಟ್ಟಿ, ಅವರು ತಮ್ಮ ಯಜಮಾನನಿಗೆ ವಿರುದ್ಧವಾಗಿ ಯುದ್ಧ ಮಾಡುವ ಆಲೋಚನೆಯನ್ನ ಬಿಟ್ಟುಬಿಟ್ಟರು. ಅರ್ಥಾತ್ ಅವರು ಮನಃ ಪೂರ್ತಿಯಾಗಿ, ಅಂತಃಕರಣದಿಂದ ವ್ಯಸನಪಟ್ಟು ಇಂಥಾವಿಚಾರಮಾಡಿದರೆಂಬುವದರಿಂದ, ದಂಗೇಖೋರರನ್ನ ಜಯಿಸುವದಕ್ಕೆ ಬಹಳ ಸವಕಾಶವಾಗಲಿಲ್ಲ. ಇದು ಚನ್ನಾಗಿ ಲಕ್ಷ್ಯದಲ್ಲಿ ಇಟ್ಟುಕೊಳ್ಳತಕ್ಕ ಮಾತಾಗಿದೆ. ಶಿಂಧ್ಯೇ ಸರ್ಕಾರದ ಈ ಸ್ವಾಮಿನಿಷ್ಟತೆಯನ್ನು ಕುರಿತು, ಸರಿಯಾಗಿ ಯಾರು ಸ್ತೋತ್ರಮಾಡದೆ ಹೋದಾರು?

ತೆಗೆದುಕೊಂಡನು. ರಾಣೀಸಾಹೇಬಳು ಪೂರ್ವದಿಂದಲೂ ಶ್ರೀಮಂತರಾವ್ ಸಾಹೇಬ್ ಪೇಷ್ವೆಗೆ ಸೈನ್ಯದ ಭದ್ರತೆಯನ್ನು ಸರಿಯಾಗಿ ಮಾಡಬೇಕೆಂಬುವದನ್ನು ಕುರಿತು, ಅನೇಕ ಪ್ರಕಾರವಾಗಿ ಬುದ್ಧಿವಾದವನ್ನು ಹೇಳಿದ್ದಳು. ಆದರೆ ಅವನು ಪೇಷ್ವೆತನ ವನ್ನು ಪುನಃಸ್ಥಾಪನೆ ಮಾಡುವ ಮಹೋತ್ಸವದಲ್ಲಿ, ಆಸಕ್ತನಾಗಿ ಹೋಗಿದ್ದಕಾರಣ, ತಕ್ಕಕಾಲದಲ್ಲಿ, ಕಣ್ಣುತೆರೆಯಲಿಲ್ಲ. ಆದಕಾರಣ,

ನಕಾರ್ಯಕಾಲಂಮತಿಮಾನ್ಮಾತಿಕ್ರಮೇತ್ಕಥಂಚನ ।
ಕಥಂಚಿದೇವಭವತಿ ಕಾರ್ಯಯೋಗಃ ಸುದುರ್ಲಭಃ ॥ ೧ ॥

ಈ ಉತ್ತಮವಾದ ನಿಯಮದಕಡೆ, ಆತನು ದುರ್ಲಕ್ಷ್ಯಮಾಗಿ, ತನ್ನ ದುರ್ದೈವದ ಪಾರಂಪರ್ಯದಲ್ಲಿ ಸಿಕ್ಕಿದ ಕಾರ್ಯ ಸಿದ್ಧಿಯ ಸುಯೋಗವನ್ನು ತನ್ನಕ್ಷಣಿಕ ಐಶ್ವರ್ಯ ಭೋಗಕ್ಕೆ ಬಲಿಯಾಗಿಕೊಟ್ಟನೆಂತ ಹೇಳಬಹುದಾಗಿದೆ. ಇದು ಹಾಗಿರಲಿ.

ಶ್ರೀಮಂತನ ಆತ್ಮನಾಶಕವಾದ ಕೃತ್ಯದಿಂದ ರಾಣೀಸಾಹೇಬಳಿಗೆ ನಿರುತ್ಸಾಹದಿಂದ ಕೂಡಿಕೊಂಡಿದ್ದ ಬಹಳ ವ್ಯಸನವುಹುಟ್ಟಿ, ಆಕೆಯ ಅಂತಃಕರುಣದಲ್ಲಿನ ಸರ್ವ ಮನೋ ರಥವು ನಷ್ಟವಾಗಿ, ಭವಿಷ್ಯತ್ತಿನ ಸಂಗಡ, ಜಗಳವಾಡುವದರಿಂದ, ಮುಂದೆ ತನಗೆ ಹೆಚ್ಚಿಗೆ ಯಶಸ್ಸು ಬರಲಾರದೆಂತ ಖಂಡಿತವಾಗಿ ತಿಳಿದುಕೊಂಡಳು. ಪರಂತು, ತಾತ್ಯಾ ಟೋಪಿಯು ಕರುಣ ಮುದ್ರೆ ಮತ್ತು ದೀನವಾಣಿಯಿಂದ, ಆಕೆಯನ್ನು ಪ್ರಾರ್ಥನೆ ಮಾಡುತ್ತಲೆ, ಆಕೆಯ ಅಂತಃಕರಣವು ಅಲಗಿಹೋಗಿ, ಅವಳು ಅಭಯವಾಣಿಯಿಂದ ತಾತ್ಯಾನಿಗೆ ಹೇಳಿದ್ದೇನಂದರೆ, "ಇವತ್ತಿನ ಪರ್ಯಂತರ, ಇಷ್ಟು ಆಟೋಕಾಟು ಯುದ್ಧದ ಸಾಮಗ್ರಿಯನ್ನು ಮಾಡಿಕೊಂಡು ಜೀವವನ್ನ ಘಟ್ಟಮಾಡಿ, ಶ್ರಮಪಟ್ಟದ್ದು, ಫಲಕ್ಕೆ ಬರುವ ಆಶೆಯು ಈಗ ಉಳಿಯಲಿಲ್ಲ. ಸರಿಯಾದ ಗುರಿಗೆಬಂದ ಆಲೋಚನೆಯು ಶ್ರೀಮಂತನ ದುರಾಗ್ರಹ ಸ್ವಭಾವದಿಂದಲೂ, ಮತ್ತು ಜಯೋತ್ಸವದಿಂದಲೂ ಕೆಟ್ಟು ಹೋಯಿತು. ಇಂಗ್ರೇಜಿಸೈನ್ಯವು ಮುಖದೆದುರಿಗೆ ಬಂದು ನಿಂತಿದ್ದರೂ, ಅದ್ಯಾಪಿ, ನಿಮ್ಮ ಸೈನ್ಯದ ವ್ಯವಸ್ಥೆಯು ಏನೂ ಇಲ್ಲ. ಹೀಗಿರುವಾಗ ಈಗ ಅದರ ಸುಧಾರಣೆ ಮಾಡಿಕೊಂಡು, ಎಷ್ಟು ಯಶಸ್ಸು ಬಂದೀತೆಂಬುವದು ಕಣ್ಣಿಗೇನೇ ಕಾಣುತ್ತದೆ. ಆದಾಗ್ಯೂ ಪ್ರಕೃತ ಮುಂದಿನ ಸಂದರ್ಭದಲ್ಲಿ ಧೈರ್ಯಗೆಡುವದರಿಂದ ಉಪಯೋಗವಿಲ್ಲ. ನೀವು ಈಗ ನಿಮ್ಮ ಸೈನ್ಯವನ್ನು ಎದುರಿಸುವದಕ್ಕೋಸ್ಕರ ಒಂದೇ ಉಸುರಿಗೆ ಮುಂದಕ್ಕೆ ತೆಗೆದುಕೊಂಡು ಹೋಗಿ ನಾಲ್ಕು ಕಡೆಗಳಿಗೂ ಸುತ್ತಲೂ ನಿಮ್ಮ ಶಕ್ತ ಸರ್ದಾರರನ್ನ ಭದ್ರತೆಗೋಸ್ಕರ ಇಟ್ಟು ವಿರುದ್ಧ ಪಕ್ಷದವರಿಗೆ, ನಿಮ್ಮಮೇಲೆ ಬೀಳುವದಕ್ಕೆ ಆಸ್ಪದ ಕೊಡಬೇಡಿ; ನಾನು ಸ್ವತಃ ನನ್ನ ಕರ್ತವ್ಯವನ್ನು ಮಾಡುವದಕ್ಕೆ ಒಂಟುಕಾಲಿನ ಮೇಲೆ ಶಿದ್ಧಳಾಗಿದ್ದೇನೆ. ನಿಮ್ಮ ಕರ್ತವ್ಯವನ್ನು ನೀವು ಮಾಡಿದರೆ ಸರಿ," ರಾಣೀಸಾ ಹೇಬಳ ಈ ವೀರೋತ್ಸಾಹ ಪ್ರೇರಕವಾದ ಮಾತು ತಾತ್ಯಾನ ಕಿವಿಗೆ ಬೀಳುತ್ತಲೆ,

ಆತನ ಮನೋವೃತ್ತಿಯಮೇಲೆ, ಕೂಡಲೆ ಪ್ರತ್ಯಕ್ಷವಾಗಿ ತೇಜಸ್ಸೆದ್ದು ಹರುಷಭರಿತನಾಗಿ, ರಾಣೀಸಾಹೇಬಳ ಹೇಳಿಕೆಯನ್ನು ಶಿರಸಾವಹಿಸಿದನು; ಮತ್ತು ಆಕೆಯಕಡೆಗೆ ಗ್ವಾಲಿಯರ್ರಿನ ಪೂರ್ವ ಪಾರ್ಶ್ವದ ಸಂರಕ್ಷಣೆ ಮಾಡುವ ಕೆಲಸವನ್ನು ವಹಿಸಿ, ತಾನು ಇತರ ಸೈನ್ಯದ ವ್ಯವಸ್ಥೆ ಮಾಡುವದಕ್ಕೆ ಉದ್ಯುಕ್ತನಾದನು. ರಾಣೀಸಾಹೇಬಳು ಇದು ಕೊನೆಯಯುದ್ಧವಾಗಿದೆಯಂತ ತಿಳಿದು, ಅದ್ವಿತೀಯ ರಣೋತ್ಸಾಹದಿಂದ ತ್ವರ್ಯದಲ್ಲಿ, ತನ್ನ ಕೈಕೆಳಗಿನ ಸೈನ್ಯವನ್ನು ಸರಿಯಾಗಿ ಸಿದ್ಧಪಡಿಸಿದಳು.* ಆಕೆಯು ತನ್ನ ಪದ್ಧತಿಪ್ರಕಾರ ಯುದ್ಧದ ವಸ್ತ್ರಧಾರಣೆ ಮಾಡಿಕೊಂಡು, ತನ್ನ ಉತ್ತಮವಾದ ಶ್ವೇತಾಶ್ವದಮೇಲೆ ಹತ್ತಿ ಕೂತುಕೊಂಡು, ತನ್ನ ಪ್ರಾಣಪ್ರಿಯ ರತ್ನಖಚಿತದ ಶಸ್ತ್ರವನ್ನ ವರೆಯಿಂದ ಹೊರಗೆ ತೆಗೆದು, ಪಟಾಯಿತ್ ಯುದ್ಧಶಾಲಿಯಹಾಗೆ ಸೈನ್ಯದ ಕವಾಯತಿಯನ್ನು ತೆಗೆದುಕೊಳ್ಳಲಿಕ್ಕೆ ಪ್ರಾರಂಭಿಸಿದಳು. ಆ ಸಮಯದಲ್ಲಿ ಆಕೆಯ ದಿವ್ಯವಾದ ಸ್ವರೂಪ ಮತ್ತು ಗಂಭೀರವಾದ ಸ್ವರ ಮತ್ತು ಧೃಡವಾದ ಸ್ವಾಭಿಮಾನವನ್ನು ಕಂಡು, ಆಕೆಯ ಸೈನಿಕರ ಅಂತಃಕರಣದಲ್ಲಿ ವೀರಶ್ರೀಯಳು ತುಂಬಿಹೋಗಿ, ಅವರಿಗೆ ತಮ್ಮ ಶತ್ರುಗಳಮೇಲೆ ಒಂದೇ ಉಸುರಿನಲ್ಲಿ ಬಿದ್ದು, ಅವರನ್ನ ನಿಪಾತ ಮಾಡಿಬಿಡಬೇಕೆಂಬ ಆವೇಶವು ಹುಟ್ಟಿತು. ಆವೇಳೆಯಲ್ಲಿ ರಾಣೀಸಾಹೇಬಳ, ಮಹಾಲಕ್ಷ್ಮಿಯಂಥಾ ಜಾಜ್ವಲ್ಯ

---

* ಈ ಸಂಬಂಧದಲ್ಲಿ ಬರೆಯುವಾಗ, ಒಬ್ಬ ಇಂಗ್ರೇಜಿ ಗೃಹಸ್ತನು ಬರೆಯುವದೇನಂದರೆ:—

"* * * But little preparation was made for the defence of the fort; and it is probable that both Tantia Tope and the Ranee concurred in resolving to abide by the old Maharatta tactics, and avoid shutting them-selves up within walls. Therefore they disposed their forces so as to observe and hold the roads leading upon the city from Indoorkee, Seepree, and the north; the necessary arrangements being effected mainly under the direction and personal supervision of the Ranee, who, clad in military attire, and attended by a picked and well—armed escort, was constantly in the saddle, ubiquitous and untiring."

*Letter from Bombay Correspondent*
*Times August 3rd* 1858.

ಸ್ವರೂಪ ಮತ್ತು ಸಂಗ್ರಾಮ ಮಧ್ಯದಲ್ಲಿ, ಪ್ರತಾಪಾಗ್ನಿಯಂತೆ ಜೋಳೆಯುತ್ತಲಿದ್ದ ಶಸ್ತ್ರದ ಬೆಳಕು ಸಹ ನೋಡಿ, ಯಾರ ಅಂತಃಕರಣವು ಥರಥರಯೆನ್ನದೇ ಇದ್ದೀತು? ಇದುಹಾಗಿರಲಿ. ತಾರೀಖು 14 ನೇ ದಿವಸ ಬ್ರಿಗೇಡಿಯರ್ ಸ್ಮಿತ್ ಸಾಹೇಬನು, ತನ್ನ ಸೈನ್ಯಸಹಿತ ಅಂತರಿಯೆಂಬ ಸ್ಥಳಕ್ಕೆ ಬಂದು ಸೇರಿದನು. ಅಲ್ಲಿ ಆತನು ಮತ್ತು ಮೇಜರ್ ಆರ್‌ಸಾಹೇಬನು ಕೂಡಿದರು. ಅನಂತರ ಆ ಉಭಯ ಯುದ್ಧಶಾಲಿಗಳು ಸರ್‌ಹ್ಯೂರೋಜ್ ಸಾಹೇಬನ ಅಪ್ಪಣೆಯ ಪ್ರಕಾರ ಗ್ವಾಲಿಯರ್‌ನ ಆಗ್ನೇಯ ದಿಕ್ಕಿಗೆ, ಐದು ಮೈಲಿಗಳ ದೂರದಲ್ಲಿರುವ, ಕೋಟಾಕಿಸರಾಯಿಯೆಂಬ ಊರಿನ ಒಂದು ಪಾರ್ಶ್ವಕ್ಕೆ ಸೈನ್ಯವನ್ನು ತೆಗೆದುಕೊಂಡು ಹೋಗಿ ಗ್ವಾಲಿಯರ್‌ಮೇಲೆ ಬೀಳುವದನ್ನ ನಿಶ್ಚಯಿಸಿದರು. ಸರ್‌ಹ್ಯೂರೋಜ್ ಮತ್ತು ಜನರಲ್ ನೇಪಿಯರ್ ಸಾಹೇಬರು, ಮುರಾರಿನ ಛಾವಣಿಯನ್ನು ಕೈವಶ ಮಾಡಿಕೊಂಡು, ಗ್ವಾಲಿಯರ್‌ಮೇಲೆ ಷಹಾಕೊಟ್ಟು ಕೂತಿದ್ದರು. ಗ್ವಾಲಿಯರ್‌ನ ದಕ್ಷಿಣದಿಕ್ಕಿಗೆ ಸ್ಮಿತ್‌ಸಾಹೇಬನ ಸೈನ್ಯವು ಹೋಗುತ್ತಲೆ, ಅದು ಮುಂದರಿದು ಹೋಗುವದರಲ್ಲಿತ್ತು. ಇದುಹಾಗಿರಲಿ. ಅವರ ಉದ್ದೇಶ ಪ್ರಕಾರ ಬ್ರಿಗೇಡಿಯರ್ ಸ್ಮಿತ್ ಮತ್ತು ಮೇಜರ್ ಆರ್ ಈ ಇಬ್ಬರು, ಕೋಟಕಿ ಸರಾಯಿಯಲ್ಲಿ ತಮ್ಮ ಸೈನ್ಯವನ್ನು ನಿಲ್ಲಿಸಿಕೊಂಡು, ಅಲ್ಲಿಂದ ಗ್ವಾಲಿಯರ್ ಸೈನ್ಯದ ಮತ್ತು ತಮ್ಮ ಬಲಾಬಲವನ್ನ ಸೂಕ್ಷ್ಮದೃಷ್ಟಿಯಿಂದ ನೋಡುವ ಕೆಲಸವನ್ನು ನಡೆಸಿದರು. ಆ ಪಾರ್ಶ್ವಕ್ಕೆ ರಾಣೀಸಾಹೇಬಳ ಅಧೀನದ ಮೋರ್ಚೆ ಇದ್ದು, ಅದರ ವ್ಯವಸ್ಥೆಯನ್ನು ಆಕೆಯು ಉತ್ಕೃಷ್ಟರೀತಿಯಿಂದ ಮಾಡಿದ್ದಳು. ಆಕೆಯು ಮುಂದುಗಡೆಗೆ ತಗ್ಗು ಉಬ್ಬಿನ ಬೆಟ್ಟ ಪ್ರದೇಶದ ಮಧ್ಯದಲ್ಲಿ ತನ್ನ ಸೈನ್ಯವನ್ನು ಬಹಳ ಭದ್ರವಾಗಿ ನಿಲ್ಲಿಸಿಕೊಂಡಿದ್ದಳು. ಆಕೆಯು ಸರ್ವಸೈನ್ಯದ ಮುಂಭಾಗದಲ್ಲಿ ಬಲವಾದ ಜನಗಳ ವ್ಯೂಹವನ್ನಿಟ್ಟು, ಅವರಹಿಂದೆ ಅಂತರಾಂತರವಾಗಿ ಲಾಲ್ ಇರಸಾಲೆಯ ಕುದುರೆ ಸವಾರರು ಮತ್ತು ಪಾಯದಳ ಸೈನ್ಯವನ್ನ, ಬಹಳ ಚನ್ನಾಗಿ ಪಂಗಡಮಾಡಿ ನಿಲ್ಲಿಸಿದ್ದಳು. ಇದುಹೊರ್ತು, ಹೊಡೆಯತಕ್ಕ ಜಾಗವನ್ನು ಗುರಿ ಸರಿಯಾಗಿ ನೋಡಿ, ಎತ್ತರವಾದ ಸ್ಥಳದಲ್ಲಿ, ತೋಫುಗಳನ್ನು ಇಡಿಸಿದ್ದಳು. ಆದ್ದರಿಂದ ಆ ಪಾರ್ಶ್ವವನ್ನು ತೆಗೆದುಕೊಳ್ಳುವದು, ಇಂಗ್ರೇಜಿ ಸೈನ್ಯಕ್ಕೆ ಬಹಳ ಕಷ್ಟವಾಗಿತ್ತು.

ತಾರೀಖು 17ನೇ ದಿವಸ ಬ್ರಿಗೇಡಿಯರ್ ಸ್ಮಿತ್ ಸಾಹೇಬನು, ಯುದ್ಧದ ತುರಿಯನ್ನು ಊದಿಸಿ, ಯುದ್ಧಕ್ಕೆ ಪ್ರಾರಂಭಮಾಡಿದನು. ಇಂಗ್ರೇಜಿಸೈನ್ಯವು ಮುಂದಕ್ಕೆ ನಡೆಯುತ್ತಲೆ ರಾಣೀಸಾಹೇಬಳು ಫಿರಂಗಿ ಜನಗಳಿಗೆ ಸಂಜ್ಞೆಮಾಡಿ, ತೋಫು ಹೊಡಿಯಲಿಕ್ಕೆ ಪ್ರಾರಂಭಮಾಡಿಸಿದಳು. ಆತೋಫುಗಳ ಹೊಡೆತವು ಪ್ರಾರಂಭವಾಗುತ್ತಲೆ, ಇಂಗ್ರೇಜಿಸೈನ್ಯದವರು ಅಲಿಗಿಹೋಗಿ, ಹಿಂದಕ್ಕೆ ಸರಿಯಲು ಉದ್ಯುಕ್ತರಾದರು. ಇದನ್ನು ನೋಡುತ್ತಲೆ, ರಾಣೀಸಾಹೇಬಳ ಕಡೆ ರಣಶೂರ ತುರುಕ ಸವಾರರು ಬಂದೇಉಸುರಿಗೆ ಮುಂದೆ ಓಡಿದರು; ಮತ್ತು ಅವರು ಬಹಳ ಆವೇಶದಿಂದ ಯುದ್ಧಕ್ಕೆ ಪ್ರಾರಂಭ ಮಾಡಿ

ದರು. ಬ್ರಿಗೇಡಿಯರ್ ಸ್ಮಿತ್ ಸಾಹೇಬನು ತನ್ನ ಸೈನ್ಯವು ಏಟಿನ ಸ್ಥಳದಲ್ಲಿ ಸಿಕ್ಕಿದೆ ಎಂಬುವದನ್ನು ನೋಡಿ, ವಿರುದ್ಧ ಪಕ್ಷದವರಿಗೆ ತನ್ನ ನಟನೆ ಮತ್ತು ಬಾಯಿಯಮಾತಿನಿಂದ ಬೆದರಿಕೆ ತೋರಿಸಿ ಅವರನ್ನ ಹಿಂತಿರುಗಿಸಿದನು ; ಮತ್ತು ಒಂದು ವಿಸ್ತೀರ್ಣವಾದ ಶುದ್ಧಾಂಗ ಬಯಲಿಗೆ ಅದನ್ನು ತಂದನು. ಅನಂತರ ಅವನು ಬಹಳ ಚಾತುರ್ಯದಿಂದ ಬೇರೆ ಬೇರೆ ಪಾರ್ಶ್ವಕ್ಕೆ ಸೈನ್ಯದ ಭಾಗಗಳನ್ನು ಕಳುಹಿಸಿ, ತನ್ನ ಕುದುರೆ ಸವಾರರ ಕಡೆಯಿಂದ, ಅದರ ಎದುರುಕಡೆ ಮೋರ್ಚೆಯನ್ನು ಒಡೆಯುವದಕ್ಕೆ ಪ್ರಯತ್ನ ಮಾಡಿದನು. ಇಂಗ್ರೇಜಿ ಸವಾರರು ತಮ್ಮ ಸೂತ್ರನಾಳಿ ತೋಫುಗಳನ್ನ ತೆಗೆದುಕೊಂಡು ದೊಡ್ಡ ಆವೇಶದಿಂದ ಶತ್ರುಗಳಮೇಲೆ ಬೀಳುವದಕ್ಕೆ ಹೊರಟರು. ಪರಂತು, ಅವರಿಗೂ ಮತ್ತು ವ್ಯೂಹದ ಮೇಲಿನ ರಣಶೂರ ಮಕರಾಣಿ ಸವಾರರಿಗೂ, ಒಂದೇಸಲ ಸಮಕ್ಷಮವಾಗಿ ಭಯಂಕರವಾದ ಯುದ್ಧಕ್ಕೆ ಪ್ರಾರಂಭವಾಯಿತು. ಉಭಯಪಕ್ಷದವರು ತಮ್ಮ ಶಕ್ತಿಯನ್ನೆಲ್ಲಾ ತೋರಿಸಿದರು. ರಾಣೀ ಸಾಹೇಬಳ ಧೀರ ಸವಾರರು, ಆವೇಶದಿಂದ ತಮ್ಮ ಶಸ್ತ್ರಗಳನ್ನ ನಡೆಸಿ, ವಿಜಯಶ್ರೀಯಳನ್ನ ಬಯಸಿದರು ; ಪರಂತು, ಇತ್ತಲಾಗಿ ಕರ್ನಲ್ ರೇಸ್ ಮತ್ತು ಕರ್ನಲ್ ಫೇಲಿ ಇವರು 15 ನೇ ಪಟಾಲಂನ ಶುದ್ಧ ಶೌರ್ಯದ, ಪರಾಕ್ರಮಿಗಳನ್ನೂ ಮತ್ತು ಮುಂಬಾಯಿ 10 ನೇ ನೇಟೀವ್ ಇನ್ಫೆಂಟ್ರಿಯನ್ನು ಮುಂದಕ್ಕೆ ತಂದು, ದಬ್ಬಿಕೊಳ್ಳುತ್ತಾ, ಒಂದೇ ಉಸುರಿನಲ್ಲಿ ಶತ್ರುವಿನ ಪಾರ್ಶ್ವಭಾಗದಮೇಲೆ ನಡೆದುಹೋದರು. ಆದ್ದರಿಂದ, ಅವರಿಗೆ ಈ ರೀತಿಯಾಗಿ ಸಿಕ್ಕಿಸಿಕೊಂಡ ಹೊಡೆತಬಿದ್ದು, ಹಿಂದಕ್ಕೆ ಸರಿಯಬೇಕಾಯಿತು. ಇಂಗ್ರೇಜಿ ಸೈನ್ಯದ ಯುಕ್ತಿ ಮತ್ತು ಸಮಯಾನುಸರಣೆ ಸಹ ಬಹಳ ವಿಲಕ್ಷಣವಾಗಿದ್ದದ್ದರಿಂದ, ಅವರ ಮುಂದೆ ಸಾಧಾರಣ ಪರಾಕ್ರಮದ್ದೇನು ನಡದೀತು ?

ಕರ್ನಲ್ ರೇಸ್ ಸಾಹೇಬನು ರಣಾಗ್ರದಲ್ಲಿ ಪರಿಶ್ರಮವುಳ್ಳ ಒಬ್ಬ ದೊಡ್ಡ ಯುದ್ಧಶಾಲಿಯಾಗಿದ್ದನು. ಅವನು ವೇಗದಿಂದ ಹೋಗುತ್ತಾ, ಬಹಳ ಧೈರ್ಯವಾಗಿ ಶತ್ರುಗಳ ಬೆನ್ನಿನಮೇಲೆ, ಪೆಟ್ಟು ಹೊಡೆಯುವ ಕೆಲಸವನ್ನು ಒಂದೇ ಪ್ರಕಾರವಾಗಿ ನಡೆಸಿದನು ; ಮತ್ತು ಓಡುತ್ತ ಓಡುತ್ತ ಶತ್ರುಗಳ ವ್ಯೂಹದ ಎದುರಿಗೆ, ಕೇವಲ ಸಮೀಪಕ್ಕೆ ಬಂದನು; ಪರಂತು, ಅವನ ಎದುರಿಗೆ ಒಂದು ದೊಡ್ಡ ಅಗಳು ಅಡ್ಡಬಂದದ್ದರಿಂದ, ಅವನ ಬಲವಾದ ವೇಗದ ಗತಿಯು ಅಲ್ಲಿಗೇನೇ ಕುಂಟುಬಿತ್ತು. ಆದ್ದರಿಂದ ಅವನು ಅಲ್ಲಿ ಆಶ್ರಯಸ್ಥಾನವನ್ನು ಸ್ವೀಕಾರ ಮಾಡಬೇಕಾಗಿ ಬಂತು. ಕರ್ನಲ್ ರೇಸ್ ಸಾಹೇಬನು ಈ ರೀತಿಯಾಗಿ ಆ ಗುಡ್ಡ ಮತ್ತು ಎತ್ತರ ತೆಗ್ಗಿನ ಪ್ರದೇಶದಿಂದ ಯುದ್ಧಮಾಡಿಕೊಳ್ಳುತ್ತಾ, ತನ್ನ ಸೈನ್ಯವನ್ನ ಮುಂದೆ ನಡೆಸುತ್ತಿದ್ದನು. ಆಗಲೇನೇ ಇತ್ತಲಾಗಿ, ಬ್ರಿಗೇಡಿಯರ್ ಸ್ಮಿತ್ ಸಾಹೇಬನು, ಒಂದು ಸಣ್ಣ ನದೀ ದಾಟಿಕೊಂಡು, ತನ್ನ ಕುದುರೆಯ ಸವಾರರು ಸಹಿತ, ಮುಂದೆ ಪ್ರಯಾಣಮಾಡಿ ಬಂದು ಶತ್ರುವಿನ ಪಂಗಡವನ್ನು ಮುರಿದು ಹಾಕುವ ಕ್ರಮ ನಡೆಸಲು ಪ್ರಾರಂಭಿಸಿದನು.

ಇತ್ತ ಕಡೆ, ಗ್ವಾಲಿಯರ್ ಸೈನ್ಯದ ಮಧ್ಯದಲ್ಲಿ, ರಾಣೀ ಸಾಹೇಬಳು ಕುದುರೆಯ ಮೇಲೆ ಹತ್ತಿಕೊಂಡು, ತನ್ನ ಶಸ್ತ್ರವನ್ನ ತಿರಿಗಿಸುತ್ತಾ, ಸರ್ವ ಸೈನ್ಯದ ಮುಂಭಾಗಕ್ಕೆ ಬಂದು, ತನ್ನ ಆವೇಶ ಯುಕ್ತವಾದ ವಾಣಿಯಿಂದ ಸರ್ವ ಸೈನಿಕರ ಅಂತಃಕರಣವನ್ನ ಶೆಳೆದುಕೊಂಡು, ಅವರಲ್ಲಿರತಕ್ಕ ವೀರಶ್ರೋತ್ಸಾಹ ಗುಣಗಳನ್ನ ಜಾಗ್ರತೆ ಪಡಿಸಿದಳು. ರಾಣೀ ಸಾಹೇಬಳ ಸ್ವತಃ ಸಿದ್ಧವಾದ ಯೋಗ್ಯತೆಯು, ಆಕೆಯ ಅಚಲವಾದ ನಿಶ್ಚಯ ಮತ್ತು ತೇಜಸ್ಸಿನ ಸಾಮರ್ಥ್ಯ ಮುಂತಾದ ಇತರ ಗುಣಗಳ ಶಕ್ತಿಯು ಎಷ್ಟರ ಮಟ್ಟಿಗೆ ಆಕೆಯ ಸೈನ್ಯದ ಮೇಲೆ ನಿಂತಿತ್ತೆಂದರೆ, ಅವರೆಲ್ಲರೂ ತಮ್ಮ ತಮ್ಮ ಶಿರಸ್ಸನ್ನ ಅಂಗೈಯ್ಯಮೇಲೆ ತೆಗೆದುಕೊಂಡು, ಇಂಗ್ರೇಜಿ ಸೈನ್ಯದವರ ಸಂಗಡ, ಅಖಂಡವಾದ ಯುದ್ಧ ಮಾಡುವದಕ್ಕೆ ಉದ್ಯುಕ್ತರಾದರು. ರಾಣೀ ಸಾಹೇಬಳ ಕಡೆಯಲ್ಲಿ ಖಾಸಾ ಸೈನ್ಯದ ಸಂಖ್ಯೆ ಬಹಳ ಸ್ವಲ್ಪ ವಿದ್ದಾಗ್ಯೂ, ಅವರ ಶರೀರದಲ್ಲಿ, ರಣಾವೇಶದ ಛಾಳಿಯು ಸಂಪೂರ್ಣವಾಗಿ ಸಂಚಾರ ಮಾಡಿದ್ದರಿಂದ, ಅದು ಬಹಳ ಸೇನೆಗಿಂತಲೂ ಹೆಚ್ಚಾಗಿ ಹೋಗಿತ್ತು. ಇದು ಹಾಗಿರಲಿ. ಈ ರೀತಿಯಾಗಿ ರಾಣೀ ಸಾಹೇಬಳು ತನ್ನ ಪಾರ್ಶ್ವವನ್ನು ಬಲಪಡಿಸಿಕೊಂಡು, ಬಹಳ ದಕ್ಷತೆಯಿಂದ ಇದ್ದಳು. ಅತ್ತಲಾಗಿ ಶ್ರೀಮಂತರಾವ್ ಸಾಹೇಬ್ ಪೇಷ್ವೆ, ತಾತ್ಯಾಟೋಪೆ, ಮತ್ತು ಇತರ ದೊಡ್ಡ ದೊಡ್ಡ ಸರ್ದಾರರು ತಮ್ಮ ಕೈಕೆಳಗಿನ ಸೈನ್ಯವನ್ನು ಸಿದ್ಧಪಡಿಸಿಕೊಂಡು, ತಮ್ಮ ತಮ್ಮ ಸ್ಥಾನವನ್ನು ಸಂರಕ್ಷಣೆ ಮಾಡುತ್ತಲೇ ಇದ್ದರು. ಅವರ ಸೈನ್ಯದಲ್ಲಿ ಸಿಂಧ್ಯಾನ ಜನಗಳು ಹೆಚ್ಚಾಗಿ ಯಿದ್ದು, ಅದರ ಮುಖ್ಯಾಧಿಕಾರಿಯು ಶಿಂಧೇ ಸರ್ಕಾರದ ಕಡೆಯ ಸೇವಕನಾಗಿದ್ದ ಕಾರಣ ಹೊರಥರಕ್ಕೆ ಮಾತ್ರ, ಅವನ ಸಿದ್ಧತೆಗೆ ಪ್ರಚಂಡ ಸ್ವರೂಪವು ತೋರುತ್ತಿತ್ತು. ತಥಾಪಿ, ಇದ್ದ ಸಂಗತಿ ನಿಜವಾಗಿ ನೋಡಿದರೆ, ಆತನ ಸೈನ್ಯದಲ್ಲಿ ಸಿಸ್ತಿನಮೇಲಿನ ವ್ಯವಸ್ಥೆಯು ಮೂಲತಃ ಇಲ್ಲದೆ, ಸರ್ವವೂ ಗಲಭೆಯಾಗಿತ್ತು.

ಇದು ಹಾಗಿರಲಿ. ತಾರೀಖು 17ನೇ ದಿವಸ, ಪ್ರತ್ಯೇಕ ಪ್ರತ್ಯೇಕ ಪಾರ್ಶ್ವದಲ್ಲಿ, ಇಂಗ್ರೇಜಿ ಸೇನಾಪತಿಗಳು ಗ್ವಾಲಿಯರ್ ಮೇಲೆ ಹತ್ತಿ, ಅದನ್ನ ತೆಗದುಕೊಳ್ಳುವ ಪ್ರಯತ್ನವನ್ನು ಮಾಡಲು ಉದ್ಯುಕ್ತರಾದರು. ಕೋಟಾಕಿ ಸರಾಯಿ ಸಮೀಪದ, ಅನೇಕ ತಗ್ಗು ಎತ್ತರದ ಭಾಗಗಳ ಮಧ್ಯದಿಂದ ಫೂಲ್‌ಬಾಗಿನ ವರೆಗೂ, ಹೋಗುವ ಗ್ವಾಲಿಯರ್‌ನ ಮಾರ್ಗವನ್ನ ಸಾಧನ ಮಾಡಿಕೊಂಡು, ಅದರ ಪಾರ್ಶ್ವದಲ್ಲಿ ದಂಗೆಯ ಸೈನ್ಯದ ಭಾಗವನ್ನು ಒಡಕೊಳ್ಳುತ್ತಾ, ನೆಟ್ಟಗೆ ಫೂಲ್‌ಬಾಗಿನಮೇಲೆ ಪ್ರಯಾಣ ಮಾಡಬೇಕೆಂಬ ಉದ್ದೇಶದಿಂದ, ಬ್ರಿಗೇಡಿಯರ್ ಸ್ಮಿತ್ ಸಾಹೇಬನು ತನ್ನ ಬಲವಾದ ಸೈನ್ಯವನ್ನು ತೆಗೆದುಕೊಂಡು ಮುಂದುಗಡೆಗೆ ಬಂದನು. ಇಂಗ್ರೇಜಿ ಸೈನ್ಯವು ಎದುರಿಗೆ ಪ್ರಯಾಣಮಾಡಿ ಬರುತ್ತದೆ ಎಂಬುವದನ್ನ ನೋಡುತ್ತಲೆ, ರಾಣೀ ಸಾಹೇಬಳು ತನ್ನ ಸೈನ್ಯಕ್ಕೆ, ಯುದ್ಧ ಮಾಡಬೇಕೆಂತ ಅಪ್ಪಣೆ ಕೊಟ್ಟಳು. ಇಲ್ಲಿ ಅಲ್ಲಿ ತುತ್ತೂರಿ, ನಗಾರಿ, ಮುಂತಾದ ರಣವಾದ್ಯಗಳನ್ನು ಬಾರಿಸುವಧಕ್ಕೆ ಹಚ್ಚಿದ್ದರಿಂದ, ಸರ್ವ ಆಕಾಶಮಂಡಲವು

ರಣವಾದ್ಯದ ಧ್ವನಿಯಿಂದ ತುಂಬಿಹೋಯಿತು. ಆಕೆಯ ಶಸ್ತ್ರಧಾರಿಗಳಾದ ಪರಾಕ್ರಮ ಧೀರ ಸವಾರರು ಪ್ರಳಯಕಾಲದ ರುದ್ರನಂತೆ ರೋಷವೆದ್ದು, ತಮ್ಮ ಕರ್ತವ್ಯವನ್ನು ಚನ್ನಾಗಿ ತೋರಿಸುವದಕ್ಕಾಗಿ, ತಮ್ಮ ಪ್ರಿಯಸ್ವಾಮಿನಿಯ ಸಂಗಡ ಕೂಡ್ಲೆ ಮುಂದಕ್ಕೆ ಬಂದು, ಇಂಗ್ರೇಜಿ ಸೈನ್ಯಕ್ಕೆ ಎದೆಗೊಟ್ಟು ಘೋರತರವಾಗಿ ಯುದ್ಧಕ್ಕೆ ಪ್ರಾರಂಭಿಸಿದರು. ಮಹಾರಾಣಿ ಲಕ್ಷ್ಮೀಬಾಯಿ ಸಾಹೇಬಳು, ಶೌರ್ಯ ಆವೇಶದ ಶಿಖರಕ್ಕೆ ಹೋಗಿ, ಆದಿವಸವೆಲ್ಲಾ ಇಂಗ್ರೇಜಿ ಸೈನ್ಯದ ಸಂಗಡ ಯುದ್ಧ ಮಾಡುತ್ತಿದ್ದಳು. ಬ್ರಿಗೇಡಿಯರ್ ಸ್ಮಿತ್ ಸಾಹೇಬನು ಮಹಾಶೂರನಾಗಿದ್ದ ಕಾರಣ, ಅವನೂಕೂಡ ಆಕೆಯಸಂಗಡ ಬಹಳ ನಿಕರವಾದ ಯುದ್ಧ ಮಾಡಿದನು. ಉಭಯಪಕ್ಷದಲ್ಲಿಯೂ ಅನೇಕ ಜನಗಳು ಸತ್ತುಹೋದರು. ಇಲ್ಲಿ ಅಲ್ಲಿ ರಣಘರ್ಜನೆಯು ಕೇಳುತ್ತಿತ್ತು. ಸರ್ವ ಆಕಾಶವು ಹೊಗೆ ಮತ್ತು ಧೂಳಿನಿಂದ ತುಂಬಿಹೋಯಿತು. ಆವೇಳೆಯ, ರಣಧೂಳಿನ ವರ್ಣನೆಯನ್ನು ಹೆಚ್ಚಿಗೆ ಏಕೆ ಮಾಡಬೇಕು? ಆ ಸಮಯದಲ್ಲಿ ರಾಣೀಸಾಹೇಬಳು ಸ್ವಲ್ಪವೂ ಗಡಬಿಡಿ ಮಾಡದೆ, ತನ್ನ ಸೈನ್ಯದ ಕಟ್ಟು ಹರಿಯಲಿಕ್ಕೆ ಬಿಡದೆ ಇರುವದಕ್ಕಾಗಿ, ಅಪಾರವಾದ ಶ್ರಮ ತೆಗೆದುಕೊಳ್ಳುತ್ತಿದ್ದಳು. ಆದ್ದರಿಂದ ಆಕೆಯ ವಜ್ರದಂಥ ದುರ್ಭೇದ್ಯ ಮತ್ತು ಜಯಿಸಲಸಾಧ್ಯವಾಗಿ ತೋರುವ ಸೇನಾ ವ್ಯೂಹವನ್ನು ಒಡೆದುಕೊಂಡು ಹೋಗುವದಕ್ಕೆ ಅಸಮರ್ಥನಾಗಿ, ಆ ರಣಧುರಂಧರ ಇಂಗ್ರೇಜಿ ಯುದ್ಧಶಾಲಿಗೆ ತನ್ನ ಬಲಾಢ್ಯವಾದ ಸೈನ್ಯವನ್ನು ತೆಗ್ಗಿನ ಪ್ರದೇಶದಿಂದ ಎರಡನೇ ಪಾರ್ಶ್ವಕ್ಕೆ ತೆಗೆದುಕೊಂಡು ಹೋಗಬೇಕಾದ ಸಂಭವಬಂದು ಒದಗಿತು. ತಾರೀಖು 18 ನೇ ದಿವಸ ಬೆಳಗಾಯಿತು. ರಾಣೀಸಾಹೇಬಳ ರಣಶೌರ್ಯವನ್ನು ನೋಡಿ, ಸಾಕಾಗಿಹೋಗಿದ್ದ ಇಂಗ್ರೇಜಿ ಸೇನಾಪತಿಯ ಶರೀರದಲ್ಲಿ ನಿರಾಶೆಯ ದೆಶೆಯಿಂದ ದ್ವಿಗುಣವಾದ ಆವೇಶ ಉತ್ಪನ್ನವಾಯಿತು. ಅವನು ತನ್ನ ಸೈನ್ಯದ ಕೆವಾಯಿತು ತೆಗೆದುಕೊಂಡು, ಅಡ್ಡ ಮಾರ್ಗವಾಗಿ ಬೇರೇ ಪಾರ್ಶ್ವಕ್ಕೆ ತನ್ನ ಸೈನ್ಯವನ್ನು ತಿರುಗಿಸಿದನು. ಅಲ್ಲಿ ಅವನಿಗೆ ಕರ್ನಲ್‌ರೇಸ್ ಸಾಹೇಬನ ಭಾಗದ ಸೈನ್ಯವು ಸಂಧಿಸಿತು. ಅನಂತರ ಉಭಯತರು ಬಹಳ ಚಾತುರ್ಯದಿಂದ, ತಮ್ಮ ಪಾಯದಳವನ್ನು ಆ ತೆಗ್ಗಿನ ಸುರಕ್ಷಿತ ಭಾಗದಲ್ಲಿ, ಇಡುವಯುಕ್ತಿ ತೆಗೆದು, ವಿರುದ್ಧ ಪಕ್ಷದ ಸೈನ್ಯದಮೇಲೆ, 8ನೇ ಹಜಾರ್ಸ್ ಪಟಾಲಂನ ಕುದುರೆಯ ಸವಾರರನ್ನ ಬೇರೆ ಬೇರೆ ಪಾರ್ಶ್ವದಲ್ಲಿ, ಯುದ್ಧ ಮಾಡುವದಕ್ಕೆ ನೇಮಿಸಲು ನಿಶ್ಚಯಿಸಿದರು. ಅವರು ಕರ್ನಲ್ ಹಿಕಸ್ ಮತ್ತು ಕ್ಯಾಪ್ಟನ್ ಹೋನೇಜ್‌ರುಗಳಂಥ, ದೊಡ್ಡ ದೊಡ್ಡ ಧೀರರ ಸಹಾಯವನ್ನು ತೆಗೆದುಕೊಂಡು, ಶತ್ರುಗಳಮೇಲೆ, ಸಹಿಸಲಿಕ್ಕೆ ಅಸಾಧ್ಯವಾದ ಏಟುಗಳನ್ನು ಹೊಡೆಯುವದಕ್ಕೆ ಏರ್ಪಾಟು ಮಾಡಿದರು. ಒಂದೇ ಮನಸ್ಸಿನ ಇಂಗ್ರೇಜಿ ಸೇನಾಧಿಕಾರಿಗಳೆಲ್ಲಾ ಯುದ್ಧಕ್ಕೆ ಸಿದ್ಧರಾಗಿ ಕೃತಾಂತನಂತೆ ವಿರುದ್ಧ ಪಕ್ಷವನ್ನು ತಿಂದುಹಾಕುವದಕ್ಕೆ ಹೊರಟರು. ರಾಣೀಸಾಹೇಬಳು ತನ್ನ ಸೈನ್ಯಸಹಿತ ಯುದ್ಧಕ್ಕೆ ಸಿದ್ಧಳಾದಳು. ಆಕೆಯು ತನ್ನ ಯುದ್ಧವಸ್ತ್ರವನ್ನು ಧಾರಣೆಮಾಡಿ ಕೊಂಡಳು. ತಲೆಗೆ ಭರ್ಜರೀ ಪಾಗು, ಮೈಯಿಗೆ ತುಂಬಾ ಅಂಗಿ, ಕಾಲಿಗೆ ಪಾಯಿಜಾಮಿ ಮತ್ತು ಕುತ್ತಿಗೆಯಲ್ಲಿ ಮುತ್ತಿನಸರ, ಸಹಾ ಹಾಕಿಕೊಂಡು ಆ

ರಣಲಕ್ಷ್ಮಿಯು ನೋಡುವದಕ್ಕೆ ಸುಂದರವಾದ ಕುದುರೆಯಮೇಲೆ, * ವಿರಾಜಿತಳಾಗಿ ತನ್ನ ಶಸ್ತ್ರವನ್ನು ಒರೆಯಿಂದ ಹಿರಿದುಕೊಂಡು, ಅದರ ದಿವ್ಯವಾದ ತೇಜಸ್ಸಿನಿಂದ, ತನ್ನ ಸೇನೆಯ ವ್ಯವಸ್ಥೆಯನ್ನು ಮಾಡಲುದ್ಯುಕ್ತಳಾದಳು. ನಾಲ್ಕು ಕಡೆಯ ಇಂಗ್ರೇಜಿ ಸೈನ್ಯವು ಪ್ರತ್ಯೇಕ ಪ್ರತ್ಯೇಕ ಪಾರ್ಶ್ವಕ್ಕೆ, ಗ್ವಾಲಿಯರ್‌ನ್ನು ಜಯಿಸುವ ಉದ್ದೇಶದಿಂದ ಘಾಳಿಯಹಾಗೆ ಬಹಳ ವೇಗದಿಂದ, ಪ್ರಯಾಣಮಾಡಿದರು. ಸರ್ ಹ್ಯೂರೋಜ್ ಸಾಹೇಬನು, ಒಂದು ಪಾರ್ಶ್ವದಲ್ಲಿ ದಂಗೆಯವರಮೇಲೆ ಬಿದ್ದನು; ಮತ್ತು ಬ್ರಿಗೇಡಿಯರ್ ಸ್ಮಿತ್ ಸಾಹೇಬನು, ತನ್ನ ಕೈಕೆಳಗಿನ ಅಧಿಕಾರಿಗಳ ಸಹಿತ, ರಾಣಿಸಾಹೇಬಳ ಪಾರ್ಶ್ವದಕಡೆಗೆ, ಪ್ರತ್ಯೇಕ ಪ್ರತ್ಯೇಕ ದಿಶೆಯಿಂದ ಪ್ರಯಾಣ ಮಾಡಿದನು.

ರಾಣೀಸಾಹೇಬಳು ದೊಡ್ಡ ಆವೇಶದಿಂದ ತನ್ನ ಸವಾರರು ಸಹಿತ ಇಂಗ್ರೇಜಿ ಸೈನ್ಯದ ಸಂಗಡ ಯುದ್ಧಕ್ಕೆ ಪ್ರಾರಂಭಿಸಿದಳು. ಅವಳು ತನ್ನ ಘಟ್ಟಿಗ ಕುದುರೆಯ ಸವಾರರನ್ನು ಮತ್ತು ಪರಮ ವಿಶ್ವಾಸಿಗಳಾದ, 2, 4 ಸೇವಕರನ್ನು ಸಂಗಡ ತೆಗೆದುಕೊಂಡು, ಇಂಗ್ರೇಜಿ ಸೈನ್ಯದ ಸಮ್ಮುಖವಾಗಿ ಪ್ರಯಾಣಮಾಡಿದಳು; ಮತ್ತು ಈಚೆಯ ಕಡೆಯಿಂದ ಕೋಪೋದ್ರೇಕದಲ್ಲಿದ್ದ ಇಂಗ್ರೇಜಿ ಹುಜೇರ್ಸ್ ಪಟಾಲಂನ ಸವಾರರು ಮುಂದೆ ಬಂದರು. ಎರಡು ತಂಡಗಳು, ಎದುರಾಗಿ ಬಂದು ಉಭಯಪಕ್ಷವೂ ಸೇರಿ ಘನಘೋರ ಯುದ್ಧಕ್ಕೆ ಪ್ರಾರಂಭವಾಯಿತು. ಪ್ರಥಮದಲ್ಲಿ, ಯಂತರದ ಯುದ್ಧ ನಡೆದು, ಈರ್ಷೆ ಹುಟ್ಟಿದ ಉಭಯ ಪಕ್ಷದ ರಣಶೂರರು ತಮ್ಮ ತಮ್ಮಲ್ಲಿ ಶಪಥಮಾಡಿಕೊಂಡರು. ರಾಣೀ ಸಾಹೇಬಳು ವಿದ್ಯುಲ್ಲತೆ (ಮಿಂಚು) ಯಂತೆ ತನ್ನ ಸೈನ್ಯ ಮಧ್ಯದಲ್ಲಿ ಹೊಳೆಯುತ್ತಿದ್ದಳು. ಆಕೆಯು ಜನಗಳಿಗೆ ಉತ್ಸಾಹ ತುಂಬಿ, ಒಂದೇ ಉಸುರಿಗೆ ಹೊರಟರು ; ಮತ್ತು ಆಕೆಯು ತನ್ನ ಜೀವವನ್ನು ಕಲ್ಲುಮಾಡಿಕೊಂಡು, ಶಿಪಾಯಿಗಿರಿಗೆ ಪರಾಕಾಷ್ಟೆ ಮಾಡಿಬಿಟ್ಟಳು. ಆಕೆಯ ಸಂಗಡ ಯುದ್ಧ ಮಾಡಲು ಇಂಗ್ರೇಜಿ ಸರ್ದಾರರೂ ಕೂಡ, ಆಕೆಗೆ ಸರಿಯಾದ ರಣ ಧುರಂಧರರಾಗಿದ್ದ ಕಾರಣ, ಅವರೂನೂ ತಮ್ಮ ಪರಾಕ್ರಮವನ್ನ ಚೆನ್ನಾಗಿ ವ್ಯಕ್ತಪಡಿಸಿದರು. ಅವರ ರಣಶೂರ ಸವಾರರು ಬಹಳ ಬಲವಾಗಿ ಪ್ರಯಾಣಮಾಡಿ, ರಾಣೀ ಸಾಹೇಬಳ ಸೈನ್ಯದಮೇಲೆ ಆಗಾಗ್ಯೆ ಶಿಡಲಿನಂತೆ ಬಿದ್ದು, ಶಸ್ತ್ರವನ್ನ ಗುರಿಯಿಟ್ಟು, ಆಕೆಯ ಪುಷ್ಕಳ ಜನಗಳನ್ನ ಯಮಪುರಕ್ಕೆ

---

* ರಾಣೀಸಾಹೇಬಳ ಮೊದಲಿನ ಕುದುರೆಯು ಪೂರ 2 ದಿವಸ ಯುದ್ಧಮಾಡಿದ್ದರಿಂದ ಸೋತುಹೋಗಿತ್ತು. ಆದ್ದರಿಂದ ಅದನ್ನು ಲಾಯದಲ್ಲಿ ಕಟ್ಟಿ, ಸಿಂಧ್ಯೆ ಸರ್ಕಾರದ ಅಶ್ವಾಲಯದಿಂದ, ನೋಡುವದಕ್ಕೆ ಸುಂದರವಾದ ಈ ಕುದುರೆಯನ್ನ ತಂದಿದ್ದಳು. ಅದು ನೋಡುವದಕ್ಕೆ ಚನ್ನಾಗಿತ್ತು. ಪರಂತು, ಯುದ್ಧದ ಕೆಲಸದಲ್ಲಿ, ಕೇವಲ ನಿರುಪಯೋಗವಾಗಿ ಮತ್ತು ಹೊಸದಾಗಿತ್ತೆಂತ, ಅಲ್ಲಿನ ಜನಗಳು ಹೇಳುತ್ತಾರೆ.

ಕಳುಹಿಸಿದರು. ಪರಂತು ರಾಣೀ ಸಾಹೇಬಳ, * ಧೈರ್ಯದ ಯೋಗದಿಂದ ಸ್ವಲ್ಪವೂ ಭಂಗವಾಗದೆ ಆಕೆಯು ಪುನಃ ಸ್ವಾಭಿಮಾನದ ವಿಲಕ್ಷಣ ಸ್ಫೂರ್ತಿಯಿಂದ ತನ್ನ ಕುದುರೆಯ ಸವಾರರಿಗೆ ಪ್ರೋತ್ಸಾಹ ಕೊಟ್ಟು ಪುನಃ ತಿರುಗಿ ಪ್ರಯಾಣ ಮಾಡಿಸುತ್ತಾ, ತನ್ನ ಕ್ಷಾತ್ರಿಯ ಧರ್ಮವನ್ನು ವ್ಯಕ್ತಪಡಿಸಿ, ತನ್ನ ಯೋಗ್ಯತೆಯನ್ನ ಇಟ್ಟುಕೊಂಡು, ಯುದ್ಧ ನಡೆಸುತ್ತಾ ಬಂದದ್ದರಿಂದ, ಉಭಯ ಪಕ್ಷದ ಸೈನ್ಯವು ಕೇವಲ ಬಲಹೀನವಾಯಿತು. ಮನುಷ್ಯರು ಗುಂಪಾಗಿ ಹೋಗಿ, ನಾಲ್ಕು ಕಡೆಗಳಲ್ಲಿಯೂ ರಣಧೂಳಿದ್ದಿತು. ಪರಂತು, ಯಶಶ್ರೀಯಳು ಯಾರಿಗೂ ವಶಳಾಗಲಿಲ್ಲ.

ಸರ್ ಹ್ಯೂರೋಜ್ ಸಾಹೇಬನು, ಒಂದು ಸಮಯವನ್ನು ನೋಡಿ, ಮುರಾರಿನ ಪಾರ್ಶ್ವದಲ್ಲಿನ ಪೇಷ್ವೆಯ ಸೈನ್ಯದಮೇಲೆ ಹೋಗಿ, ಎರಡು ಮೋರ್ಚೆಗಳನ್ನೂ ಸ್ವಾಧೀನ ತೆಗೆದುಕೊಂಡು ಪೇಷ್ವೆಯ ಸೇನೆಯನ್ನು ಓಡಿಸಿಬಿಟ್ಟನು. ಈ ವರ್ತಮಾನವು ರಾಣೀ ಸಾಹೇಬಳ ಸೈನ್ಯದವರಿಗೆ ತಿಳಿಯುತ್ತಲೆ, ಅವರ ಧೈರ್ಯವು ಕುಂದಿಹೋಯಿತು. ಅವರ ಪಾಯದಳದ ಸರದಾರನು, ಇಂಗ್ರೇಜಿ ಸೈನ್ಯದ ಮುಂದೆ ತಾವು ನಿಲ್ಲುವದಕ್ಕೆ ಆಗುವದಿಲ್ಲವೆಂತ ತಿಳುಕೊಂಡಿದ್ದರಿಂದಲೋ, ಅಥವ ಸಿಂಧ್ಯೇ ಸರ್ಕಾರಕ್ಕೆ ವಿರುದ್ಧವಾಗಿ ಯುದ್ಧ ಮಾಡತಕ್ಕದ್ದು ಯೋಗ್ಯವಾದ್ದಲ್ಲವೆಂಬ ಸುವಿಚಾರವು, ಆತನ ಮನಸ್ಸಿನಲ್ಲಿ ಹಂಬಿದ್ದರಿಂದಲೋ, ಆತನು ಕೇವಲ ಉದಾಸೀನನಾದನು. ರಾಣೀ ಸಾಹೇಬಳು ಮತ್ತು ಅವಳ ಸವಾರರು ಯೇಕಪ್ರಕಾರವಾಗಿ ಯುದ್ಧ ನಡೆಸುತ್ತಿದ್ದರು. ಇಂಗ್ರೇಜಿಯವರ ಸಹಿಸ

---

* ರಾಣಿಸಾಹೇಬಳ, ಈ ಕೊನೆಯ ಯುದ್ಧ ಪ್ರಸಂಗದ ವರ್ಣನೆಯನ್ನು ಮಾಡುವಾಗ G. L. D. ಯಂಬ ಒಬ್ಬ ಲೇಖಕನು ಮುಂದಿನ ವೃತ್ತಾಂತವನ್ನು ಬರೆದಿರುತ್ತಾನೆ.—

"She was surprised in her camp near the city of Kotaki—Sarai in Gwalior. When this took place, Ranee Luchmee Bai and her sister, who also was a lady of remarkable valour and beauty, were seated together in the camp in male attire and drinking sherbet. Immediately the beautiful Ranee went over the field and made a firm stand against the array of Sir Hugh Rose. She led her troops to repeated and fierce attacks, and though her ranks were pierced through and gradually thinner and thinner, the Ranee was seen in the foremost rank, rallying her shattered troops and performing prodigies of valour. But all

ಅಸಾಧ್ಯವಾದ ಪೆಟ್ಟಿನಿಂದ, ಆಕೆಯ ಅನೇಕ ಶೂರರಿಗೆ ಘಾಯವಾಗಿ, ಮೃತ್ಯುವಿನ ಬಾಯಿಗೆ ಬಿದ್ದು ಹೋಗಿದ್ದರು. ಆದರೆ ಮೋರ್ಚೆಯನ್ನು ಸಂರಕ್ಷಣೆ ಮಾಡತಕ್ಕ ಬೆನ್ನು ಹಿಂದಿನ ಪಾಯದಳದ ಮತ್ತು ತೋಫಖಾನೆಯ ಆಶೆಯಮೇಲೆ ರಾಣೀ ಸಾಹೇಬಳಿಗೆ ಸ್ವಲ್ಪವೂ ವ್ಯಸನ ತೋರುತ್ತಿರಲಿಲ್ಲ. ಪರಂತು, ಏಕಾಏಕಿ ಅವರ ಆಶೆಯು ತಪ್ಪಿ ಹೋಗಿ ಆಕೆಗೆ ಆ ನಿರ್ವಾಣ ಪ್ರಸಂಗದಲ್ಲಿ ತನ್ನ ಕಾಂತಿಯುಳ್ಳ ಶಸ್ತ್ರದ ಹೊರ್ತು, ಇನ್ನ್ಯಾವ ಆಶ್ರಯವೂ ಉಳಿಯಲಿಲ್ಲ.

ಬ್ರಿಗೇಡಿಯರ್ ಸ್ಮಿತ್ ಸಾಹೇಬನು 2 ನೇ ಪಾರ್ಶ್ವಕ್ಕೆ, ರಾಣೀ ಸಾಹೇಬಳ ಪಾಯದಳ ಮತ್ತು ತೋಫಖಾನೆಯ ಮೇಲೆ ಯುದ್ಧ ಮಾಡುವದಕ್ಕಾಗಿ ಕಳುಹಿಸಿದ್ದ ಕರ್ನಲ್ ಹಿಕ್ಸ ಮತ್ತು ಕ್ಯಾಪ್ಟನ್ ಹೇನೇಜ್, ಈ ಇಬ್ಬರು ಅಧಿಕಾರಿಗಳು, ತಮ್ಮ 8 ನೇ ಹುಜಾರ್ಸ ಸೈನ್ಯದ ಸಮರ್ಥರಾದ ಯುದ್ಧಶಾಲಿಗಳನ್ನು, ಮುಂದಕ್ಕೆ ತೆಗೆದು, ರಾಣೀ ಸಾಹೇಬಳ ಪಾಯದಳದ ಮೇಲೆ ಬೀಳುವದಕ್ಕಾಗಿ ಬಹಳ ಯುಕ್ತಿಯಿಂದ, ಆ ಕಡೆಗೆ ಪ್ರಯಾಣಮಾಡಿದರು. ಪರಂತು, ಆ ಸೈನ್ಯವು, ಇಂಗ್ರೇಜಿ ಸೈನ್ಯವು ದೃಷ್ಟಿಗೆ ಬಿದ್ದಕೂಡಲೆ, ರಣಾಂಗಣವನ್ನು ಬಿಟ್ಟು ಓಡಿಹೋಯಿತು. ಆದ್ದರಿಂದ, ಅವರಿಗೆ ಆ ಮೋರ್ಚೆಯ ಮೇಲಿನ ಎರಡು ತೋಫುಗಳು ಮತ್ತು ಇತರ ಯುದ್ಧ ಸಾಹಿತ್ಯಗಳು ಸಹ ಚನ್ನಾಗಿ ಸಿಕ್ಕಿತು. ಆದಕಾರಣ, ಆ ವಿಜಯೋತ್ಸವದಿಂದ ಜಯಧ್ವನಿಯನ್ನು ಮಾಡಿ, ರಾಣೀ ಸಾಹೇಬಳ ಸಂಗಡ, ಬಹಳ ಬಲವಾಗಿ ಯುದ್ಧ ನಡೆಸಲು ಪ್ರಾರಂಭಿಸಿದರು.

ನಾಲ್ಕು ಕಡೆಗಳಿಂದ, ಇಂಗ್ರೇಜಿ ಸೈನ್ಯದ ಮುತ್ತಿಗೆ ಬಿದ್ದು, ದಂಗೇಖೋರರ ಮೇಲೆ ತೋಫಿನ ಮತ್ತು ಬಂದೂಕಿನ ಏಟುಗಳು ಬೀಳಲು ಪ್ರಾರಂಭವಾದವು. ದಂಗೇ

---

was of no avail. The camel corps, pushed up by Sir Hugh Rose in person broke her last line. Still the dauntless and heroic Ranee held her own."

*The National Guardian December* 14, 1891.

ಈ ಬರವಣಿಗೆಯಲ್ಲಿ, ರಾಣೀ ಸಾಹೇಬಳ ಸಂಗಡ ಆಕೆಯ ಸಹೋದರಿ ಯಿದ್ದಳೆಂತಲೂ ಬರೆದಿರುತ್ತಾನೆ. ಪರಂತು, ಅದು ತಪ್ಪಾಗಿದೆ. ಆಕೆಯ ಸಂಗಡ, ಮುಂದರಾ ಮತ್ತು ಕಾಶಿ, ಎಂಬ ಇಬ್ಬರು ದಾಶಿಯರಿದ್ದರು. ಅವರು ಬಹಳ ಸುಂದರರಾಗಿದ್ದು, ರಾಣೀ ಸಾಹೇಬಳ ಹಾಗೆಯೇ, ಗಂಡು ವಸ್ತ್ರವನ್ನು ಹಾಕಿಕೊಂಡಿದ್ದರು. ಆದರಿಂದ ಮೇಲಿನ ಬರವಣಿಗೆಯಲ್ಲಿ, ರಾಣೀ ಸಾಹೇಬಳು ಸರ್ ಹ್ಯೂರೋಜ್‌ನ ಸಂಗಡ ಯುದ್ಧ ಮಾಡುತ್ತಿದ್ದಳೆಂತ ಹೇಳಿದ್ದಾನೆ. ಪರಂತು, ಆ ಸಮಯದಲ್ಲಿ ಅವಳು ಸ್ವತಃ ಆತನ ಸಂಗಡ ಯುದ್ಧಮಾಡುತ್ತಿದ್ದಳೆಂತ ಕಂಡು ಬರುವದಿಲ್ಲ.

ಖೋರರ ಶೂರ ಮುಂದಾಳುಗಳು, ಅಂಥಾ ಪೆಟ್ಟುಗಳನ್ನು ಸಹ ಲಕ್ಷ್ಯಮಾಡದೆ, ಇಂಗ್ರೇಜಿ ಸೈನ್ಯದ ಸಂಗಡ ಹೆಣಗಾಡುತ್ತಲೇ ಇದ್ದರು. ಪರಂತು, ಅವರ ಸೈನ್ಯದ ವ್ಯವಸ್ಥೆಯು ಸರಿಯಾಗಿ ಇಲ್ಲದೇ ಇದ್ದದ್ದರಿಂದಲೂ, ಮತ್ತು ಅವರಿಗೆ ಯುದ್ಧ ಕಲೆಯ ಸರಿಯಾದ ಶಿಕ್ಷಣ ಇಲ್ಲದೇ ಇದ್ದದ್ದರಿಂದಲೂ, ಅವರು ಇಂಗ್ರೇಜಿಯವರ ಸಹಿಸ ಲಸಾಧ್ಯ ವಾದ ಹೊಡೆತದಲ್ಲಿ, ಶಿಕ್ಕಿದಕೂಡಲೆ, ಜ್ವರ ಬಂದು ಪ್ರಾಣವನ್ನು ಸಂರಕ್ಷಣೆ ಮಾಡಿಕೊ ಳ್ಳುವದಕ್ಕಾಗಿ, ಹತ್ತುದಿಕ್ಕುಗಳಲ್ಲಿಯೂ ಓಡಿಹೋಗಲು ಪ್ರಾರಂಭಿಸಿದರು. ತಾತ್ಪರ್ಯ ವೇನಂದರೆ, ಇಂಥಾ ಸೈನ್ಯದ, ಆಧಿಪತ್ಯವನ್ನು ಸ್ವೀಕಾರ ಮಾಡಿದ ಅವಳ ಪರಾಕ್ರಮವು ಹೇಗೆ ಹೊರಪಟ್ಟೀತು? ಇದು ಹಾಗಿರಲಿ. ಶ್ರೀಮಂತರಾವ್ ಸಾಹೇಬ್ ಪೇಷ್ವೆಯ ಹಣೆ ಯಲ್ಲಿ, ಸ್ವರಾಜ್ಯ ಸುಖಭೋಗವನ್ನು ತೆಗೆದುಕೊಳ್ಳುವದು, ಮೂಲತಃ ಬರೆದಿಲ್ಲ ವಾದ್ದರಿಂದ ಆತನ ಪಕ್ಷಕ್ಕೆ ಗ್ವಾಲಿಯರ್‌ನಲ್ಲಿ ಯಾದರೂ, ಎಲ್ಲಿಂದ ಯಶಸ್ಸು ಬಂದೀತು? ಇಂಗ್ರೇಜಿ ಸೈನ್ಯದ ಯುದ್ಧಕಲಾ ಚಾತುರ್ಯವು ವಿಶೇಷವಾಗಿದ್ದ ಕಾರಣ, ಮತ್ತು ಅವರ ಯುಕ್ತಿ, ಧೋರಣೆ, ಮತ್ತು ಕಾರ್ಯ ನಿರ್ವಾಹಶಕ್ತಿ, ಅಪರೂಪವಾಗಿದ್ದ ಕಾರಣ ಅವರ ಮನೋರಥವು ಪರಿಪೂರ್ಣ ವಾಗುತ್ತಾ ಬಂತು. ಪರಾಕ್ರಮವನ್ನು ತೋರಿಸಿ, ಯಶಸ್ಸು ಸಂಪಾದಿಸುವದು, ಯಾವದು ಅಸಾಧ್ಯವೋ ಅಂಥಾದ್ದನ್ನ ಬರೇ ಅತರ್ಕಿತವಾದ ಯುಕ್ತಿ ಯಿಂದ ಯುದ್ಧಮಾಡಿ, ಅದನ್ನು ಸಂಪಾದನೆ ಮಾಡಿಕೊಳ್ಳುತ್ತಾ ಬಂದರು. ತಾತ್ಪರ್ಯ ವೇನಂದರೆ, 'ಉಪಾಯೇನಹಿ ಯತ್ಕುರ್ಯಾತ್ತನ್ನಶಕ್ಯಂ ಪರಾಕ್ರಮೈಃ' ಈ ನಿಯಮವು ಅವರ ನಡವಳಿಕೆಯಲ್ಲಿಯೂ ಪ್ರತಿಜ್ಞೆಯಲ್ಲಿಯೂ ತೋರಿಬರುತ್ತಿತ್ತು. ಆದ್ದರಿಂದ, ಅವರ ಈ ಅದ್ವಿತೀಯ ಗುಣದ, ಆನಂದ ದಾಯಕವಾದ ಪರಿಣಾಮವಾಗಬೇಕಾದದ್ದು ಸಹಜವಾಗಿದೆ. ಯುದ್ಧಶಾಸ್ತ್ರ ನಿಪುಣತ್ವದ ಮುಂದೆ, ಬರೇಶೌರ್ಯದ ತೇಜಸ್ಸು ಎಷ್ಟು ಬಿದ್ದೀತು? ಚಾತುರ್ಯ ಕಪಟೋಪಕ್ರಮಗಳ ಮುಂದೆ ಬರೇ ಶಸ್ತ್ರದ ಪ್ರಭಾವವು ಏನು ಕಂಡೀತು? ಮತ್ತು ದೈವಾನುಕೂಲದಮುಂದೆ, ಅಭಾಗ್ಯನದು ಏನು ನಡೆದೀತು? ಇದನ್ನ ಸ್ಪಷ್ಟಪಡಿಸಿ ಹೇಳಬೇಕಾದ್ದೇನೂ ಯಿಲ್ಲ.

ಇದುಹಾಗಿರಲಿ. ರಾಣೀಸಾಹೇಬಳ, ಸಮಯದಲ್ಲಿ ಘಾತುಕಕೊಡತಕ್ಕಂಥ, ಸೈನ್ಯವು, ಯುದ್ಧ ಪ್ರಸಂಗದಲ್ಲಿ ಕೇವಲ ಧೈರ್ಯಗುಂದಿ, ಅಥವಾ ಇತರ ಏನೋಕಾರಣ ದಿಂದ ಓಡಿ ಹೋಯಿತು ಎಂಬುವದನ್ನು ನೋಡುತ್ತಲೆ, ರಾಣೀಸಾಹೇಬಳ ಅಂತಃ ಕರಣವು ದುಃಖದಿಂದ ತುಂಬಿಹೋಯಿತು; ಮತ್ತು ತನಗೆ ಮುಂದೆ ಒಳ್ಳೇದಾಗುವದಿಲ್ಲ ವೆಂತ ಆಕೆಗೆ ಸಂಪೂರ್ಣವಾದ ನಂಬಿಕೆ ಹುಟ್ಟಿತು. ಇಂಗ್ರೇಜಿ ಸೈನ್ಯವು ನಾಲ್ಕು ಕಡೆಗಳಲ್ಲಿಯೂ ಪ್ರಚಂಡ ಸಮುದ್ರದಹಾಗೆ ಹರವಿಕೊಂಡಿತ್ತು; ಮತ್ತು ಅದರ ಗೋಲಿ ಗಳ ಅಲ್ಲೋಲ ಕಲ್ಲೋಲ ಮಾಡತಕ್ಕಂಥಾ ಏಟುಗಳು, ದಂಗೇಖೋರರ ಸೈನ್ಯವನ್ನೆಲ್ಲಾ ಕೇವಲ ದುರ್ದಶೆಗೆ ತಂದಿತ್ತು. ಆ ಭಯಭೀತರಾಗಿದ್ದ, ಭಂಡಖೋರರುಗಳನ್ನ ಕತ್ತ ರಿಸಿ ಹಾಕುವದಕ್ಕೋಸ್ಕರ, ಕೆಂಪು ಪಟಾಲಂನವರು ಅವರಮೇಲೆ ಹರಿದುಬೀಳುತ್ತಿದ್ದರು.

ಆದ್ದರಿಂದ ನಾಲ್ಕು ಕಡೆಗಳಿಗೂ, ರಣಾಗ್ರವು ತುಂಬಿಹೋಗಿತ್ತು. ಇಂಥಾ ಭಯಂಕರ ಪ್ರಸಂಗದಲ್ಲಿ ರಾಣೀಸಾಹೇಬಳು ಅಸಾಧ್ಯವಾದ ಧೈರ್ಯದಿಂದ, ಸಮುದ್ರದಲ್ಲಿ ಬಿರುಗಾಳಿಗೆ ಶಿಕ್ಕಿದ ತರಣಿಯಂತೆ ತನ್ನ ಉಳಿದ ಹತ್ತು, ಇಪ್ಪತ್ತು ಕುದುರೆಯ ಸವಾರರುಗಳನ್ನು ಸಂಗಡ ತೆಗೆದುಕೊಂಡು, ಇಂಗ್ರೇಜಿ ಸೈನ್ಯದ ಕೈಗೆ ಸಿಕ್ಕದಂತೆ ಹೊರಬೀಳುವ ಪ್ರಯತ್ನವನ್ನು ಮಾಡುತ್ತಿದ್ದಳು. ಪರಂತು, ಆಕೆಯ ದುರಾದೃಷ್ಟವು ಮಧ್ಯದಲ್ಲಿಯೇ ಅಡ್ಡ ಬಂದಿದ್ದರಿಂದ, ಅದು ಹೇಗೆ ಸಿದ್ಧಿಗೆ ಬಂದೀತು ? ಸನ್ 1858 ನೇ ಇಸವಿ ಜೂನ್ ತಾರೀಖು 18 ನೇ ದಿವಸ (ಜೇಷ್ಠ ಶುದ್ಧ ಸಪ್ತಮಿ, ಸಂವತು 1918) ಸಹಸ್ರ ಕಿರಣಗಳ ಸೂರ್ಯನಾರಾಯಣ ದೇವನು ಉಭಯ ಸೈನ್ಯದಲ್ಲಿನ ಮಹಾ ಯುದ್ಧಶಾಲಿಗಳ ಅತುಳ ಪರಾಕ್ರಮವನ್ನು ನೋಡಿ, ಅವರಿಗೆ ಸೂರ್ಯಮಂಡಲವನ್ನು ಭೇದಿಸಿಕೊಂಡು * ಸ್ವರ್ಗದ್ವಾರವನ್ನ ಜಯಿಸುವದಕ್ಕಾಗಿ, ತನ್ನ ಅಪ್ಪಣೆಯನ್ನು ಕೊಡುವದಕ್ಕೋಸ್ಕರ, ಏಕಪ್ರಕಾರ ಪ್ರಜ್ವಲಿತವಾಗಿ ಕೂತುಕೊಂಡಿದ್ದನು. ಉಭಯ ಸೈನ್ಯದ ಶೂರರು ಕೇವಲ ಕೈಗೆ ಕೈಹಚ್ಚಿ, ತಮ್ಮ ಪರಾಕ್ರಮವನ್ನ ಶಪಥಮಾಡಿ ತೋರಿಸುತ್ತಿದ್ದರು. ಬ್ರಿಗೇಡಿಯರ್ ಸ್ಮಿತ', ಕ್ಯಾಪ್ಟನ್ ಹೇನೇಜ್, ಮುಂತಾದ ಯುದ್ಧಶಾಲಿಗಳು, ರಾಣೀ ಸಾಹೇಬಳ ಸನ್ಮುಖಕ್ಕೆ, 8 ನೇ ಹುಜಾರ್ಸ್ ಪಟಾಲಂನ ಅತಿಶೂರ ಜನಗಳನ್ನು ತೆಗೆದುಕೊಂಡು, ನಿಕರವಾಗಿ ಯುದ್ಧಮಾಡುತ್ತಿದ್ದರು. ರಾಣೀ ಸಾಹೇಬಳು ಗಂಡು ವಸ್ತ್ರಧಾರಣೆಮಾಡಿಕೊಂಡಿದ್ದರಿಂದಲೂ, ಮತ್ತು ಸರ್ವ ದಿಶೆಯಲ್ಲಿಯೂ, ರಣಧೂಳಿನಿಂದ ತುಂಬಿ ಹೋಗಿದ್ದದ್ದರಿಂದಲೂ ಇಂಗ್ರೇಜಿ ಯುದ್ಧಶಾಲಿಗಳಿಗೆ, ಆಕೆಯ ಪ್ರತ್ಯಕ್ಷ ಪರಿಶ್ರಮವಾಗಲಿಲ್ಲ. ಆಕೆಯು ಸಿಕ್ಕುವಳು, ತಾವು ದಂಗೇಖೋರರನ್ನ ಸೋಲಿಸಿ ಘ್ವಾಲ್‌ಬಾಗನ್ನ ಸ್ವಾಧೀನಪಡಿಸಿಕೊಳ್ಳುತ್ತೇವೆಂತ ಪ್ರತಿಜ್ಞೆ ಮಾಡಿದರು. ರಾಣೀ ಸಾಹೇಬಳು ತನ್ನ ಎರಡು, ಮೂರು ದಾಸಿಗಳೂ, ಬಂದೆರಡು ವಿಶ್ವಾಸ ಸರದಾರರೂ, ಮತ್ತು ಕೆಲವು ಸವಾರರು ಸಹಿತ ಇಂಗ್ರೇಜಿಯವರ ಸೈನ್ಯದಿಂದ ಉಳಿಚಿಕೊಂಡು, ಎರಡನೆ ಸ್ಥಳದ ಬಲವಾದ ಸೈನ್ಯಕ್ಕೆ ಹೋಗಿ ಸೇರಲು ಪ್ರಯತ್ನಪಟ್ಟಳು. ಆವೇಶವೆದ್ದ ಆ ಕೃತಾಂತ ಸ್ವರೂಪಿಗಳಾದ ಹುಜಾರ್ಸ್ ಪಟಾಲಂನ ಇಂಗ್ರೇಜಿ ಯುದ್ಧಶಾಲಿಗಳು, ರಾಣೀ ಸಾಹೇಬಳ ಉದ್ದೇಶವನ್ನ ಕೊನೆಗಾಣಿಸುವದಕ್ಕೆ ಬಿಡಲಿಲ್ಲ. ಆಕೆಯು ತನಗೆ ಕೈಲಾದಷ್ಟು ನೋಡಿದಳು. ಪರಂತು, ಇಂಗ್ರೇಜಿ ಸೈನ್ಯವು ಹೆಚ್ಚಾಗಿದ್ದ ಕಾರಣ, ಅವರ ಕೈಯಿಂದ

---

* ಧಾರಾತೀರ್ಥದಲ್ಲಿ, ಬೀಳತಕ್ಕಂಥ ಯುದ್ಧಶಾಲಿಗಳಿಗೆ, ಸೂರ್ಯಮಂಡಲವನ್ನು ಭೇದಿಸಿದ ಬಳಿಕ, ಸ್ವರ್ಗಪ್ರಾಪ್ತವಾಗುತ್ತೆಂಬುವದು, ಪ್ರಾಚೀನ ಸಿದ್ಧವಾದ್ದಾಗಿದೆ.

ದ್ವಾವಿಮೌ ಪುರುಷಾಲೋಕೆ ಸೂರ್ಯಮಂಡಲ ಭೇದಿನೌ ।
ಪರಿವ್ರಾಡ ಯೋಗ ಯುಕ್ತಶ್ಚ ರಣೇಚಾಭಿ ಮುಖೇಹತಃ ॥

ದಾಟಹೋಗುವದು ಅಸಾಧ್ಯವಾಯಿತು. ಉಭಯಪಕ್ಷದ ಜನಗಳೂನೂ ಕೈಯಿಗೆ ಕೈಹಚ್ಚಿಬಂದು, ಶಸ್ತ್ರಯುದ್ಧವನ್ನು ಮಾಡಿ, ತಮ್ಮ ತೇಜಸ್ಸನ್ನ ಸರ್ವತ್ರದಲ್ಲಿಯೂ ಪ್ರಕಾಶಪಡಿಸಿದರು. ಇಂಗ್ರೇಜಿ ಯುದ್ಧಶಾಲಿಗಳು ಸಮಯವನ್ನು ಸಾಧಿಸಿ, ಏಕಪ್ರಕಾರವಾಗಿ ಗುಂಡುಬಿಡುತ್ತಿದ್ದರು; ಮತ್ತು ಕೆಲವರು ಕತ್ತಿಯನ್ನುತಿರುಗಿಸಿ, ದೀನರಾಗಿದ್ದ ದಂಗೇಖೋರರನ್ನ ಬಂದೇಪ್ರಕಾರ ಸಂಹಾರ ಮಾಡುತ್ತಿದ್ದರು. ರಾಣೀ ಸಾಹೇಬಳು ಆಘೋರ ಸಂಗ್ರಾಮದಲ್ಲಿ ತನ್ನ ಶೌರ್ಯದ ಅಸದೃಶವಾದ ಪ್ರಭಾವವನ್ನು ತೋರಿಸುತ್ತಾ, ಅನೇಕ ಇಂಗ್ರೇಜಿ ಯುದ್ಧಶಾಲಿಗಳಿಗೆ ತನ್ನ ಶಸ್ತ್ರದಿಂದ ಕಂಠಸ್ನಾನ ಮಾಡಿಸಿದಳು. ವೇಗವಾಗಿ ಕುದುರೆಯನ್ನು ಬಿಟ್ಟು, ಆಕೆಯು ಇಂಗ್ರೇಜಿ ಸೈನ್ಯದ ಪಂಗಡವನ್ನ ಒಡೆದುಕೊಂಡು, ದಾಟಹೋದಳು. ಆಗ ಬ್ರಿಗೇಡಿಯರ್ ಸ್ಮಿತ್ ಸಾಹೇಬನು ಹುಜಾರ್ಸ್ ಪಟಾಲಂನಲ್ಲಿ ಕೆಲವು ಜನಗಳನ್ನ ಆರಿಸಿ ತೆಗದು, ಬೆಂಕಿಯಹಾಗೆ ಆಕೆಯು ಹಿಂದುಗಡೆ ಬಿಟ್ಟನು. ಅವರು ತಮ್ಮ ಗುಂಡುಗಳನ್ನು ಹೊಡೆಯುತ್ತಾ, ರಾಣೀ ಸಾಹೇಬಳನ್ನ ಬೆನ್ನಟ್ಟಲು ಪ್ರಾರಂಭಿಸಿದರು. ಅವರ ಮುಂದೆ ಚಪಲಗತಿಯಿಂದ ಹೋಗತಕ್ಕ ತೇಜಸ್ವಿನಿಯಾದ ರಾಣೀ ಸಾಹೇಬಳದ್ದೇನು ನಡೆದೀತು ? ಇದು ಹಾಗಿರಲಿ. ನಿಮಿಷಮಾತ್ರದಲ್ಲಿ ಉಭಯ ವೀರ್ಯಶಾಲಿಗಳಾದ ಯುದ್ಧಶಾಲಿಗಳ ನಿಕರವಾದ ಯುದ್ಧವಾಗಿ ರಾಣೀ ಸಾಹೇಬಳಿಗೆ ಕಾಲಪಾಶಕ್ಕೆ ವಶವಾಗುವ ಸಮಯವು ಬಂದು ಒದಗಿತು. ಅದರ ವರ್ಣನೆಯನ್ನ ವಿಸ್ತಾರವಾಗಿ ಮಾಡುವದಕ್ಕೆ ಯಾರು ಸಮರ್ಥರು ?

ಏಕಪ್ರಕಾರವಾಗಿ ಮೂರು ದಿವಸಗಳವರೆಗೂ ಪ್ರಬಲವಾದ ಯುದ್ಧ ನಡೆದಿದ್ದರಿಂದ, ರಾಣೀಸಾಹೇಬಳು ಅತಿಶಯವಾಗಿ ಶ್ರಾಂತಳಾಗಿದ್ದಳು ; ಪರಂತು ಆಕೆಯ ಸ್ವಾಭಿಮಾನ ಮತ್ತು ರಣೋತ್ಸಾಹ ಯೇನೋ ಅದ್ಭುತವಾಗಿದ್ದಕಾರಣ, ಅವಳು ಇಂಗ್ರೇಜಿ ಸೈನ್ಯಕ್ಕೆ ಆಸ್ಪದ ಕೊಡಲಿಲ್ಲ. ಸರ್‌ಹ್ಯೂರೋಸ್ ಮುಂತಾದ ಇಂಗ್ರೇಜಿ ಯುದ್ಧಶಾಲಿಗಳಿಗೆ ರಾಣೀಸಾಹೇಬಳ ರಣಶೌರ್ಯವು ಪೂರ್ಣ ಪರಿಶ್ರಮವಾಗಿತ್ತು. ಇಷ್ಟೇಅಲ್ಲದೆ, ಝಾಸಿಯ ಪ್ರಬಲ ಯುದ್ಧ ಪ್ರಾರಂಭಿಸಿಕೊಂಡು, ಸರ್ವ ಇಂಗ್ರೇಜಿ ಜನಗಳಿಗೆ ಆಕೆಯ ಪರಾಕ್ರಮ ಗುಣವು ಕೌತುಕವಾದದ್ದಾಗಿ ತೋರಿಹೋಗಿತ್ತು. ಹೀಗಿರುವಾಗ ಇಂಥಾ ಅಲೌಕಿಕ ಶೌರ್ಯಶಾಲಿನಿಗೆ ಹಸ್ತಗತ ಮಾಡಿಕೊಳ್ಳಬೇಕು ಎಂಬ ಇಚ್ಛೆಯು ಇಂಗ್ರೇಜಿ ಯುದ್ಧಶಾಲಿಗಳಿಗೆ ಇರುವದು ಬಹಳಮಟ್ಟಿಗೆ ಸಹಜವಾಗಿದೆ. ಪರಂತು ದಂಗೆಯವರ ಆತೋನಾತ್ ಸೇನಾಸಾಗರ ಮಧ್ಯದಲ್ಲಿ ಈ ದಿವ್ಯ ರತ್ನವು ಎಲ್ಲಿದೆಯಂಬುವದು, ಅವರಿಗೆ ತಿಳಿಯುವದಕ್ಕೆ ಸಂದರ್ಭ ಕಠಿಣವಾಗಿತ್ತು. ಇದುಹಾಗಿರಲಿ. ರಾಣೀ ಸಾಹೇಬಳ ಅಂತಃಕರಣದಲ್ಲಿ ಸಂಪೂರ್ಣ ಸ್ವಾಭಿಮಾನವಿದ್ದಕಾರಣ, ಅವಳು ತನ್ನ ಪವಿತ್ರದೇಹಕ್ಕೆ ಮರಣಾನಂತರದಲ್ಲಿಯೂ, ಪರಧರ್ಮಿಕರ ಸ್ಪರ್ಶವಾಗುವದಕ್ಕೆ ಕೊಡಬಾರದೆಂತ ನಿಶ್ಚಯ ಮಾಡಿದ್ದಳು. ಆಕೆಯು ತನ್ನಸಂಗಡ ಪುರುಷ ವೇಷದಲ್ಲಿದ್ದ, ಮುಂದರ್ ಮತ್ತು ಕಾಶಿಯಂಬ ಇಬ್ಬರು ದಾಸಿಯರಿಗೂ, ಮತ್ತು ರಾಮಚಂದ್ರರಾವ್

ದೇಶಮುಕ್, ಮತ್ತು ರಘುನಾಥಸಿಂಗ್ ಮುಂತಾದ ಯೇಕನಿಷ್ಠ ಸೇವಕರಿಗೆ ಈ ಪ್ರಕಾರವಾಗಿ ಹೇಳುತ್ತಿದ್ದಳು :—"ಯುದ್ಧ ಮಧ್ಯದಲ್ಲಿ ನಾನು ಪತಿತಳಾದರೆ, ನನ್ನ ದೇಹವನ್ನು ಮ್ಲೇಂಛರ ಸ್ಪರ್ಶಕ್ಕೆ ಬಿಡಕೂಡದು. ಅನಂತರ ಅವರು ಅದರ ಅವಮಾನವೇನು ಮಾಡ್ಯಾರು? ಈ ನನ್ನ ಇಚ್ಛೆಯನ್ನು ನೀವು ಪೂರ್ಣಮಾಡಿದರೆ, ನೀವು ನಿಜವಾದ ಸ್ವಾಮಿನಿಷ್ಠರು. ಈ ಪ್ರಕಾರ ನನ್ನ ದೇಹದ ವ್ಯವಸ್ಥೆಯನ್ನು ಮಾಡಿರಿ." ರಾಣೀಸಾಹೇಬಳ ಈ ಮಾತು ಅವರ ಅಂತಃಕರಣದ ಪ್ರತಿಬಿಂಬದಲ್ಲಿಯೂ ನೆಟ್ಟು, ಅವರೆಲ್ಲರೂ ಯುದ್ಧದಲ್ಲಿ, ರಾಣೀಸಾಹೇಬಳ ಸನ್ನಿಧಿಯಲ್ಲಿಯೇ ಇದ್ದರು. ರಾಣೀಸಾಹೇಬಳು ಸರ್ವರ ಮುಂದೆ ಕುದುರೆಯನ್ನು ಹಾರಿಸಿಕೊಳ್ಳುತ್ತಾ ಹೋಗುತ್ತಿದ್ದಳು. ಆಕೆಯ ಹಿಂದೆ ಮುಂದರದಾಸಿ ಮತ್ತು ಇನ್ನು ಇಬ್ಬರು, ನಾಲ್ವರು ಆಕೆಗೋಸ್ಕರ ಪ್ರಾಣಕ್ಕೆ ಪ್ರಾಣ ಕೊಡತಕ್ಕಂಥಾ ಸ್ವಾಮಿಕಾರ್ಯದಲ್ಲಿ ತತ್ಪರರಾದ ಸೇವಕರು ಹೋಗುತ್ತಿದ್ದರು. ಚಿಕ್ಕವಯಸ್ಸಿನವನಾದ ದಾಮೋದರರಾಯನು, ದೇಶಮುಕ್ ರಾಮಚಂದ್ರರಾಯನ ಕುದುರೆಯಮೇಲೆ ಬಹಳ ಭದ್ರತೆಯಿಂದ ಇದ್ದನು.

ಈ ಪ್ರಕಾರವಾಗಿ ವಾಯುಗತಿಯಿಂದ ಇಂಗ್ರೇಜಿ ಸೈನ್ಯದ ಗುಂಪು ಒಡೆದುಕೊಂಡು, ಹೋಗುತ್ತಾ ಇರುವಾಗ ಹುಜಾರ್ಸ್ ಸೈನ್ಯದ ಒಬ್ಬ ಸವಾರನು ಆಕೆಯಮೇಲೆ ಸಹಿಸಲಸಾಧ್ಯವಾದ ಕತ್ತಿಯ ಪೆಟ್ಟು ಹಾಕಿದನು. ರಾಣೀಸಾಹೇಬಳು ತನ್ನ ಮೈಮೇಲೆ ಬಿದ್ದ ಸವಾರರನ್ನು ಬಹಳ ಚಾತುರ್ಯದಿಂದ ದಂಡಿಸಿ, ಒಂದೇ ಉಸುರಿಗೆ, ಮುಂದಕ್ಕೆ ಹೋದಳು. ಇಷ್ಟರಲ್ಲಿ ಆಕೆಯ ದೀನದಾಸಿ ಮುಂದರ್ ಯಂಬುವಳು, 'ಬಾಯಿಸಾಹೇಬ್! ಸತ್ತೆ! ಸತ್ತೆ!!' ಈ ಪ್ರಕಾರ ಕರುಣಸ್ವರದಿಂದ ಕೂಗಿಕೊಂಡಳು. ಈ ಶಬ್ದವು ರಾಣೀಸಾಹೇಬಳ ಕಿವಿಗೆ ಬೀಳುತ್ತಲೆ, ಆಕೆಯ ಮೃದುವಾದ ಹೃದಯದ ಮೇಲೆ ಶಸ್ತ್ರಪ್ರಹಾರವಾದಂತೆ ಅನವರತ ದುಃಖವಾಗಿ, ಆಕೆಯು ಕೂಡಲೆ ಹಿಂದಕ್ಕೆ ತಿರುಗಿ ಬಂದು, ತನ್ನಪ್ರಿಯ ದಾಸಿಯನ್ನು ಯಮಪುರಿಗೆ ಕಳುಹಿಸುವ ಪಾಷಾಣ ಹೃದಯದ ಇಂಗ್ರೇಜಿ ಯುದ್ಧಶಾಲಿಯಮೇಲೆ, ತನ್ನ ಹಗೆಯನ್ನು ತೀರಿಸಿಕೊಂಡು, ಕುದುರೆಯನ್ನು ಪುನಃ ತಿರುಗಿಸಿ, ವೇಗದಿಂದ ಓಡಲು ಪ್ರಾರಂಭಿಸಿದಳು. ಫೌಜಿಯು ಎರಡುಭಾಗವಾಗಿ, ಪುನಃ ಸೇರಿಕೊಳ್ಳು ವಷ್ಟರಲ್ಲಿಯೇ, ಈ ಕಾರ್ಯಸಿದ್ಧಿಗೆ ಬಂದು, ೭ ಕುದುರೆಯು ತನ್ನ ಕಟಾಕ್ಷ ಮರ್ಯಾದೆಯಿಂದ ದಾಟಿಹೋಗುತ್ತಿತ್ತು. ಪರಂತು ಅದರಮುಂದೆ ಒಂದು ಸಣ್ಣ ಹಳ್ಳವಿದ್ದದ್ದರಿಂದ, ಅದನ್ನು ನೋಡಿದ ಕೂಡಲೆ, ಅಲ್ಲಿಯೇ ನಿಂತುಕೊಂಡಿತು. (ರಾಣೀಸಾಹೇಬಳ ಸ್ವಂತ ಕುದುರೆಯು ಎರಡು ದಿವಸಗಳ ಯುದ್ಧ ಶ್ರಮದಿಂದಲೋ, ಅಥವ ಗುಂಡು ತಗಲಿದ ಘಾಯದಿಂದಲೋ ಆಕೆಯು ಈ ಎರಡನೇ ಕುದುರೆಯನ್ನು ತೆಗೆದುಕೊಂಡಿದ್ದಳೆಂತ ಮೊದಲೆಯೇ ಹೇಳಿದೆ.) ಇದನ್ನು ನೋಡುತ್ತಲೆ, ರಾಣೀಸಾಹೇಬಳು ಧೈರ್ಯಗುಂದಿ, ಆಕೆಗೆ ಸಮಾಪ್ತಿ ಆಯಿತೆಂತ ಭವಿಷ್ಯ ತಿಳಿಯಬಂತು. ಆಕೆಯು ತನ್ನ ಚಾತುರ್ಯವನ್ನೆಲ್ಲಾ ವೆಚ್ಚಮಾಡಿ, ಕುದುರೆಯನ್ನು ಆ ಜಲ ಪ್ರವಾಹದ

ಆಚೆಯುಕಡೆಗೆ ತೆಗೆದುಕೊಂಡು ಹೋಗುವದಕ್ಕೆ ಭಗೀರಥ ಪ್ರಯತ್ನ ಮಾಡಿದಳು. ಆದರೆ ಆಕೆಯ ದುರ್ದೈವವು ಆ ಜಲ ಪ್ರವಾಹದ ರೂಪದಿಂದ ಅಡ್ಡಬಂದಿದ್ದ ಕಾರಣ, ಅದು ಆಕೆಗೆ ಮುಂದೆ ಹೇಗೆ ಹೋಗಲಿಕ್ಕೆ ಬಿಟ್ಟೀತು ? ಭಾರತ ಯುದ್ಧದಲ್ಲಿ, ಮಹಾರಥಿಯಾದ ಕರ್ಣನ ರಥ ಚಕ್ರವು ಯಾವ ಪ್ರಕಾರವಾಗಿ ಭೂಮಿಯಲ್ಲಿ ಹುಗಿದುಕೊಂಡು ಹೋಗಿ, ಅಡ್ಡವಾಗಿ ನಿಂತಿತೋ, ಅದೇ ಪ್ರಕಾರವಾಗಿ ಈ ಸಮಯದಲ್ಲಿ ರಾಣೀ ಸಾಹೇಬಳ ಸ್ಥಿತಿಯಾಯಿತು.

---

* ಕರ್ಣನ ರಥ ಚಕ್ರಗಳು ಭೂಮಿಯಲ್ಲಿ ಸಿಕ್ಕಿಕೊಂಡಾಗ, ಆತನ ಸ್ಥಿತಿಯು ಹ್ಯಾಗಾಯಿತು ಎಂಬುವದರ ವರ್ಣನೆಯನ್ನು ಕವಿ ಮೋರೋಪಂತನು ಮಾಡಿರುತ್ತಾನೆ. ಅದನ್ನು ಓದಿದರೆ, ರಾಣೀ ಸಾಹೇಬಳ ಈ ವೇಳೆಯ ಹೃದಯವನ್ನು ಭೇದಿಸತಕ್ಕಂಥ ಸ್ಥಿತಿಯನ್ನು ಕುರಿತು, ಪ್ರತ್ಯೇಕವಾದ ವರ್ಣನೆ ಮಾಡುವದಕ್ಕೆ ಕಾರಣವಿಲ್ಲ. ಮೋರೋಪಂತನು ಹೇಳುತ್ತಾನೆ:—

ಆ ರ್ಯ .

ತೋ ವೃಷ ಭೂಮಿಗ್ರಸ್ತ ಸ್ಯಂದನಚಕ್ರಾಶಿ ಉದ್ಧರಾಯಾತೆ ।
ಉತರೆ ಸ್ವರಥಾ ಖಾಲೀಂಕರುನಿ ಅಸೇಂತುಮುಲ ಯುದ್ಧರಾಯತೇಂ ॥ ॥ ೧ ॥

ಉದ್ಧರಣ ಕರೂಂಪಾಹೆ ಕರ್ಣ ಭುಜಾಂಹೀಂ ಧರೂನಿ ಚಕ್ರಾಚೇಂ ।
ಪರಿ ಪೃಥ್ವೀ ಸೋಡಿನಾ ಜಾಣೋಂ ವ್ರತ ಘೇತಲೇಂಚಿ ನಕ್ರಾಚೇಂ ॥ ॥ ೨ ॥

ಸಪ್ತದ್ವೀಪಾ ಪೃಥ್ವಿ ವೃಷ ಉಚಲೀ ಚಾರ ಅಂಗುಲೇಂ ವರತೀ ।
ಬಡಿ ಶಾಸಿ ಜಸೀ ಮತ್ಸ್ಯೀ ನುಗಳೀ ಚಕ್ರಾಸೀ ಕಾಂಪಲೀ ಪರತೀ ॥ ॥ ೩ ॥

ಕರ್ಣೇನ ಗೀರ್ಣಚಕ್ರಾ ಸಪ್ತದ್ವೀಪಾ ಧರಾ ಸಶೈಲವನಾ ।
ಚತುರಂಗುಲಮುತ್‌ಕ್ಷಿಪ್ತೇತ್ಯೂಚೆ ಭಗವಾನ್ ಮುನಿರ್ವಿಶುದ್ಧಮನಾಃ॥ ॥ ೪ ॥

ಸದ್ರಸನಾ ನಾಮಾತೇಂ ಕೀಂ ಸೋಡೀ ಬಂಧು ತಾನ ದಾಯಾತೇಂ ।
ತೈಸೀ ಕ್ಷಿತಿ ಚಕ್ರಾತೇಂ, ಶ್ರಮ ಝಾಲಾ ಫಾರಸಾ ತದಾ ಯಾತೇಂ ॥ ॥ ೫ ॥

ಕಾಳವದನ ಕಾಯಸಾತೇಂ ರಥಚಕ್ರಾತೇಂ ತಸೇಂ ಕ್ಷಿತಿಶ್ವಭ್ರ ।
ಬಹು ಯತ್ನೇಂಹಿ ನ ಸೋಡೀ ಕರ್ಣ ಹ್ಮಣೆ ಮರಣ ಹ್ಯಾಪ್ರದೇಂದಭ್ರ ॥ ೬ ॥

ಹ್ಯಾ ವ್ಯಸನೀಂ ತೋ ಪಾಣೀ ಆಣೀ ನೇತ್ರಾಂಶಿ ವೃಷಹ್ಮಣೆಹಾಯ ।
ಕಾಯ ಕರೀಲ ನ ಸಾಹೇತೆ ಬಹು ಮರ್ಮೀಂಹಿ ಸಾಹಿಲೆಘಾಯ ॥ ॥ ೭ ॥

ರಾಣೀ ಸಾಹೇಬಳ ಕುದುರೆಯು, ಘಾತಕೊಟ್ಟದ್ದರಿಂದ, ಆಕೆಯ ಸರ್ವ ಉಪಾಯವೂ ನಿಂತುಹೋಯಿತು. ಆಕೆಯು ಅದಕ್ಕೆ ಉಬ್ಬಿಸಿ ಆ ಜಲಪ್ರವಾಹದ ಆಚೆಯ ಕಡೆಗೆ ದಾಟಹೋಗುವದಕ್ಕೆ ತನ್ನ ಬುದ್ಧಿವಂತಿಗೆಯನ್ನೆಲ್ಲಾ ಖರ್ಚ ಮಾಡಿದಳು. ಪರಂತು ಆ ಮೂರ್ಖ ಕುದುರೆಯು ಯೇನುಮಾಡಿದರೂ ಕೇಳಲಿಲ್ಲ. ಅದು ರಣಭೂಮಿಯಮೇಲೆ ಪರ್ವತದಹಾಗೆ ಅಲಿಗಾಡದೆ ನಿಂತಿತು. ರಾಣೀಸಾಹೇಬಳ ಹತ್ತಿರಿನ ಸರ್ವ ಸವಾರರೂ, ಪ್ರತಿಪಕ್ಷದ ಬಲವಾದ ಹೊಡೆತದಿಂದ ಬಿದ್ದುಹೋಗಿದ್ದರು. ಆದಕಾರಣ ಆಕೆಯ ಹತ್ತರ ಈ ಸಮಯದಲ್ಲಿ 5-6 ಸ್ವಾಮಿನಿಷ್ಟ ಸೇವಕರ ಹೊರ್ತು, ಇನ್ಯಾರೂ ಉಳಿದಿರಲಿಲ್ಲ. ಇಂಥಾ ಕಠಿಣ ಪ್ರಸಂಗದಲ್ಲಿ ಹುಜಾರ್ಸ ಪಟಾಲಂನ ಈರ್ಷೆಯೆದ್ದ ಕುದುರೇ ಸವಾರರು, ರಾಣೀಸಾಹೇಬಳ ಮೈಮೇಲೆ, ಒಂದೇಸಲ ಓಡಿಬಂದರು. ಅವರಿಗೆ ರಾಣೀ ಸಾಹೇಬಳ ಪರಿಶ್ರಮವಿದ್ದು, ಅವಳನ್ನು ಗುರ್ತು ಹಿಡಿದು, ಆಕೆಯ ಮೈಮೇಲೆ ಬಿದ್ದರೆಂತ ಕಂಡು ಬರುವದಿಲ್ಲ. ಪರಂತು, ದಂಗೆಯುವರಕಡೆ, ಯಾರೋ ಒಬ್ಬ ಬಲಾಢ್ಯ ಪರಾಕ್ರಮಿ ತಮ್ಮ ಕೈಯ್ಯಲ್ಲಿ ಸಿಕ್ಕಿದ್ದಾನೆ. ಆತನ ರಕ್ತರಸದಿಂದ ತಮ್ಮ ಶಸ್ತ್ರಗಳಿಗ ಸ್ನಾನಮಾಡಿಸುವದಕ್ಕೆ ಉತ್ತಮ ಸಮಯವಾಗಿದೆ, ಎಂಬುವದನ್ನು ನೋಡಿ, ಅವರು ಬಹಳ ವೇಗದಿಂದ ರಾಣೀಸಾಹೇಬಳಮೇಲೆ ಪ್ರಯಾಣಮಾಡಿ ಬಂದಿರಬೇಕೆಂತ ತೋರುತ್ತದೆ. ಕೆಲವರು ಆ ಹುಜರ್ಸ ಯುದ್ಧಶಾಲಿಗೆ ರಾಣೀಸಾಹೇಬಳ ಕೊರಳಲ್ಲಿದ್ದ ಕಾಂತಿಯುಳ್ಳ ಅಮೌಲ್ಯವಾದ ಮುತ್ತಿನಸರವನ್ನು ನೋಡಿ, ಲೋಭಹುಟ್ಟಿ, ಅವನು ಆಕೆಯ ಮೇಲೆ ಶಸ್ತ್ರಪ್ರಯೋಗ ಮಾಡಿದನೆಂತ ಹೇಳುತ್ತಾರೆ. * ಇದುಹಾಗಿರಲಿ. ಯಾವ ಇಛ್ಛೆಯಿಂದಲೇ ಆಗಲಿ, ಆ ಅತಿಭಯಂಕರವಾದ ಕೃತ್ಯವನ್ನು ಮಾಡಲು ಒಬ್ಬ ಸವಾರನು ಆ ಕಠಿಣವಾದ ಸಂಧಿಯನ್ನು ಸಾಧಿಸಿಕೊಂಡು, ಆ ಸ್ತ್ರೀಯಮೇಲೆ ಹಾರಿಬಿದ್ದನು ಎಂಬುವದಕ್ಕೇನೂ ಅನುಮಾನವಿಲ್ಲ. ಆ ಪ್ರಸಂಗದಲ್ಲಿ ರಾಣೀಸಾಹೇಬಳ ಸ್ಥಿತಿಯು ಹ್ಯಾಗೆ ಇದ್ದೀತು ಯಂಬುವದನ್ನು ಶಬ್ದಗಳಿಂದ ತೋರಿಸುವದು ಅಶಕ್ಯವಾಗಿದೆ.

---

* ಒಬ್ಬ ಗ್ರಥಂಕಾರನು ಹೀಗೆ ಬರೆಯುತ್ತಾನೆ:—

"Flying at length from the field where she had lost what she valued more than Jhansi or the memory of her family, i, e, her revenge, an English dragoon, it is said, cut her down, taking her for a sowar and tempted by the necklace over her jacket."

*Dalhousie's Administration of British India P.* 153.

ರಾಣೀ ಸಾಹೇಬಳ ಮೈಮೇಲೆ, ಕೋಪೋದ್ರೇಕದಲ್ಲಿದ್ದ ಆ ಕರಾಳ ಕಾಳನು ಸಿಡಿಲಿನಂತೆ ಮುರಿದು ಬಿದ್ದನು. ಪರಂತು ಆಕೆಯು ಅವನಿಗೆ ಪ್ರಥಮದಲ್ಲಿ ಶುದ್ಧಾಂಗವಾಗಿ ಆಸ್ಪದಕೊಡಲಿಲ್ಲ. ಇಂಗ್ರೇಜಿ ಯುದ್ಧ ಶಾಲಿಗಳು ತನ್ನ ಮೈಮೇಲೆ ಪ್ರಯಾಣ ಮಾಡಿ ಬರುತ್ತಾರೆಂತ ಆಕೆಯು ನೋಡಿದಕೂಡಲೆ, ಬಹಳ ಚಮತ್ಕಾರವಾಗಿ ತನ್ನ ತೀಕ್ಷ್ಣವಾದ ಶಸ್ತ್ರವನ್ನ, ಆತ್ಮಸಂರಕ್ಷಣೆ ಮಾಡಿಕೊಳ್ಳುವಗೋಸ್ಕರ, ಮುಂದಕ್ಕೆ ತೆಗದು, ಬಹಳ ಆವೇಶದಿಂದ ಅವರಸಂಗಡ ಯುದ್ಧಮಾಡಿದಳು. ರಾಣೀಸಾಹೇಬಳ ಧೈರ್ಯದ ಪರ್ವತವು ಬಹಳ ಬಲವಾಗಿದ್ದಕಾರಣ, ಪ್ರಥಮತಃ, ಮುಂದೆ ಪ್ರಯಾಣಮಾಡಿ ಬಂದ ಇಂಗ್ರೇಜಿ ಸವಾರರು ಮಾಡಿದ ಬಲವಾದ ಯುದ್ಧವು ಯೇನೂ ಉಪಯೋಗವಾಗಲಿಲ್ಲ. ಆದ್ದರಿಂದ ಸ್ವಲ್ಪ ನೋಡುತ್ತಲೆ,

ನಪಾದಪೋನ್ಮೂಲನಶಕ್ತಿರಂಹ ಶ್ಶೈಲೋಚ್ಚಯೇ ಮೂರ್ಛತಿ ಮಾರುತಸ್ಯ ।

ಈಕವಿಕುಲ ಗುರುವಿನ ಉಕ್ತಿಯಂತೆ ವಾಯುವಿನ ಶರೀರದಲ್ಲಿ, ದೊಡ್ಡ ದೊಡ್ಡ ವೃಕ್ಷಗಳನ್ನ ಕಿತ್ತುಹಾಕುವದಕ್ಕೆ ಸಾಮರ್ಥ್ಯ ಯಿದ್ದಾಗ್ಯೂ, ಅದರ ಶಕ್ತಿಯು ಪರ್ವತದ ಮೇಲೆ ನಡೆಯುವದಿಲ್ಲ. ಹಾಗೆಯೇ ಇಂಗ್ರೇಜಿಸವಾರರೂ ಪ್ರಬಲವಾಗಿರುವದು ನಿಜ. ಆದರೆ ರಾಣೀಸಾಹೇಬಳ ರೌದ್ರಸ್ವಭಾವದ ಮುಂದೆ ಅವರ ಪ್ರಾಬಲ್ಯವು ವ್ಯರ್ಥವಾದಂತೆ ಆಯಿತು. ಇಂಗ್ರೇಜಿ ಸವಾರರು ಮೇಲೆ ಬಿದ್ದಕೂಡಲೆ, ರಾಣೀಸಾಹೇಬಳು ತನ್ನ ಅತುಳ ಖಡ್ಗದ ಪ್ರತಾಪದಿಂದ, ಅವರನ್ನ ಸಂಹಾರ ಮಾಡುವದಕ್ಕೆ ಪ್ರಯತ್ನ ಪಟ್ಟು, ತನ್ನ ಅಮಾನುಷರಣ ಚಾತುರ್ಯದಿಂದ, ಅವರನ್ನ ಒಂದುಕ್ಷಣ ಪರ್ಯಂತರ ಸಾಕುಮಾಡಿಬಿಟ್ಟಳು. ಪರಂತು ಆ ಕ್ಷುಬ್ಧರಾದ ರಣಶೂರ ಸವಾರರು, ರಾಣೀಸಾಹೇಬಳಿಗೆ ಹ್ಯಾಗೆ ಮಾರ್ಗ ಕೊಟ್ಟಾರು? ಆ ಪುರುಷವೇಷಧಾರಿಯಾದ ಯುದ್ಧಶಾಲಿನಿಯ ಅಪಾರವಾದ ಧೈರ್ಯವನ್ನು ನೋಡಿ, ಅವರಿಗೆ ಅತ್ಯಂತ ಈರ್ಷವೆದ್ದು, ಬಹಳ ನಿಕರದಿಂದ ಒಬ್ಬ ಸವಾರನು ಶಸ್ತ್ರದ ಬಲವಾದಪೆಟ್ಟನ್ನ ಆಕೆಯ ತಲೆಯಮೇಲೆ ಹಾಕಿದನು. ರಾಣೀಸಾಹೇಬಳು ಆ ಯೇಟನ್ನು ತಪ್ಪಿಸಿಕೊಳ್ಳುವದಕ್ಕಾಗಿ, ಬಹಳ ಚಾತುರ್ಯದಿಂದ ತನ್ನ ಶಸ್ತ್ರವನ್ನ ಮುಂದಕ್ಕೆ ತಿರಿಗಿಸಿ, ಆ ಅಪಾಯವನ್ನು ಭಂಗಮಾಡಲು ಪ್ರಯತ್ನಪಟ್ಟಳು. ಆ ಸಮಯದಲ್ಲಿ ಮಿಂಚಿನಂತೆ, ದಿವ್ಯತೇಜಸ್ಸು ಪ್ರಕಾಶಮಾನವಾಗಿ, ಆ ರಣಾಗ್ರಮಧ್ಯದಲ್ಲಿ ಆ ಉಭಯ ಯುದ್ಧಶಾಲಿಗಳ ಪರಿಕ್ಷೆಯಾಯಿತು; ಮತ್ತು ಮುಂದೆ 'ಅಬಲೆ' ಯಂಬುವದು ಪ್ರತ್ಯಕ್ಷಕ್ಕೆ ಬರುವಸಮಯ ಬಂದು ಒದಗಿತು. ಒಬ್ಬ ಶೂರ ಸವಾರನು ರಾಣೀಸಾಹೇಬಳ ಖಡ್ಗ ಪ್ರಭಾವಕ್ಕೆ ಅಂಜದೆ, ಥಟ್ಟನೆ ಸಮಯವನ್ನು ಸಾಧಿಸಿ, ಹಿಂದುಗಡೆಯ ಪಾರ್ಶ್ವದಲ್ಲಿ ನಿಂತುಕೊಂಡು, ಆಕೆಯ ತಲೆಯಮೇಲೆ ಶಸ್ತ್ರಪ್ರಯೋಗ ಮಾಡಿದನು. ಪಾಶಬದ್ಧವಾಗಿದ್ದ ಸಿಂಹನ ತಲೆಯಮೇಲೆ, ಮತ್ತವಾದ ಆನೆಯು ತನ್ನ ಸೊಂಡಲಿನಿಂದ ಪ್ರಹಾರ ಮಾಡಿದಹಾಗೆ, ಆಗಿನಸ್ಥಿತಿಯಾಯಿತು. ಆ ಕ್ರೂರವಾದ ಪೆಟ್ಟಿನಿಂದ ರಾಣೀಸಾಹೇಬಳ ತಲೆಯ ದಕ್ಷಿಣಭಾಗವು ಛಿನ್ನವಾಗಿ, ಆಕೆಯ ಒಂದು

ನೇತ್ರವು ಹೊರಗೆ ಬಂತು. ಅಷ್ಟರಲ್ಲಿ ಪುನಃ ಆ ಸವಾರನು ರಾಣೀಸಾಹೇಬಳ ಎದೆಯಲ್ಲಿ ಸನೀನವನ್ನು ಚುಚ್ಚಿದನು. ಈ ಪ್ರಕಾರವಾಗಿ ರಾಣೀಸಾಹೇಬಳ ಶರೀರದಮೇಲೆ ದೊಡ್ಡ ದೊಡ್ಡ ಘಾಯವಾಗಿ ಆಕೆಯು ಕೇವಲ ಆ ಸನ್ನಸ್ಥಿತಿಗೆ ಬಂದಳು. * ಅಂಥಾ ಸ್ಥಿತಿಯಲ್ಲಿ ಶತ್ರುವಿನಮೇಲೆ ಹಗೆ ತೀರಿಸಿಕೊಳ್ಳುವ ಕಾರ್ಯವು ಯಾರಕೈಯಿಂದಲಾದರೂ ಸಿದ್ಧಿಗೆ ಬಂದೀತೆ? ಛೆ! ಎಂದಿಗೂ ಬರಲಾರದು ! ಹೀಗಿದ್ದಾಗ್ಯೂ ರಾಣೀ ಸಾಹೇಬಳು ಆ ಸಮಯದಲ್ಲಿ ಅಲೌಕಿಕ ಯುದ್ಧಚಾತುರ್ಯವನ್ನ ಪ್ರಕಟನೆಮಾಡಿ, ತನ್ನ ವಧೆ ಮಾಡುವ

---

* ರಾಣೀಸಾಹೇಬಳ ಮೃತ್ಯು ಸಮ್ಮಂಧವಾಗಿ, ಇಂಗ್ರೇಜಿ ಗ್ರಂಥಕಾರರು ಪ್ರತ್ಯ ಪ್ರತ್ಯೇಕವಾದ ವರ್ತಮಾನವನ್ನು ಹೇಳುತ್ತಾರೆ. ಪರಂತು ಮ್ಯಾಲಿಸ್ನ್ ಮತ್ತು ಮ್ಯಾಕ'ಫರ್ಸನ್ ಸಾಹೇಬರುಗಳ ತಿಳುವಳಿಕೆಯಲ್ಲಿ ಬಹಳ ಸತ್ಯತೆ ತೋರಿಬರುತ್ತದೆ. ಈ ಇಬ್ಬರ ಗ್ರಂಥಕರ್ತರ ವರ್ಣನೆಯು ಸಂಕ್ಷಿಪ್ತವಾಗಿದೆ. ತಥಾಪಿ ಅದು, ಓದತಕ್ಕದ್ದಾಗಿ ಇರುವದರಿಂದ, ಇಲ್ಲಿ ಬರೆಯತಕ್ಕದ್ದು ಅವಶ್ಯಕವಾಗಿದೆ. ಮ್ಯಾಲಿಸ್ನ್ ಸಾಹೇಬನು ಬರೆಯುವದೇನಂದರೆ:—

"Among the fugitives in the rebel ranks was the resolute woman, who alike in council and in the field, was the soul of the conspirators. Clad in the attire of a man and mounted on horseback, the Rani of Jhansi might have been seen animating her troops throughout the day. When inch by inch the British troops pressed through the defile, and when reaching its Summit, Smith ordered the Hussars to charge, the Rani of Jhansi boldly fronted the British horsemen. When her comrades failed her, her horse, in spite of her efforts, carried her along with the others. With them she might have escaped but that her horse, crossing the canal near the cantonment, stumbled and fell. A hussar close upon her track, ignorant of her sex and her rank, cut her down. She fell to rise no more. That night her devoted followers determined that the English should not boast that they had captured her even dead, burned the body."

*History of the Indian Mutiny.*

ದಕ್ಕೆ ನೋಡತಕ್ಕಂಥಾ ಆಶೂರ ಯುದ್ಧಶಾಲಿಗೆ, ಆಗಲೇ ಧಾರತೀರ್ಥವನ್ನು ಕೊಟ್ಟು, ತನ್ನ ಕ್ಷತ್ರಿಯಧರ್ಮವನ್ನು ಪೂರಾ ಸಾರ್ಥಕ ಮಾಡಿದಳೆಂತ ಹೇಳುತ್ತಾರೆ. ಆಶ್ಚರ್ಯವೇ ಧನ್ಯವಾದದ್ದು; ಮತ್ತು ಆಪರಾಕ್ರಮವೇ ಶ್ಲಾಘ್ಯವಾದದ್ದು.* ರಾಣೀಸಾಹೇಬಳು ಈ ಪ್ರಕಾರವಾಗಿ ತನ್ನ ಪರಾಕ್ರಮವನ್ನು ಪ್ರಕಾಶಮಾಡಿದಳು. ಪರಂತು ವೈರಿಯ ಪ್ರಹಾರದಿಂದ ಆದ ಸಹಿಸಲಸಾಧ್ಯವಾದ ಘಾಯದಿಂದ ಆಕೆಯ ಸರ್ವಶಕ್ತಿಯೂ ಒಂದು ಕ್ಷಣಮಾತ್ರದಲ್ಲಿ ಇಲ್ಲದಂತೆ ಆಗಿ, ಆಕೆಗೆ ತನ್ನ ಅಂತ್ಯಕಾಲವು ಕೇವಲ ಸಮೀಪಕ್ಕೆ ಬಂತೆಂತ ತಿಳಿಯಬಂತು.† ಇಂಗ್ರೇಜಿ ಸವಾರರು ದಂಗೇಖೋರರ ಮೇಲೆ ನಾಲ್ಕು ಕಡೆಗಳಿಂದ,

---

* ಮಿ. ಮ್ಯಾಕ್‌ಫರ್ಸನ್ ಹೀಗೆ ಬರೆಯುತ್ತಾನೆ:—

"The Rani of Jhansi fell on the 17th She was seated, drinking sherbet, 400 of the 5th Irregulars near her, when the alarm was given that the Hussars approached, forty or fifty of them came up, and the rebels fled, save about fifteen. The Ranee's horse refused to leap a canal, when she received a shot in the side, and then sabre-cut on the head, but rode off. She soon after fell dead, and was burnt in a garden close by."

*Memorials of service in India. P. 335.*

† ರಾಣೀ ಸಾಹೇಬಳ ಈ ಮರಣ ಪ್ರಸಂಗದ ಸಮಾಚಾರವನ್ನು ಕುರಿತು, ಉತ್ತರ ಹಿಂದುಸ್ಥಾನದಲ್ಲಿನ ಜನಗಳು ನಾನಾವಿಧವಾಗಿ ಹೇಳುತ್ತಾರೆ. ಪರಂತು ಆ ಕಲ್ಪನೆಯ ಕಥೆಗಳು ಹೆಚ್ಚಿಗೆ ನಂಬತಕ್ಕದ್ದೆಂತ ಮನ್ನಿಸಲು ಆಗುವದಿಲ್ಲ. ರಾಣೀ ಸಾಹೇಬಳು ಮುಂದೆ ತನಗೆ ಸರಿಯಾಗುವದಿಲ್ಲವೆಂಬುವದನ್ನ ನೋಡಿ, ಹುಲ್ಲಿನ ಬೆಂಕಿಯಲ್ಲಿ ಹಾರಿ, ಕೈಯ್ಯಲ್ಲಿನ ತೋಡೆಯಿಂದ ಚುಚ್ಚಿಕೊಂಡು, ತನ್ನ ಆತ್ಮಹತ್ಯ ಮಾಡಿಕೊಂಡಳೆಂತ ಕೆಲವರು ಹೇಳುತ್ತಾರೆ. ಕೆಲವರು ಲಡಾಯಿಯಲ್ಲಿ ಸತ್ತಳೆಂತ ಹೇಳುತ್ತಾರೆ. ಕೆಲವರು ತನ್ನಮೇಲೆ ಬಿದ್ದ ಶತ್ರುವನ್ನ ಸಂಹಾರ ಮಾಡಿದಳು; ಆ ಯುದ್ಧದಲ್ಲಿ ಸತ್ತಳೆಂತ ಹೇಳುತ್ತಾರೆ. ತಾತ್ಪರ್ಯವೇನಂದರೆ, ಅನೇಕ ಜನಗಳು ಅನೇಕ ವಿಧವಾದ ಕಥೆಯನ್ನು ಹೇಳುತ್ತಾ ಇರುತ್ತಾರೆ. ಪರಂತು ಆಪ್ರಕಾರ ಆಗದೇ, ಆಕೆಗೆ ಪೆಟ್ಟಾದಮೇಲೆ, ಆಕೆಯ ಸೇವಕರು ಆಕೆಯ ಆಜ್ಞೆಪ್ರಕಾರ, ಆಕೆಯ ದೇಹದ ವ್ಯವಸ್ಥೆ ಮಾಡಿದರೆಂಬ ಈ ಮಾತು ಅನೇಕ ದೃಷ್ಟಾಂತರದಿಂದ ಸ್ಪಷ್ಟವಾಗುತ್ತದೆ. ಈಗ, ಕೆಲವರು ಉತ್ತರ ವ್ಯವಸ್ಥೆಯನ್ನ ರಾವ್ ಸಾಹೇಬ್ ಪೇಷ್ವೆ ಮಾಡಿದನೆಂತ ಹೇಳುತ್ತಾರೆ. ಪರಂತು ಆ ಸಮಯದಲ್ಲಿ ಮೂಲತಃ ರಾವ್ ಸಾಹೇಬ್ ಪೇಷ್ವೆಯು ರಾಣೀ ಸಾಹೇಬಳ

ಮುರಿದು ಬೀಳುತ್ತಿದ್ದರು. ಆದ್ದರಿಂದ ಅವರ ಪಿಟನಲ್ಲಿ ಕದಾಚಿತು, ತನ್ನ ದೇಹವು ಅವರ ಕೈಯಲ್ಲಿ ಹೋದೀತೆಂಬ ತಿಳುವಳಿಕೆಯಿಂದ, ರಾಣೀ ಸಾಹೇಬಳು ತನ್ನ ಪರಮ ವಿಶ್ವಾಸಿಯಾದ ಸರದಾರ, ರಾಮಚಂದ್ರರಾವ್ ದೇಶಮುಖ್, ಇವನಿಗೆ ಪುನಃ ಸಂಜ್ಞೆ ಮಾಡಿದಳು. ರಾಮಚಂದ್ರರಾಯನು ಮಹಾಸ್ವಾಮಿನಿಷ್ಠನಾಗಿದ್ದ ಕಾರಣ, ಅವನು

---

ಹತ್ತರ ಇರಲಿಲ್ಲ, ಸ್ವತಃ ದಾಮೋದರರಾಯನು ಹ್ಯಾಗೆ, ಆ ವೇಳೆಯ ಸರ್ವ ಸಂಗತಿಯನ್ನೂ ಸ್ವಾನುಭವದಿಂದಲೂ, ರಾಮಚಂದ್ರರಾಯನು ಕೊಟ್ಟ ತಿಳುವಳಿಕೆಯ ಮೇಲೂ ಹೇಳುತ್ತಾನೋ, ಆ ಪ್ರಕಾರವಾಗಿ ಹೆಚ್ಚಿಗೆ ನಂಬಲಿಕ್ಕೆ ಅರ್ಹವಾದದ್ದನ್ನ ತಿಳಿಯಬೇಕಾಗಿದೆ. ಈಗ ಆ ಗಡಬಿಡಿಯ ಮತ್ತು ಸಂಕಟ ಪ್ರಸಂಗದಲ್ಲಿ, ರಾಣೀ ಸಾಹೇಬಳ ಮುಂದಿನ ವ್ಯವಸ್ಥೆ ಮಾಡುವದಕ್ಕೆ ಆತನಿಗೆ ಸಮಯವು ಹ್ಯಾಗೆ ಸಿಕ್ಕಿತೆಂಬುವದು ದೊಡ್ಡ ಪ್ರಶ್ನೆಯಾಗಿದೆ. ಪರಂತು ಅದನ್ನು ತಿರಸ್ಕರಿಸುವದಕ್ಕೆ ಪುಷ್ಕಳ ಆಧಾರವಿದೆ. ರಾಣೀ ಸಾಹೇಬಳ ಯುದ್ಧದ ಕಾಲದ ವಸ್ತ್ರವು ಪುರುಷನು ಧಾರಣೆಮಾಡಿಕೊಳ್ಳತಕ್ಕದ್ದಾಗಿದ್ದರಿಂದ ಆಕೆಯ ಪರಿಚಯವು ಇಂಗ್ರೇಜಿ ಪಕ್ಷದವರಿಗೆ ಮೂಲತಃ ಆಗಲಿಲ್ಲ. ಆದ ಕಾರಣ ಅವರು ಆಕೆಯನ್ನ ಹಿಡಿಯುವದಕ್ಕಾಗಿ ಪ್ರಯತ್ನ ಮಾಡಿದರೆಂತ ಹೇಳುವದಾದರೆ, ಅದು ಸಾಧ್ಯವಾಗಲಿಲ್ಲವೆಂಬುವದು ಸರಿಯಾಗಿದೆ. ರಾಣೀ ಸಾಹೇಬಳ ಮತ್ತು ಇಂಗ್ರೇಜಿ ಸವಾರರ ಯುದ್ಧ ನಡೆದನಂತರ ಅವಳು ಸೋತು ಹಿಂದಕ್ಕೆ ಓಡಿದಳು. ಆ ಸಂಧಿಯಲ್ಲಿ ರಾಣೀ ಸಾಹೇಬಳು ಮತ್ತು ರಾಮಚಂದ್ರರಾಯನ ಸಂಭಾಷಣೆ ನಡೆದು ಮುಂದಿನ ಪ್ರಕಾರ ಆಗಿರುವಂತೆ ತೋರುತ್ತದೆ. ಒಬ್ಬ ಇಂಗ್ರೇಜಿ ಗ್ರಂಥಕಾರನು ರಾಣೀ ಸಾಹೇಬಳ ಮರಣ ವೃತ್ತಾಂತವನ್ನ ಕೊಡುವಾಗ ಆಕೆಗೆ ಫ್ರಾನ್ಸ್ ದೇಶದಲ್ಲಿನ ಜೋನ್ ಆಫ್ ಆರ್ಕ್ ಎಂಬ ಒಬ್ಬ ಶೂರಸ್ತ್ರೀಯ ಉಪಮಾನ ಕೊಟ್ಟು, ಅವಳು ಪೆಟ್ಟಾದ ನಂತರ ತನ್ನ ಜನಗಳಿಗೆ ಆಭರಣಗಳನ್ನು ಹಂಚಿಕೊಟ್ಟಳೆಂತ ಬರೆದಿರುತ್ತಾನೆ. ಆದರೆ ಅದು ಎಷ್ಟು ಮಟ್ಟಿಗೆ ಅಂಗೀಕರಿಸಬೇಕೆಂಬುವದನ್ನ ನಿರ್ಣಯಿಸುವದಕ್ಕೆ ಆಗುವದಿಲ್ಲ! ಆ ಗ್ರಂಥಕಾರನು ಹೀಗೆ ಬರೆಯುತ್ತಾನೆ:—

"This Indian Joan of Arc was dressed in a red jacket and trousers and white turban. She wore a Scindia's celebrated pearl necklace which she had taken from his treasury. As she lay mortally wounded in her tent, she ordered those ornaments to be distributed among her troops. The whole rebel army mourned her loss."

*Clyde and Strathnairn.*

ರಾಣೀಸಾಹೇಬಳ, ಆವೇಳೆಯ ಹೃದಯ ದ್ರಾವಕವಾದ ಸ್ಥಿತಿಯನ್ನು ನೋಡಿ, ಅತಿಶಯ ದುಃಖಿತನಾದನು. ಅವನ ಕಣ್ಣುಗಳಿಂದ ನೀರುಬೀಳಲಿಕ್ಕೆ ಪ್ರಾರಂಭವಾಯಿತು. ಅವನು ರಾಣೀಸಾಹೇಬಳಿಗೆ ಭಯಂಕರವಾದ ಪೆಟ್ಟಾದದ್ದರಿಂದ, ಬಹಳ ನಿಶ್ಯಕ್ತಳಾಗಿದ್ದಾಳೆಂಬುವದನ್ನ ನೋಡಿ, ಅವಳನ್ನು ಆ ಸಂಗ್ರಾಮ ಸ್ಥಾನಕ್ಕೆ ಸಮೀಪದಲ್ಲಿ ಇರುವ ಒಂದು ಗುಡಿಸಲಿಗೆ ತೆಗೆದುಕೊಂಡು ಹೋದನು. ಆ ಪರ್ಣಶಾಲೆಯು ಗಂಗಾದಾಸ ಬಾವಾನದು ಆಗಿತ್ತೆಂತ ಹೇಳುತ್ತಾರೆ. ಅಲ್ಲಿಗೆ ಹೋಗುತ್ತಲೆ, ರಾಣೀಸಾಹೇಬಳಿಗೆ ಬಹಳ ತೃಷೆ ಹತ್ತಿತು ಯಂಬುವದ್ದರಿಂದ, ಆತನು ಆಕೆಗೆ ಗಂಗಾಜಲವನ್ನು ತಂದು

---

ಇದು ಹಾಗಿರಲಿ. ಇದರಿಂದ ರಾಣೀ ಸಾಹೇಬಳು ಪೆಟ್ಟಾದನಂತರ ತನ್ನ ಏರ್ಪಾಟು ಮಾಡಿದಳೆಂತ ತೋರಿಬರುತ್ತದೆ.

ರಾಣೀ ಸಾಹೇಬಳಿಗೆ ಘಾಯವಾದ ಸಮಾಚಾರವು ಮೂಲತಃ ಇಂಗ್ರೇಜಿ ಸೈನ್ಯದವರಿಗೆ ತಿಳಿಯಬರಲಿಲ್ಲ. ಆದ್ದರಿಂದ ಆಕೆಯ ಅಂತ ವಿಧಿಯನ್ನು ಆಕೆಯ ಸೇವಕರು ವ್ಯವಸ್ಥೆಯಂತೆ ಮಾಡಿದರೆಂಬ ವಿಷಯದಲ್ಲಿ, ಇನ್ನೂ ದೃಷ್ಟಾಂತರ ಇಂಗ್ಲಿಷ್ ಗ್ರಂಥದಿಂದ ಶಿಕ್ಕುತ್ತದೆ. ಮಿ. ಮಾರ್ಟಿನ್ ಬರೆಯುವದೇನಂದರೆ :—

"No English eye marked her fall. The Hussars, unconscious of the advantage they had gained, and scarcely able to sit on their saddles from heat and fatigue were, for the moment, incapable of further exertions, and retired, supported by a timely reinforcement. Then, it is said, the remnant of the faithful body-guard (many of whom had perished at Jhansi) gathered around the lifeless forms of the Ranee and her sister, who dressed in male attire, and riding at the head of their squadrons, had fallen together, killed either by part of a shell, or as is more probable by balls from the revolvers with which the Hussars were armed. A funeral pyre was raised and the remains of the two young and beautitul women were burnt, according to the custom of the Hindus."

*British India P.* 489.

ಕೊಟ್ಟನು. ರಾಣೀಸಾಹೇಬಳ ಸರ್ವಶರೀರವೂ ರಕ್ತಮಯವಾಗಿತ್ತು; ಮತ್ತು ಪೆಟ್ಟಿನ ತೀಕ್ಷ್ಣವಾದ ವೇದನೆಯು ಆಕೆಯಮೇಲೆ ತನ್ನ ಪೂರ್ಣ ಶಕ್ತಿಯನ್ನು ಕೂಡಿಸಿತ್ತು. ಆದರೆ ಅಂಥಾ ಆಸನ್ನಸ್ಥಿತಿಯಲ್ಲಿಯೂ, ರಾಣೀಸಾಹೇಬಳು ತನ್ನ ಪ್ರಾಣಪ್ರಿಯ ಪುತ್ರನಾದ ಶ್ರೀಮಂತ ದಾಮೋದರರಾಯನನ್ನು ವಾತ್ಸಲ್ಯದಿಂದ ನೋಡಿ, ತನ್ನ ಕಣ್ಣುಗಳನ್ನು ತೃಪ್ತಿಪಡಿಸಿದಳು; ಮತ್ತು ಮುಂದೆ ಅವನಿಗೆ ಜಗತ್ಪಾಲಕನ ಕೃಪಾಛತ್ರಿಯ ನೆರಳಿನಲ್ಲಿಟ್ಟು ತನ್ನ ಪರಲೋಕದ ಮಾರ್ಗವನ್ನು ಸ್ವೀಕಾರಮಾಡಿದಳು. ಸನ್ 1858 ನೇ

---

ಪರಂತು, ಈ ಸಮಾಚಾರದಲ್ಲಿ ಎರಡು ಸಂಗತಿಗಳು ತಪ್ಪಾಗಿ ಇವೆಯಂತ ತೋರುತ್ತದೆ. ರಾಣೀಸಾಹೇಬಳ ಸಂಗಡ ಇದ್ದ, ಇನ್ನೊಬ್ಬ ಹೆಂಗಸು, ಆಕೆಯ ಸಹೋದರಿಯಂತ ಹೇಳಿದೆ. ಆಕೆಯು ರಾಣಿಯ ಸಹೋದರಿಯಲ್ಲ. ಒಬ್ಬ ದಾಸಿಯಾಗಿದ್ದಳು. ಇದನ್ನು ಕುರಿತು ಹಿಂದಿನ ಒಂದು ಟಿಪ್ಪಣಿಯಲ್ಲಿ ತಿಳಿಸಿದೆ. ಈಗ ರಾಣೀಸಾಹೇಬಳು ಗೋಲಿಯು ತಗಲಿ ಸತ್ತಳೆಂತ ಹೇಳಿದೆ. ಅದನ್ನು ನೋಡಿದರೆ, ಸರಿಯಾದದ್ದೆಂತ ಕಂಡುಬರುವದಿಲ್ಲ. ಯಾಕೆಂದರೆ ಮೇಲಿನ ಸಂಗತಿಯು 1858 ನೇ ಇಸವಿ ದಂಗೆಯ ಸಮಯದಲ್ಲಿ ತಕ್ಷಣವೇ ಪ್ರಸಿದ್ಧಿಯಾಗಿದ್ದ ತಿಳುವಳಿಕೆಯಮೇಲೆ ಬರೆದಿದೆ. ಆದ್ದರಿಂದ ಅದು ಬಹಳ ತಪ್ಪು ತಿಳುವಳಿಕೆಯಿಂದ ಬರೆದದ್ದು ಯಂತ ವೂಹಿಸುವದು ಸಾಧ್ಯವಾಗಿದೆ. ರಾಣೀಸಾಹೇಬಳು ಬಂದೂಕಿನ ಗೋಲಿಯಿಂದ ಮುಕ್ತಳಾಗಲಿಲ್ಲ. ಆಕೆಯ ಕುದುರೆಯು ಮೋಸಕೊಟ್ಟದ್ದರಿಂದ ಆಕೆಗೆ ಪೆಟ್ಟಾಯಿತು ಎಂಬಮಾತಿಗೆ ಹೆಚ್ಚು ಆಧಾರ ಸಿಕ್ಕುತ್ತದೆ. ಇದು ಹೊರತು ಮೇಲಿನ ಸಮಾಚಾರ ಬರೆಯತಕ್ಕ ಗ್ರಂಥಕಾರನೇ, ಒಂದು ಟಿಪ್ಪಣಿಯಲ್ಲಿ, ರಾಣೀಸಾಹೇಬಳ ಮರಣ ಸಮಯದಲ್ಲಿ ಸ್ವತಃ ಹಾಜರಿದ್ದ ಒಬ್ಬ ಮನುಷ್ಯನ ತಿಳುವಳಿಕೆಯಮೇಲೆ, ಮುಂದಿನ ಟಿಪ್ಪಣಿಯನ್ನು ಕೊಟ್ಟಿರುತ್ತಾನೆ:—

"When the Hussars surprised the camp, the ladies were seated together, drinking sherbet. They mounted and fled. But the horse of the Ranee refused to leap a canal, and she received a shot in the side and sabrecut on the head; but still rode till she fell dead from her saddle, and was surrounded and burnt."

ಇದರಲ್ಲಿಯೂ ಗುಂಡುತಗಲಿದ ಮುಂತಾದ ಸಂಗತಿಯನ್ನು ಬರೆದಿರುತ್ತಾನೆ. ಪರಂತು ಅದನ್ನ ಕುರಿತು ಬಹಳ ಸಂಶಯವಿದೆ. ಇದುಹಾಗಿರಲಿ. ಯಾವಪ್ರಕಾರದಲ್ಲಾದರೂ, ರಾಣೀಸಾಹೇಬಳು ಮರಣ ಪಟ್ಟಾಗ್ಯು, ಬಹಳಕಾಲಪರ್ಯಂತರ ಆಕೆಯ ಮರಣದ ಸುದ್ದಿಯು, ಇಂಗ್ರೇಜಿ ಸೈನ್ಯಕ್ಕೆ ತಿಳಿಯಲಿಲ್ಲ. ಈ ಮಾತಿಗೆ ಎರಡನೇ

ಇಸವಿ ಜೂನ್ ತಾರೀಖು 18 ನೇ ದಿವಸ, ಗ್ವಾಲಿಯರ್ ಹತ್ತಿರ ಸಮರಾಂಗಣದಲ್ಲಿ ಹಿಂದುಸ್ಥಾನದಲ್ಲಿನ ಅಸದೃಶವಾದ ಶೌರ್ಯ ಗುಣಗಳಿಂದ ಭರಿತಳಾದ ಸ್ತ್ರೀರತ್ನವಾದ, ಝಾನ್ಸೀ ಸಂಸ್ಥಾನದ ಮಹಾರಾಣೀ ಲಕ್ಷ್ಮೀಬಾಯಿಯು, ಇಹಲೋಕವನ್ನು ತ್ಯಾಗಮಾಡಿ, ಅಕ್ಷಯ ಸುಖಲಾಭವನ್ನು ತೆಗದುಕೊಳ್ಳುವದಕ್ಕಾಗಿ, ಸ್ವರ್ಗಲೋಕಕ್ಕೆ ಹೊರಟು, ಹೋದಳು. ಈ ಪ್ರಸಂಗದ ವರ್ಣನೆ ಮಾಡುವದಕ್ಕೆ ಯಾರು ಸಮರ್ಥರಾಗಿದ್ದಾರೆ?

ರಾಣೀಸಾಹೇಬಳು ತೀರಿಹೋದನಂತರ, ದೇಶಮುಖಿ ರಾಮಚಂದ್ರರಾಯನು ತನ್ನ ಸ್ವಾಮಿನಿಯ ಆಜ್ಞಾಪ್ರಕಾರ ತನ್ನ ಕರ್ತವ್ಯವನ್ನು ಉತ್ತಮ ಪ್ರಕಾರದಲ್ಲಿ ನಡೆಸಿದನು. ಅವನು ಶೀಘ್ರದಲ್ಲಿ, ಸಮೀಪದ ಒಂದು ಭಾಗದಲ್ಲಿ, ಹುಲ್ಲಿನ ಒಂದು ಚಿತೆಯನ್ನು ಮಾಡಿ, ಅದರಮೇಲೆ ಪ್ರಾಣವಿಲ್ಲದ ಪವಿತ್ರ ದೇಹವನ್ನು ಇಟ್ಟು, ಅದಕ್ಕೆ ಬೆಂಕಿ ಹಚ್ಚಿ

---

ದೃಷ್ಟಾಂತರವನ್ನು ಡಾಕ್ಟರ್ ಸಿಂಹ್ಲೇಸ್ಟರ್ ಕೊಟ್ಟಿರುತ್ತಾನೆ. ಆತನು ತನ್ನ ಪುಸ್ತಕದಲ್ಲಿ ರಾಣೀ ಸಾಹೇಬಳ ಮರಣವಾರ್ತೆ ಕೊಡುವಾಗ ಸ್ಪಷ್ಟವಾಗಿ ಹೀಗೆ ಹೇಳಿರುತ್ತಾನೆ:—

" Memorable too for another reason is this affair; the gallant Queen of Jhansi fell from a carbine wound, and was carried to the rear, where she expired and was burnt according to the custom of Hindoos. Thus the brave woman cemented with her blood the cause she espoused. It is as well it was so, and that, she did not survive to share the ignominious Fate of Tantia Topee. The fact of her death was not known to us for some days, as she was attired as a cavalry soldier. Even the report was received with doubt until Sir Robert Hamilton established it irrefragably.'

*The Campaign in Central India P.* 183.

ಇದು ಹಾಗಿರಲಿ. ಒಟ್ಟಿಗೆ ಎಲ್ಲಾದರಿಂದಲೂ, ರಾಣೀ ಸಾಹೇಬಳ ಖಂಡಿತವಾದ ಉದ್ದೇಶದಂತೆ, ಆಕೆಯ ಒಂದೇ ಮನಸ್ಸಿನ ಸೇವಕರು ತಮ್ಮ ಕರ್ತವ್ಯವನ್ನ ಹದಿನಾರು ಆಣೆಗೆ ಪೂರೈಸಿ, ತಮ್ಮ ಸ್ವಾಮಿನಿಯ ದೇಹಕ್ಕೆ ಮ್ಲೇಚ್ಛರ ಸ್ಪರ್ಶವಾಗಲು ಬಿಡದೆ, ಆಕೆಯ ಅಂತ್ಯ ವಿಧಿಯನ್ನ ಮಾಡಿದರೆಂಬುವದಕ್ಕೇನೂ ಸಂದೇಹವಿಲ್ಲ.

ಡನು. ಒಂದು ಕ್ಷಣದಲ್ಲಿ ಅಗ್ನಿಯ ಜ್ವಾಲೆಯು ಪ್ರದೀಪ್ತವಾಗಿ, ಆತನು ರಾಣೀಸಾಹೇಬಳ ಸುಕುಮಾರ ದೇಹವನ್ನು ಗ್ರಾಸಮಾಡಿದನು. ಈ ಪ್ರಕಾರವಾಗಿ, ಆ ಅಲೌಕಿಕ ಪರಾಕ್ರಮಪಟ್ಟು, ರಾಜಸ್ತ್ರೀಯು, ಸ್ತ್ರೀಜಾತಿಯ ಮುಖ್ಯಭೂಷಣಮತ್ತು ತನ್ನ ಕ್ಷತ್ರಿಯಕುಲದ ಧರ್ಮವನ್ನು ಉತ್ತಮ ಪ್ರಕಾರವಾಗಿ ಕಾಪಾಡಿಕೊಂಡು, ತಾನು ಮಾಡಿದ ಸಂಕಲ್ಪವನ್ನು ಕೊನೆಗಾಣಿಸಿ ಕೊಂಡಳು.



# ೧೬ನೇ ಪ್ರಕರಣ.

---

## ಉಪ ಸಂಹಾರ.

ಮುಖ್ಯವಾಗಿ ಮಹಾರಾಣಿ ಲಕ್ಷ್ಮೀಬಾಯಿ ಸಾಹೇಬಳ ಮರಣವೆ, ದಂಗೇಖೋರರಾದ ಶ್ರೀಮಂತ ರಾವ್‌ಸಾಹೇಬ್ ಪೇಷ್ವೆ ಮುಂತಾದ ಪ್ರಭೃತಿಗಳ ನಾಶಕಾಲಕ್ಕೆ ಪ್ರಾರಂಭವಾಯಿತು. ಆ ಸಮಯದಲ್ಲಿ, ಅವರ ಇನ್ನೂ ಮಳಿಕೆ ವಡೆಯುವ ಸ್ಥಿತಿಯಲ್ಲಿ ಕ್ಷಣಿಕವಾಗಿದ್ದು, ಅದೃಷ್ಟವಶಾತು, ಬಲವಾಗಲು ನೋಡುತ್ತಿದ್ದ ರಾಜ್ಯಸತ್ವದ ಮೇಲೆ ಬಂದುಬಿದ್ದ ಬಲವಾದ ಅಪಯಶಸ್ಸಿನ ಪೆಟ್ಟು ಅವಳ ಪ್ರಾಣಹರಣ ಮಾಡುವದಕ್ಕೆ ತುಂಬಾ ಕಾರಣವಾಯಿತೆಂತ, ಹೇಳಿದರೆ ನಡೆಯಬಹುದು. ರಾಣೀ ಸಾಹೇಬಳ ಮರಣದ ವರ್ತಮಾನವನ್ನು ಕೇಳುತ್ತಲೆ, ಶ್ರೀಮಂತ ರಾವ್‌ಸಾಹೇಬ್ ಪೇಷ್ವೆ ಮತ್ತು ತಾತ್ಯಾಟೋಪಿಗೆ ಅತ್ಯಂತ ದುಃಖವಾಗಿ ಅವರ ಶಕ್ತಿಯಲ್ಲಾ ಕುಂದಿಹೋಯಿತು; ಅವರಿಗೆ ತಮ್ಮ ಬಲಗೈ ಮುರಿದುಹೋದಹಾಗೆ ತೋರಿತು. ರಾಣೀಸಾಹೇಬಳಂಥ ತೇಜಃ ಪುಂಜಳಾದ ಪರಾಕ್ರಮಿ ರತ್ನವನ್ನು ದುಷ್ಟ ಯಮನು ಶಳೆದುಕೊಂಡದ್ದರಿಂದ ಅವರ ಸರ್ವ ರಣೋತ್ಸವದ ಮೇಲೆ ಅಂಧಕಾರ ಬರುವದು, ಮತ್ತು ಅವರ ಯುಕ್ತಿಯು, ಪ್ರಚುರ ಬುದ್ಧಿಗೆ ಮಂದತೆ ಬಂದು, ಅವರಿಗೆ ಪಲಾಯನ ಹೊರ್ತು ಎರಡನೆ ಯಾವ ಉಪಾಯವೂ ತೋರದೆ ಇರುವದು ಸಹ, ಸಹಜವಾಗಿದೆ. ಶ್ರೀಮಂತ ರಾವ್‌ಸಾಹೇಬ್ ಪೇಷ್ವೆ ಮತ್ತು ತಾತ್ಯಾಟೋಪಿ ಸಹ, ಇಂಗ್ರೇಜಿ ಸೈನ್ಯದ ಚಾತುರ್ಯದಿಂದಲೂ, ಪರಾಕ್ರಮದಿಂದಲೂ ಮತ್ತು ತಮ್ಮ ಕಟ್ಟಿಲ್ಲದ ಸೈನ್ಯದ ಘಾತುಕತನದಿಂದಲೂ, ಜೀವಶ್ರವದಂತೆ ಆಗಿದ್ದರು; ಮತ್ತು ದಂಗೇಖೋರರಿಗೆ ಅನುಕೂಲರಾಗಿದ್ದ, ಶಿಂಧ್ಯಾ ಸರ್ಕಾರದ ಲಷ್ಕರಿ ಸರದಾರರೂ ಮುಖ್ಯ ಸಮಯದಲ್ಲಿ ಸ್ವಾಮಿಭಕ್ತಿಯ ದೃಢಭಾವವನ್ನು ತೋರಿಸುವದಕ್ಕೆ ಉದ್ಯುಕ್ತರಾಗಿದ್ದರು. ಆದ್ದರಿಂದ, ಸರ್ ಹ್ಯೂರೋಜ್, ಮುಂತಾದ ಇಂಗ್ರೇಜಿ ಸೇನಾಪತಿಗಳಿಗೆ ಗ್ವಾಲಿಯರ್ ಸ್ವಾಧೀನಪಡಿಸಿಕೊಳ್ಳುವದಕ್ಕೆ ವಿಶೇಷ ಕಾಲವು ಹಿಡಿಯಲಿಲ್ಲ. ರಾಣೀಸಾಹೇಬಳಂಥಾ ರಣಪಟು ಮೊಹರೆಯು ಸಮರಾಂಗಣದಲ್ಲಿ, ಬಿದ್ದುಹೋದಮೇಲೆ, ದಂಗೇಖೋರರ ಸರ್ವ ಸೈನ್ಯದಲ್ಲಿಯೂ ವ್ಯಸನಕಳವಾದ ಉದಾಶೀನತೆ ಹುಟ್ಟಿ, ಇಂಗ್ರೇಜಿಯವರ ಅವಿಚ್ಛಿನ್ನವಾದ ಏಟುಗಳಮುಂದೆ, ಅವರಿಗೆ ತಮ್ಮ ರಕ್ಷಣೆಯ ಆಶೆಯು ಇಲ್ಲದಂತೆ ಆಗಿ, ದಿಕ್ಕೆಟ್ಟು ಓಡಿಹೋಗಲು ಪ್ರಾರಂಭಿಸಿದರು. ಅದರಿಂದ

ಇಂಗ್ರೇಜಿ ಸೇನಾಪತಿಗಳಿಗೆ ಆವೇಶ ಹುಟ್ಟಿ, ಲಷ್ಕರ್ ತೆಗೆದುಕೊಂಡು ಹೋಗಿ ರಾಜಧಾನಿಯಮೇಲೆ ಬಿದ್ದರು. ಸರ್ ಹ್ಯೂರೋಜ್ ಸಾಹೇಬನು, 'ಸೂರ್ಯ ಅಸ್ತಮಯವಾಗುವದಕ್ಕಿಂತ ಮುಂಚೆ, ಸಿಂಧ್ಯಾ ಸರ್ಕಾರದ ರಾಜಧಾನಿಯನ್ನು ಸ್ವಾಧೀನಪಡಿಸಿಕೊಳ್ಳುತ್ತೇನೆ' ಎಂತ ಶಪಥವನ್ನು ಮಾಡಿಕೊಂಡಿದ್ದನು. ಆಪ್ರಕಾರವಾಗಿ ಅವನು ಸಾಯಂಕಾಲದ ಪರ್ಯಂತರ, ಉಳಿದಿದ್ದ ದಂಗೇಖೋರರ ಸಂಗಡ, ನಿಕರವಾಗಿ ಯುದ್ಧಮಾಡಿ, ವಿಜಯ ಸಂಪಾದನೆ ಮಾಡಿಕೊಂಡು, ದಂಗೇಖೋರರ ಕ್ಷಣಿಕ ಯಶಸ್ಸನ್ನು ಸಂಪೂರ್ಣವಾಗಿ, ಅಂಧಕಾರಗೊಳಿಸಿ, ಅವರನ್ನು ದಶ ದಿಕ್ಕಿಗೆ ಓಡಿಸಿಬಿಟ್ಟನು.

ತಾರೀಖು 19 ನೇ ದಿವಸ ಜಯಹೊಂದಿದ ಸರ್ ಹ್ಯೂರೋಜ್, ಸರ್ ರಾಬರ್ಟ್ ಹ್ಯಾಮಿಲ್ಟನ್, ಮತ್ತು ಮೇಜರ್ ಮ್ಯಾಕ್‌ಫರಸನ್ ಪ್ರಭೃತಿ ಯುದ್ಧಶಾಲಿಗಳು ಅಲ್ಲಿಜಾಬಹದರ್‌ನ ಲಷ್ಕರನ್ನು ರಾಜಧಾನಿಯಲ್ಲಿ ಪ್ರವೇಶಮಾಡಿಸಿ, ತಮ್ಮ ಪರಮ ವಿಶ್ವಾಸಕ್ಕೆ ಪಾತ್ರನಾದ ಸ್ನೇಹಿತನಾದ ಮಹಾರಾಜ ಜಯಾಜಿರಾವ್ ಸಿಂಧ್ಯನನ್ನು ಸಿಂಹಾಸನದ ಮೇಲೆ ಕೂಡಿಸುವದಕ್ಕೆ, ವಿಜಯೋತ್ಸಾಹ ಪೂರ್ವಕವಾದ ಪ್ರಚಂಡ ಸಮಾರಂಭವನ್ನು ಮಾಡಿದರು. ಗ್ವಾಲಿಯರ್‌ನ ವಿಜಯ ವರ್ತಮಾನವನ್ನು ಕೇಳಿ ಗೌರ್ನರ್ ಜನರಲ್ ಲಾರ್ಡ್ ಕ್ಯಾನಿಂಗ್ ಸಾಹೇಬನು ಅತ್ಯಂತ ಹರ್ಷವನ್ನು ತೋರಿಸಿದನು. ಅವನು ಸಿಂಧ್ಯಾನನ್ನು ಸಿಂಹಾಸನಾರೂಢನನ್ನಾಗಿ ಮಾಡಲು ಸಂಪೂರ್ಣವಾಗಿ ಅಪ್ಪಣೆ ಕೊಟ್ಟು, ಆ ಸಂತೋಷವರ್ತಮಾನವನ್ನು ಹಿಂದೂಸ್ಥಾನದಲ್ಲೆಲ್ಲಾ ತಿಳಿಸಿ, ಸರ್ವಪ್ರಜೆಗಳ ಕಡೆಯಿಂದಲೂ, ಧನ್ಯವಾದವನ್ನು ಸಂಪಾದಿಸಿಕೊಳ್ಳುವದಕ್ಕಾಗಿಯೂ, ಮತ್ತು ತಮ್ಮ ತೇಜಸ್ವಿ ರಾಜದಿನಕರರಾಯನು ಪೂರ್ಣಪ್ರಕಾಶ ಮಾನನಾದನೆಂತ ವ್ಯಕ್ತಪಡಿಸುವದಕ್ಕಾಗಿಯೂ, ನಾಲ್ಕು ದಿಕ್ಕುಗಳಿಗೂ, ತಂತಿಯ ವರ್ತಮಾನವನ್ನು ಬಿಟ್ಟನು. ಇಷ್ಟೇಅಲ್ಲದೆ, ಕಲ್ಕತ್ತೆಯಲ್ಲಿ ಒಂದು ಪ್ರಸಿದ್ಧ ಪತ್ರಿಕೆಯನ್ನು ಪ್ರಕಟಮಾಡಿ, ಹಿಂದೂಸ್ಥಾನದಲ್ಲಿನ ಪ್ರತಿ ಒಂದು ಪಟ್ಟಣದಲ್ಲಿಯೂ, ಸಿಂಧ್ಯನ ಸನ್ಮಾನಾರ್ಥವಾಗಿಯೂ ಮತ್ತು ಜಯಘೋಷಸೂಚಕವಾಗಿಯೂ ತೋಫುಗಳಿಂದ ವಂದನೆ ಮಾಡಬೇಕೆಂತ ಆಜ್ಞಾಪಿಸಿದನು. ಆದ್ದರಿಂದ ಪ್ರತಿಒಂದು ಪಟ್ಟಣದಲ್ಲಿಯೂ ತೋಫಿನ ಆನಂದ ಸೂಚಕವಾದ ಪ್ರಚಂಡ ಧ್ವನಿಯಿಂದ, ಆಕಾಶವೆಲ್ಲಾ ತುಂಬಿಹೋಯಿತು. ನಾಲ್ಕು ದಿಕ್ಕುಗಳಲ್ಲಿಯೂ ಜಯಘೋಷವು ಪ್ರಾರಂಭವಾಯಿತು. ಸ್ವತಃ ಸಿಂಧ್ಯಾ ಮಹಾರಾಜನ ರಾಜಧಾನಿಯಲ್ಲಿ ದಿಪೋತ್ಸವ, ಔತನ, ಮತ್ತು ದರ್ಬಾರು ಮುಂತಾದ ಉತ್ಸವಗಳು ಏಕಪ್ರಕಾರವಾಗಿ ನಡೆಯಲು ಪ್ರಾರಂಭವಾದವು. ಶ್ರೀಮಂತ ಅಲ್ಲಿಜಾಬಹದರ್‌ನು ಸರ್‌ಹ್ಯೂರೋಜ್ ಮುಂತಾದ ಇಂಗ್ರೇಜಿ ಸೇನಾಧಿಕಾರಿಗಳಿಗೆ ತನ್ನ ಫುಲ್‌ಬಾಗ್ ಎಂಬ ಉದ್ಯಾನವನದಲ್ಲಿ, ವಿಜಯದ ಔತನ ಕೊಟ್ಟು, ಅವರಿಗೆ ಬಹಳ ಸನ್ಮಾನ ಮಾಡಿದನು. ಈ ಪ್ರಕಾರವಾಗಿ ಗ್ವಾಲಿಯರ್‌ನಲ್ಲಿ, ಯಶಸ್ಸಿನ ಸಮುದ್ರವು ತುಂಬಿಹೋಗಿ, ಕೆಲವುದಿವಸ ಪರ್ಯಂತರ ಇಂಗ್ರೇಜಿ ಯುದ್ಧಶಾಲಿಗಳು ಆನಂದದಲ್ಲಿ ಮುಳುಗಿ ಹೋಗಿದ್ದರು.

ಗ್ವಾಲಿಯರ್‌ನಲ್ಲಿ ಬ್ರಿಟಿಸ್ ಸರ್ಕಾರದ ಪ್ರತಾಪ ಸೂರ್ಯನು ಒಂದುಸಲ ಉದಯನಾದವನು ಸ್ಥಿರವಾಗಿ ನಿಂತದ್ದು ಅತ್ಯಂತ ಸಂತೋಷಕರವಾದ ಮಾತಾಗಿಥೆ. ಆ ಬಳಿಕ ಶ್ರೀಮಂತರಾವ್ ಸಾಹೇಬ್ ಪೇಷ್ವೆ, ತಾತ್ಯಾಟೋಪಿ ಮುಂತಾದ ದಂಗೇಖೋರರು ಕೆಲವು ಕಾಲ ಪರ್ಯಂತರ ಇಂಗ್ರೇಜಿ ಸೈನ್ಯಕ್ಕೆ ತೊಂದರೆ ಕೊಡುವದರಲ್ಲೇನೂ ಕಡಮೆ ಮಾಡಲಿಲ್ಲ. ಪರಂತು, ಎಣ್ಣೆ ತೀರಿಹೋದ ದೀಪವು ಹ್ಯಾಗೆ ಒಂದು ನಿಮಿಷಮಾತ್ರ ಬಲವಾಗಿ ಪ್ರಕಾಶಿಸಿ ಅನಂತರ ಸಮೂಲವಾಗಿ ಇಲ್ಲದಂತೆ ಆಗುವದೋ, ಹಾಗೆಯೇ ಅವರ ಸರ್ವ ಪ್ರಯತ್ನಗಳು ಪರ್ಯವಸಾನವಾಯಿತು. ಗ್ವಾಲಿಯರ್‌ನಿಂದ ಓಡಿ ಹೋದನಂತರ, ಶ್ರೀಮಂತರಾವ್ ಸಾಹೇಬ್ ಪೇಷ್ವೆ, ತಾತ್ಯಾಟೋಪಿ, ಬಾಂದೆವಾಲೆ ನವಾಬ್, ಇವರ ಸಂಗಡ ಬ್ರಿಗೇಡಿಯರ್ ಜನರಲ್ ನೇಪಿಯರ್ ಸಾಹೇಬನು, ಜಾವರಾಅಲ್ಲೀ ಪುರದಲ್ಲಿ, ಯುದ್ಧ ಮಾಡಿ ದಂಗೇಖೋರರನ್ನು ಪಲಾಯನ ರೂಪಿಯಾದ ದುರ್ದೈವವೆಂಬ ರಾಹುವಿನ ಕಠೋರ ದಂತಗಳಲ್ಲಿ ಸಿಗಸಿದನು. ಆ ಕಾಲ ದಾರಭ್ಯ ಅವರಿಗೆ ಒಂದು ದಿವಸವೂ ಸುಖವು ಸಿಕ್ಕಲಿಲ್ಲ. ಬಾಂದೆವಾಲೆ ನವಾಬನು ಸ್ವಲ್ಪಕಾಲದಲ್ಲಿಯೇ ಇಂಗ್ರೇಜಿ ಸರ್ಕಾರಕ್ಕೆ ಶರಣಾಗತನಾಗಿ, ಅವರ ಕಡೆಯಿಂದ ಅಭಯವನ್ನು ತೆಗೆದುಕೊಂಡು, ತನ್ನ ಪ್ರಾಣವನ್ನು ಉಳಿಸಿಕೊಂಡನು. ಆದರೆ ಶ್ರೀಮಂತರಾವ್ ಸಾಹೇಬ ಪೇಷ್ವೆ ಮತ್ತು ತಾತ್ಯಾಟೋಪಿ, * ಇವರು ಕೆಲವುದಿವಸ ಪರ್ಯಂತರ ಇಂಗ್ರೇಜಿ ಸೈನ್ಯದ ಚಾಪಲ್ಯವನ್ನ ಪರೀಕ್ಷೆ ಮಾಡುವದಕ್ಕಾಗಿಯೋ ಅಥವಾ ತಮ್ಮ ಅಶದೃಶವಾದ ಪಲಾಯನದ ಚಾತುರ್ಯವನ್ನ

---

* ಡಾಕ್ಟರ್ ಸಿಂಹ್ಲೇಸ್ಟರ್ ಸಾಹೇಬನು, ತಾತ್ಯಾಟೋಪಿಯನ್ನು ಹಿಂಬಾಲಿಸಿ ಹೋದ ವಿಷಯವನ್ನು ಕುರಿತು, ವರ್ಣನೆ ಮಾಡಿರುವದನ್ನ ಓದಿದರೆ, ಆ ಪಿಶಾಚಿರೂಪಿಯಾದ ದಂಗೇಖೋರನು, ಇಂಗ್ರೇಜಿ ಸೈನ್ಯದವರಿಗೆ ಕೆಲವುಕಾಲ ಪರ್ಯಂತರ ಸ್ವಲ್ಪವೂ ಆಸ್ಪದಕೊಡದೆ, ಅವರಿಗೆ ಎಷ್ಟು ದಣಿಸಿದನೆಂಬುವದು ಚನ್ನಾಗಿ ಕಂಡುಬರುತ್ತದೆ. ಗ್ವಾಲಿಯರ್ ಯುದ್ಧ ನಡೆದನಂತರದ, ಸ್ಥಿತಿಯನ್ನು ಕುರಿತು ಬರೆಯುವಾಗ, ಡಾ. ಸಿಂಹ್ಲೇಸ್ಟರ್ ಸಾಹೇಬನು ಕೆಳಗೆ ಬರದಂತೆ ಹೇಳುತ್ತಾನೆ:—

"The rain now fell in torrents, and brought refreshment to the dying soldiery, while it washed the blood stains from well nigh a score of our battle fields. And now Tantia with his demon horde commenced a lawless, marauding, and vagabond flight through the country always appearently having the Deckan in his view as the promised land; but unfortunately for him, the man before the rustle of whose standard all rebels

ಜಗತ್ತಿಗೆ ವ್ಯಕ್ತ ಪಡಿಸುವದಕ್ಕಾಗಿಯೋ, ಇಂಗ್ರೇಜಿಕಡೆಯ ಜನರಲ್ ನೇಪಿಯರ್, ಜನರಲ್ ರಾಬರ್ಟ್ಸ್, ಜನರಲ್ ಮಿಚೆಲ್, ಬ್ರಿಗೇಡಿಯರ್ ಪಾರ್ಕ, ಸಾಮರ್ಸೆಟ್, ಹೋಪ್ಸ್, ಹೋನರ್, ಮೀಡ್, ಬೆಚರ್ ಮತ್ತು ಸದರ್ಲೆಂಡ್, ಮುಂತಾದ ಅನೇಕ ಸೇನಾ ನಾಯಕರಿಗೆ ಬಂದು, ಬಂದುವರೆವರ್ಷ ಪರ್ಯಂತರ ಸಾಕುಮಾಡಿ, 'ತೋಬಾ ತೋಬಾ' ಅನ್ನಿಸಿದರು. ತಾತ್ಯಾ ಟೋಪಿಯು ಸರ್ವ ಮಧ್ಯ ಹಿಂದುಸ್ಥಾನದಲ್ಲೆಲ್ಲಾ ಧೂಳಬ್ಬಿಸಿದನು ಅನೇಕ ಸಂಸ್ಥಾನಿಕರನ್ನು ಭಯಭೀತರನ್ನಾಗಿ ಮಾಡಿಬಿಟ್ಟನು. ನಾನುಮುಂದೆ ನಾನು

---

had learnt to quail, had preceded him, and taken authority there. Tantia and his myrmidons were allowed no rest, sweeping like a locust cloud over districts, they left the same sad effects behind. Gradually and gradually with his Gwalior treasure his influence declined and star began to set, though occasionally and again some rebel Rajah, with a thousand robbers, would join his standard and cause his light to flicker and shine for a moment; but his reinforcements made him more liable to be attacked, and then he became more obscure than before. The Bombay Government, by means of the Bullock-Train running from some six hundred miles were enabled to send up constant reinforcements of troops and supplies of stores, and notwithstanding it was the rainy season, and even the Agra Trunk road axle deep in black mud, it covered the country with flying forces—and fly they did, over mountain, dale, and river, over districts without roads, and where Europeans had scarce or never been before, in pursuit of the Will—O'—the Wisp Tantia. He could only fight when escape was unavoidable, and then invariably was beaten and lost his guns, but never lost heart." * * * "His light horse could hover round us like shadows, and always get away from our over-worked irregular over-weighted Regular



**Tantia Topi.**

ತಾತ್ಯಾಟೋಪಿ.

ಮುಂದೆ ಯನ್ನುವ ದೊಡ್ಡ ದೊಡ್ಡ ಸೇನಾಧಿಪತಿಗಳಿಗೆ ಸಾಕು ಸಾಕು ಮಾಡಿದನು ಸಿಂಹನಂತೆ ಬೆನ್ನಟ್ಟಿ ಬರುವ ಚಪಲ ವೀರರ ಕಣ್ಣುಗಳನ್ನ ಮುಚ್ಚಿಸಿಬಿಟ್ಟನು. ಕ್ಷಣ. ದಲ್ಲಿ, ಕಣ್ಣಿಗೆ ಕಾಣಿಸಿ ಕೊಂಡ ಕೂಡಲೆ, ಮಾಯವಾಗತಕ್ಕ ಪಿಶಾಚಿಯೋಪಾದಿಯಲ್ಲಿ, ನಡವಳತೆಯನ್ನು ಆಚರಿಸಿ, ದೊಡ್ಡ ದೊಡ್ಡ ಯುದ್ಧಶಾಲಿಗಳ ಕೈಯಲ್ಲಿ, ತುರಿ ಕೊಟ್ಟು, ಕೆಲವು ದಿವಸ ಪರ್ಯಂತರ ತನ್ನ ಅಘಟಿತ ಮತ್ತು ಅಸಾಧ್ಯ ಕಾರ್ಯದಿಂದ ಸರ್ವ ಜಗತ್ತಿಗೆ ಆಶ್ಚರ್ಯವನ್ನು ತೋರಿಸಿದನು. ಪರಂತು ಕೊನೆಗೆ ಆ ಇಬ್ಬರ ಹೃದಯ ದ್ರಾವಕವು

---

Cavalry. Each fresh Commandant who took the field fancied he could catch Tantia: prodigious marches were made, Officers and men threw aside all baggage even their tents, and accomplished upwards of forty miles daily—the rebels did fifty. The end was our horses were all sore—backed and the halt of a week or ten days rendered absolutely necessary. Then came a new aspirant for A. C. B, and Tantia's head, who brought fresh troops and camels into the field. He, perhaps, had not only to chase Tantia, but to keep clear of other forces Commanded by a Senior in rank to himself. It was wonderful the amount of energy that was thrown into the pursuit, and the hundreds of dead Camels strewn over every jungle track; roads were no object or rivers either, to pursuied or pursures &c &c &c."

ಮಿ. ರಸೆಲ್ ಎಂಬ 'ಲಂಡನ್ ಟೈಮ್ಸ್'ನ ಒಬ್ಬ ಪ್ರಸಿದ್ಧವಾದ ವರ್ತಮಾನ ಕೊಡತಕ್ಕವನು, ತಾತ್ಯಾಟೋಪಿಯ ಸಮ್ಮಂಧವಾಗಿ. ಸರ್ 1858 ನೆ ಇಸ್ವಿ ಡಿಶಂಬರು ತಾರೀಖು 4 ರಲ್ಲಿ ಬರೆದಿರುವದನ್ನ ಓದಿದರೆ, ಆಲೋಕೋತ್ತರ ಪುರುಷನ ಅಗಾಧ ಕಾರ್ಯ ಗಳಿಗೆ ಪರದೇಶಿಯರು ಕೂಡಾ ಕೇವಲ ಆಶ್ಚರ್ಯ ಪಟ್ಟಿದ್ದರು ಎಂಬುವದು ಸ್ಪಷ್ಟವಾಗು ತ್ತದೆ. ರಸಲ್ ಸಾಹೇಬನು ತಾತ್ಯನ ಸಮ್ಮಂಧವಾಗಿ ಮಾಡಿರುವ ಸುಂದರ ವರ್ಣ ನೆಯು, ಸರ್ 1859 ನೆ ಇಸ್ವಿ ಜನವರಿ 17 ನೇ ತಾರೀಖಿನ ಲಂಡನ್ ಟೈಮ್ಸ್ ವರ್ತ ಮಾನ ಪತ್ರದಲ್ಲಿ ಛಾಪಿಶಿದೆ. ಅದು ಬಹಳ ಮಹಾತ್ಮೆಯುಳ್ಳದ್ದಾಗಿರುವದ್ದರಿಂದ ಅದನ್ನು ನಾವು ಇಲ್ಲಿ ತೋರಿಸಿದ್ದೇವೆ.

ಬತ್ತಿ ಹೋಯಿತು. ಗ್ವಾಲಿಯರ್‌ನಲ್ಲಿ ಹಿಂದೂ ಪಾದಶಾಯಿಯನ್ನು ಪುನಃ ಸ್ಥಾಪನೆ ಮಾಡಲು ಉದ್ಯುಕ್ತನಾದ ಶ್ರೀಮಂತರಾವ್‌ಸಾಹೇಬ ಪೇಷ್ವೆಗೆ ಸರ್ವ ಆಧಾರವೂ ತಪ್ಪಿ ಹೋಗಿ, ಯತಿರೂಪಧಾರಣೆ ಮಾಡಿಕೊಂಡು, ಪಂಜಾಬ್ ಪ್ರಾಂತ್ಯದಲ್ಲಿನ ಅರಣ್ಯ ಮಧ್ಯದಲ್ಲಿ, ತನ್ನ ದುರ್ದೈವದ ಅತರ್ಕ್ಯವಾದ ಆ ಲೀಲೆಯ ಚಮತ್ಕಾರವನ್ನು ನೋಡುತ್ತಾ, ತನ್ನ ಆಯುಷ್ಯವನ್ನು ಕಳೆಯುವ ಕಾಲವು ಬಂದು ಒದಗಿತು. ಪರಂತು 1862 ನೇ ಇಸ್ವಿಯಲ್ಲಿ ಇಂಗ್ರೇಜಿ ಬಹದ್ದೂರರು ಅವನನ್ನು ಹಿಡಿದು ಕಾನ್‌ಪುರಕ್ಕೆ ತಂದು, ಅಗಸ್ಟ ತಾರೀಖು 20 ನೇ ದಿವಸ ಬ್ರಂಹಾವರ್ತದಲ್ಲಿ ಅವನಿಗೆ ಗಲ್ಲಿಗೆ ಹಾಕಿಸಿದರು. ಶ್ರೀಮಂತನ ಸೇನಾಪತಿಯಾದ ತಾತ್ಯಾಟೋಪಿಗೆ ಸದಾ ಯಶಸ್ವಿಯಾದ ತನ್ನ ಪ್ರಭುವಿನ ಈ ದುಃಖಕಾರಕವಾದ ಅಂತ್ಯವನ್ನು ನೋಡುವ ಅಥವ ಕೇಳುವ ಸಂಭವವು ಮೂಲತಃ ಬರಲಿಲ್ಲ. 1859 ನೇ ಇಸ್ವಿ, ಏಪ್ರಲ್ ತಾರೀಖು 7 ನೇ ದಿವಸ, ರಾಜಪುತಾನದಲ್ಲಿನ ಒಂದು ಅರಣ್ಯ ಮಧ್ಯದಲ್ಲಿ ಮೇಜರ್ ಮೀಡ್ ಸಾಹೇಬನೆಂಬ ಒಬ್ಬ ಇಂಗ್ರೇಜಿ ಅಧಿಕಾರಿಯು

---

"Our very remarkable friend, Tantia Topee is too trouble some and clever an enemy to be admired. Since last June he has kept Central India in a fervor, He has sacked stations, plundered treasuries, emptied arsenals, collected armies, lost them ; fought battles, lost them ; taken guns from Native princes, lost them; taken more lost them : then his motions have been like forked lightning ; for weeks he has marched thirty and forty miles a day. He has crossed the Nurbudda to and fro ; he has marched between our colums, behind them and before them. Ariel was not more subtle aided by the best stage mechanism. Up mountains, over rivers, through ravines and valleys, amid swamps, on he goes, backwards and forwards, and side-ways and zig-zag ways now falling upon a post—cart, and carrying off the Bombay Mails—now tooting a village, headed and burned, yet evasive as Proteus."

*Times, January 17th* 1859.

ತಾತ್ಯನ ಮಿತ್ರನಾದ ಒಬ್ಬ ರಾಜ ಮಾನಸಿಂಗ್, ಎಂಬುವನನ್ನು ವಶ ಮಾಡಿಕೊಂಡು ಅವನ ಅಸದೃಶವಾದ ಸಹಾಯದಿಂದ, ತಾತ್ಯಾಟೋಪಿಯುನ್ನ ಮಲಗಿದ್ದ ಸ್ಥಳದಿಂದ ಹಿಡು ಕೊಂಡು ಹೋಗಿ, ತಾರೀಖು 18 ನೇ ದಿವಸ ಸಿಪ್ರಿಯಲ್ಲಿ ಗಲ್ಲಿಗೆಹಾಕಿಸಿದನು. ಮರಣಸಮ ಯವಲ್ಲಿ ಈ ಲೋಕೋತ್ತರ ಪ್ರಸಿದ್ಧನಾದ ಪುರುಷನು, ಶಾಂತತೆಯಿಂದ ಇಷ್ಟೇ ಹೇಳಿ ದನು, "ನಾನು ಮಾಡಿದ್ದೆಲ್ಲಾ ಶ್ರೀಮಂತ ಪೇಷ್ವೆಯ ಅಪ್ಪಣೆ ಪ್ರಕಾರ ಮಾಡಿದ್ದಾಗಿದೆ. ಅದರಲ್ಲಿ ಕೆಟ್ಟದ್ದೇನೂ ನಾನು ಮಾಡಿಲ್ಲ. ಆದಕಾರಣ ನನ್ನನ್ನು ಜಾಗ್ರತೆಯಾಗಿ ಪರ ಲೋಕಕ್ಕೆ ಕಳುಹಿಸಬೇಕು." ಇದು ಹಾಗಿರಲಿ. ಈ ಪ್ರಕಾರವಾಗಿ ದಂಗೇಖೋರರ ಪ್ರಮುಖರನ್ನು ಮತ್ತು ಅವರ ಸೈನ್ಯದವರನ್ನೂ, ಮಹಾ ಶೂರರಾದ ಇಂಗ್ರೇಜಿ ಯುದ್ಧ ಶಾಲಿಗಳು, ಜಾಗ್ರತೆ ಸಂಪೂರ್ಣವಾಗಿ ಸಂಹಾರಮಾಡಿ, ಇಲ್ಲಿ ಅಲ್ಲಿ ಸ್ವಸ್ಥತೆಯನ್ನು ಉಂಟು ಮಾಡಿದ್ದಕ್ಕಾಗಿ ಅವರಿಗೆ ಅಭಿನಂದನೆಯನ್ನು ಯಾರು ಮಾಡದೇ ಇದ್ದಾರು?

1857 ನೇ ಇಸ್ವಿಯಲ್ಲಿ ರಾಜಕೀಯವಾದ ಅನೇಕ ಕಾರಣಗಳಿಂದ, ಹಿಂದೂಸ್ಥಾ ನದ ಮಧ್ಯದಲ್ಲಿ, ಹುಟ್ಟಿದ ಭಯಂಕರವಾದ ಘಾಳಿಯು ಜಾಗ್ರತೆಯಾಗಿಯೇ ಶಾಂತವಾ ದದ್ದು ಬಹಳ ಸಂತೋಷಕರವಾದ ಮಾತಾಗಿದೆ. ಆ ಬಿರುಗಾಳಿಯ ಮಧ್ಯದಲ್ಲಿ, ಅರಾಜನಿಷ್ಠೆಯ ಪ್ರಚಂಡವಾದ ಅಲೆಗಳು, ಬ್ರಿಟಿಷ್ ರಾಜಸತ್ವ ರೂಪಿಯಾದ ಹಡಗಿನ ಬಳ್ಳೀಯಂತ್ರದ ಗತಿಗೆ ಪುಷ್ಕಳ ನೋವು ತಂದವು; ಮತ್ತು ಅದರ ಪ್ರತಿಬಂಧು ಅವಯ ವವು ಯುದ್ಧ ರೂಪವಾದ ಶಕ್ತಿಯನ್ನು, ಬಲವಾಗಿ ತೋರಿಸುವದರಿಂದ ಹೀನಸ್ಥಿತಿಗೆ ಬಂತು. ಆದಾಗ್ಯೂ ಸುದೈವದಿಂದ ಇಂಥಾ ಭಯಂಕರವಾದ ಪ್ರಸಂಗದಲ್ಲಿ ಅದನ್ನು ನಡೆಸತಕ್ಕ ನಾವಿಕರು ತಮ್ಮ ಬುದ್ಧಿ ಚಾತುರ್ಯವನ್ನು ವ್ಯಕ್ತಪಡಿಸಿ, ಬಹಳ ಶ್ರಮಪಟ್ಟು ಗೆದು ಕೊಂಡದ್ದರಿಂದ, ಆ ನಾವೆಯು ಅಂತಃ ತುಫಾನಿನಿಂದ ದಾಟ ಹೋದದ್ದು, ಸಾಮಾನ್ಯ ವಾದ ಮಹಾತ್ಮೆಯುಳ್ಳ ಮಾತಾಗಿಲ್ಲ. ಘನಹೊಂದಿದ ಲಾರ್ಡ್ ಕ್ಯಾನಿಂಗ್ ಸಾಹೇಬ ನಂಥಾ ರಾಜಕಾರ್ಯ ಪ್ರವೀಣ, ಧೀರ ಮತ್ತು ಚತುರ ಪುರುಷನು ಈ ಪ್ರಸಂಗದಲ್ಲಿ. ಹಿಂದೂಸ್ಥಾನದ ಮಧ್ಯದಲ್ಲಿ, ಸರ್ವ ಸೂತ್ರವನ್ನೂ ಉತ್ತಮರೀತಿಯಿಂದ ನಡೆಸುತ್ತಿದ್ದನು, ಮತ್ತು ಅನೇಕ ಯುದ್ಧ ಕಲಾವಿಶಾರದರಾದ ಸೇನಾಪತಿಗಳು, ತಮ್ಮ ಜೀವದ ಆಶೆ ಯನ್ನು ಬಿಟ್ಟು, ದೇಶಾಭಿಮಾನದ ಅದ್ವಿತೀಯವಾದ ಲಕ್ಷ್ಯದಿಂದ ಯುದ್ಧ ಮಾಡಿದರು ಎಂಬುವದರಿಂದ ದಂಗೇಖೋರರ ಅಪಾರ ಸೇನಾಸಾಗರದ ಸರ್ವ ಪ್ರಯತ್ನವೂ ನಿಷ್ಫಲ ವಾಗಿಹೋಗಿ, ಬ್ರಿಟಿಷ್ ರಾಜಸತ್ವ ರೂಪವಾದ ಹಡಗು ಸುರಕ್ಷಿತವಾಗಿ ನಿಂತಿತೆಂತ ಹೇಳು ವದಕ್ಕೇನೂ ಅಡ್ಡಿ ಇಲ್ಲ. ಈ ಸಮಯದಲ್ಲಿ, ಇಂಗ್ರೇಜಿ ಜನಗಳು ತೋರಿಸಿದ ಅಲೌಕಿಕ ಶೌರ್ಯ ಮತ್ತು ಅಪ್ರತಿಮ ಸ್ವದೇಶಾಭಿಮಾನ ಮತ್ತು ಬುದ್ಧಿ ಪ್ರಕಾಶವೂ ಸಹ ಅವರಿಗೆ ಚಿರಕಾಲ ನಿಲ್ಲುವಂಥಾ ಭೂಷಣವಾಗಿದೆ. ತಥಾಪಿ ಈ ಎಲ್ಲಾದಕ್ಕಿಂತಲೂ, ರಾಜಕೀಯ ದೃಷ್ಟಿಯಿಂದ ಅವರು ಮಾಡಿದ ಅತ್ಯಂತ ಮಹಾತ್ಮೆಯುಳ್ಳ ಮಾತು ಸೂರ್ಯ ಚಂದ್ರರು ಇರುವವರೆಗೂ ಹಿಂದೂಸ್ಥಾನದ ಇತಿಹಾಸದಲ್ಲಿ, ಸುವರ್ಣ ಅಕ್ಷರದಿಂದ ಹೊಳೆಯುತ್ತ

ಲಿರುವದಕ್ಕೇನೂ ಸಂದೇಹವಿಲ್ಲ. ಈ ಮಾತು ಯಾವದೆಂದರೆ: 'ಹಿಂದೂಸ್ಥಾನದ ಪ್ರಜೆಗಳ ಪ್ರೇಮ ಬಂಧನ ವಾಗಿದೆ.

ಪರಮ ಉದಾರ ಶಾಲಿಯಾದ ಲಾರ್ಡ್ ಕ್ಯಾನಿಂಗ್ ಸಾಹೇಬನು, ಮಹಾರಾಜ್ಞಿ ವಿಕ್ಟೋರಿಯಳ ಆಜ್ಞೆಯಮೇಲೆ 1858 ನೇ ಇಸ್ವಿ ನವಂಬರು ತಾರೀಖು 1 ರಲ್ಲಿ, ಹಿಂದೂಸ್ಥಾನದಲ್ಲಿ ಪ್ರಕಟಣೆ ಮಾಡಿದ ಪ್ರಸಿದ್ಧ ಪತ್ರಿಕೆಯು, ಬ್ರಿಟಿಷ್ ಸರ್ಕಾರದ ಅದ್ವಿತೀಯ ಕೃಪೆಯು ಪೂರ್ಣ ಪ್ರಸಾದವಾಗಿದೆ. ಈ ಪ್ರಸಿದ್ಧ ಪತ್ರಿಕೆಯಲ್ಲಿ ಮಹಾರಾಣಿ ಸಾಹೇಬಳು, ಕೊಟ್ಟಿರುವ ಆಶ್ವಾಸನವು, ಅತ್ಯಂತ ಮಂಗಳಕಾರಕವಾಗಿದ್ದು, ಅದರ ದೆಶೆಯಿಂದ ಬ್ರಿಟಿಷ್ ರಾಷ್ಟ್ರದ, ಸತ್ಯ, ಪ್ರೀತಿ, ಪ್ರೇಮ, ಮತ್ತು ಔದಾರ್ಯ ಸಹ, ತುಂಬಾ ವ್ಯಕ್ತವಾಗುತ್ತವೆ. ಈ ಪ್ರಸಿದ್ಧ ಪತ್ರಿಕೆಯನ್ನು ಲಾರ್ಡ್ ಕ್ಯಾನಿಂಗು ಸಾಹೇಬನು, ಹಿಂದೂಸ್ಥಾನದಲ್ಲಿನ ಪ್ರತಿ ಒಂದು ಸ್ಥಳದಲ್ಲಿಯೂ ಬಹಿರಂಗಪಡಿಸಿದನು. ಆ ಸಮಯದಲ್ಲಿ ಸರ್ವ ಪ್ರಜೆಗಳಿಗೂ ಎಷ್ಟು ಆನಂದವಾಯಿತೆಂಬುವದನ್ನು ಶಬ್ದದಿಂದ ತೋರಿಸುವದು ಅಶಕ್ಯವಾಗಿದೆ. ಈ ಪ್ರಸಿದ್ಧ ಪತ್ರಿಕೆಯು ನಮ್ಮ ಸರ್ಕಾರದ ಪ್ರೇಮ ಬಂಧನದ ಅತ್ಯುತ್ತಮ ಶಾಸನವಾಗಿದೆ. ಯಾವ ದಿವಸ ಹಿಂದೂಸ್ಥಾನದ ಪ್ರಜೆಗಳಿಗೆ ಅದು ಪ್ರಾಪ್ತವಾಯಿತೋ ಆ ದಿವಸ ಅವರ ಭಾಗ್ಯೋದಯವಾಯಿತೆಂತ ಹೇಳಬೇಕು. ನಿಜವಾಗಿಯೂ ಸನ್ 1857 ನೇ ಇಸವಿಯಲ್ಲಿ ನಡೆದ ದಂಗೆಯ ಪರಿಣಾಮವು ಎಷ್ಟು ಅದ್ವಿತೀಯವಾಗಿದೆ.

ಇದು ಹಾಗಿರಲಿ. ಈ ಪ್ರಸಿದ್ಧ ಪತ್ರಿಕೆಯನ್ನು ಪ್ರಕಟಿಸಿದ ಬಳಿಕ, ಲಾರ್ಡ್ ಕ್ಯಾನಿಂಗ್ ಸಾಹೇಬನು, ಕಾನ್‌ಪುರ, ಆಗ್ರ, ಮೀರತ್, ಡಿಳ್ಳಿ, ಲಕ್ನೋ, ಅಂಬಾಲ, ಮತ್ತು ಜಬ್ಬಲಪುರ ಮುಂತಾದ ಸ್ಥಳಗಳಿಗೆ ಸ್ವತಃ ಹೋಗಿ, ದೊಡ್ಡ ದೊಡ್ಡ ಸಭಾಸೇರಿಸಿದನು. ಲಾರ್ಡ್ ಡಾಲ್ಹೌಜಿ ಸಾಹೇಬನ ರಾಜನೀತಿಯಿಂದ, ಭಯಭೀತರಾಗಿದ್ದ ಸರ್ವಸಂಸ್ಥಾನಿಕರಿಗೂ, ರಾಜರಿಗೂ, ಅಭಯಕೊಟ್ಟು, ಅವರು ತಮ್ಮ ಸಂಕಟ ಸಮಯದಲ್ಲಿ ಮಾಡಿದ, ಅಸದೃಶವಾದ ಸಹಾಯಕ್ಕೋಸ್ಕರ, ಮನಃ ಪೂರ್ವಕವಾಗಿ ಕೃತಜ್ಞತೆಯನ್ನು ತೋರಿಸಿದನು; ಮತ್ತು ಅಲ್ಲಲ್ಲಿ ಸಮಾಧಾನಮಾಡಿ ಸರ್ವ ಪ್ರಜೆಗಳ ಮನಸ್ಸಿನಲ್ಲಿ, ಬ್ರಿಟಿಷ್ ಸರ್ಕಾರದ ವಿಷಯದಲ್ಲಿ, ಪ್ರೇಮಭಾವವನ್ನು ಹುಟ್ಟಿಸಿದನು. ಈ ಸ್ತೋತ್ರಾರ್ಹವಾದ ಕಾರ್ಯವನ್ನು ಮಾಡಿದ್ದಕ್ಕಾಗಿ, ಲಾರ್ಡ್ ಕ್ಯಾನಿಂಗು ಸಾಹೇಬನ ಗುಣಗಳನ್ನು ಯಾರು ಹಾಡದೇ ಬಿಟ್ಟಾರು?

1857 ನೇ ಇಸ್ವಿಯಲ್ಲಿ ನಡೆದ ದಂಗೆಯ, ಸರ್ವಸಂಗತಿಯಲ್ಲಿ ಎಲ್ಲಾದ್ದಕ್ಕಿಂತಲೂ ಶ್ರೇಷ್ಠವಾದ ಇನ್ನೊಂದು ಸಂಗತಿ ಸಂಭವಿಸಿಬಂತು. ಅದು ಯಾವದಂದರೆ:–ಬ್ರಿಟಿಷ್ ಸರ್ಕಾರಕ್ಕೆ ಈ ದೇಶದ ಸಂಸ್ಥಾನಿಕರ ಪ್ರಮಾಣಿಕತೆಯ ಮತ್ತು ಪ್ರೇಮಭಾವದ ಅನು



Lord Canning.

ಲಾರ್ಡ್ ಕ್ಯಾನಿಂಗ್.

ಭವವು ಚನ್ನಾಗಿ ಬಂದದ್ದಲ್ಲದೆ, ಸಂಕಟ ಸಮಯದಲ್ಲಿ, ಅವರ ಕಡೆಯಿಂದ ಎಷ್ಟು ಅತ್ಯುತ್ತಮವಾದ ಸಹಾಯ ಸಿಕ್ಕುತ್ತದೆ ಎಂಬ ವಿಷಯದಲ್ಲಿ ಅವರಿಗೆ ತುಂಬಾ ನಂಬಿಕೆ ಹುಟ್ಟಿತು. ಆದ್ದರಿಂದ ಈ ದೇಶದ ಸಂಸ್ಥಾನಿಕರಿಗೆ ದತ್ತು ತೆಗದುಕೊಳ್ಳುವ ಪೂರ್ಣ ಅಧಿಕಾರವನ್ನು ಕೊಟ್ಟು, ಅವರ ಸಂಸ್ಥಾನವನ್ನು ನಿಲ್ಲಿಸ ಬೇಕಾದದ್ದು, ಸಾರ್ವಭೌಮ ಸರ್ಕಾರದ ಅವಶ್ಯವಾದ ಕೆಲಸವಾಗಿದೆ ಎಂತ ಅವರಿಗೆ ತೋರಿಬಂತು. ನಿಜಾಂ, ಸಿಂಧ್ಯೆ, ಹೋಳಕರ್, ಮತ್ತು ಪಂಜಾಬಿನಲ್ಲಿನ ಶಿಕ್ಕ ಸಂಸ್ಥಾನಿಕರು, ಪ್ರೇಮಭಾವದಲ್ಲಿದ್ದರೆಂಬುವದರಿಂದಲೆ, ಇಂಥಾ ಭಯಂಕರವಾದ ಪ್ರಳಯದ ಬಲವು ಸರ್ವಥಾ ನಡೆಯಲಿಲ್ಲವೆಂತ ಎಲ್ಲರಿಗೂ ನಿಶ್ಚಯವಾಗಿ ತಿಳುವಳಿಕೆಗೆ ಬಂತು. * ಇಂಗ್ಲೆಂಡಿನಲ್ಲಿನ ಮೌಂಟ್‌ಸ್ಟ್ಯುವರ್ಟ್ ಯಲ್ಫಿನ್‌ಸ್ಟನ್ ಸಾಹೇಬನಂಥಾ ಅನುಭವಶಾಲಿ ಮತ್ತು ಬುದ್ಧಿಶಾಲಿ ಮುತ್ಸದ್ದಿಯು ಶಿಂಧೆ, ನಿಜಾಂ, ಮತ್ತು ಸಿಕ'ಸರದಾರರ ಸಂಸ್ಥಾನವನ್ನು ಮಾತ್ರ ಸರ್ಕಾರಕ್ಕೆ ಸೇರಿಸಿಕೊಂಡಿದ್ದರೆ, ಬ್ರಿಟಿಷ್ ಸರ್ಕಾರದ ಸತ್ವದ ಗುರುತು ಎಲ್ಲಿಯೂ ಇರುತ್ತಿರಲಿಲ್ಲವೆಂತ ಸ್ಪಷ್ಟವಾಗಿ ಒಪ್ಪಿಕೊಂಡನು. † ಇದುಹಾಗಿರಲಿ. ಈ ಪ್ರಕಾರವಾಗಿ, ಈ ದೇಶದ

---

* ದಂಗೆಯ ವೇಳೆಯಲ್ಲಿ, ನಮ್ಮ ದೇಶದ ಸಂಸ್ಥಾನಿಕರಿಂದ ಎಷ್ಟು ವಿಶೇಷ ಸಹಾಯವಾಯಿತು, ಎಂಬುವದನ್ನು ಕುರಿತು, 'ಸ್ಪೆಕ್ಟೇಟರ್' ಎಂಬ ಒಂದು ವರ್ತಮಾನ ಪತ್ರದಲ್ಲಿ ಮುಂದಿನ ವರ್ಣನೆಯನ್ನ ಬರದಿದೆ :—

"The Native Principalities acted as break-waters when a surge of Native feeling—we will say, at the risk of being misunderstood, of national feeling—threatened to overwhelm the foreigners. Madras was saved by the Nizam. Bombay was saved because Gwalior broke the rush of the wave which had the able coward, Tantia Topee, on its crest. The Punjab was saved because the old Sikh Princes of the Protected states stood honestly by our side."

*Extract published in the Retrospects and Prospects of Indian Policy P.* 203.

† ಮೌಂಟ್ ಸ್ಟ್ಯುವರ್ಟ್ ಎಲ್ಫಿನ್‌ಸ್ಟನ್ ಸಾಹೇಬನು ಸನ್ 1857 ನೇ ಇಸವಿ ಡಿಸೆಂಬರು ತಾರೀಖು 20 ರಲ್ಲಿ ಸರ್ ಎಡ್ವರ್ಡ್ ಕೋಲ್‌ಬ್ರೂಕ್ ಸಾಹೇಬನಿಗೆ ಬರೆದಿರುವ ಒಂದು ಪತ್ರದಲ್ಲಿ ಸ್ಪಷ್ಟವಾಗಿ ಹೀಗೆ ಹೇಳಿರುತ್ತಾನೆ :—

ಸಂಸ್ಥಾನಗಳನ್ನು ಚಿರವಾಗಿ ಇಟ್ಟು, ಸರ್ವಪ್ರಜಾ ಸಂತುಷ್ಟ ಪಡಿಸುವದೇ ಬ್ರಿಟಿಷ
ರಾಜಸತ್ವದ, ಶಕ್ತಿಯ ಅಸ್ಥಿ ಬಾರವಾಗಿಧೆ ಎಂಬ ಶಿದ್ಧಾಂತವು ಸರ್ವ ಸಮ್ಮತಿಯಾದ್ದ
ರಿಂದ, ಬ್ರಿಟಿಷ ಸರ್ಕಾರದವರು, ಬಹಳ ಔದಾರ್ಯಬುದ್ಧಿಯಿಂದ ಹಿಂದೂಸ್ಥಾನದಲ್ಲಿನ
ಸರ್ವ ಸಂಸ್ಥಾನಿಕರಿಗೆ ದತ್ತು ತೆಗೆದುಕೊಳ್ಳುವ ಸ್ವಾತಂತ್ರವನ್ನ ಕೊಟ್ಟರು. * ಅದರಿಂದ

---

"I think the ardour for the consolidation of territory, concentration of authority, and uniformity of administration, which was lately so powerful, must have been a good deal damped by recent events. Where should we have been now if Scindia, the Nizam and the Sikh Chiefs, had been annexed?"

*Asiatic Journal Vol. XVIII P. 334.*

* ಲಾರ್ಡ್ ಕ್ಯಾನಿಂಗ್ ಸಾಹೇಬನು ಮಾಡಿರುವ ದತ್ತ ಪ್ರಕರಣದ ಶಿದ್ಧಾಂತದಲ್ಲಿ
ಸ್ಪಷ್ಟವಾಗಿ ಬರೆದಿರುವದೇನಂದರೆ, "ಬ್ರಿಟಿಷ ಸರ್ಕಾರದವರ ಸಂಗಡ ಪ್ರಮಾಣಿಕತೆ
ಮತ್ತು ನಂಬಿಕೆಯಿಂದ ನಡಕೊಳ್ಳತಕ್ಕ ಏತದ್ದೇಶೀಯ ಸಂಸ್ಥಾನಿಕರ ರಾಜ್ಯವನ್ನು
ಸ್ಥಿರವಾಗಿ ಇಟ್ಟರೆ, ಅವರಿಂದ ನಮ್ಮ ಹೆಚ್ಚು ಸಂರಕ್ಷಣೆ ಆಗುವ ಸಂಭವವಿದೆ.
ಇಷ್ಟೇ ಅಲ್ಲದೆ, ಹಿಂದೂಸ್ಥಾನದ ಮೇಲೆ ಯಾರಾದರೂ ಪರದೇಶದವರು ಬಂದರೆ, ಆ
ಸಮಯದಲ್ಲಿ, ಈ ಸಂಸ್ಥಾನಿಕರಿಂದಲೇ ಬಳ್ಳೇ ಸಹಾಯವಾದೀತು. ಆದಕಾರಣ
ಅಂಥಾ ಸಂಸ್ಥಾನಿಕರಿಗೆ ಮತ್ತು ಅವರ ಕುಟುಂಬದವರಿಗೆ ನಾವು ಉದಾರ ಬುದ್ಧಿಯಿಂ
ದಲೂ ಮತ್ತು ಸನ್ಮಾನದಿಂದಲೂ ನಡಕೊಳ್ಳಬೇಕು ಮತ್ತು ಅವರ ದೇಶವನ್ನ ಸಮ
ಯವನ್ನು ಸಾಧಿಸಿ, ಬ್ರಿಟಿಷ ಸರ್ಕಾರದವರು ತಮ್ಮ ಆಧೀನಕ್ಕೆ ತೆಗೆದುಕೊಂಡಾರೆಂಬ
ಅನುಮಾನವು ಅವರಿಗೆ ಬಾರದಂತೆ, ಅವರ ಸ್ವತಂತ್ರವು ನಿರಂತರವಾಗಿ ಸುರಕ್ಷಿತವಾಗಿ
ದ್ದೀತೆಂತ ಅವರಿಗೆ ಚನ್ನಾಗಿ ತಿಳುವಳಿಕೆ ಕೊಡಬೇಕು." ಲಾರ್ಡ್ಡ ಕ್ಯಾನಿಂಗು ಸಾಹೇ
ಬನ ಈ ಟಿಪ್ಪಣಿಯು ಬಹಳ ಮಹಾತ್ಮೆಯುಳ್ಳದ್ದಾದ್ದರಿಂದ, ಅದು ಯಿದ್ದಹಾಗೆಯೇ
ಇಲ್ಲಿ ಬರೆಯುತಕ್ಕದ್ದು ಅವಶ್ಯಕವಾಗಿದೆ.

"The safety of our rule is increased, not diminished, by the maintenance of Native Chiefs well affected towards us. Should the day come when India shall be threatened by an external enemy, or when the in-

ಆ ಸರ್ವರಿಗೆ ತಮ್ಮ ಜಗದ್ವಂದ್ಯ ಪ್ರಾಚೀನ ಮನೆತನವು ಸ್ಥಿರವಾಗಿ ನಿಂತೀತೆಂಬುವದನ್ನು ನೋಡಿ, ತುಂಬಾ ಹರುಷವಾಯಿತು. ಸಿಂಧೇ ಸರ್ಕಾರಕ್ಕೆ ದತ್ತು ತೆಗೆದುಕೊಳ್ಳುವ ಅಪ್ಪಣೆ ಸಿಕ್ಕಿತೆಂಬ ಸಂತೋಷ ವರ್ತಮಾನವು, ಅಲ್ಲಿನ ದರ್ಬಾರಿಗೆ ತಿಳಿಯುತ್ತಲೆ, ಪ್ರತ್ಯಕ್ಷವಾಗಿ ಪುತ್ರೋತ್ಸವ ವಾದಷ್ಟು ಆನಂದವಾಯಿತು. ರಾಜಪುತಾನದಲ್ಲಿ ರೀವಾ ಸಂಸ್ಥಾನದ ಮಹಾರಾಜನಿಗೆ ದತ್ತು ತೆಗೆದುಕೊಳ್ಳುವ ಅಪ್ಪಣೆ ಶಿಕ್ಕಿದಾಗ, ಅವನು ಸ್ವತಃ ಲಾರ್ಡ ಕ್ಯಾನಿಂಗ್ ಸಾಹೇಬನ ಹತ್ತರ ಈ ಪ್ರಕಾರವಾಗಿ ಹೇಳಿದನು :— "ನಮ್ಮ ಕ್ಷತ್ರಿಯ ಕುಲವು, ಈಗ ಸಾವಿರದ ನೂರು ವರುಷಗಳಿಂದ ಪ್ರಸಿದ್ಧವಾಗಿತ್ತು. ಅದನ್ನು ನಷ್ಟ ಪಡಿಸುವದಕ್ಕಾಗಿ, ಮಧ್ಯದಲ್ಲಿ, ಬೀಸುತ್ತಿದ್ದ ದುರ್ದೈವದ ಘಾಳಿಯು, ತಮ್ಮ ಅಭಯವಾಣಿಯಿಂದ ಈಗ ಏನೂ ಇಲ್ಲದಂತೆ ಆದದ್ದನ್ನು ನೋಡಿ, ನನಗೆ ಬಹಳ ಆಹ್ಲಾದವಾಗಿದೆ." * ಈ ಪ್ರಕಾರದಲ್ಲಿ, ಹಿಂದೂಸ್ಥಾನದಲ್ಲಿನ ಪ್ರಾಚೀನ ಮತ್ತು ಇತಿಹಾಸ ಪ್ರಸಿದ್ಧವಾದ ಎಲ್ಲಾ ರಾಜಕುಲವನ್ನು ಚಿರಕಾಲ ನಿಲ್ಲುವಂತೆಮಾಡಿ, ಬ್ರಿಟಿಷ್ ಸರ್ಕಾರದವರು ಸಂಪಾದನೆ ಮಾಡಿದ ಕೀರ್ತಿಯ ಪ್ರಕಾಶವು ಜಗತ್ಪ್ರಳಯಕಾಲ ಪರ್ಯಂತರ ಹೊಳೆಯುತ್ತಲಿದ್ದೀತು ಎಂಬುವದರಲ್ಲೇನೂ ಸಂಶಯವಿಲ್ಲ. ಇದು ಹಾಗಿರಲಿ. 1857–58 ನೇ ಇಸ್ವಿಯ ದಂಗೆಯು ಪ್ರಾರಂಭಿಸಿಕೊಂಡು, ಇನ್ನು ಕೆಲವು ಮಹತ್ವದ ಪ್ರಯೋಜನವು ಆಗತಕ್ಕದ್ದು ಯಾವದು? ವಿಷದಫಲವು ಅಮೃತ ರೂಪವಾಗಿ ಪರಿಣಮಿಸಿದಂತೆ, ಈ ಭಯಂಕರವಾದ ಪ್ರಳಯವನ್ನಾರಂಭಿಸಿಕೊಂಡು, ಬ್ರಿಟಿಷ್ ಸರ್ಕಾರದ ಕೃಪೆಯಿಂದ ನಮ್ಮ ದೇಶಕ್ಕೆ ಬಹಳ ಉಪಯೋಗವಾಗಿದೆ ಎಂತಲೇ ಹೇಳಬೇಕು; ಮತ್ತು ಅದಕ್ಕಾಗಿ

---

terest of England elsewhere may require that her Eastern Empire shall incur more than ordinary risk, one of our best main stays will be found in these Native States. But to make them so we must treat their Chiefs and influential families with consideration and generosity, teaching them that in spite of all suspicion to the contrary, their independance is safe, that we are not waiting for plausible opportunities to convert their country into British territory."

*Adoption Minute* 30*th April* 1806.

* Lord Canning's Adoption Despatch 30th April 1860.

ಕೃಪಾಳು* ಲಾರ್ಡ್ ಕ್ಯಾನಿಂಗ್ ಸಾಹೇಬನಿಗೂ ಮತ್ತು ಇತರ ದೊಡ್ಡ ದೊಡ್ಡ ಬ್ರಿಟಿಷ ಮುತ್ಸದ್ದಿಯರಿಗೂ ಮತ್ತು ಪರಮ ದಯಾಳುವಾದ ಮಹಾರಾಣಿ ವಿಕ್ಟೋರಿಯಾ ರಾಣಿಗೂ ಸಹ, ನಾವು ಸದಾ ಕೃತಜ್ಞರಾಗಿರಬೇಕು.

ಇದು ಹಾಗಿರಲಿ. 1857 ನೇ ಇಸ್ವಿ ದಂಗೆಯು, ಯಾವ ಪ್ರಕಾರವಾಗಿ ಹಿಂದೂಸ್ಥಾನಕ್ಕೆ ಚಿರಕಾಲವಾಗಿ ಮಂಗಳವಾಗಿದೆಯೋ, ಅದೇ ಪ್ರಕಾರ ಅದರಲ್ಲಿ, ಈ ದೇಶದಲ್ಲಿನ ಮತ್ತು ಪರದೇಶದಲ್ಲಿನ ಅನೇಕವೀರರ ಅದ್ವಿತೀಯ ಪರಾಕ್ರಮವು ಚನ್ನಾಗಿ ವ್ಯಕ್ತವಾಗಿ, ಅದನ್ನ ಇತಿಹಾಸದಲ್ಲಿ ಸುವರ್ಣದ ಮಶಿಯಿಂದ ಬರೆದಿದೆ. ಈ ದಿವ್ಯಮಾನವ ರತ್ನಗಳು, ಯಾವದೇಶದಲ್ಲಿ ನಿರ್ಮಾಣವಾದವೋ, ಆ ದೇಶಕ್ಕೆ ಅವುಗಳು ಭೂಷಣಪ್ರದಗಳಾಗಿದ್ದಾವೆಂತ, ಹೇಳುವದಕ್ಕೇನೂ ಅಡ್ಡಿ ಇಲ್ಲ. ಸರ್ ಹ್ಯುರೋಜ್, ಜಾನ್ ಲಾರೆನ್ಸ್, ನೇಪಿಯರ್ ಮುಂತಾದ, ಶೌರ್ಯಶಾಲಿಗಳು ಹಿಂದೂಸ್ಥಾನದಲ್ಲಿ, ತಮ್ಮ ರಣಶೌರ್ಯವನ್ನ ತೋರಿಸಿ, ಕೀರ್ತಿಮಂದಿರದಲ್ಲಿ ಪ್ರವಿಷ್ಟರಾಗಿರುವದು, ಇಂಗ್ಲೆಂಡುದೇಶಕ್ಕೆ ಬಹಳ ಅಭಿಮಾನವು ತೋರುತ್ತದೆ, ಮತ್ತು ಅವರ ಕಾರ್ಯವನ್ನ ಕುರಿತು ಹಾಡುವದಕ್ಕೆ ಅಲ್ಲಿಯ ಜನಗಳು ಸದಾ ತತ್ಪರರಾಗಿದ್ದಾರೆ; ಇದರಿಂದ ಅವರ ಸ್ವದೇಶಾಭಿಮಾನವು, ಎಷ್ಟು ಜಾಗ್ರತವಾಗಿದೆ ಎಂಬುವದು ಚನ್ನಾಗಿ ತಿಳಿಯುಬರುತ್ತದೆ. † ಅರ್ಥಾತ್ ಇಂಥಾ

---

* ಲಾರ್ಡ್ ಕ್ಯಾನಿಂಗ್ ಸಾಹೇಬನು, 1858 ನೇ ಇಸಿವಿಯ ದಂಗೆಯ ವೇಳೆಯಲ್ಲಿ ಮನಃಪೂರ್ವಕವಾಗಿ ಔದಾರ್ಯ ಮತ್ತು ದಯೆಯನ್ನು ತೋರಿಸಿದ್ದರಿಂದ, ಅವನಿಗೆ ಕೃಪಾಮೂರ್ತಿ ಎಂಬ ಹೆಸರು ಬಂತು.

† ಸನ 1857 ನೆ ಇಸಿವಿಯ ದಂಗೆಯಲ್ಲಿ ಸುಪ್ರಸಿದ್ಧರಾಗಿದ್ದ ಜಾನ್ ಲಾರೆನ್ಸ್, ಸರ್ ಹ್ಯುರೋಜ್ ಮತ್ತು ನೇಪಿಯರ್, ಮುಂತಾದ ಪರಾಕ್ರಮಶಾಲಿಗಳನ್ನ ಅಭಿನಂದನೆ ಮಾಡುವಾಗ ಇಂಗ್ರೇಜಿ ಗ್ರಂಥಕಾರನು, ಮಾಡಿರುವ ವರ್ಣನೆಯನ್ನ, ನಮ್ಮ ದೇಶಬಾಂಧವರು ಸಂಪೂರ್ಣವಾಗಿ ಲಕ್ಷ್ಯದಲ್ಲಿಟ್ಟುಕೊಳ್ಳುವಹಾಗೆ ಇದೆ. ಆತನು ಹೀಗೆ ಹೇಳುತ್ತಾನೆ :—

"In the same sacred precinct, another of the Companions of Canning's work–John Lawrence–brave and constant heart has been laid to his rest. Strathnairn, the brilliant genius of Victory—Napier, honoured and beloved, have passed away in to the silence... .................We look at the men, at the events of that time, through a calmer atmosphere and with

ಪ್ರಸಿದ್ಧ ಪುರುಷರ ಮತ್ತು ಗುಣಗ್ರಾಹಿಗಳಾದ ಇಂಗ್ರೇಜಿ ಜನಗಳ ಅಭಿನಂದನೆಗೆ, ಪಾತ್ರರಾಗಿ ಇರುವ ನಮ್ಮದೇಶದಲ್ಲಿನ ಮಾನವರತ್ನಗಳ ಕಥೆಯನ್ನು ನಾವು ವಿಶಿಷ್ಟ ಗುಣಾಭಿರುಚಿಯಿಂದ ಪರಿಶ್ರಮ ಮಾಡಿಕೊಂಡು, ತೆಗೆದುಕೊಳ್ಳದೆ ಬಿಟ್ಟರೆ, ಸ್ವದೇಶದ ಇತಿಹಾಸದ ವಿಷಯದಲ್ಲಿನ ಯೋಚನೆಯನ್ನ ಬಿಟ್ಟದ್ದನ್ನು ತೋರಿಸುತ್ತದೆ. 1857ನೇ ಇಸ್ವಿಯ ದಂಗೆಯಲ್ಲಿ, ಯಾವ ಸ್ತ್ರೀರತ್ನವು ತನ್ನ ಅಲೌಕಿಕವಾದ ಪ್ರಭೆಯಿಂದ ಸರ್ವ ಜಗತ್ತನ್ನೂ ಆಶ್ಚರ್ಯಪಡಿಸಿತೋ, ಅದರ ಅಂಥಾ ಶುದ್ಧಗುಣಕ್ಕಾಗಿ ನಾವು ಅಭಿಮಾನವನ್ನಿಟ್ಟುಕೊಂಡು, ಅದನ್ನು ಇತಿಹಾಸದಲ್ಲಿ, ಅಗ್ರಸ್ಥಾನದಲ್ಲಿ ಕೂಡಿಸಿ, ಭೂಷಣ ಮಾಡಬೇಕಾದದ್ದು ನಮ್ಮ ಕರ್ತವ್ಯವಾಗಿದೆ, ತೇಜಸ್ಸಿನಿಂದ ಕೂಡಿದ ವಜ್ರವು, ಅಶುದ್ಧವಾದ ಜಾಗದಲ್ಲಿ ಬಿದ್ದಿದ್ದಾಗ್ಯೂ, ಅದರ ಯೋಗ್ಯತೆಯನ್ನು ರತ್ನಪರೀಕ್ಷಕನು ಎಂದಿಗೂ ಕಡಮೆಯಾಗಿ ತಿಳಿಯುವದಿಲ್ಲ. ಝಾಂಸಿಸಂಸ್ಥಾನದ ಅತುಳ ಪರಾಕ್ರಮಿಯಾದ ಮಹಾರಾಣಿ ಲಕ್ಷ್ಮೀಬಾಯಿ ಸಾಹೇಬಳು, ನಮ್ಮ ದುರ್ದೈವದಿಂದ ಸ್ವಲ್ಪ ದಂಗೇಖೋರರ ಪಕ್ಷಕ್ಕೆ ಸೇರಿದ್ದಳು. ಆದರೆ, ಆಕೆಯ ತೇಜಸ್ಸು, ಸ್ವಾಭಿಮಾನ, ಶೌರ್ಯ ಮತ್ತು ಚಾತುರ್ಯ ಮುಂತಾದ ಗುಣಗಳು, ಅತ್ಯುತ್ತಮವಾಗಿದ್ದವು ಎಂಬುವದರಲ್ಲಿ ಏನೂ ಸಂಶಯವಿಲ್ಲ. ಅರ್ಲ್‌ಆಫ್‘ಡರ್ಬಿ, ಡ್ಯೂಕ್‘ಆಫ್‘ ಕೆಂಬ್ರಿಡ್ಜ್, ಮತ್ತು ಲಾರ್ಡ್ ಪಾಲ್ಮರ್ಸ್ಟನ್ ಇವರು ರಣಶೂರನಾದ ಸರ್ ಹ್ಯೂರೋಜ್ ಸಾಹೇಬನ ಶೌರ್ಯಗುಣದ ವಿಷಯವಾಗಿ ಸ್ತೋತ್ರ ಮಾಡಿರುತ್ತಾರೆ. ಆತನ ಅತುಳ ಪರಾಕ್ರಮದ ವರ್ಣನೆಯನ್ನು ಮಾಡುತ್ತಾ, ಮಾಡುತ್ತಾ, ಅನೇಕ ಇಂಗ್ರೇಜಿ ವರ್ತಮಾನ ಪತ್ರಿಕೆಯವರು ಸ್ತುತಿಯ ಸಮುದ್ರದಲ್ಲಿ ಮುಳಗಿಹೋಗಿದ್ದಾರೆ. ಆತನ ಯಶಸ್ಸುಳ್ಳ ಕಾರ್ಯ ನಿರ್ವಾಹಶಕ್ತಿಗಾಗಿ, ಬ್ಯಾರನ್ ಸ್ಟ್ರದನೆರ್ನ್ ಆಫ್‘ ಸ್ಟ್ರದನೆರನ್ ಮತ್ತು ಝಾಂಸಿ ಅಂದರೆ, ಸ್ಟ್ರದ ನೆರನ್ ಮತ್ತು ಝಾಂಸಿಯಲ್ಲಿನ ಸರದಾರನೆಂತ ಬಿರುದಾವಳಿಯನ್ನು ಸಂಪಾದಿಸಿಕೊಂಡಿದ್ದಾನೆ; ಮತ್ತು ಫಿಡಲ್ ಮಾರ್ಸಲ್ಲಿನ, ಪದವಿಸಿಕ್ಕಿದೆ. ಇಂಥಾ ರಣ ಧುರಂಧರನ ಸಂಗಡ, ಅಂತಃಪುರದಲ್ಲಿ ವಾಸವಾಗಿದ್ದ ಒಬ್ಬ ರಾಜಸ್ತ್ರೀಯು ಅನೇಕ ದಿವಸಗಳ

---

steadier eyes. We can read their meaning and guage their worth. We think of them with reverence, with gratitude, with just and patriotic pride. Their names are familiar words to us, and will be, it may be hoped to, generations of Englishmen yet unborn. Their greatness is our own—a precious national possession"

*Earl Canning by Sir K. S. Cunningham*
*K. C. I. E. P.* 215.

ಪರ್ಯಂತರ ಒಂದೇ ಪ್ರಕಾರವಾಗಿ ಎದುರುನಿಂತು, ತನ್ನ ಅಪೂರ್ವವಾದ ತೇಜಸ್ಸಿನಿಂದ ಅವನ ಕಣ್ಣುಗಳನ್ನ ಮೊಟ್ಟುಮಾಡಿ, ಆತನಕಡೆಯಿಂದ ಧನ್ಯಳೆಂತ ಸ್ತೋತ್ರವನ್ನು ಸಂಪಾದಿಸಿದ್ದು ಸಾಮಾನ್ಯವಾದ ಮಾತಲ್ಲ. ಇದರಿಂದ ಸರ್ ಹ್ಯುರೋಜ್ ಸಾಹೇಬನ ದೊಡ್ಡಸ್ತಿಕೆ ಮತ್ತು ಗುಣಗ್ರಹಣಶಕ್ತಿ ಸಹ ಚನ್ನಾಗಿ ವ್ಯಕ್ತವಾಗುತ್ತದೆ. ಇಂಥಾ ಲೋಕೋತ್ತರ ದಿಗ್ವಿಜಯಿ ಪುರುಷನ ಅಭಿನಂದನೆಗೆ ಪಾತ್ರಳಾದ ಸ್ತ್ರೀರತ್ನದ ಪ್ರಕಾಶವು, 1857 ನೇ ಇಸ್ವಿಯಲ್ಲಿ ನಡೆದ ಭಯಂಕರವಾದ ದಂಗೆಯ ಶೋಕಭರಿತ ಮತ್ತು ಹೃದಯ ದ್ರಾವಕವಾದ, ಇತಿಹಾಸದಲ್ಲಿ ಸ್ಮರಿಸತಕ್ಕಂಥಾ ಒಂದು ಒಳ್ಳೇಕೌತುಕವಿದ್ದು, ಅದು ಇತಿಹಾಸ ಪ್ರಿಯರಾದ ಜನಗಳ ಆನಂದಕ್ಕೆ ಯಾವಾಗಲೂ ಕಾರಣವಾದೀತೆಂಬುವದರಲ್ಲಿ ಏನೂ ಸಂಶಯವಿಲ್ಲ.

ಮಹಾರಾಣಿ ಲಕ್ಷ್ಮೀಬಾಯಿ ಸಾಹೇಬಳು ದುರಾದೃಷ್ಟದಿಂದ, ಯಾವ ಪಕ್ಷವನ್ನು ಸ್ವೀಕಾರ ಮಾಡಿದ್ದಳೋ, ಅದನ್ನ ಸ್ವೀಕಾರ ಮಾಡದೆ, ಸಾರ್ವಭೌಮ ಬ್ರಿಟಿಷ್ ಸರ್ಕಾರದ ಕಡೆಗೆ ಯುದ್ಧ ಮಾಡಿದ್ದರೆ, ಆಕೆಗೆ ಬ್ರಿಟಿಷ್ ರಾಷ್ಟ್ರದವರ ಕಡೆಯಿಂದ ಬಹಳ ಗೌರವವಾಗುತ್ತಿತ್ತು ; ಮತ್ತು ಅನೇಕ ಪ್ರಕಾರವಾದ ಬಹುಮಾನವು ಸಿಕ್ಕುತ್ತಿತ್ತು. ಪರಂತು ಅಂಥಾ ಯೋಗವು ಬರಲಿಲ್ಲ. ಇದಕ್ಕೆ ಯಾರ ಉಪಾಯವೂ ಇಲ್ಲ. ಹ್ಯಾಗೆ ಪರಮೇಶ್ವರನು ಬುದ್ಧಿ ಕೊಡುತ್ತಾನೋ ಆ ಪ್ರಕಾರ ನಡೆದು ಹೋಗುತ್ತದೆ. ಆತನ ಕೃಪೆಯಿಂದ ಯಾರ ಆಲೋಚನೆಯು ಸಿದ್ಧಿಗೆ ಬರುತ್ತದೆಯೋ, ಅವನು ಬುದ್ಧಿವಂತನಾಗುತ್ತಾನೆ ; ಮತ್ತು ಅಂಥಾವನ ಕೆಲಸವನ್ನ ಸರ್ವ ಜನಗಳೂ ಸ್ತೋತ್ರಮಾಡಲು ಪ್ರಾರಂಭಿಸುತ್ತಾರೆ ; ಮತ್ತು ಅವನ ಕೃಪಾಶೂನ್ಯತೆಯಿಂದ ಯಾರಿಗೆ ಯಶಸ್ಸು ಸಿದ್ಧಿಗೆ ಬರುವದಿಲ್ಲವೋ, ಅವನು ಜನಗಳ ದೂಷಣೆಗೆ ಪಾತ್ರನಾಗುತ್ತಾನೆ. ಈ ಪರಿಶ್ರಮವು ವ್ಯವಹಾರದಲ್ಲಿ ಯಾವಾಗಲೂ ತೋರಿಬರುತ್ತದೆ. ಆಪ್ರಕಾರ, ಪ್ರಥಮದಲ್ಲಿ ಯಾವದೋ ಒಂದು ಕೇವಲ ಚಮತ್ಕಾರವಾದ ಕಾರಣದಿಂದ, ರಾಣೀ ಸಾಹೇಬಳು, ದಂಗೇಖೋರರಿಗೆ ಸಹಕಾರಿಯಾದಳು ಎಂತ ಹೇಳಿ ಆಕೆಗೆ ವಿರುದ್ಧವಾದ ಅವಿವೇಕವಾದ ಮಾತನ್ನು ಆಡುವದಕ್ಕೆ ಯಾರಾದರೂ ಇಂಗ್ರೇಜಿ ಇತಿಹಾಸಕಾರಕರು, ಉದ್ಯುಕ್ತರಾದರೆ ಅದರಲ್ಲಿ ದೊಡ್ಡ ಆಶ್ಚರ್ಯ ವೇನೂ ಇಲ್ಲ. ಪರಂತು, ಆ ರೀತಿ ಆಗದೆ, ಅನೇಕ ಇಂಗ್ರೇಜಿ ಗ್ರಂಥಕಾರರು ಆಕೆಯ ವಾಸ್ತವಿಕವಾದ ಗುಣಗಳಿಗೆ ಅಭಿನಂದನೆಯನ್ನು ಮಾಡಲು, ಮುಂದೆ ಬಂದರೆ ಮಾತ್ರ, ಅವರ ಉದಾರ ಬುದ್ಧಿ, ನಿಷ್ಪಕ್ಷಪಾತ ಮತ್ತು ಗುಣಗ್ರಾಹಕತೆಗಾಗಿ, ನಾವು ಅವರಿಗೆ ಕೃತಜ್ಞತಾಪೂರ್ವಕ ವಂದನೆಯನ್ನು ಮಾಡಿ, ಅವರ ಸ್ತೋತ್ರಕ್ಕೆ ಪಾತ್ರಳಾದ ದಿವ್ಯ ಸ್ತ್ರೀರತ್ನವನ್ನು, ನಮ್ಮ ದೇಶದ ಅದ್ವಿತೀಯ ಭೂಷಣಧಲ್ಲಿ, ಅಗ್ರಸ್ಥಾನದಲ್ಲಿ ಗಣನೆ ಮಾಡಲೇಬೇಕು. ರಾಣೀ ಸಾಹೇಬಳ ಲೋಕೋತ್ತರ ಪ್ರಸಿದ್ಧಿಯಾದ ಗುಣಗಳಿಗಾಗಿ, ಇಂಗ್ರೇಜಿ ದೇಶಿಯರು ತುಂಬಾ ಆನಂದದಿಂದ, ವರ್ಣನೆ ಮಾಡಿರುವದನ್ನು ನೋಡಿದರೆ, ಅವರು, 'ಗುಣಾಃ ಪೂಜಾಸ್ಥಾನಂ ಗುಣಿಷು ನಚಲಿಂಗಂ ನಚವಯಃ' ಈ ಭವಭೂ

ತಿಯ ಉಕ್ತಿಪ್ರಕಾರ, ರಾಣೀ ಸಾಹೇಬಳ ಗುಣ ಸಮೂಹಕ್ಕೆ ತಮ್ಮ ಹೃದಯ ಮಂದಿರದಲ್ಲಿ, ಶ್ರೇಷ್ಠ ಸ್ಥಾನವನ್ನು ಕೊಟ್ಟು ತಮ್ಮ ಸ್ತುತಿಯನ್ನ ಸುಗಂಧಮಯವಾದ ವಾಕ್ಪುಷ್ಪದಿಂದ, ಆಕೆಯನ್ನು ನಾನಾವಿಧವಾಗಿ, ಪೂಜೆ ಮಾಡಿದ್ದಾರೆಂತ ತೋರುತ್ತದೆ. ಅವರ ಈ ಉದಾರಕೃತಿಯನ್ನು ನೋಡಿ, ಪ್ರತಿ ಒಬ್ಬ ಸ್ವದೇಶಾಭಿಮಾನಿಯಾದ ಗೃಹಸ್ಥನ ನೇತ್ರಗಳಿಂದ ಆನಂದಾಶ್ರುವೂ ಮತ್ತು ಮುಖದಿಂದ ಧನ್ಯ ವರ್ಣನೆಯೂ ಬಾರದೆ ಇರಲಿಕ್ಕಿಲ್ಲ. ಸರ್ ಹ್ಯುರೋಜ್ ಸಾಹೇಬನಂಥಾ ಯುದ್ಧಶಾಲಿಯು ಕವಿ ಮೋರೋಪಂತನು ಹೇಳಿರುವ ಪ್ರಕಾರ,

ಆ ಯೊರ್ ಧರ್ .

“ ಅರಿಚಾಹಿ ಸದ್ಗುಣಾಂತೆ ಪ್ರೇಮೆ ಮಾ ಖಾಣಿತಾತ್ ಸುಜ್ಞಾನಿ. ”

ಈ ನಿಯಮವನ್ನ ಅನುಸರಿಸಿ, ಸರ್ವ ಜಗತ್ತಿಗೆ ಕೀರ್ತಿಯನ್ನು ಕೊಟ್ಟದ್ದು, ಮುಂದಿನ ಬರವಣಿಗೆಯಿಂದ ವ್ಯಕ್ತವಾಗುತ್ತದೆ. “ ರಾಣೀ ಸಾಹೇಬಳ ಉತ್ಕೃಷ್ಟವಾದ ಕುಲಶೀಲತೆ, ಆಶ್ರಿತರು ಮತ್ತು ಸೈನಿಕರ ವಿಷಯದಲ್ಲಿ ತೋರಿಸಿದ ಅಪಾರವಾದ ಔದಾರ್ಯವು, ಸಂಕಟ ಪ್ರಸಂಗದಲ್ಲಿ ಸ್ವಲ್ಪವೂ ಹಿಂಜರಿಯದ ಅಸದೃಶವಾದ ಧೈರ್ಯವು ಮತ್ತು ಅಗಾಧವಾದ ಗಾಂಭೀರ್ಯವು ಇವುಗಳನ್ನು ನೋಡಿ, ಆಕೆಯ ಪಕ್ಷದ ಸೈನ್ಯಕ್ಕೆ ಭಯಂಕರವಾದ ಸ್ವರೂಪವು ಪ್ರಾಪ್ತವಾಯಿತು.” ಮತ್ತು * ಆಕೆಯ ಮರಣ ವರ್ತಮಾನವನ್ನು ಕೇಳಿ, ದಿಗ್ವಿಜಯವನ್ನು ಪಡೆದಿದ್ದ ಆ ಪುರುಷನು ಶೋಕಸ್ವರದಿಂದ ಪುನಹ ಈ ರೀತಿ ವರ್ಣನೆ ಮಾಡಿದ್ದಾನೆ:— “ ಗ್ವಾಲಿಯರ್ ಯುದ್ಧದ ಅತಿಶಯ ಮಹಾತ್ಮೆಯುಳ್ಳ ಪರಿಯವಸಾನವು, ಝಾನ್ಸಿ ಸಂಸ್ಥಾನದ ಮಹಾರಾಣಿ ಲಕ್ಷ್ಮೀಬಾಯಿ ಸಾಹೇಬಳ ಮರಣವಾಗಿದೆ. ಅವಳು ಜಾತ್ಯಾ ಹೆಂಗಸಾಗಿದ್ದಾಗ್ಯು, ಪ್ರತಿಪಕ್ಷದವರ ಕಡೆಯಲ್ಲಿ, ಅತಿಶೂರ ಮತ್ತು ಅತ್ಯುತ್ತಮ ಸೇನಾಗ್ರಣಿಯಾಗಿದ್ದಳು.” †

---

* “ The high decent of the Ranee, her unbounded liberality to her troops and retainers, and her fortitude which no reverses could shake, rendered her an influential and dangerous adversary.”

*Despatch April* 1858.

† The most important result was the death of the Ranee of Jhansi, who although a lady, was the *bravest and best Military leader of the rebels.*”

ಡಾ. ಲೋ ಸಾಹೇಬನು ಗ್ವಾಲಿಯರ್‌ನ ವಿಜಯದ ವೃತ್ತಾಂತವನ್ನು ಬರೆಯುವಾಗ, ಹೇಳಿರುವದೇನಂದರೆ, "ನಮ್ಮ ಸರ್ವ ವ್ಯಾಪಕ ಶತ್ರುವಿನ ಸಂಗಡ ನಡೆಸಿದ ಯುದ್ಧದಲ್ಲಿ, ಅತ್ಯಂತ ಮಹಾತ್ಮೆಯುಳ್ಳ ಮಾತು ಬಂದು ಒದಗಿದ್ದು, ಯಾವದೆಂದರೆ ಜೀವದಮೇಲಿನ ಆಶೆಯನ್ನು ಬಿಟ್ಟಿದ್ದ ಯುದ್ಧಶಾಲಿಗಳಿಂದಲೂ ಮತ್ತು ಅವರ ಸುಶಿಕ್ಷಿತ ಸೈನ್ಯದಿಂದಲೂ, ಗ್ವಾಲಿಯರ್‌ನ ಕೈವಶಮಾಡಿಕೊಂಡಿದ್ದೇ ಆಗಿದೆ. ಈ ಯುದ್ಧದಲ್ಲಿ, ಅತಿಶಯವಾದ ದೃಢನಿಶ್ಚಯ, ತೇಜಸ್ಸು, ಮತ್ತು ಪ್ರಾಬಲ್ಯ ಇವುಗಳುಳ್ಳ ಸೇನಾನಾಯಕಿಯಾದ ಝಾಂಸಿ ರಾಣಿ ಲಕ್ಷ್ಮೀಬಾಯಿಯು ಸಂಹೃತಳಾದಳು." * ಮಾರ್ಟಿನ ಎಂಬ ಇತಿಹಾಸಕಾರಕನು ರಾಣೀ ಸಾಹೇಬಳ ತೇಜಸ್ಸಿ ವರ್ಣನೆ ಮಾಡುವಾಗ ಆಕೆಯನ್ನು ಒಬ್ಬ ರಾಜಪೂತ ಶೂರನಿಗೆ ಹೋಲಿಕೆಮಾಡಿ ಹೇಳಿರುವದೇನಂದರೆ, "ಲಕ್ಷ್ಮೀಬಾಯಿಯು, ತಾರುಣ್ಯ ವಯಸ್ಸಿನವಳಾಗಿದ್ದು, ಅತ್ಯಂತ ಸುಂದರಳಾಗಿದ್ದಳು. ಆಕೆಯ ಮನಸ್ಸಿನಲ್ಲಿ ತುಂಬಾ ಉತ್ಸಾಹವಿದ್ದು, ಒಳ್ಳೇ ಧೃಡಾಂಗಿಯಾಗಿದ್ದಳು; ಮತ್ತು ಆಕೆಯ ಹೃದಯದಲ್ಲಿ, ಸುಪ್ರಸಿದ್ಧನಾದ ರಾಜಪೂತ ವೀರನಾದ ರಾನಾಉಮ್ರ (ಇವನು ಜಹಾಂಗೀರ ಬಾದಶಹನ ಪ್ರತಿಪಕ್ಷದವನಾಗಿದ್ದನು)ನಹಾಗೆ:—

'ಮನಸ್ವಿಮ್ರಿಯತೆ ಕಾಮಂ ಕಾರ್ಪಣ್ಯಂ ನತುಗಚ್ಛತಿ' ಪ್ರಾಣಹೋದರೂ ಶಪಥ ಬಿಡಲಿಕ್ಕಿಲ್ಲ. ಆದರೆ ಶಪಥವನ್ನು ಸಾಧಿಸುವೆನು. ಆದರೆ ಮಾನಹಾನಿಯನ್ನು ಎಂದಿಗೂ ಸ್ವೀಕರಿಸಲಿಕ್ಕಿಲ್ಲ; ಎಂಬ ಶಪಥವಿತ್ತು. † ಸರ್ ಎಡ್ವಿನ್ ಆರ್ನಲ್ಡ್ ಸಾಹೇಬನು ವಿಸ್ಮಯಾ

---

* "The chefd'œuvre of the campaigns in India against our ubiquitous foes was wresting of Gwalior from the hands of these desperate leaders and their well trained army, in which victory their *most determined, spirited and influential head*—the Ranee of Jhansi—was slain."

*Central India P.* 301.

† "In the prime of life exceedingly beautiful, vigorous in mind and body, Lakshimi Byee had all the pride of the famous Rajput prince the Rana Umara. (the opponent of the Emperor Jehangeer) who, 'rather than be less cared not to be at all'."

*Indian Empire P.* 303.

ನಂದಪೂರ್ವಕವಾಗಿ, ರಾಣೀ ಸಾಹೇಬಳ ಪರಾಕ್ರಮಗುಣದ, ವರ್ಣನೆಯನ್ನು ಮಾಡುತ್ತಾ ಮಾಡುತ್ತಾ ಹೇಳಿರುವದೇನಂದರೆ,—"ಯಾವಸ್ತ್ರೀಯು ರಾಜ್ಯ ಕಾರಭಾರನ್ನು ನಡೆಸುವದಕ್ಕೆ ಅಸಮರ್ಥಳಾಗಿದ್ದಾಳೆಂತ ಯೋಚಿಸಿ, ನಾವು ಸಂಸ್ಥಾನವನ್ನು ಸರ್ಕಾರಕ್ಕೆ ಸೇರಿಸಿಕೊಂಡೆವೋ, ಅದೇ ಸ್ತ್ರೀಯೇ, ಬಂದು ಪ್ರಚಂಡಸೈನ್ಯದ ಆಧಿಪತ್ಯವನ್ನು ಸ್ವೀಕಾರ ಮಾಡುವದಕ್ಕೆ ಸಂಪೂರ್ಣ ಸಮರ್ಥಳಾದಳು ಎಂಬುವದು, ಈಗ ನಮಗೆ ತಿಳಿಯಬಂತು." ಇಷ್ಟೇ ಅಲ್ಲದೆ, ಆತನು ರಾಣೀ ಸಾಹೇಬಳ ಶೌರ್ಯವನ್ನು ಬಹಳ ಸ್ತೋತ್ರಮಾಡಿ, ಆಕೆಗೆ ಪ್ರಾಚೀನಕಾಲದಲ್ಲಿ, ರೋಮನ್ ಜನಗಳಸಂಗಡ ಯುದ್ಧ ಮಾಡಿದ ಬೋಡಿಷಿಯಾ ಎಂಬ ರಾಣಿಯ ಉಪಮಾನವನ್ನು ಕೊಟ್ಟಿರುತ್ತಾನೆ. * ಡೆಲ್ಹೌಜಿ

---

* " * * * We found that the woman from whom we had taken, as incapable of Government, the regency of a state, could at least Command an army. Her name was the centre of the revolt in the North-West. She was the Swarthy Boadicea of the Hindoo and Mussalman levies ; by her adroit intrigues Gwalior was nearly lost, and Central India with it. For weeks and months, after Delhi fell, her wonderful power of general-ship kept the British columns under Sir Hugh Rose at the strain of effort and endurance, till at last she led her troops in open battle against us at Kalpee. Defeated there, she made another masterly effort against us at Gwalior, and it was not the fault of this able and passionate woman that her army broke that day, and fled in utter confusion. Armed and dressed as a Cavalry Officer, she lead her ranks to repeated and fierce attacks, and when the Camel Corps, pushed up by Sir Hugh in person, broke her last line, she was among those who stood when hope was gone........"

*Dalhousies Administration of British India Vol. II. P* 152.

ಟಾರೆನ್ಸ್ ಎಂಬ ಒಬ್ಬ ಪಾರ್ಲಿಮೆಂಟ್ ಸಭಿಕನು, ರಾಣೀ ಸಾಹೇಬಳ ವರ್ಣನೆಯನ್ನು ಮಾಡುವಾಗ ಫ್ರಾನ್ಸ್ ದೇಶದಲ್ಲಿ 15 ನೇ ಶತಮಾನದ ಮಧ್ಯಭಾಗದಲ್ಲಿ ಲೋಕಪ್ರಸಿದ್ಧಳಾಗಿ ಹೋದ 'ಜೋರ್ಆಫ್' ಆರ್ಕ್ ಎಂಬ ಒಬ್ಬ ಶೌರ್ಯಗುಣಾನ್ವಿತ ಸ್ತ್ರೀರತ್ನದ ಉಪಮಾನವನ್ನು ಕೊಟ್ಟು ಇದ್ದಾನೆ; ಮತ್ತು "ಕ್ರೂರವಾದ ಮತ್ತು ನಿಕರವಾದ ಯುದ್ಧದ ಮಧ್ಯದಲ್ಲಿ ನೋಡಿದರೆ, ಕೆಲವುಕಾಲ ಪರ್ಯಂತರ, ಘನಘೋರ ಕಾಳಗವಾಯಿತು. ಆದರೆ ರಾಣೀ ಸಾಹೇಬಳು ಏನು ಮಾಡಿದರೂ, ಯುದ್ಧಕ್ಕೆ ವಿಮುಖಳಾಗುತ್ತಿರಲಿಲ್ಲ" ಎಂತ ಆಶ್ಚರ್ಯದ ಟಿಪ್ಪಣಿಯನ್ನು ಬರೆದಿರುತ್ತಾನೆ. * ಜಸ್ಟಿಸ್ ಮ್ಯಾಕರ್ತಿ ಸಾಹೇಬನು ತನ್ನ ಸತ್ಯಪ್ರಿಯ ಮಧುರವಾಣಿಯಿಂದ ರಾಣೀ ಸಾಹೇಬಳನ್ನು ಪ್ರತಾಪಶಾಲಿಗಳಾದ ವೀರ ಮಂಡಲಿಯವರ ಮಧ್ಯದಲ್ಲಿ, ಗಣನೆಮಾಡಿ, ಅಭಿನಂದನ ಪೂರ್ವಕವಾಗಿ ಹೇಳಿರುವದೇನಂದರೆ: † ಸರ್ ಹ್ಯೂರೋಜ್ ಸಾಹೇಬನು, ಉದಾರ ಮತ್ತು ವಿಜಯ ಯುದ್ಧ ಶಾಲಿ

---

* At the first note of insurrection in 1857, she took to horse, and for months in male attire headed bands, squadrons, and at length formidable corps of the Mahrattas, until she became in her way another Joan of Arc to her frenzied and fierce followers. No insurgent leader gave more trouble to the columns of Sir Hugh Rose; but not even in desperate and deadly fight, lasting for many hours, could she be persuaded to quit the field."

*Empire in Asia. P.* 376.

† One of those who fought to the last on the rebel side was the Ranee or Princess of Jhansi whose territory as we have already seen, had been one of our annexations. She had plunged all her energies into the rebellion, regarding it clearly as a rebellion and not as a mere Mutiny. She took the field with Nana Saheb and Tantia Topee. For months after the fall of Delhi she contrived to baffle Sir Hugh Rose and the English. She led squadrons in the field. She fought with her own hands. She was engaged against us in

ಯಂತೆ, ಬಹಳ ಆನಂದದಿಂದ, ರಾಣೀ ಸಾಹೇಬಳಿಗೆ ಸನ್ಮಾನಪೂರ್ವಕವಾಗಿ ಸ್ತುತಿ ಪುಷ್ಪದ ಮನೋಹರವಾದ, ಹಾರವನ್ನ ಸಮರ್ಪಣೆಮಾಡಿರುವದು, 'ಗುಣಿಗುಣಂವೇತ್ತಿ ಎಂಬ ನ್ಯಾಯದಿಂದ, ಕೇವಲ ಉಚಿತವಾಗಿದ್ದು, ಆತನ ಯಶಸ್ಸಿನ ಪ್ರಕಾಶಕ್ಕೆ ಪೂರ್ಣ ಶೋಭಾ ಕೊಡತಕ್ಕದ್ದಾಗಿಧೆ. ಈ ಮಾಲೆಯು ಮಧ್ಯದಲ್ಲಿ ಅವನು ಸುಗಂಧವುಳ್ಳ ಮುಂದಿನ ಪುಷ್ಪವನ್ನು ಪೋಣಿಸಿದ್ದಾನೆ :—

"ಶತ್ರುಪಕ್ಷದಲ್ಲಿ, ಅತ್ಯುತ್ತಮ ಮನುಷ್ಯನೆಂತ ಹೇಳಬೇಕಾದರೆ, ಝಾನ್ಸಿ ಸಂಸ್ಥಾನದ ಮಹಾರಾಣೀ ಲಕ್ಷ್ಮೀಬಾಯಿಯಾಗಿದ್ದಳು."

ಇದುಹಾಗಿರಲಿ. ಈ ಪ್ರಕಾರವಾಗಿ, ಆಕೆಯು ಶುದ್ಧ ಗುಣಗಳ ಪರಿಮಳದಿಂದ ಈಚಿಗಿನ ಜನಗಳು, ಅಂತಃಕರಣದಿಂದ ಸಂತುಷ್ಟರಾಗಿ, ಹೊರಳುತ್ತಾ ಇದ್ದಾರೆ. ಆ ಅತುಳ ಪರಾಕ್ರಮಿ ಮತ್ತು ವೀರ್ಯಶಾಲಿನಿಯಾದ ಮಹಾರಾಣಿ ಲಕ್ಷ್ಮೀಬಾಯಿಸಾ ಸಾಹೇಬಳಂಥ, ದಿವ್ಯ ಸ್ತ್ರೀರತ್ನವು, ನಮ್ಮ ಆರ್ಯಾವರ್ತಕ್ಕೆ ತಿಲಕಪ್ರಾಯಳಾದದ್ದು ಮತ್ತು ಆಕೆಯು ಅತ್ಯುತ್ತಮಗುಣಗಳ ಪ್ರಕಾಶದಿಂದ, ಪ್ರತಿ ಒಬ್ಬ ರಾಜನಿಷ್ಟ ಮತ್ತು ಸ್ವದೇಶಾಭಿಮಾನಿಯ ಅಂತಃಕರಣದಲ್ಲಿ, ಆಕೆಯ ವಿಷಯದಲ್ಲಿ ಅಭಿಮಾನ ಮತ್ತು ಪೂಜ್ಯಬುದ್ಧಿ ಹುಟ್ಟಬೇಕಾದ್ದು ಸಹಜವಾಗಿದೆ. ಇಂಥಾ ಅದ್ವಿತೀಯ ಸ್ತ್ರೀರತ್ನದ ಗುಣ ಮಹಿಮೆಯನ್ನು ಹೆಚ್ಚಾಗಿ ವರ್ಣನೆ ಮಾಡುವದಕ್ಕೆ ಯಾರು ಸಮರ್ಥರಾಗಿದ್ದಾರೆ ? *

---

the battle for the possession of Gwalior. In the uniform of the Cavalry Officer she led charge after charge and was killed among those who resisted to the last. Her body was found upon the field scarred with wounds enough in the front to have done credit to any hero. Sir Hugh Rose paid her the well deserved tribute which a generous conqueror is always glad to be able to offer. He said in his general orders, that *the best man upon the side of the enemy was the woman found dead the Rani of Jhansi.*"

*History of our own times by Justin McCarthy M—P.*, 111.

* ಈ ದೇಶದ ಒಬ್ಬ ಗೃಹಸ್ಥನು ರಾಣೀ ಸಾಹೇಬಳ ವಿಷಯವಾಗಿ ಒಳ್ಳೇ ವರ್ಣನೆ ಮಾಡಿದ್ದಾನೆ. ಅದರಲ್ಲಿ, ಉದಾಹರಣೆಗೋಸ್ಕರ ಕೆಳಗೆ ಬರೆದಿರುವ ಒಂದೆರಡು ಭಾಗಗಳನ್ನು ತೋರಿಸಿದ್ದೇವೆ:—

ಇದುಹಾಗಿರಲಿ. ಜಗತ್ಪಾಲಕನಾದ ಪ್ರಭುವು 1857 ನೇ ಇಸ್ವಿಯ ದಂಗೆಯನ್ನು ಪರಿಹರಿಸಿ ಹಿಂದೂಸ್ಥಾನದ ಮೇಲೆ ಮಹಾ ಕೀರ್ತಿವಂತರಾದ ಬ್ರಿಟಿಷ್ ರಾಜ್ಯದವರ, ರಾಜ ಛತ್ರಿಯನ್ನು ನಿರಂತರವಾಗಿ ಸ್ಥಿರಮಾಡಿದನು. ಆತನ ಅನಂತ ಉಪಕಾರವನ್ನ ಸ್ಮರಿಸಿ, ಅವನಕೃಪೆಯಿಂದಲೇ, ಆರಾಷ್ಟ್ರದ ಸತ್ಯ, ನ್ಯಾಯ, ಮತ್ತು ಶುದ್ಧವಾದ ರಾಜಪದ್ಧತಿ ಇವುಗಳಿಂದ ಹಿಂದೂಸ್ಥಾನಕ್ಕೆ ನಿರಂತರ ಮಂಗಳವಾಗಲಿ ಎಂತ, ಈ ಕೊನೆಯ ಪ್ರಾರ್ಥನೆಯನ್ನು ಮಾಡಿ, ಈ ಚರಿತ್ರೆ ಬರೆಯುವದನ್ನು ಮುಗಿಸುತ್ತೇವೆ.

---

"The extraordinary actions and heroism of this great lady shed an imperishable lustre on the ever memorable period of 1857. Ranee Lachmee Bai, the flower of Maiden Chivalry, was a lady of 26 or 30 years of age, exceedingly beautiful and endowed with high spirit, enthusiastic courage and lofty patriotic fervour. She was remarkable also for her immaculate character, strength of mind, and physical activity. A few years before the out-break of the rebellion of 1857, this charming beauty was seen on the musnad of Jhansi, governing the country like an accomplished ruler for the infant adopted son of her deceased Lord Gangadhar Rao. The influence which this great lady had over her subjects was immense. On all hands she was regarded as a generous and able ruler."

*The National Guardian*, *December* 14, 1891.





**Sreemant Damodarow Jhansi Wale.**

ಶ್ರೀಮಂತ ದಾಮೋದರರಾವ್ ಝಾಸೀವಾಲೆ.

# ಶ್ರೀಮಂತ
# ದಾಮೋದರರಾವ್ ಝಾಸಿವಾಲೆಯ ಚರಿತ್ರೆ.



ಗ್ವಾಲಿಯರ್ ಯುದ್ಧದಲ್ಲಿ ಮಹಾರಾಣಿ ಲಕ್ಷ್ಮೀಬಾಯಿ ಸಾಹೇಬಳು ಮೃತಪಟ್ಟ ಬಳಿಕ ಆಕೆಯ ದತ್ತಪುತ್ರನಾದ ಶ್ರೀಮಂತ ದಾಮೋದರರಾಯನ ಸಮಾಚಾರವು ಮುಂದೆ ಯೇನಾಯಿತು ಯಂಬುವದನ್ನು ವಾಚಕರಿಗೆ ತಿಳಿಸತಕ್ಕದ್ದು ಅವಶ್ಯವಾಗಿದೆ. ಈ ಸಮಾಚಾರವು ದುರ್ದೈವದ ಕಥೆಯಾಗಿದೆ. ಆದಾಗ್ಯು, ಅದು ಅತ್ಯಂತ ಹೃದಯ ದ್ರಾವಕ ಮತ್ತು ಬೋಧಪರವಾಗಿದೆ. ಇದನ್ನು ಸ್ವತಃ ಶ್ರೀಮಂತನೇ ಬರೆದಿರುವದ್ದ ರಿಂದ ಅದು ಬಹಳ ಮಹಾತ್ಮೆಯುಳ್ಳದ್ದಾಗಿದೆ. ಅದರಿಂದ, ದಂಗೆಯ ಪರಿಸಮಾಪ್ತಿ ಆದ ಬಳಿಕ ನಡೆದ ಲೋಕಸ್ಥಿತಿಯ ಸರಿಯಾದ ಚಿತ್ರವು ಕಂಡು ಬರುತ್ತದೆ. ಈ ಸಮಾ ಚಾರದಲ್ಲಿ ವಿಶೇಷ ಹೆಚ್ಚುಕಡಮೆ ಮಾಡದೆ ಶ್ರೀಮಂತನ ಉಕ್ತಿಯಲ್ಲಿ ಹ್ಯಾಗೆ ಇದೆಯೋ ಹಾಗೆಯೇ ನಾವು ಇಲ್ಲಿ ಬರೆಯುತ್ತೇವೆ.

"ನಮ್ಮ ಮಾತೋಶ್ರೀ ರಾಣೀ ಲಕ್ಷ್ಮೀಬಾಯಿ ಸಾಹೇಬಳು ಕೈಲಾಸ ವಾಸಿ ಯಾದ ತರುವಾಯ 3 ದಿವಸಗಳವರೆಗೂ ನಾವು ಗ್ವಾಲಿಯರ್‌ನಲ್ಲಿ ಇದ್ದೆವು; ಮತ್ತು ರಾಣೀ ಸಾಹೇಬಳ ಅಸ್ತಿಯನ್ನು ತೆಗೆದುಕೊಂಡು, ಆಕೆಯ ಆಶ್ರಯದಲ್ಲಿದ್ದ, ರಾಮ ಚಂದ್ರರಾವ್ ದೇಶಮುಖ, ರಘುನಾಥಶಿಂಗ್, ಗಣಪತಿರಾವ್ ಮರಾಟೆ, ಇರ್ಸಾಲ್ದಾರ್ ಹನೇಕರ್, ಮುಂತಾದ ಕೆಲವು ಸ್ವಾಮಿನಿಷ್ಠರಾದ ಶೇವಕರು ಸಹಿತ, ಶ್ರೀರಾವ್ ಸಾಹೇಬ್ ಪೇಷ್ವೆಯನ್ನು ಬಿಟ್ಟು, ಪ್ರತ್ಯೇಕವಾದೆವು. ಆ ವೇಳೆಯಲ್ಲಿ ನಮ್ಮ ಸಂಗಡ, ರಾಣೀ ಸಾಹೇಬಳ ಸೈನ್ಯದಪೈಕಿ 60 ಮನುಷ್ಯರು, 22 ಕುದುರೆಗಳು, 6 ಒಂಟೆಗಳು, ಇಷ್ಟುಮಾತ್ರ ಉಳಿದಿದ್ದವು. ಇತರ ಜನಗಳೆಲ್ಲಾ, ಇಂಗ್ರೇಜಿ ಸೈನ್ಯವು ಹೆಚ್ಚಾಗುತ್ತಲೆ, ಸಿಕ್ಕದಹಾಗೆ ದಾರಿಹಿಡಿದುಕೊಂಡು ಹೊರಟುಹೋದರು. ಮುಂದೆ ಗೌರ್ನರ್ ಜನರಲ್ ಲಾರ್ಡ ಕ್ಯಾನಿಂಗ್ ಸಾಹೇಬನ ಕ್ಷಮಾಪತ್ರವು ಪ್ರಸಿದ್ಧಿಯಾದ ಮೇಲೆ ಅವರು, ಇಂಗ್ರೇಜಿ ಸರ್ಕಾರದ ಕ್ಷಮೆ ಕೇಳಿಕೊಂಡು ತಮ್ಮ ಜೀವವನ್ನುಳಿಸಿಕೊಂಡರು. ಇದು ಹಾಗಿರಲಿ. ಗ್ವಾಲಿಯರ್‌ನಲ್ಲಿನ ಯುದ್ಧವು ಸ್ವಲ್ಪ ಹೆಚ್ಚುಕಡಮೆಯಾಗಿ ಶಾಂತವಾದನಂತರ, ನಾಲ್ಕನೇದಿವಸ ನಾವು ಮೇಲೆಹೇಳಿದ 60 ಜನಗಳ ಪರಿವಾರಸಹಿತ, ಗ್ವಾಲಿಯರ್‌ನಿಂದ ಹೊರಟು, ಅಡ್ಡಮಾರ್ಗವಾಗಿ ಚಂದೇರಿಕಡೆಗೆ ಪ್ರಯಾಣ ಮಾಡಿದೆವು. ಮಾರ್ಗದಲ್ಲಿ

ಸಿಕ್ಕುವ ಊರುಗಳಲ್ಲಿ ನಾವು ಉಳಿಯುವದಕ್ಕೆ ಹೋಗುತ್ತಲೇ ಅಲ್ಲಿನ ಜನಗಳಿಗೆ ನಾವು ಝಾರ್ಸಿ ರಾಣೀ ಸಾಹೇಬಳ ಕಡೆಯ ಜನಗಳೆಂತ ತಿಳಿಯುತ್ತಲೆ ಅವರು ನಮಗೆ " ನೀವು ದಂಗೇಖೋರರಾಗಿದ್ದೀರಿ ಆದ್ದರಿಂದ ನಿಮ್ಮನ್ನು ನಮ್ಮ ಊರಲ್ಲಿರುವದಕ್ಕೆ ಬಿಟ್ಟರೆ ಇಂಗ್ರೇಜಿ ಸರ್ಕಾರದವರು ನಮಗೆ ಶಿಕ್ಷೆಮಾಡ್ಯಾರು." ಯೆಂತ ಹೇಳಿ ನಮಗೆ ಅವರ ಊರಲ್ಲಿ ಇಳಿಯಗೊಡಿಸುತ್ತಿರಲಿಲ್ಲ. ಆಗ ನಮಗೆ ಉಪಾಯವಿಲ್ಲದೆ ವೇತ್ರಾವತಿ ನದಿಯ ಮೂಲೆ ಮೂಲೆ ಹಿಡಿದುಕೊಂಡು ಇಂಗ್ರೇಜಿ ಸರ್ಕಾರದವರು ನಮ್ಮನ್ನು ಹಿಡಿದುಕೊಂಡು ಹೋದಾರೆಂಬ ಭಯದಿಂದ, ಗುಪ್ತವಾಗಿರಬೇಕಾದ ಸಂಭವವು ಬಂತು. ಆ ಸಮಯದಲ್ಲಿ, ನಮ್ಮ ಹತ್ತರ ಡೇರೆ, ತಂಬು ಮುಂತಾದ್ದು ಯೇನೂ ಇರಲಿಲ್ಲ. ಆದ್ದರಿಂದ ಮೇಲೆ ಆಕಾಶ, ಕೆಳಗೆ ಭೂಮಿ ಇಂಥಾ ಸ್ಥಿತಿಯಲ್ಲಿ ದಿವಸಗಳನ್ನು ಕಳೆಯ ಬೇಕಾಗಿಬಂತು. ಕೆಲವು ಕಾಲದಲ್ಲಿ ಕ್ರೂರವಾದ ಮೃಗಗಳ ಆಶ್ರಯಸ್ಥಾನವಾದ ಅರಣ್ಯವನ್ನ ಸ್ವೀಕಾರ ಮಾಡಿಕೊಂಡು, ಅಲ್ಲಿ ವಾಸ ಮಾಡಬೇಕಾಗಿಬಂತು. ಈ ಭಯಂಕರವಾದ ಅರಣ್ಯದಲ್ಲಿ, ಸೂರ್ಯ ದರುಶನಕೂಡ ಆಗುತ್ತಿರಲಿಲ್ಲ. ಊರಿಗೆ ದೂರೆ ವಾಗಿದ್ದ ಆ ನಿರ್ಜನ ಪ್ರದೇಶದಲ್ಲಿ ಎರಡು, ಮೂರು ದಿವಸಗಳ ಪರ್ಯಂತರ ನಮಗೆ ಹಿಟ್ಟು, ಸಾಮಾನು ಮುಂತಾದ್ದೇನೂ ಸಿಕ್ಕುತ್ತಿರಲಿಲ್ಲ. ಆದ್ದರಿಂದ ನಮ್ಮ ಜೀವನವನ್ನ ಅರಣ್ಯದಲ್ಲಿನ ಕಂದಮೂಲದ ಮೇಲೇನೇ ನಡಸಿಕೊಳ್ಳುತ್ತಾ ಇದ್ದೆವು. ಯಾಕಂದರೆ ಆ ಕಾಲದಲ್ಲಿ ಇಂಗ್ರೇಜಿ ಸೈನ್ಯವು ಸರ್ವತ್ರವ್ಯಾಪಿಸಿಕೊಂಡಿತ್ತು. ಆದ್ದರಿಂದ ಕದಾಚಿತ್, ಒಂದು ವೇಳೆಯಲ್ಲಿ ಇಂಗ್ರೇಜಿ ಸೈನ್ಯದವರು ಕಂಡರೆ ಅವರು ಹಿಡಿದುಕೊಂಡು ಹೋದಾ ರೆಂಬ ಭಯದಿಂದ, ಊಟದ ಸಾಮಾನು ತರುವದಕ್ಕಾಗಿ ಸಮೀಪದ ಊರಿಗೆ ಹೋಗುವ ದಕ್ಕೆ ನಮ್ಮ ಹತ್ತರಿನ ಜನಗಳು ಹೆದರಿಕೊಳ್ಳುತ್ತಿದ್ದರು. ಯಾವಾಗಲಾದರೂ ನಾಲ್ಕು, ಎಂಟುದಿವಸಕ್ಕೆ ಒಂದಾವರ್ತಿ ನಮ್ಮ ಹತ್ತರಿನ ಎರಡು, ಅಥವ ನಾಲ್ಕು ಜನಗಳು ಸೇರಿಕೊಂಡು ಯಾವದಾದರೂ ಒಂದು ಊರಿಗೆ ಹೋಗಿ ಬಹಳ ಕಷ್ಟದಿಂದ ಹಿಟ್ಟು, ಹುಲ್ಲು ಮುಂತಾದ ಸಾಮಾನುಗಳನ್ನು ತೆಗೆದುಕೊಂಡು ಬರುತ್ತಿದ್ದರು. ಅದರಲ್ಲಿಯೂ ಆಗ ಮಳೆಗಾಲವಾದ್ದರಿಂದ ಮೇಘ ರಾಜನ ಕೃಪೆಯು ತುಂಬಾ ಆದರೆ, ನಮ್ಮ ಕಷ್ಟಕ್ಕೆ ಪಾರವೇ ಇಲ್ಲ. ಯಾಕಂದರೆ, ಹಿಟ್ಟುಕೂಡಾ ಸಿಕ್ಕುತ್ತಿರಲಿಲ್ಲ. ಪರಂತು ಮಾಡತಕ್ಕ ದ್ದೇನು ? ಅಂಥಾ ಸ್ಥಿತಿಯಲ್ಲಿ ಸುಮ್ಮನೆ ಯಿರಬೇಕಾಗಿತ್ತು. ಈ ಪ್ರಕಾರವಾದ ಮಹಾ ಸಂಕಟದಲ್ಲಿ 2 ತಿಂಗಳು ಕಳೆದನಂತರ ಮಳೆಯು ಚನ್ನಾಗಿ ಹಿಡಿಯಿತು. ಆಗ ಏನು ಮಾಡಬೇಕೆಂಬ ಯೋಚನೆಯು ಹತ್ತಿತು. ಅಂಥಾ ಕಷ್ಟದಲ್ಲಿ ನಾವು ತಿರುಗಿಕೊಂಡು ಹೋಗಿ ಕಾಲಬೇಟ ಕೋಟ್ರಾ ಪರಗಣದ, ಚಂದೇರಿ ಲಲಿತಪುರದವರೆಗೂ ಬಂದೆವು. ಆ ಊರಿನ ದಿವಾರ್ಣ ಶಂಕರಸಿಂಗ್ ಮತ್ತು ಗಂಭೀರಸಿಂಗ್ ಯಂಬುವರ ದರುಶನ ತೆಗೆದು ಕೊಂಡೆವು ; ಮತ್ತು ಆ ಊರಿನಲ್ಲಿ ಕೆಲವುದಿವಸ ಇರುವದಕ್ಕೋಸ್ಕರ ನಮಗೆ ಸ್ಥಳ ಕೊಡಿಯಂತ ಅವರಿಗೆ ವಿನಂತಿ ಮಾಡಿಕೊಂಡೆವು. ಆಗ ಅವರು ಹೇಳಿದ್ದೇನಂದರೆ " ನೀವು ಝಾರ್ಸಿ ರಾಣಿಯಕಡೆ ಜನಗಳಾಗಿದ್ದೀರಿ. ಈ ಪ್ರಾಂತ್ಯದಲ್ಲಿ ಇಂಗ್ರೇಜಿ

ಸರ್ಕಾರದ ಸೈನ್ಯವು ಸದಾ ತಿರುಗುತ್ತದೆ. ಅಲ್ಲದೆ ಲಲಿತಪುರವು, ಅವರ ಸೈನ್ಯದ ವಸತಿಯಾಗಿದೆ. ಹೀಗಿರುವಾಗ ನಿಮ್ಮನ್ನು ನಮ್ಮ ಊರಿನಲ್ಲಿಟ್ಟುಕೊಂಡರೆ ನಿಮ್ಮಿಂದ ನಮ್ಮಮೇಲೆ ಇಂಗ್ರೇಜಿ ಸರ್ಕಾರದವರ ನಿರ್ದಯು ಉಂಟಾದೀತು. ಆದ್ದರಿಂದ ಊರಲ್ಲಿರುವದಕ್ಕೆ ನಿಮಗೆ ನಾವು ಜಾಗವನ್ನು ಕೊಡುವದಿಲ್ಲ. ಆದರೆ ನಮ್ಮ ಊರಿನ ಅರಣ್ಯದಲ್ಲಿ ನೀವು ಆಶ್ರಯು ತೆಗದುಕೊಳ್ಳುವ ಪಕ್ಷದಲ್ಲಿ ಅಲ್ಲಿ ನಾವು ನಿಮಗೆ ಏನಾದರೂ ಸಹಾಯು ಮಾಡೇವು." ಇವತ್ತಿನ ಪರ್ಯಂತರ ನೋಡಿದರೆ ನಮಗೆ ಅರಣ್ಯದಲ್ಲಿ ಯಾರ ಆಶ್ರಯುವೂ ಇರಲಿಲ್ಲ. ಈಗ ಇಷ್ಟಾದರೂ ಸಿಕ್ಕಿತೆಂಬುವದನ್ನು ನೋಡಿ ದುಃಖದಲ್ಲಿ ಸುಖವೆಂತ ಯೋಚಿಸಿಕೊಂಡು ನಾವು ಆ ಠಾಕೂರರ ಹೇಳಿಕೆಯನ್ನು ಒಪ್ಪಿಕೊಂಡು ಕಾಲಬೇಟ ಕೋಟ್ರಾದ ಅರಣ್ಯದಲ್ಲಿ ವಾಸಮಾಡಿದೆವು. ಆ ಸಮಯುದಲ್ಲಿ ನಮ್ಮ ಸಂಗಡ ಇದ್ದ ಜನಗಳ ಪೈಕಿ, ಯುಲ್ಲರಲ್ಲಿಯೂ ಮುಖ್ಯನಾದ ರಘುನಾಥಸಿಂಗ್ ಯೆಂಬುವನು ರಾಣೀ ಸಾಹೇಬಳಕಡೆ ಒಬ ಶೇವಕನಾಗಿದ್ದನು. ಅವನಿಗೂ ಮತ್ತು ಮೇಲೆ ಹೇಳಿದ ಠಾಕೂರರಗೂ ಈಪ್ರಕಾರವಾದ ಮಾತುನಡೆಯಿತು:—"ಎಲ್ಲಾ ಜನಗಳೂ ಒಂದೇ ಕಡೆ ಶೇರಿದ್ದರೆ ಇಂಗ್ರೇಜಿ ಜನಗಳು ಕದಾಚಿತು ಬಂದು ಹಿಡಿದುಕೊಂಡಾರು. ಆದ್ದರಿಂದ ಎಲ್ಲರು ಒಂದೇಕಡೆ ಇರದೆ ಹತ್ತು ಹತ್ತು ಜನಗಳಿಗೆ ಒಂದೊಂದು ಪಂಗಡಮಾಡಿ ಹತ್ತು ಅಥವಾ ಐದು ಹರದಾರಿಗಳೊಳಗಾಗಿ ವಾಸಮಾಡಿಕೊಂಡಿರಬೇಕು; ಮತ್ತು ಹತ್ತು, ಹನ್ನೆರಡು ಜನಗಳು ಆ ಊರಿನ ಅರಣ್ಯದಲ್ಲಿರಬೇಕು. ಅಲ್ಲಿರತಕ್ಕ ಜನಗಳಿಗೆ ಠಾಕೂರು ಜನಗಳು ಅರಣ್ಯದಲ್ಲಿ ಊಟ ಉಪಚಾರಕ್ಕೆ ಬೇಕಾಗುವ ಸಾಮಾನನ್ನು ಮದಗಿಸಬೇಕು; ಮತ್ತು ನಮ್ಮ ಹತ್ತರ ಏರುವ ಕುದುರೆಗಳಲ್ಲಿ ಒಂಭತ್ತು ಕುದುರೆಗಳು ಮತ್ತು ನಾಲ್ಕು ಒಂಟೆಗಳನ್ನು ಠಾಕೂರರು ಅವರ ಮನೆಗಳಲ್ಲಿಟ್ಟುಕೊಳ್ಳಬೇಕು. ಈ ಎಲ್ಲಾ ವೆಚ್ಚಕ್ಕಾಗಿ ಠಾಕೂರರಿಗೆ ನಾವು ತಿಂಗಳು ಮಂದಕ್ಕೆ 500 ರೂಪಾಯಿಗಳನ್ನು ಕೊಡಬೇಕು; ಮತ್ತು ಠಾಕೂರರು ಇಂಗ್ರೇಜಿ ಸರ್ಕಾರದ ಸೈನ್ಯದ ವರ್ತಮಾನವನ್ನು ನಮಗೆ ಆಗಾಗ್ಯೆ ತಿಳಿಸುತ್ತಿರಬೇಕು. ಈ ಪ್ರಕಾರವಾಗಿ ಇತ್ಯರ್ಥವಾದನಂತರ ರಘುನಾಥಸಿಂಗ'ನು ಒಂಭತ್ತು ಕುದುರೆಗಳೂ ಮತ್ತು ನಾಲ್ಕು ಒಂಟೆಗಳನ್ನು ಠಾಕೂರರ ಕಡೆಗೆ ಕಳುಹಿಸಿಕೊಟ್ಟನು; ಮತ್ತು ನಾವು, ರಘುನಾಥಸಿಂಗ', ಬಾಳು ಗೋಡಬೋಲೆ, ಶಿಷ್ಯ, ಲಕ್ಷ್ಮಣಾಚಾರಿ, ಮತ್ತು ಕಾಶಿ ಮುಂತಾದ ಹತ್ತು ಹನ್ನೆರಡು ಜನರು ಶೇರಿ ಕೊಠಾರದ ಅರಣ್ಯದಲ್ಲಿ ಬಂದು ಇದ್ದೆವು. ಉಳಿದ, ರಾಮಚಂದ್ರರಾವ್‌ದೇಶಮುಖ' ಮುಂತಾದ ಜನಗಳಿಗೆ ಸ್ವಲ್ಪ ಖರ್ಚಿಗೆಕೊಟ್ಟು ಬೇರೇ ಕಡೆಗೆ ಕಳುಹಿಸಿದೆವು. ಅವರು ಉಳಿದ ಕುದುರೆಗಳು ಮತ್ತು ಒಂಟೆಗಳನ್ನು ತೆಗದುಕೊಂಡು ಬಹಳ ದುಃಖದಿಂದ ನಮ್ಮನ್ನು ಬಿಟ್ಟು ಪ್ರತ್ಯೇಕವಾಗಿ ಹೋದರು. ಇದು ಹಾಗಿರಲಿ. ಠಾಕೂರರ ಮತ್ತು ನಮ್ಮ ಮಧ್ಯದಲ್ಲಿ ನಡೆದ ಇತ್ಯರ್ಥದ ಪ್ರಕಾರ ಅವರು ಎಂಟು ದಿವಸಗಳಿಗೆ ತಕ್ಕಷ್ಟು ಸಾಮಗ್ರಿಯನ್ನ ನಮಗೆ ಒಂದೇಸಲ ಕಳುಹಿಸುತ್ತಿದ್ದರು ಮತ್ತು ಆಗಾಗ್ಯೆ ಇಂಗ್ರೇಜಿ ಸೈನ್ಯದ ಸಮಾಚಾರವನ್ನು ನಮಗೆ ತಿಳಿಸುತ್ತಿ

ಪ್ಪರು. ಕೋಟರಾ ಊರಿನಿಂದ ನಾಲ್ಕು ಐದು ಮೈಲಿಗಳ ದೂರದಲ್ಲಿರುವ ವೇತ್ರಾವತಿ ನದಿಯ ಮೂಲೆಯ ಮೇಲಿನ ಅರಣ್ಯದಲ್ಲಿ ಇರುವ ಒಂದು ಸ್ಥಳವು ನಮ್ಮ ವಸತಿಯ ಸ್ಥಾನವಾಗಿತ್ತು. ಅಲ್ಲಿ ಕರ್ತರ ಎಂಬ ಒಂದು ಮಹಾದೇವಸ್ಥಾನವಿತ್ತು. ಆ ಸ್ಥಾನದಲ್ಲಿ ನಾವು ಕೆಲವು ದಿವಸ ಇದ್ದೆವು. ಅಲ್ಲಿ ವೇತ್ರಾವತಿ ನದಿಯು, ಬೆಟ್ಟದ ಮೇಲಿನಿಂದ 25 ಮಳಗಳ ಕೆಳಗೆ ಬಹಳ ಬಲವಾಗಿ ಬೀಳುತ್ತದೆ. ಆದ್ದರಿಂದ ಅಲ್ಲಿ ನಿತ್ಯ ಕರ್ಮಕ್ಕೆ ಹಳ್ಳವಾಗಿದ್ದು, ಆ ಸ್ಥಳಕ್ಕೆ ಒಂದು ಪ್ರಕಾರವಾದ ಮನೋಹರರೂಪವು ಬಂದು ಇದೆ. ಆ ಸ್ಥಾನವು ನಮ್ಮ ವಿಶ್ರಾಂತಿಮಂದಿರವಾಗಿತ್ತು.

ಆ ಸ್ಥಳದಲ್ಲಿ, ಒಂದು ಚಮತ್ಕಾರವಿದೆ. ಯಾವದೆಂದರೆ—ಆ ಕುಂಡದಲ್ಲಿ, ಮೀನುಗಳು ಶುದ್ಧಾಂಗವಾಗಿಲ್ಲ. ಹೀಗಿದ್ದಾಗ್ಯೂ, ಭಾದ್ರಪದ ಮಾಸದಲ್ಲಿ ಪಿತೃಪಕ್ಷ ಕಾಲವು ಬಂದರೆ ಅಲ್ಲಿ ಇದ್ದಕ್ಕಿದ್ದಹಾಗೆ ಸಾವಿರಾರು ಮೀನುಗಳು ಉತ್ಪನ್ನವಾಗಿ ಆ ಕುಂಡವಹೊರಗೆ ಬಂದು ತುಂಬಿಹೋಗುತ್ತವೆ; ಮತ್ತು ಪಿತೃಪಕ್ಷ ಮುಗಿದನಂತರ, ಒಂದು ಮೀನಾದರೂ ಅಲ್ಲಿ ದೃಷ್ಟಿಗೆಬೀಳುವದಿಲ್ಲ. ಇದೇಪ್ರಕಾರವಾಗಿ ಅಲ್ಲಿ ಇನ್ನೊಂದು ಚಮತ್ಕಾರವಿರುವದೇನಂದರೆ :—ಆ ಊರಿನಿಂದ ಯರಡು ಮೂರು ಹರದಾರಿಗಳ ದೂರದಲ್ಲಿ ಇನ್ನೊಂದು ದೊಡ್ಡ ಬೆಟ್ಟವಿದೆ. ಅದಕ್ಕೆ ಶಿದ್ಧಿನಾಥ ಗೋಮಾನಬೆಟ್ಟವೆಂತ ಕರೆಯುತ್ತಾರೆ. ಆ ಬೆಟ್ಟದ ತಲೆಯ ಮುಂಭಾಗದಮೇಲೆ ಒಂದು ಗೇಣುಉದ್ದ ಮತ್ತು ಒಂದುಗೇಣು ಅಗಲ, ಇಷ್ಟು ವಿಸ್ತೀರ್ಣದ ಒಂದು ನೀರಿನ ಝುರಿಯಿಧೆ. ಅದರಲ್ಲಿ ನೀರು ತುಂಬಿದ್ದು, ಅದನ್ನು ಎಷ್ಟು ತೆಗೆದರೂನೂ ಕಡಮೆ ಯಾಗುವದಿಲ್ಲ. ಯಾವಾಗ ನೋಡಿದರೂ ನೀರು ತುಂಬಿರುತ್ತದೆ. ಈ ಎರಡು ಸ್ಥಳಗಳು ನಮ್ಮ ನಿಸರ್ಗ ಪ್ರಾಸಾದದಲ್ಲಿ ರಂಜನಿಗೆ ಯೋಗ್ಯವಾದ ವಸ್ತುಗಳಾಗಿದ್ದವು. ಕೊಟಾರ ಮತ್ತು ಅದರ ನೆರೆಹೊರೆಯ ಅರಣ್ಯದಲ್ಲಿ ಹುಲಿ, ಕರಡಿ ಮುಂತಾದ ದುಷ್ಟ ಮೃಗಗಳ ಸಮೃದ್ಧಿಗೇನೂ ಕಡಮೆ ಯಿರಲಿಲ್ಲ. ಆದಾಗ್ಯೂ ನಾವು ಅವುಗಳ ಸಹವಾಸದಲ್ಲಿ ದಿವಸಗಳನ್ನು ಸುಖವಾಗಿ ಕಳದೆವು. ಒಂದೇಸ್ಥಳದಲ್ಲಿದ್ದರೆ, ಕದಾಚಿತು, ನಮ್ಮ ಮೇಲೆ ಯೇನಾದರೂ ಸಂಕಟ ಬಂದು ಒದಗೀತೋ ಯೇನೋ ಯೆಂಬ ಭೀತಿಯಿಂದ ಆ ಅರಣ್ಯದಲ್ಲಿಯೇ ಸ್ಥಾನಬಿಟ್ಟು, ಸ್ಥಳ ವ್ಯತ್ಯಾಸದಿಂದ ಇರುತ್ತಿದ್ದೆವು. ಆ ಅರಣ್ಯದಲ್ಲೆಲ್ಲಾ ದುಷ್ಟ ಮೃಗಗಳ ಸುಳಿದಾಟವಿದ್ದದ್ದರಿಂದ ಕೆಲವು ರಾತ್ರೆ ನಾವು ಮರಗಳಮೇಲೆ ಅಟ್ಟ ಮಾಡಿಕೊಂಡು ಅದರಮೇಲೆ ಮಲಗಬೇಕಾದ ಸಂದರ್ಭವಿತ್ತು. ರಾತ್ರೆಯೆಲ್ಲಾ ಮರಗಳ ಶಿಖರದಮೇಲಿನ ಪರ್ಣಶಾಲೆಯಲ್ಲಿ ಮಲಗಬೇಕು. ಸೂರ್ಯೋದಯವಾದನಂತರ ಕೆಳಗೆ ಬರಬೇಕು. ಈ ರೀತಿಯಾಗಿ ನಾವು ಕೆಲವುದಿವಸ ಕಾಲ ಕಳೆಯಬೇಕಾಗಿ ಬಂತು. ಯಾವಾಗಲಾದರೂ ಹುಲಿ ಅಥವಾ ಕರಡಿ ನಮ್ಮಮೇಲೆ ಬೀಳುವದಕ್ಕೆ ಬಂದರೆ, ನಮ್ಮ ಸರ್ವವೇಳೆಯನ್ನೂ ವೃಕ್ಷದಮೇಲಿನ ಅಟ್ಟದ ಆಶ್ರಯವನ್ನ ಹಿಡುಕೊಂಡು, ಕಳಿಯ ಬೇಕಾಗಿತ್ತು. ಈ ಪ್ರಕಾರವಾಗಿ ಎರಡು ಅಥವಾ $2\frac{1}{4}$ ವರ್ಷಗಳು, ನಾವು ಕೋಟ್ರಾದ ಮತ್ತು ಅಧರ ನೆರೆಹೊರೆಯ ಅರಣ್ಯದಲ್ಲಿ ಕಳದವು. ಇಂಥಾ

ಸ್ಥಿತಿಯಲ್ಲಿ, ಬೇಸಿಗೆಕಾಲ, ಮಳೆಗಾಲ, ಮತ್ತು ಹಿಮಗಾಲ ಇವುಗಳ ಬಾಧೆಯು ನಮಗೆ ಯೆಷ್ಟು ದುಃಖ ಕೊಟ್ಟಿರಬಹುದೆಂಬುವದನ್ನೂ ಹೇಳುವದಕ್ಕೆ ಆಗುವದಿಲ್ಲ.

ಮನುಷ್ಯನು ಎಷ್ಟು ಶಕ್ತಿವುಳ್ಳವನಾಗಿದ್ದರೂ, ಅವನು ಸದಾ ಅನೇಕ ಊರಿನಲ್ಲಿ, ತಾಪತ್ರಯದಲ್ಲಿ ಇರುವದು, ಮತ್ತೂ ಊಟ ವುಡಿಗೆಗೆ ಇಲ್ಲದೇ ಇರುವದು, ಇದರಿಂದ ಅವನ ಶರೀರದಲ್ಲಿ ವ್ಯತ್ಯಾಸವಾಗದೆ ಇರುವದಿಲ್ಲ. ನಾನು ಚಿಕ್ಕವಯಸ್ಸಿನವನು ಮತ್ತೂ ಅರಣ್ಯದಲ್ಲಿ ತಿರುಗುವದನ್ನು ಹುಟ್ಟಿದಾರಭ್ಯ ಅನುಭವಿಸಿದವನಲ್ಲ. ಆದ್ದರಿಂದ ನನ್ನ ಪ್ರಕೃತಿ, ಯಾವಾಗಲೂ ವ್ಯತ್ಯಾಸವಾಗಿತ್ತು. ಪರಂತು ಒಂದು ಒಂದೂವರೆ ವರುಷದನಂತರ ಭಾದ್ರಪದ ಮಾಸದಲ್ಲಿ ಒಂದು ದಿವಸ, ನನ್ನ ಶರೀರ ಪ್ರಕೃತಿಯು ವಿಶೇಷವಾಗಿ ಬದಲಾಯಿಸಿತು. ಅದು ಎಷ್ಟರಮಟ್ಟಿಗೆ ಆಯಿತೆಂದರೆ, ಯಾವಮಾತಿನ ಜ್ಞಾನವೂ ನನಗೆ ಇರಲಿಲ್ಲ. ಇಂಥಾ ಸ್ಥಿತಿಯಲ್ಲಿ, ಘಾಳಿಬಡಿಯದ ಸ್ಥಳವು ಶಿಕ್ಕುವದು ಕಷ್ಟವಾಗಿತ್ತು. ಔಷಧೋಪಚಾರಗಳು ಇಲ್ಲವೇಇಲ್ಲ. ಯಾಕಂದರೆ ನಮ್ಮಸಂಗಡ ಔಷಧಿ ತಿಳಿದವರ್ಯಾರೂ ಯಿರಲಿಲ್ಲ, ಮತ್ತೂ ಕೋಟ್ರಾಊರಿನಲ್ಲಿಯೂ ಯಾರೂ ವೈದ್ಯರಿರಲಿಲ್ಲ. ಆಗ ನಮ್ಮಸಂಗಡ ಇದ್ದ ಜನಗಳಿಗೆ ಬಹಳ ಚಿಂತೆಹುಟ್ಟಿ ಅವರು ಶಂಕರಸಿಂಗನ ಹತ್ತರ ಹೋಗಿ ಅವನಿಗೆ ಅನೇಕ ಪ್ರಕಾರವಾಗಿ ವಿನಂತಿಮಾಡಿದರು. ನಮ್ಮ ಆಯುಷ್ಯವು ಇನ್ನೂ ತೀರಿರಲಿಲ್ಲವಾದ್ದರಿಂದ ಆ ತಾಕೂರನ ಅಂತಃಕರಣದಲ್ಲಿ, ಈಶ್ವರನು ಪ್ರೇರೇಪಣೆಮಾಡಿ, ಅವನಿಗೆ ಸ್ವಲ್ಪ ದಯಹುಟ್ಟಿ ತನ್ನ ಮಾವನನ್ನ ಗುಪ್ತರೀತಿಯಲ್ಲಿ ನಮ್ಮಕಡೆಗೆ ಕಳುಹಿಸಿಕೊಟ್ಟನು. ಅವನು ನಮ್ಮ ಶರೀರ ಪ್ರಕೃತಿಯನ್ನು ನೋಡಿ, ಯೇನೋ ಔಷಧಿಯನ್ನು ಕೊಟ್ಟನು. ಅದರ ದೆಶೆಯಿಂದ ನನ್ನ ಅಶಕ್ತಿಯು ಗುಣವಾಗುತ್ತಾ ಹೋಗಿ, ಶೀಘ್ರದಲ್ಲಿಯೇ ಅರಣ್ಯದಲ್ಲಿ, ಇನ್ನು ದುಃಖವನ್ನು ಅನುಭವಿಸುವದಕ್ಕೆ ಸಿದ್ಧನಾದೆನು.

ರಾಣೀ ಸಾಹೇಬಳು ಕೈಲಾಸವಾಶಿಯಾದಾಗ, ನಮ್ಮಹತ್ತರ, ರೂಪಾಯಿ ಮತ್ತು ಬೆಳ್ಳಿ ಭಂಗಾರ ಶೇರಿ ಸುಮಾರು ಎಪ್ಪತ್ತುಸಾವಿರ ರೂಪಾಯಿನವರಿಗೆ ದ್ರವ್ಯವಿತ್ತು. ಅದರಲ್ಲಿ ಪ್ರತಿತಿಂಗಳಿಗೂ, ತಾಕೂರರಿಗೆ ಕೊಡುತ್ತಾ ಕೊಡುತ್ತಾ, ನಮ್ಮ ಹತ್ತರಿನ ರೂಪಾಯಿಗಳೆಲ್ಲಾ ತೀರಿಹೋಗಿ, ಮುಂದೆ ಒಡವೆಗಳಿಂದ ಅದಕ್ಕೆ ತುಂಬಬೇಕಾದ ಸಂಭವವು ಬಂತು. ಪರಂತು ನಮ್ಮಲ್ಲಿದ್ದ ಸಾಮಾನನ್ನ ಯಾವದಾದರೂ ಮುರಿಸುವದಕ್ಕೆ ನಮ್ಮ ನೌಕರರಿಗೆ ಭೀತಿಯಿದ್ದದ್ದರಿಂದ ನಮ್ಮ ಬೆಳ್ಳಿ ಭಂಗಾರವನ್ನ ಆ ತಾಕೂರರಿಗೆ, ತ್ರಾಸಿನಲ್ಲಿ . ತೂಗಿಸಿ ಕೊಡಬೇಕಾದ ಸಂಭವ ಬಂದು, ಯಾವ ಚೌಕಸಿಯೂ ಮಾಡದೆ, ಅವರು ಹೇಳಿದ ಖರೀದಿಗೆ ಒಪ್ಪಿಕೊಳ್ಳಬೇಕಾಗಿತ್ತು. ಈ ರೀತಿಯಾಗಿ ಎರಡು, ಎರಡೂಕಾಲು ವರ್ಷಗಳಲ್ಲಿ ನಮ್ಮ ಹತ್ತರಿನ ಸರ್ವ ದ್ರವ್ಯವೂ ವ್ಯವಸ್ಥೆಯಾಯಿತು. ನಮಗೆ ದುಡ್ಡು ಯಿಲ್ಲದೆ ಹೋಯಿತೆಂಬುವದು ತಾಕೂರರಿಗೆ ತಿಳಿದು,

ಈಗ ನೀವು ಬೇರೇಕಡೆಗೆ ಹೋಗಿ ಎಂತ ಸ್ಪಷ್ಟವಾಗಿ ಹೇಳಿಬಿಟ್ಟರು. ಆಗ ಅಲ್ಲಿಂದ ನಮಗೆ ಹೊರಡಬೇಕಾದ ಸಂದರ್ಭವು ಬಂತು. ಆ ಸಮಯದಲ್ಲಿ ನಮ್ಮ ಹತ್ತಿರ, ವುಳಿದಿದ್ದ ಸ್ವಲ್ಪ ಪದಾರ್ಥವನ್ನು ಆ ಊರಿನಲ್ಲಿ ಮಾರಿ, ನಮ್ಮ ಶೇವಕರು ಹಾದಿಯ ಖರ್ಚಿಗಾಗಿ ಇನ್ನೂರು ರೂಪಾಯಿಗಳನ್ನಿಟ್ಟುಕೊಂಡು, ಠಾಕೂರರ ಕಡೆಯಿಂದ ಕುದುರೆಗಳನ್ನೂ ಮತ್ತು ಒಂಟೆಗಳನ್ನೂ ಹಿಂದಕ್ಕೆ ಕೇಳಿದರು. ಆಗ ಅವರು ಒಂಭತ್ತು ಕುದುರೆಗಳ ಪೈಕಿ, ಮೂರುಮಾತ್ರ ನಮಗೆ ಹಿಂದಕ್ಕೆ ಕೊಟ್ಟು, ವುಳಿದ ಕುದುರೆಗಳು ಮತ್ತೂ ಒಂಟೆಗಳು ಸಹ ಸತ್ತುಹೋದವೆಂತ ಹೇಳಿಬಿಟ್ಟರು. ನಾವು ಸರ್ವಪರಿಯಲ್ಲಿಯೂ ಅಶಕ್ತರಾಗಿದ್ದದ್ದರಿಂದ, ಅವರಸಂಗಡ ಜಗಳವಾಡುವದರಿಂದ ಪ್ರಯೋಜನವೇನು? ಎಂದು ಯೋಚಿಸಿ, ಅವರು ದಯಮಾಡಿ ಕೊಟ್ಟ ಮೂರು ಕುದುರೆಗಳನ್ನು ತೆಗೆದುಕೊಂಡು ಹತ್ತು ಹನ್ನೆರಡು ಜನರಸಹಿತ ಅಲ್ಲಿಂದ ಹೊರಟುಹೋಗಿ, ಮೂರು, ನಾಲ್ಕು ದಿವಸಗಳಲ್ಲಿ ಶಿಪ್ರಿ ಕೊಲ್ಹಾರಿಗೆ ಮುಟ್ಟಿದೆವು. ಮಾರ್ಗದಲ್ಲಿ, ನಮ್ಮಕಡೆ ಇನ್ನೂ ಹತ್ತು ಹನ್ನೆರಡು ಜನರು ಬಂದು ಶೇರಿದರು. ಒಟ್ಟಿಗೆ ನಮ್ಮಸಂಗಡ ಇಪ್ಪತ್ತೆರಡು ಜನರಾದರು.

ನಾವು ಎರಡುವರುಷವು ಈ ಪ್ರಕಾರ ಪರಮಾವಧಿಯ ದುಃಖವನ್ನು ಅನುಭವಿಸಿದೆವು. ಹತ್ತಿರಿದ್ದ ದ್ರವ್ಯವೆಲ್ಲಾ ಹೋಯಿತು. ಇಷ್ಟು ದುರ್ದಶೆಯಾದರೂ ಇನ್ನೂ ನಮ್ಮ ನಷ್ಟಚರ್ಯವು ಮುಗಿಯಲಿಲ್ಲ. ಅದು ನಮ್ಮಮೇಲೆ, ಪೂರ ತನ್ನ ಹಗೆಯನ್ನು ತೀರಿಸಿಕೊಳ್ಳುವದಕ್ಕೆ ಸಿದ್ಧವಾಗಿ ಇದ್ದೇಇತ್ತು. ನಾವು ಶಿಪ್ರಿ ಕೊಲ್ಹಾರ ಇಲಾಖೆ ಶಿಂಧೇಶಾಯಿಗೆ ಬಂದು, ಒಂದು ತೋಟದಲ್ಲಿ ವುಳಿದೆವು, ಎಂಬ ವರ್ತಮಾನವು ಅಲ್ಲಿನ ಉದ್ಯೋಗಸ್ಥರಿಗೆ ತಿಳಿಯಿತು. ಅವರು, ನಾವು ಝಾನ್ಸಿ ರಾಣಿಯ ಅಂದರೆ ದಂಗೇಕೋರರ ಪೈಕಿ ಜನಗಳಾಗಿದ್ದೇವೆಂತ ತಿಳಿದುಕೊಂಡು; ನಮ್ಮನ್ನ ಹಿಡಿದಿಟ್ಟುಕೊಳ್ಳಬೇಕೆಂತ ಪ್ರಯತ್ನಪಟ್ಟರು. ಪರಂತು, ನಮ್ಮ ಹತ್ತಿರದಲ್ಲಿದ್ದ, ಛತ್ರದ ಶೇವಕ ರಘುನಾಥಸಿಂಗನು, ಅವರಿಗೆ ನಮ್ಮ ಸಂಗತಿಗಳನ್ನೆಲ್ಲಾ ತಿಳಿಸಿ, ಅವರಕಡೆಯಿಂದ ನಮ್ಮನ್ನು ಬಿಡಿಸಿಕೊಂಡನು. ಆ ಬಳಿಕ ನಾವು ಶಿಪ್ರಿಯಿಂದ ಹೊರಟು ಜೇಪಾ ಬಡೋದಯೆಂಬ ಪತಾಣ ಇಲಾಖೆಯ ಪೈಕಿ, ಒಂದು ಊರಿಗೆ ಬಂದು ಶೇರಿದೆವು.

ಶಿಪ್ರಿಯಲ್ಲಿ ಬಂದಿದ್ದ ಸಂಕಟದಿಂದ ಹ್ಯಾಗೋ ನಾವು ದಾಟಿದೆವು. ಪರಂತು ಬಡೋದಿನಲ್ಲಿ ನಮಗೆ ಹೊಸಸಂಕಟವು ಪ್ರಾಪ್ತವಾಯಿತು. ಆ ವೂರಿನಲ್ಲಿ ಒಬ್ಬ ವ್ಯಾಪಾರೀಕನಿದ್ದನು. ಅವನಿಗೆ ನಮ್ಮ ವರ್ತಮಾನವು ತಿಳಿದಕೂಡ್ಲೆ ನಾವು ಉಳಿದುಕೊಂಡ ಸ್ಥಳಕ್ಕೆ ಬಂದು, ನೀವು ಝಾನ್ಸಿ ರಾಣಿಯಕಡೆಯ ಜನವೆಂದರೆ, ದಂಗೇಕೋರ ಜನವೆಂತ ಹೇಳಿ, ಹಿಡಿದುಕೊಂಡು ಊರಿಗೆ ತೆಗೆದುಕೊಂಡು ಹೋದನು. ಅಲ್ಲಿ ಅವನು ನಮ್ಮನ್ನ ಮೂರು ದಿವಸಗಳ ಪರ್ಯಂತರ, ಒಂದು ಸ್ಥಳದಲ್ಲಿಟ್ಟು, ನಾಲ್ಕನೇದಿವಸ ನಮ್ಮ ಸಂಗಡ, ಹತ್ತು ಸವಾರರು ಮತ್ತು ಇಪ್ಪತ್ತೈದು ಸಿಪಾಯಿಗಳನ್ನು ಕೊಟ್ಟು ಪಾಟ್ಲಾ

ದಲ್ಲಿನ ಏಜೇಂಟ್ ಸಾಹೇಬನಕಡೆಗೆ ಕಳುಹಿಸಿದನು. ಆ ವೇಳೆಯಲ್ಲಿ ಅವನು ನಮ್ಮ ಸಂಗಡ ಇದ್ದ ಕುದುರೆ ಮತ್ತು ಇತರ ಸಾಮಾನುಗಳನ್ನೆಲ್ಲಾ ಇಟ್ಟುಕೊಂಡು ಬಿಟ್ಟನು. ಆದ್ದರಿಂದ ಆ ಅಲ್ಪವಯಸ್ಸಿನಲ್ಲಿ, ನಮಗೆ ಕಾಲಿನಿಂದ ನಡೆಯಬೇಕಾದ ಪ್ರಸಂಗವು ಬಂತು. ಪರಂತು ರಾಣೀ ಸಾಹೇಬಳ ನಿಸ್ಸೀಮ ಸೇವಕರು ನಮ್ಮನ್ನು ಹೆಗಲಮೇಲೆ ಕೂಡಿಸಿಕೊಂಡು ಸವಾರರ ಕುದುರೆಯಸಂಗಡ ಬಡೋದೆಯಿಂದ ಪ್ರಯಾಣ ಮಾಡಿದರು. ಬಡೋದೆಗೆ ಮೂರುನಾಲ್ಕು ಮೈಲಿಗಳ ದೂರದಲ್ಲಿ ಒಂದು ನದಿಯಿದೆ. ಅಲ್ಲಿಗೆ ನಾವು ಬಂದು ಶೌಚಮುಖಮಾರ್ಜನೆಯನ್ನು ಮಾಡುವದಕ್ಕಾಗಿ ಕೆಳಗೆ ಇಳಿದೆವು. ಈಶ್ವರನ ಲೀಲೆಯು ಅಗಾಧವಾಗಿದ್ದದ್ದರಿಂದ ಆಗ ಆತನಿಗೆ ನಮ್ಮಮೇಲೆ ಕೃಪೆಹುಟ್ಟಿ, ಆತನು ಒಂದು ಚಮತ್ಕಾರವಾದ ಯೋಗವನ್ನು ಉತ್ಪನ್ನಮಾಡಿ ಕಾಲಿನಿಂದ ನಡೆಯುವ ಶ್ರಮವನ್ನು ನಮಗೆ ಇಲ್ಲದಹಾಗೆ ಮಾಡಿದನು.

ನಾವು ಗ್ವಾಲಿಯರ್ ಬಿಟ್ಟಮೇಲೆ, ತಾಲ್ ಬೇಟ್ ಕೊಟ್ರಾಕ್ಕೆ ಬಂದಾಗ ನಮ್ಮ ಸಂಗಡ ಅರವತ್ತು ಜನರಿದ್ದರು. ಇಷ್ಟುಜನರು ಒಂದೇಕಡೆಗೆ ಇರುವದು ಸರಿಯಲ್ಲವೆಂತ, ಅಲ್ಲಿನ ಠಾಕೂರ್ ಸಿಂಗನು, ಹೇಳಿದ್ದರಮೇಲೆ ಹತ್ತು ಹನ್ನೆರಡು ಜನಗಳನ್ನು ಮಾತ್ರ ನಮ್ಮ ಹತ್ತರ ಇಟ್ಟುಕೊಂಡು ಉಳಿದ ಜನರನ್ನ ನೆರೆಹೊರೆಯಲ್ಲಿರುವದಕ್ಕಾಗಿ ಬೇರೆ ಬೇರೆ ಸ್ಥಳಕ್ಕೆ ಕಳುಹಿಸಿ ಕೊಟ್ಟಿತ್ತು. ಆ ಪ್ರಕಾರವಾಗಿ ಆ ಜನಗಳಪೈಕಿ, ಇಸರ್ಾಲ್‌ದಾರ್ ಹನೇಖರ್ಾ ಮತ್ತು ಮರಾಟೆ ಗಣಪತಿರಾವ್, ಈ ಇಬ್ಬರು, ಪಾಟ್ಣಾಕ್ಕೆ ಹೋಗಿ, ಅಲ್ಲಿ ಪೃಥ್ವೀಸಿಂಗರಾಜನ ಹತ್ತರ ಕೆಲಸಕ್ಕೆ ಇದ್ದರು. ಪಾಟ್ಣಾದಿಂದ ಶಿಂಧೆಶಾಯಿ ಇಲಾಖೆ ಆಗರವೆಂಬಸ್ಥಳವು ಸಮೀಪವಿದ್ದು ಅಲ್ಲಿ ಇಂಗ್ರೇಜಿ ಸೈನ್ಯದ ವಸತಿ ಇತ್ತು. ಮೇಜರ್ ಕ್ಲಿಕ್ ಸಾಹೇಬನು, ಆ ಸಮಯದಲ್ಲಿ ಪೊಲಿಟಿಕಲ್ ಏಜಂಟನಾಗಿದ್ದನು. ಹನೇಖರ್ಾನು ಬಹಳ ಯುಕ್ತಿಯಿಂದ ಏಜಂಟ್ ಸಾಹೇಬನಹತ್ತರಕ್ಕೆ ಹೋಗಿ ಆತನ ಗುರ್ತುಮಾಡಿಕೊಂಡು ಅಲ್ಲಿ ಒಂದುದಿವಸ, ಝರ್ಾಸಿರಾಣಿ ಸಾಹೇಬಳ ವಿಷಯವಾಗಿ ಮಾತನಾಡುತ್ತಿರುವಾಗ, ಸಹಜವಾಗಿ ಹೀಗೆ ಒಂದು ಪ್ರಸ್ತಾಪವನ್ನು ತೆಗೆದನು; "ರಾಣೀ ಸಾಹೇಬಳ ಎಂಟು ಒಂಭತ್ತು ವರುಷದ ಒಬ್ಬ ಅಜ್ಞಾನಿ ಬಾಲಕನಿದ್ದಾನೆ. ಇವನು ಗ್ವಾಲಿಯರ್‌ನಲ್ಲಿ ರಾಣೀಸಾಹೇಬಳು ತೀರಿಹೋದಾರಭ್ಯ ಇಂಗ್ರೇಜಿ ಸರ್ಕಾರದವರ ಭಯದಿಂದ ಅರಣ್ಯದಲ್ಲಿದ್ದು, ಅನೇಕದುಃಖವನ್ನು ಅನುಭವಿಸುತ್ತಿದ್ದಾನೆ. ಆ ಅಜ್ಞಾನಿ ಬಾಲಕನು ಇಂಗ್ರೇಜಿ ಸರಕಾರಕ್ಕೆ ವಿರುದ್ಧವಾದ್ದೇನೂ ಮಾಡಲಿಲ್ಲ. ಆದಾಗ್ಯೂ, ಆತನ ಪ್ರಾಣದಮೇಲೆ ಯೇನಾದರು ಸಂಕಟವದಗೀತುಯೆಂಬ ಭಯದಿಂದ ರಾಣೀ ಸಾಹೇಬಳ ಸೇವಕರು ಆತನನ್ನು ಅಡಗಿಸಿ ಇಟ್ಟುಕೊಂಡು ರಾಣೀ ಸಾಹೇಬಳ ಆಜ್ಞೆ ಪ್ರಕಾರ, ಆತನ ಪ್ರಾಣರಕ್ಷಣೆ ಮಾಡುತ್ತಿದ್ದಾರೆ. ತಾವು ದಯವಿಟ್ಟು ಆ ಪ್ರತಾಪಶಾಲಿನಿಯಾದ ರಾಣಿಯ ಪ್ರೀಯ ಬಾಲಕನಮೇಲೆ ಕೃಪೆಯಿಟ್ಟು, ಆತನನ್ನು ಸಂರಕ್ಷಣೆಮಾಡುವ ಉದಾರವಾದ ಬುದ್ಧಿಯನ್ನು ತೋರಿಸಿದರೆ ತಮಗೆ ಬಹಳ ಯಶಸ್ಸುಬಂದೀತು."

---

ಮೇಜರ್ ಕ್ಲಿಕ್ ಸಾಹೇಬನು, ಬಹಳ ಉದಾರಿಯಾಗಿದ್ದು, ಝಾಸಿರಾಣಿ ಸಮ್ಬಂಧವಾಗಿ ಆತನ ಮನಸ್ಸಿನಲ್ಲಿ ಬಹಳ ಒಳ್ಳೇ ಅಭಿಪ್ರಾಯವಿತ್ತಾದ್ದರಿಂದ ಅವನು ಹನೇಖಾನಿಗೆ 'ಆ ಶೂರರಾಣಿಯ ಬಾಲಕನನ್ನು ನಾವು ಬಹಳ ಆನಂದದಿಂದ ಸಂರಕ್ಷಣೆಮಾಡುತ್ತೇವೆ' ಎಂತ ಹೇಳಿದನು ; ಮತ್ತು ಆತನು ಇಂದೂರಿನಲ್ಲಿನ ಸೆಂಟ್ರಲ್ ಇಂಡಿಯಾದ ಪೊಲಿಟಿಕಲ್ ಏಜೆಂಟ ಕರ್ನಲ್ ಷೇಕ್ಸಪಿಯರ್ ಸಾಹೇಬನಿಗೆ ತತ್ಕ್ಷಣವೇ ಒಂದು ಪತ್ರವನ್ನು ಬರೆದು ಕಳುಹಿಸಿದನು. ಆತನು ಕೂಡ ಹನೇಖಾನ ವಿನಂತಿಯನ್ನು ಒಪ್ಪಿಕೊಂಡು, ಆ ಬಾಲಕನನ್ನು ತಂದು, ನಮ್ಮ ಕಡೆಗೆ ಕಳುಹಿಸಿಕೊಟ್ಟರೆ, ನಾವು ಅವನಿಗೆ ಸರಿಯಾದ ಏರ್ಪಾಟು ಮಾಡುತ್ತೇವೆಂತ, ಮೇಜರ್ ಕ್ಲಿಕ್ ಸಾಹೇಬನಿಗೆ ಬರೆದು ಕಳುಹಿಸಿದನು. ಆ ಬಳಿಕ ಮೇಜರ್ ಕ್ಲೀಕ್ ಸಾಹೇಬನು, ಹನೇಖಾನಿಗೆ ನಮ್ಮನ್ನು ತರುವದಕ್ಕಾಗಿ ಅಪ್ಪಣೆಮಾಡಿದನು. ಆ ಸಮಯದಲ್ಲಿ ಹನೇಖಾನು ವಿನಂತಿಮಾಡಿದ್ದೇನಂದರೆ "ನಾನು ಆತನೆಡೆಗೆ ಹೋಗಿ, ಆತನನ್ನು ತರುತ್ತೇನೆ ; ಪರಂತು ಮಾರ್ಗದಲ್ಲಿ ಯಾರಾದರೂ ನನಗೆ ಅಡಚಣೆಮಾಡಿದರೆ ನನ್ನನ್ನು ಬಿಡಿಸುವರ್ಯಾರು? ಆದ್ದರಿಂದ, ಸಾಹೇಬರು ತಮ್ಮ ಕಡೆಯ ಒಬ್ಬ ಮನುಷ್ಯನನ್ನು, ನನ್ನ ಸಂಗಡ ಕೊಟ್ಟರೆ, ನಾನು ಆ ಹುಡುಗನನ್ನ ತೆಗೆದುಕೊಂಡು ಬರುತ್ತೇನೆ." ಏಜಂಟ್ ಸಾಹೇಬನು, ಹನೇಖಾನ ವಿನಂತಿಯನ್ನು ಮನ್ನಿಸಿ ಸೆಂಟ್ರಲ್ ಇಂಡಿಯಾದ ಇರಸಾಲೆಯ ಪೈಕಿ ಇಬ್ಬರು ಸವಾರರನ್ನು ಅವನ ಸಂಗಡ ಕೊಟ್ಟನು. ಆ ಸವಾರರನ್ನು ತೆಗೆದುಕೊಂಡು ಹನೇಖಾನು ಪಾಟ್ಣಕ್ಕೆ ಬಂದು ಆ ಬಳಿಕ ಅಲ್ಲಿಂದ ಅವನು ಗಣಪತಿರಾವ್ ಮರಾಟೆ ಸಂಗಡ, ಆ ಸವಾರರನ್ನು ಕೊಟ್ಟು, ನಮ್ಮ ಕಡೆಗೆ ಕಳುಹಿಸಿದನು. ನಾವು ಇರತಕ್ಕ ಸ್ಥಳ ಮುಂತಾದ್ದೆಲ್ಲಾ ಹನೇಖಾ ಮತ್ತು ಗಣಪತಿರಾಯನಿಗೆ ಗೊತ್ತಿದ್ದು, ನಾವು ಕೋಟ್ರಾದಿಂದ ಹೊರಟು ಶಿಪ್ರಿಕಡೆಗೆ ಬಂದ ವರ್ತಮಾನವು ಅವನಿಗೆ ತಿಳಿದಿತ್ತು. ಅಪರಮೇಲೆ ಗಣಪತಿರಾಯನು ಆ ಸವಾರರನ್ನು ಕರೆದುಕೊಂಡು ಶಿಪ್ರಿಕಡೆಗೆ ಬರುತ್ತಿದ್ದನು. ಅವನು ಬಡೋದದಿಂದ ಹೊರಟು, ನದಿಯ ಹತ್ತರ ನಾವು ಯೆಲ್ಲಿ ಉಳಿದಿದ್ದೆವೋ ಅಲ್ಲಿಗೇನೇ ಬಂದನು. ನಮ್ಮ ಅವನ ದರ್ಶನವು ದಾರಿಯಲ್ಲಿ ಆಯಿತು. ಗಣಪತಿರಾವ್ ಮರಾಟೆಯು ನಮ್ಮ ಗುರ್ತುಹಿಡಿದು, ನಮ್ಮ ದೀನ ಸ್ಥಿತಿಯನ್ನು ನೋಡಿ ಕಣ್ಣುಗಳಿಂದ ನೀರು ತಂದುಕೊಂಡು ತನ್ನ ಸಂಗಡಯಿದ್ದ ಇಂಗ್ರೇಜಿ ಸವಾರರಿಗೆ ಹೇಳಿದ್ದೇನಂದರೆ, 'ಝಾಸಿರಾಣಿಯ ಪುತ್ರನು ಇವನೇ ಆಗಿರುತ್ತಾನೆ.' ಆ ಬಳಿಕ ಆ ಸವಾರರು ವಿಚಾರಮಾಡಿ ನಮ್ಮನ್ನು ನಿರ್ಬಂಧದಿಂದ ಪಾಟ್ಣಕ್ಕೆ ತೆಗೆದುಕೊಂಡು ಹೋಗುತ್ತಿದ್ದ ಸವಾರರಿಗೆ "ಈ ಜನಗಳನ್ನು ನಮ್ಮ ಸ್ವಾಧೀನಕ್ಕೆ ಕೊಡಿ" ಎಂತ ಹೇಳಿದರು. ಆಗ ಅವರಲ್ಲಿ ಒಬ್ಬ ಸವಾರನು ಹಿಂದಕ್ಕೆ ಬಡೋದೆಗೆ ಬಂದು ಅವನು ಅಲ್ಲಿನ ಉದ್ಯೋಗಸ್ಥನಿಗೆ ನಡೆದ ಸಮಾಚಾರವನ್ನು ತಿಳಿಸಿದನು. ಆಗ ಆ ಉದ್ಯೋಗಸ್ಥನು ಅಲ್ಲಿಗೆ ಬಂದು ಇಂಗ್ರೇಜಿ ಸರ್ಕಾರದ ಸವಾರರನ್ನು ನೋಡುತ್ತಲೇ ನಮ್ಮ ಸರ್ವ ಸಾಮಾನು ಮತ್ತು

ಕುದುರೆಗಳನ್ನು ಸಹಾ ಕಳುಹಿಸಿಕೊಟ್ಟು, ನಮ್ಮನ್ನು ಬಂಧಮುಕ್ತರನ್ನಾಗಿ ಮಾಡಿದರು. ಈ ಪ್ರಕಾರವಾಗಿ ಇದೊಂದು ಸಂಕಟವು ನಿವಾರಣೆಯಾಯಿತು.

ಆಬಳಿಕ ನಾವು ನಮ್ಮ ಕುದುರೆ ಮುಂತಾದ್ದನ್ನ ತೆಗೆದುಕೊಂಡು ಇಂಗ್ರೇಜಿ ಸವಾರರ ಸಂಗಡ ಪಾಟ್ಣಾಕ್ಕೆ ಬಂದೆವು. ಅಲ್ಲಿಗೆ ಬಂದನಂತರ ನಮ್ಮಸಂಗಡವಿದ್ದ ರಘುನಾಥಸಿಂಗ್ ಮತ್ತು ಗಣಪತಿರಾವ್ ಮುಂತಾದ ಮಂಡಲಿಯುವರು ಅಲ್ಲಿನ ರಾಜ ಪೃಥ್ವಿಶಿಂಗನ ಹತ್ತರಕ್ಕೆ ಹೋಗಿ, ನಮಗೆ, ಅವನ ಭೇಟೀಮಾಡಿಸಿದರು. ಆ ರಾಜನು ಝಾಸಿ ಸಂಸ್ಥಾನದ ದೊಡ್ಡಸ್ಥಿಕೆ ಮತ್ತು ಯೋಗ್ಯತೆಯನ್ನು ಮನಸ್ಸಿಗೆ ತೆಗೆದುಕೊಂಡು ನಮ್ಮನ್ನ ಚೆನ್ನಾಗಿ ಇಟ್ಟುಕೊಂಡು ನಮಗೆ ವೆಚ್ಚದ ಗೋಸ್ಕರ ದಿನವಹಿ ಹತ್ತು ರೂಪಾಯಿಗಳನ್ನು ಕೊಟ್ಟು ಎಂಟು ಹತ್ತು ದಿವಸ ಅಲ್ಲಿರಬೇಕೆಂತ ಹೇಳಿದನು; ಮತ್ತು ಅವನು ಹೇಳಿದ್ದೇನಂದರೆ "ನೀವು ಇಲ್ಲಿ ಇದ್ದರೆ, ನಾನು ಇಲ್ಲಿನ ಏಜೆಂಟ ಸಾಹೇಬನ ಮೂಲ್ಕ, ಅಜ್ಮೇರಿನ ರೆಸಿಡೆಂಟ್ ಸಾಹೇಬರಿಗೆ ಬರಸಿ ನಿಮಗೆಲ್ಲಾ ಬಹಳ ಅನುಕೂಲ ಮಾಡಿ ಕೊಡುತ್ತೇನೆಂತ' ತಿಳಿಸಿದನು. ಪರಂತು, ಆತನ ಹೇಳಿಕೆಯನ್ನು ಮನ್ನಿಸಲು, ಆ ಸಮಯದಲ್ಲಿ ನಮಗೆ ಬುದ್ಧಿ ಬರಲಿಲ್ಲ. ನಮ್ಮ ದುರಾದೃಷ್ಟವು ಪೂರಾ ಬೆನ್ನು ಹತ್ತಿದ್ದದ್ದರಿಂದ, ಪೃಥ್ವಿಶಿಂಗನಿಗೆ ನಾವು ಈ ಪ್ರಕಾರವಾಗಿ ವುತ್ತರ ಕೊಟ್ಟೆವು: 'ಆಗರದ ಸ್ಥಳಕ್ಕೆ ತೆಗೆದುಕೊಂಡು ಹೋಗುವದಕ್ಕಾಗಿ ನಮ್ಮಕಡೆಗೆ ಇಂಗ್ರೇಜಿ ಸವಾರರು ಬಂದಿದ್ದಾರಾದ್ದರಿಂದ ನಮಗೆ ಅಲ್ಲಿಗೆ ಹೋಗುವದಕ್ಕೆ ಇಷ್ಟವಿದೆ.'' ಈ ವುತ್ತರವನ್ನು ಕೇಳುತ್ತಲೇ ರಾಜಾಸಾಹೇಬನಿಗೆ ಅಸಮಾಧಾನವಾಗಿ ನಮ್ಮನ್ನ ಪಾಟ್ಣಾದಿಂದ ಎರಡುಮೈಲಿಗಳ ದೂರದಲ್ಲಿರುವ, 'ಮೇಗರ್ಜಿ' ಯೆಂಬ ಮರ್ಕಾನಿಗೆ ತೆಗೆದುಕೊಂಡುಹೋಗಿ ಪಹರೆಯಲ್ಲಿ ಇಡಿಸಿದನು. ಆದರೆ ನಮ್ಮ ಊಟ ಉಪಚಾರಕ್ಕೆ ಮಾತ್ರ, ಪೂರ್ವದಂತೆ ವ್ಯವಸ್ಥೆಯನ್ನ ಚೆನ್ನಾಗಿ ಇಡಿಸಿದನು. ಮೂರುತಿಂಗಳು ನಾವು ಅಲ್ಲಿ ಇದ್ದೆವು. ಪೃಥ್ವಿಶಿಂಗ್ ರಾಜನು, ನಮ್ಮ ಸಂಗಡ ಇದ್ದ ಇಂಗ್ರೇಜೀ ಸವಾರರಿಗೆ ಸಹಾ, ಆಟಂಕಪಡಿಸಿದನೆಂಬ ಸಮಾಚಾರವು ಆಗರದಲ್ಲಿನ ಏಜೆಂಟ ಮಿ. ಕ್ಲಿಕ್ ಸಾಹೇಬನಿಗೆ ತಿಳಿಯಿತು. ಅವನು ಅಜಮೀರಿನ ರೆಸಿಡೆಂಟನಿಗೆ, ಬರೆದನು. ಅದರಮೇಲೆ ಮೂರು ತಿಂಗಳವರೆಗೂ ಅವನಿಗೂ ರಾಜನಿಗೂ ಮಧ್ಯೆ ಪತ್ರ ವ್ಯವಹಾರವು ನಡೆದು ಕೊನೆಗೆ ರೆಸಿಡೆಂಟ ಸಾಹೇಬನು ರಾಜನಿಗೆ ಬರೆದದ್ದೇನಂದರೆ, "ಆಗರದ ಏಜೇಂಟನಕಡೆ ಸವಾರರಿಗೆ, ನಿರ್ಬಂಧಮಾಡಿ ಇಟ್ಟುಕೊಳ್ಳುವದಕ್ಕೆ ನಿಮಗೇನೂ ಕಾರಣವಿಲ್ಲ. ನೀವು ಆ ಸವಾರರನ್ನು ಮತ್ತು ಝಾಸಿರಾಣಿಯ ಮಗನನ್ನು ಸಹಾ ಆಗರಸ್ಥಳಕ್ಕೆ ಅಡ್ಡಿಯಿಲ್ಲದೆ ಕಳುಹಿಸಿ ಕೊಡಬೇಕು.'' ಈ ಪ್ರಕಾರ ರಾಜನಿಗೆ ಬರೆದು ಬಂದನಂತರ ಅಲ್ಲಿಂದ ನಮ್ಮನ್ನ ಬಿಟ್ಟರು. ನಂತರ ನಾವು ಆಗರಕ್ಕೆ ಬಂದೆವು.

ಪಾಟ್ಣಾದ ರಾಜನ ಹೇಳಿಕೆಯನ್ನು ನಾವು ಕೇಳದೆ, ಅಲ್ಲಿಂದ ಆಗರಸ್ಥಳಕ್ಕೆ ಹೋಗುವದಕ್ಕೆ ಹೊರಟಾಗ್ಯೂ ಅಲ್ಲಿನ ರಾಜನು ತನ್ನಉದಾರಬುದ್ಧಿಯನ್ನ ತೋರಿಸುವದ

ರಲ್ಲೇನೂ ಕಡಮೆ ಮಾಡಲಿಲ್ಲ. ನಾವು ಪಾಟ್ಣಾ ಬಿಟ್ಟು ಹೊರಟು, ರಾಜಾ ಸಾಹೇಬನ ಕೊನೆಯ ನಿರೂಪವನ್ನು ತೆಗೆದುಕೊಂಡ ವೇಳೆಯಲ್ಲಿ ಅವನು ನಮಗೆ ಹಾದಿಯ ಖರ್ಚಿಗೋಸ್ಕರ ಆರುನೂರು ರೂಪಾಯಿಗಳನ್ನು ಕೊಟ್ಟನು. ಮತ್ತು ನಮ್ಮಸಂಗಡ ಎರಡು ಗಾಡಿಗಳನ್ನು ಕೆಲವು ಮನುಷ್ಯರನ್ನು ಸಹಾ ಕೊಟ್ಟನು. ಅನಂತರ ಅಲ್ಲಲ್ಲಿ ನಿಂತು ಪ್ರಯಾಣ ಮಾಡಿಕೊಳ್ಳುತ್ತಾ ಪಾಟ್ಣಾದಿಂದ ಆಗರಕ್ಕೆ ಬಂದು ಶೇರಿದೆವು, ಅಲ್ಲಿಗೆ ಬಂದಬಳಿಕ ಮೇಜರ್ ಕ್ಲಿಕ್' ಸಾಹೇಬನಿಗೂ ಮತ್ತು ನಮಗೂ ಭೇಟ ಯಾಯಿತು. ಸಾಹೇಬ ಬಹದ್ದೂರನು ಬಹಳ ಗೌರವಮಾಡಿ ಪ್ರೇಮಶಬ್ದಗಳಿಂದ ನಮಗೆ ಅಭಯಕೊಟ್ಟನು. ಆವೇಳೆಯಲ್ಲಿ ನಮ್ಮ ಹತ್ತರ ದ್ರವ್ಯವು ಶುದ್ಧಾಂಗ ಉಳಿದಿರಲಿಲ್ಲ. ಇಲ್ಲವೆನ್ನದಹಾಗೆ ಮೂವತ್ತೆರಡು ತೊಲೆಯ ಭಂಗಾರದ ಯೆರಡುಖಡೆಗಳುಮಾತ್ರ ಇದ್ದವು. ಪರಂತು ಅದನ್ನ ಸಾಹೇಬ ಬಹದ್ದೂರನ ದರುಶನಕ್ಕೋಸ್ಕರ ರಘುನಾಥಶಿಂಗನು ದರ್ಬಾರಿನ ರೀತಿಪ್ರಕಾರ, ನಜರಿಗೆ ಮಾಡಿಸಬೇಕಾದನ್ನ ಮಾಡಿಸಿದ್ದರಿಂದ ಅದೆಲ್ಲಾ ತೀರಿಹೋಯಿತು. ಝಾಂಸಿಯಿಂದ ಹೊರಡುವ ಸಮಯದಲ್ಲಿ ನಮ್ಮ ಹತ್ತರ ಇದ್ದ ಬೆಲೆಯುಳ್ಳ ಪದಾರ್ಥಗಳೆಲ್ಲಾ ಇಲ್ಲದಂತೆ ಆಗಿ, ಮುಂದೆ ನಮ್ಮಮೇಲೆ ಲಕ್ಷ್ಮಿಯು ಪೂರ್ಣ ನಿರ್ದಯವು ವುಂಟಾಯಿತು.

ಇದು ಹಾಗಿರಲಿ. ನಾವು ಪಾಟ್ಣಾಕ್ಕೆ ಬಂದ ವರ್ತಮಾನವು ನಮ್ಮ ಪ್ರಾಣ ಸಂರಕ್ಷಕ ಮತ್ತು ರಾಣೀಸಾಹೇಬಳ ಏಕನಿಷ್ಟ ಶೇವಕನಾದ ದೇಶಮುಖ' ರಾಮಚಂದ್ರರಾಯನಿಗೆ ತಿಳಿಯುತ್ತಲೆ ಆತನು ತನ್ನ ಹತ್ತರಿದ್ದ ಏಳು ಎಂಟು ಕುದುರೆಗಳು ಸಹಿತ ಅಲ್ಲಿಗೆ ಬಂದು ಶೇರಿದನು. ಮತ್ತು ಇನ್ನು ಕೆಲವು ಶೇವಕ ಮಂಡಲಿಯವರು ನಮ್ಮಹತ್ತರ ಬಂದು ಮುಟ್ಟಿದರು. ಮರಾಟಾ ಗಣಪತಿರಾಯನಂತೂ ನಮ್ಮ ಸಂಗಡಲೇ ಇದ್ದನು. ಹನೇಖಾನನು ಮಾತ್ರ ಪಾಟ್ಣಾದ ರಾಜನಹತ್ತರ ಕೆಲಸಕ್ಕೆ ಇದ್ದದ್ದರಿಂದ ಅವನು ಅಲ್ಲಿಯೇ ಇದ್ದುಬಿಟ್ಟನು. ಅವನ ಹೊರತು, ಉಳಿದ ಸರ್ವ ಜನಗಳ ಸಹಿತ, ನಾವು ಆಗರಕ್ಕೆ ಬಂದೆವು ಯೆಂಬುವದನ್ನು ಮೇಲೆಯೇ ಹೇಳಿದೆ. ಆಗರಕ್ಕೆ ಬಂದ ಬಳಿಕ ಪೊಲಿಟಿಕಲ್ ಏಜೆಂಟ ಸಾಹೇಬನಿಗೂ ನಮಗೂ ಸಮಕ್ಷಮವಾದನಂತರ ದೇಶಮುಖ' ರಾಮಚಂದ್ರರಾವ್, ಮರಾಟಾ ಗಣಪತಿರಾವ್, ಮತ್ತು ರಘುನಾಥಸಿಂಗ್ ಮುಂತಾದ ನಮ್ಮ ಸ್ವಾಮಿನಿಷ್ಟ ಶೇವಕರು ಏಜೆಂಟ ಸಾಹೇಬನಿಗೆ ನಮ್ಮ ಸರ್ವ ಸಮಾಚಾರವನ್ನು ತಿಳಿಸಿ ಆತನ ಅಂತಃಕರಣದಲ್ಲಿ ನಮ್ಮ ವಿಷಯವಾಗಿ ಬಳ್ಳೇ ದಯವನ್ನು ಹುಟ್ಟಿಸಿದರು. ಮತ್ತು ಆತನ ಕಡೆಯಿಂದ ನಮಗೋಸ್ಕರ ವ್ಯವಸ್ಥೆ ಚೆನ್ನಾಗಿ ಆಗಬೇಕೆಂತ ಪ್ರಸ್ತಾಪಿಶಿದರು.

ಆಗರದ ಪೊಲಿಟಿಕಲ್ ಏಜೆಂಟ ಸಾಹೇಬನು ಬಹಳ ಭಳ್ಳೇ ಮನುಷ್ಯನಾಗಿದ್ದನು. ಆದರೆ ನಮ್ಮ ವ್ಯವಸ್ಥೆಮಾಡುವ ಕೆಲಸವು ಮೂಲತಃ ಆತನ ಕೈಯ್ಯಲ್ಲಿರಲಿಲ್ಲ. ಯಾಕಂದರೆ ನಮ್ಮ ಸಮ್ಮಂಧವು ಝಾಂಸಿ ಸಂಸ್ಥಾನದ್ದಾಗಿ ಇದ್ದದ್ದರಿಂದ ಅದನ್ನ ವ್ಯವಸ್ಥೆ

ಮೊಡಿತಕ್ಕ ಕೆಲಸವು ಸೆಂಟ್ರಲ್ ಇಂಡಿಯಾದ ಪೊಲಿಟಿಕಲ್ ಏಜೆಂಟನಕಡೆಗೆ ಇತ್ತು. ಹೀಗಿದ್ದದ್ದರಿಂದ ಆಗರದ ಪೊಲಿಟಿಕಲ್ ಏಜೆಂಟ್ ಸಾಹೇಬನು ಇಂದೂರಿನಲ್ಲಿನ ರೆಸಿಡೆಂಟ್ ಸಾಹೇಬನಿಗೆ ಒಂದು ಪತ್ರವನ್ನು ಬರೆದುಕೊಟ್ಟು ನಮ್ಮನ್ನು ಭದ್ರತೆಯಿಂದ ನೆಟ್ಟಗೆ ಆ ಕಡೆಗೆ ಕಳುಹಿಸಿಕೊಟ್ಟನು. ಆಗರದಿಂದ ಹೊರಟ ಬಳಿಕ ಐದನೆಯ ದಿವಸ ಅಂದರೆ ಸಾವಿರದ ಎಂಟುನೂರ ಅರವತ್ತನೇ ಇಸವಿ ಮೇ ತಾರೀಖು ಐದನೆಯ ದಿವಸ ನಾವು ಇಂದೂರ ಛಾವಣಿಗೆ ಬಂದು ಸೇರಿದೆವು.

ಇಂದೂರಿಗೆ ಬಂದಮೇಲೆ ನಮ್ಮ ಮತ್ತು ಸರ್ ರಿಚ್‌ಮಂಡ್ ಷೇಕ್ಸಪಿಯರ್ ಸಾಹೇಬನ ಭೇಟಿಯಾಯಿತು. ಆತನು ನಮ್ಮನ್ನು ಸರಿಯಾದ ರೀತಿಯಿಂದ ವಿಚಾರಿಸಿದನು. ಮತ್ತು ತನ್ನ ನೇಟಿವ ಅಸಿಸ್ಟೆಂಟ್ ಮುನ್ಷಿ ಧರ್ಮನಾರಾಯಣನೆಂಬ ಒಬ್ಬ ಕಾಶ್ಮೀರದ ಬ್ರಾಹ್ಮಣನ ಕಡೆಗೆ ಸರಕಾರದ ಪಕ್ಷದಿಂದ ನಮ್ಮ ವ್ಯವಸ್ಥೆಯನ್ನು ವಹಿಸಿ ನಮ್ಮನ್ನು ಎಲ್ಲಾ ವಿಧವಾಗಿಯೂ ಸಂರಕ್ಷಣೆ ಮಾಡುವದಾಗಿ ವಚನ ಕೊಟ್ಟನು. ಆ ಸಮಯದಲ್ಲಿ ನಮ್ಮಹತ್ತರ ಬುದ್ಧಿವಂತ ಮುತ್ಸದ್ದಿಯರು ಮುಂತಾದವರು ಯಾರೂ ಇರಲಿಲ್ಲ. ಶಿಷ್ಯವೃತ್ತಿಯ ಮತ್ತು ಶಿಪಾಯಿತನದ ಜನಗಳು ಮಾತ್ರ ಇದ್ದರು. ಅವರಲ್ಲಿ ನಾಲ್ಕು ಐದು ಜನಗಳನ್ನು ಮಾತ್ರ ಇಟ್ಟುಕೊಂಡು ಉಳಿದವರಿಗೆ ಮುನಷಿ ಧರ್ಮನಾರಾಯಣನು ಅಪ್ಪಣೆ ಕೊಟ್ಟುಬಿಟ್ಟನು. ಮುಂದೆ ರೆಸಿಡೆಂಟ್ ಸಾಹೇಬನು ನಮ್ಮ ವಿಷಯವಾಗಿ ಹಿಂದೂಸ್ಥಾನದ ಸರಕಾರದಕಡೆಗೆ ರಿಪೋರ್ಟಮಾಡಿ, ಆ ಕಾಲದ ಖರ್ಚನ್ನು ಅನುಸರಿಸಿ ನಮಗೆ ತಿಂಗಳು ಒಂದರ ನೂರೈವತ್ತು ರುಪಾಯಿ ಪೆನ್ಷನ ಕೊಡುವದನ್ನು ನಿಶ್ಚಯಿಸಿದನು. ಆ ಕಾಲದಲ್ಲಿ ನಮಗೆ ಬಾಲ್ಯಾವಸ್ಥೆಯಾಗಿದ್ದದ್ದರಿಂದಲೂ ಮತ್ತು ನಮ್ಮ ಹತ್ತರ ಸರಕಾರದ ದರ್ಬಾರಿನಲ್ಲಿ ಓಡ್ಯಾಡಿ ನಮ್ಮ ವಿಷಯದಲ್ಲಿ ಆಸಕ್ತಿ ತೆಗೆದುಕೊಳ್ಳುವವರು ಯಾರೂ ಇಲ್ಲದಿದ್ದದ್ದರಿಂದಲೂ ರೆಸಿಡೆಂಟ್ ಸಾಹೇಬನು ಮಾಡಿದ ಪೆನ್ಷನ ಮೇಲೆ ಮೂಲತಃ ಯಾರ ಆಕ್ಷೇಪಣೆಯೂ ಬಾರದೆ ಅದು ನಡವಳಿಕೆಯಲ್ಲಿ ಬಂತು.''

ಇದುಹಾಗಿರಲಿ. ಮೇಲೆಹೇಳಿದ ಪ್ರಕಾರ ಶ್ರೀಮಂತ ದಾಮೋದರರಾಯನು ಕೃಪಾಳು ಬ್ರಿಟಿಷ್ ಸರಕಾರದ ಉದಾರ ಆಶ್ರಯದಕೆಳಗೆ ಇಂದೂರಿನಲ್ಲಿ ಬಂದಿದ್ದನು. ಇಪತ್ತು, ಇಪ್ಪತ್ತೈದುಲಕ್ಷ ಉತ್ಪತ್ತಿಯುಳ್ಳ ಝಾನ್ಸಿಸಂಸ್ಥಾನದ, ನಿಜವಾದ ಅಧಿಪತಿಗೆ, ಇಷ್ಟು ಅಲ್ಪವಾಗಿ ನೇಮಿಸಿದ ಕ್ಲಿಪ್ತದ್ರವ್ಯವನ್ನು ತೆಗೆದುಕೊಂಡು, ಒಬ ಸಾಧಾರಣ ಮನುಷ್ಯನ ಹಾಗೆ ಇರಬೇಕಾದ ಸಂದರ್ಭವು ಬಂದದ್ದು, ದುರ್ದೈವದ ಕಾಲ ಮಹಾತ್ಮೆಯೆಂತಲೇ ತಿಳಿಯಬೇಕು. ಪರಂತು ಕೃಪಾಳುಗಳಾದ ಇಂಗ್ರೇಜಿ ಸರಕಾರದವರು, ಆ ಸಂಸ್ಥಾನದ ಮರ್ಯಾದೆಗಾಗಿ, ಇಷ್ಟಾದರೂ ಉದಾರಬುದ್ಧಿಯನ್ನು ತೋರಿಸಿದಕ್ಕೆ ಅವರಿಗೆ ವಂದನೆಯನ್ನು ಮಾಡಲೇಬೇಕು. ಇದುಹಾಗಿರಲಿ. ಮುನ್ಷಿ ಧರ್ಮ ನಾರಾಯಣನ

ಮೇಲ್ ವಿಚಾರಣೆಯ ಕೆಳಗೆ ದಾಮೋದರರಾಯನು ಇಂಗ್ರೇಜಿ, ಪಾರ್ಸಿ, ಉರ್ದು, ಮತ್ತು ಮರಾಟಿ, ಇಷ್ಟು ಭಾಷೆಯನ್ನು ಅಭ್ಯಾಸ ಮಾಡಿದನು. ಮತ್ತು ದಿನದಿನಕ್ಕೆ ಅವನು ದೊಡ್ಡವನಾಗುತ್ತಾ ಹೋಗಿ, ಆತನಿಗೆ ತನ್ನ ವಾಸ್ತವಿಕಸ್ಥಿತಿಯ ಜ್ಞಾನವು ಹುಟ್ಟುತ್ತಾ ಹೋಯಿತು. ಮಹಾರಾಜ ಗಂಗಾಧರರಾಯನು ಕೈಲಾಸವಾಸಿಯಾದ ಬಳಿಕ, ಸಂಸ್ಥಾನವನ್ನು ಸರಕಾರಕ್ಕೆ ಸೇರಿಸಿಕೊಂಡ ವೇಳೆಯಲ್ಲಿ ಲಾರ್ಡ್ ಡಾಲ್‌ಹೌಜಿ ಸಾಹೇಬನು, ದಾಮೋದರರಾಯನ ದತ್ತವಿಧಾನದಿಂದ ಅವನಿಗೆ ಸ್ವಂತ ಹಕ್ಕಿನ ಪೂರ್ತಿ ಮಾನ್ಯಮಾಡಿ ಒಪ್ಪಿಕೊಂಡು, ಮಹಾರಾಜ ಗಂಗಾಧರರಾಯನ ಸರ್ವ ಸ್ವತ್ತುಗಳ, ಆಭರಣಗಳ ಮತ್ತು ಇತರ ಉತ್ಪನ್ನದಮೇಲೆ ದಾಮೋದರರಾಯನಿಗೆ ಪೂರ್ಣ ಸ್ವಾಮಿತ್ವವಿದೆಯೆಂತ ನಿಶ್ಚಯಿಸಿದ್ದನು. ಇಷ್ಟೇ ಅಲ್ಲದೆ ಸಂಸ್ಥಾನದ ಸಮ್ಮಂಧ, ವುಳಿದಿದ್ದ ಆರು ಲಕ್ಷ ರೂಪಾಯಿಗಳನ್ನು ದಾಮೋದರರಾಯನು ಚಿಕ್ಕವನಾಗಿದ್ದಾನೆಂಬುವದರಿಂದ ಪೊಲಿಟಿಕಲ್ ಏಜಂಟ್ ಸಾಹೇಬನು ಸರಕಾರದ ಭಂಡಾರದಲ್ಲಿ ಅವನ ಹೆಸರಿನಲ್ಲಿ ಇಡಿಸಿದ್ದನು. ಇವು ಹೊರ್ತು, ಝಾನ್ಸಿಯ ಅರಮನೆ, ಅಲ್ಲಿನ ತೋಟ, ಪಾರವಳ ಮುಂತಾದ ಸ್ಥಳದಲ್ಲಿ ಪೂರ್ವದಿಂದ ನಡಕೊಳ್ಳುತ್ತಾ ಬಂದ ವತನ, ಮತ್ತು ಜಹಗೀರಿ, ಕಾಶಿ ಮತ್ತು ಪೂನೆಯಲ್ಲಿನ ಅರಮನೆ ಮುಂತಾದ್ದೆಲ್ಲಾ ದಾಮೋದರರಾಯನದಾಗಿದ್ದು ಅದರ ಆಡಳತವನ್ನು ರಾಣೀ ಸಾಹೇಬಳು ಮಾಡುತ್ತಿದ್ದಳು. ಪರಂತು ಸಾವಿರದ ಎಂಟುನೂರ ಐವತ್ತೇಳನೇ ಇಸವಿಯಲ್ಲಿ ದಂಗೆಹುಟ್ಟಿ, ಅದರಲ್ಲಿ ದುರ್ದೈವದಿಂದ ರಾಣೀಸಾಹೇಬಳಿಗೂ ಮತ್ತು ಇಂಗ್ರೇಜಿಯವರಿಗೂ ಯುದ್ಧ ಪ್ರಸಂಗವು ನಡೆದು, ಸಾವಿರದ ಎಂಟುನೂರ ಐವತ್ತೆಂಟನೆಯ ಇಸವಿಯಲ್ಲಿ ಝಾನ್ಸಿ ಪಟ್ಟಣವು ಇಂಗ್ರೇಜಿಯವರ ಸ್ವಾಧೀನಕ್ಕೆ ಬಂತು. ಅನಂತರ ರಾಣೀ ಸಾಹೇಬಳು ತೀರಿಹೋಗಿ ಆಕೆಯ ಚಿರಂಜೀವಿ ದಾಮೋದರರಾಯನು ಅಜ್ಞಾತವಾಸದಲ್ಲಿದ್ದನು. ಆಗ ಇಂಗ್ರೇಜಿ ಸರಕಾರದವರು ರಾಣೀ ಸಾಹೇಬಳ ಅಧೀನದಲ್ಲಿದ್ದ ದಾಮೋದರರಾಯನ ಯೆಲ್ಲಾ ಸ್ವತ್ತನ್ನು ಹಸ್ತಗತ ಮಾಡಿಕೊಂಡರು. ಆ ಸಮ್ಮಂಧದ ತಿಳುವಳಿಕೆಯು ದಾಮೋದರರಾಯನಿಗೆ ವಯಸ್ಸುಬಂದಮೇಲೆ, ತಿಳಿದುಬಂತು. ಝಾನ್ಸಿಯ 'ಬ್ಲೂಬುಕ್ಕಿನಲ್ಲಿ' ಪ್ರಸಿದ್ಧಮಾಡಿದ ಪತ್ರವ್ಯವಹಾರ, ಮತ್ತು ಮೇಜರ್ ಯೂರ್ಹಾನ್ಸ್‌ಬೇಲ್ ಮುಂತಾದ ಯೂರೋಪಿಯನ್ ಜನಗಳು ಆತನ ದತ್ತವಿಧಾನದ ನಿಜತ್ವದ ವಿಷಯವಾಗಿಯೂ ಮತ್ತು ಆತನ ಸ್ವತ್ತಿನ ಸಮ್ಮಂಧವಾಗಿಯೂ ಮಾಡಿದ ನಿರ್ಣಯವೂ ಆತನ ದೃಷ್ಟಿಗೆ ಬಿತ್ತು. ಇದಲ್ಲದೆ ಇತರ ಪೂರ್ವದ ಜನಗಳ ಕಡೆಯಿಂದಲೂ ಅವನಿಗೆ ಅವನ ನಿಜವಾದಸ್ಥಿತಿಯು ಮತ್ತು ಉತ್ಪನ್ನದ ತಿಳುವಳಿಕೆಯು ಗೊತ್ತಾಯಿತು. ಆಗ ಅವನು ಅದನ್ನು ಸಂಪಾದಿಸಿಕೊಳ್ಳುವದಕ್ಕೋಸ್ಕರ ಸರಕಾರದ ಕಡೆಗೆ ಪ್ರಯತ್ನ ನಡೆಸಿದನು. ಇಷ್ಟು ದೊಡ್ಡ ಝಾನ್ಸೀ ಸಂಸ್ಥಾನವನ್ನು ಸರಕಾರಕ್ಕೆ ಸೇರಿಸಿಕೊಂಡರು. ಪರಂತು ನನ್ನ ಹೆಸರಿನಿಂದ ಸರಕಾರದ ಖಜಾನೆಯಲ್ಲಿದ್ದ ಆರು ಲಕ್ಷ ರೂಪಾಯಿಗಳು, ಪೋರೋಳೆಯಲ್ಲಿ ಹನ್ನೆರಡು ಸಾವಿರರೂಪಾಯಿ ಉತ್ಪತ್ತಿಯುಳ್ಳ

ಸ್ವಂತ ಜಹಗೀರಿ, ಕಾಶಿಯಲ್ಲಿ ಶಿವರಾವ್‌ಭಾವೂನ ಹದಿನೈದುಸಾವಿರ ರೂಪಾಯಿನ ಅರಮನೆ, ಝಾಂಸಿಯಲ್ಲಿ ರಾಣೀಸಾಹೇಬಳ ಅರಮನೆ ಮತ್ತು ಇಪ್ಪತ್ತೈದು, ಮೂವತ್ತು ಲಕ್ಷ ರೂಪಾಯಿನ ಚರಸ್ವತ್ತಿನಮೇಲೆ ನನ್ನ ಪೂರ್ಣ ಬಾಧ್ಯತೆ ಇದೆ. ಆ ಮಾಲಿಕಿಯ ಹಕ್ಕನ್ನು ಇಂಗ್ರೇಜಿ ಸರ್ಕಾರದವರು ಒಪ್ಪಿಕೊಂಡಿದ್ದಾರೆ. ಆದ್ದರಿಂದ ಕೃಪಾಳುಗಳಾದ ಸರ್ಕಾರದವರು ಅದನ್ನು ನಡವಳಿಕೆಯಲ್ಲಿ ತರಬೇಕು.'' ಈ ಪ್ರಕಾರವಾಗಿ ಅವನು ಇಂಗ್ರೇಜಿ ಸರ್ಕಾರಕ್ಕೆ ಪ್ರಾರ್ಥನೆ ಮಾಡಿದನು. ಪರಂತು ಆಕಡೆಗೆ ಅವರ ಲಕ್ಷ್ಯ ಹೇಗೆ ಹೋದೀತು ?

ದಾಮೋದರರಾಯನು ಝಾಂಸಿ ಸಂಸ್ಥಾನದ ಅಧಿಪತಿಯಾದಾನು ಮತ್ತು ದತ್ತವಿಧಾನದ ಯೋಗದಿಂದ ಆತನಿಗೆ ಮಂಗಳವಾದೀತು ಯಂತ ಆತನ ಯಜಮಾನನು ತಿಳಿದುಕೊಂಡಿದ್ದದ್ದಕ್ಕೆ ವಿರೋಧವಾಗಿ, ಅಮಂಗಳ ಮಾತ್ರ ವಿಶೇಷವಾಗಿ ಬಂದು ಒದಗಿತು. ಆತನಿಗೆ ಝಾಂಸಿಯ ರಾಜ್ಯ ಸುಖದ ಲಾಭವು ಸಿಕ್ಕಲಿಲ್ಲ. ಇಷ್ಟೇ ಅಲ್ಲದೆ, ಆತನ ಹೆಸರಿನಿಂದ ಸರ್ಕಾರದ ಭಂಡಾರದಲ್ಲಿದ್ದ, ಮಹಾರಾಜ ಗಂಗಾಧರರಾಯನ ಸ್ವಂತ ಹಣವೂ ಸಹಾ ಸಿಕ್ಕಲಿಲ್ಲ. ಖಾನದೇಶದಲ್ಲಿ ಪಾರೋಳೆಯೆಂಬ ವೂರು ಆತನ ಪೂರ್ವಜರಿಗೆ ಜಹಗೀರಿಯಾಗಿ ಸಿಕ್ಕಿತ್ತು. ಅದರ ಸ್ವಾಮಿತ್ವದ ಹಕ್ಕು ಅವರಮನೆತನದ ಕಡೆಗೆ ವಂಶಪಾರಂಪರ್ಯವಾಗಿ ನಡೆಯುತ್ತಿತ್ತು. ದಾಮೋದರರಾಯನಿಗೆ ಹಿರಿಯನಾದ ವಾಸುದೇವರಾವ್ ಮತ್ತು ಆತನ ದಾಯಾದಿಯಾದ ಸದಾಶಿವರಾವ್ * ನಾರಾಯಣ ಇವರು ಕೂಡ ಅದನ್ನು ಅನುಭವಿಸುತ್ತಿದ್ದರು. ಪರಂತು, ಆತನ ತರುವಾಯ ಯಾರೂ ಬಾಧ್ಯರು ಇಲ್ಲವೆಂತ ಹೇಳಿ, ಜಹಗೀರಿಯನ್ನೆಲ್ಲಾ, ಇಂಗ್ರೇಜಿ ಸರ್ಕಾರದವರು, ತೆಗೆದು

---

* ಈತನು ಝಾಂಸಿ ಸಂಸ್ಥಾನದಮೇಲೆ, ತನ್ನ ಬಾಧ್ಯತೆಯನ್ನ ಹೇಳಿಕೊಂಡು, ಸ್ವಯಂಸಿದ್ಧ ಸಂಸ್ಥಾನಾಧಿಪತಿಯಾಗಬೇಕೆಂತ, ನೋಡುತ್ತಿದ್ದ 'ಮಹಾರಾಜ ಸದಾಶಿವ ನಾರಾಯಣ' ನಾಗಿದ್ದಾನೆ. ಈತನ ಸಂಗತಿ ಏಳನೇ ಪ್ರಕರಣದಲ್ಲಿ ಬಂದಿದೆ. ಇವನು ಝಾಂಸಿ ಪ್ರಾಂತ್ಯದಲ್ಲಿ, ದಂಗೇ ಪ್ರಾರಂಭಮಾಡಿದನೆಂಬುವದರಿಂದ ಮಹಾರಾಣಿ ಲಕ್ಷ್ಮೀಬಾಯಿಸಾ ಸಾಹೇಬಳು ಅವನನ್ನ ಸೆರೆಯಲ್ಲಿ ಇಟ್ಟಿದ್ದಳು. ಸಾವಿರದ ಎಂಟುನೂರ ಐವತ್ತೆಂಟನೆಯ ಇಸವಿಯಲ್ಲಿ ಝಾಂಸಿಯನ್ನ ತೆಗೆದುಕೊಂಡನಂತರ ಅಲ್ಲಿನ ಇಂಗ್ರೇಜಿ ಅಧಿಕಾರಿಗಳು, ಸದಾಶಿವನಾರಾಯಣನ ವಿಷಯದಲ್ಲಿ ವಿಚಾರಣೆಮಾಡಿ ಜೂನ್ ತಾರೀಖು ಇಪ್ಪತ್ತಾರರಲ್ಲಿ, ಅವನಿಗೆ ಯಾವಜೀವವು ನೀರಿನಮೇಲೆ ಕಳುಹಿಸುವ ಶಿಕ್ಷೆ ಕೊಟ್ಟರು. ಸದಾಶಿವರಾಯನಕಡೆಗೆ ಪಾರವಳೆಯ ಅರ್ಧ ಜಹಗೀರಿಯಿದ್ದು ಆತನ ಆಸ್ತಿಪುಷ್ಕಳವಾಗಿತ್ತು. ಆದರೆ ಅದನ್ನ ಸರ್ಕಾರದವರು ಸರ್ಕಾರಕ್ಕೆ ಸೇರಿಸಿಕೊಂಡು, ಅವನನ್ನ ಅಂಡಮಾನ್ ದ್ವೀಪದಲ್ಲಿಟ್ಟರು. ಅಲ್ಲಿ ಅವನು ಹದಿನೆಂಟೂವರೆ ವರುಷಗಳವರೆಗೆ ಇದ್ದನು. ಮುಂದೆ ಅಲ್ಲಿನ ರಾಜನ ಶಿಫಾರ್ಸಿನಮೇಲೆ ಸಾವಿರದ ಎಂಟುನೂರ ಎಪ್ಪತ್ತೇಳನೇ ಇಸವಿಯಲ್ಲಿ ಆತನು

